# ಭಾರತೀಯ ಸಂಸ್ಕೃತಿ





ಸಾನೆ ಗುರುಜಿ

ಅನುವಾದಕ:
ಭಾಸ್ಕರ ಗೋವಿಂದ ಗೋಖಲೆ
ವಕೀಲ, ಧಾರವಾಡ



ಬಸವೇಶ್ವರ ಪುಸ್ತಕ ಭಾಂಡಾರ, ಹುಬ್ಬಳ್ಳಿ

ಬೆಲೆ: ರೂ.

# ಅನುಕ್ರಮಣಿಕೆ

# ಗ್ರಂಥಕರ್ತನ ಮುನ್ನುಡಿ

ಒಬ್ಬ ಸಾಮಾನ್ಯ ಮನುಷ್ಯನು ಜನಸಾಮಾನ್ಯರಿಗಾಗಿ ಬರೆದ ಹೊತ್ತಿಗೆ ಇದು. ಇದರಲ್ಲಿ ಪಾಂಡಿತ್ಯವೂ ಇಲ್ಲ, ವಿದ್ವತ್ತೆಯೂ ಇಲ್ಲ. ನೂರಾರು ಗ್ರಂಥಗಳ ಆಧಾರವಾಗಲೀ ಅಥವಾ ಸಂದರ್ಭ ಸೂಚಕ ವಚನಗಳಾಗಲಿ ಇದರ[illegible]ೂ ಇಲ್ಲ. ಇದರಲ್ಲಿ ಪ್ರಾಚ್ಯ ವಿದ್ಯಾವಿಶಾರದತ್ವವೂ ಇಲ್ಲ. ಮತ್ತು ಗಹನವಾದ ಗಂಭೀರವಾದ ಅಥವಾ ಗೂಢವಾದ ಮಾತೂ ಇಲ್ಲ. ಇದು ಭಾರತೀಯ ಸಂಸ್ಕೃತಿಯ ಇತಿಹಾಸವಲ್ಲ. ಕಲೆಗಳ ಕ್ಷೇತ್ರದಲ್ಲಿಯಾಗಲಿ, ವ್ಯಾಪಾರ, ಜ್ಞಾನ, ವಿಜ್ಞಾನ ಮತ್ತು ರಾಜಕಾರಣದಲ್ಲಿಯಾಗಲಿ, ನಾವು ಹೇಗೆ ಪ್ರಗತಿಹೊಂದಿದ್ದೇವೆಂಬ ಸಂಗತಿಯೂ ಇದರಲ್ಲಿ ಇಲ್ಲ. ಚಂದ್ರಗುಪ್ತ, ಅಶೋಕ, ಕಾಲಿದಾಸ, ತಾನಸೇನ, ಆರ್ಯಭಟ್ಟ, ಭಾಸ್ಕರಾಚಾರ್ಯ ಇವರ ಅನುಭವದ ಇತಿಹಾಸವೂ ಇದರಲ್ಲಿ ಇಲ್ಲ. ಈ ಪು[illegible]ಕದಲ್ಲಿ ಒಂದು ವಿಶೇಷವಾದ ದೃಷ್ಟಿ ಮಾತ್ರ ಇದೆ. ನೀವು ಈ ಪುಸ್ತಕ[illegible] ಭಾರತೀಯ ಸಂಸ್ಕೃತಿಯ ಆತ್ಮವನ್ನು ಕಾಣುವಿರಿ. ಅದರ ಒಳ ದರ್ಶನವ[illegible] ಪಡೆಯುವಿರಿ, ಭಾರತೀಯ ಸಂಸ್ಕೃತಿಯ ಗರ್ಭಗುಡಿಯಲ್ಲಿಯೇ ಪ್ರವೇಶಿಸುವಿರಿ. ಭಾರತೀಯ ಸಂಸ್ಕೃತಿಯ ದರ್ಶನವನ್ನು ಮಾಡಿಸುವುದೇ ಈ ಪುಸ್ತಕದ ದೃಷ್ಟಿ.

ಭಾರತೀಯ ಸಂಸ್ಕೃತಿಯೆಂಬ ಪದವನ್ನು ನಾವು ಮೇಲಿಂದಮೇಲೆ ಕೇಳುತ್ತೇವೆ. 'ಇದು ನಮ್ಮ ಸಂಸ್ಕೃತಿಗೆ ಶೋಭಿಸುವದಿಲ್ಲ.' 'ಇದರಿಂದ ನಮ್ಮ ಸಂಸ್ಕೃತಿಗೆ ಹಾನಿಯಾಗುವದು' ಎಂಬ ಮಾತುಗಳನ್ನು ನಾವು ಬರೆಹಗಳಲ್ಲಿ ಓದುತ್ತೇವೆ, ಉಪನ್ಯಾಸಗಳಲ್ಲಿ ಕೇಳುತ್ತೇವೆ. ಹೀಗೆಂದಾಗ ಭಾರತೀಯ ಸಂಸ್ಕೃತಿ ಎಂಬುದರ ಅರ್ಥವಾದರೂ ಯಾವದಿರುತ್ತದೆ? ಇದರಲ್ಲಿ ಭಾರತೀಯ ಸಂಸ್ಕೃತಿಯ ಇತಿಹಾಸವೆಂಬ ಅರ್ಥವು ಅಡಕವಾಗಿರುವದಿಲ್ಲ. ಇಲ್ಲಿ ನಮ್ಮ ಸಂಸ್ಕೃತಿಯ ವಿಶೇಷವಾದ ಒಂದು ದೃಷ್ಟಿಯೇ ಹುದುಗಿಕೊಂಡಿರುತ್ತದೆ. ಈ ದೃಷ್ಟಿಯು ಯಾವುದು? ಭಾರತೀಯ ಸಂಸ್ಕೃತಿಯ ಈ ದೃಷ್ಟಿಯನ್ನು ನಾನು ತೋರಿಸುವ ಪ್ರಯತ್ನವನ್ನು ಮಾಡಿದ್ದೇನೆ.

ವ್ಯಾಖ್ಯಾನಗಳಲ್ಲಿ ಮತ್ತು ಪ್ರವಚನಗಳಲ್ಲಿ ನಾನು ಈ ವಿಚಾರಗಳ[illegible] ಜನತೆಯ ಎದುರು ಈ ಮೊದಲೆ ಇಟ್ಟಿದ್ದೇನೆ. "ನೀವು ಈ ವಿಚಾರಗಳನ್ನೆಲ್ಲ

ಏಕೆ ಬರೆದಿಡಬಾರದು?" ಎಂದು ಅನೇಕ ಗೆಳೆಯರು ಮತ್ತು ಜನರು ಕೇಳುತ್ತಿದ್ದರು. ಅವರ ಸಮಾಧಾನಕ್ಕಾಗಿ ಚಿಕ್ಕ ದೊಡ್ಡ ನಿಬಂಧಗಳನ್ನು ಬರೆದೆನು. ಭಾರತೀಯ ಸಂಸ್ಕೃತಿಯ ಅನಂತ ಛಾಯೆಗಳನ್ನು ತೋರಿಸು ವದು ಇಲ್ಲಿ ಸಾಧ್ಯವಾಗಿಲ್ಲ. ಇದು ನಮ್ಮ ಸಂಸ್ಕೃತಿಯ ತೀರ ಸಂಕ್ಷಿಪ್ತ ದರ್ಶನವು.

ಈ ಪುಸ್ತಕದಲ್ಲಿಯ ಅನೇಕ ವಿಚಾರಗಳು ನಾನು ಹಿರಿಯರಿಂದ ಕೇಳಿದವುಗಳು. ಅವುಗಳಿಂದ ನನ್ನ ಹೃದಯದಲ್ಲಿಯ ಹುಟ್ಟುವಭಾವನೆಗಳು ವಿಕಾಸಹೊಂದಿವೆ. ವರ್ಧಾ-ಆಶ್ರಮದಲ್ಲಿ ವಾಸವಾಗಿರುವ ಪೂಜ್ಯ ಹಿರಿಯ ರಾದ ವಿನೋಬಾಜಿ ಭಾವೆ ಇವರ ಅಮೌಲ್ಯವಾದ ಅನೇಕ ವಿಚಾರಗಳು ಇಲ್ಲಿ ಬಂದಿವೆ. ಈ ಮಹಾನುಭಾವರಿಂದ ಭಕ್ತಿ-ಪ್ರೇಮ ಪುರಸ್ಸರವಾಗಿ ನಾನು ಕೇಳಿದ ವಿಚಾರಗಳ ಸಾರಾಂಶವನ್ನೇ ಕರ್ಮ, ಜ್ಞಾನ, ಭಕ್ತಿ, ಕರ್ಮಫಲತ್ಯಾಗ, ಅಹಿಂಸೆ ಮುಂತಾದ ಪ್ರಕರಣಗಳಲ್ಲಿ ಬರೆದಿದ್ದೇನೆ. ಆದರೆ ಇಲ್ಲಿ ನಾನು ಬರೆದುದಕ್ಕೆಲ್ಲ ಅವರು ಹೊಣೆಗಾರರಲ್ಲ. ಅವರು ಆ ವಿಚಾರದ ಬೀಜಗಳನ್ನು ಬಿತ್ತಿದರು. ಅವೇ ನನ್ನ ಹೃದಯದಲ್ಲಿ ಮತ್ತು ಬುದ್ಧಿಯಲ್ಲಿ ಬೆಳೆದವು. ಈ ಪುಸ್ತಕದಲ್ಲಿ ಇದ್ದ ತಪ್ಪು ನನ್ನವು; ಸತ್ಯವು ಹಿರಿಯರದು. ಹೃದಯ ಮತ್ತು ಬುದ್ಧಿಯನ್ನು ಪೂಜಿಸುವ ಸಂಸ್ಕೃತಿ ಇದು. ಉದಾರವಾದ ಭಾವನೆ ಮತ್ತು ನಿರ್ಮಲವಾದ ಜ್ಞಾನದಿಂದ ಜೀವನದಲ್ಲಿ ಸೌಂದರ್ಯವನ್ನು ಬೀರುವ ಸಂಸ್ಕೃತಿಯು ಇದು. ಹೃದಯಕ್ಕೆ ಜ್ಞಾನ ವಿಜ್ಞಾನಗಳ ಜೋಡನ್ನು ಇತ್ತು ಸಂಸಾರದಲ್ಲಿ ಸವಿಯನ್ನು ಹರಡುವ ಸಂಸ್ಕೃತಿಯು ಇದು. ಭಾರತೀಯ ಸಂಸ್ಕೃತಿಯೆಂದರೆ ಕರ್ಮ, ಜ್ಞಾನ, ಭಕ್ತಿಗಳ ಜೀವಂತ ಮಹಿಮೆಯ ಚಿತ್ರವು. ಶರೀರವನ್ನು, ಬುದ್ಧಿಯನ್ನು ಮತ್ತು ಹೃದಯವನ್ನು ಯಾವಾಗಲೂ ಸೇವೆಯಲ್ಲಿ ನಿರತವಾಗಿಸುವ ಪ್ರಭಾವವುಳ್ಳದ್ದು.

ಭಾರತೀಯ ಸಂಸ್ಕೃತಿಯೆಂದರೆ ಸಹಾನುಭೂತಿಯು, ವೈಶಾಲ್ಯವು, ಸತ್ಯದ ಪ್ರಯೋಗವು ಮೈ ತಳೆದು ನಿಂತಂತೆ. ಭಾರತೀಯ ಸಂಸ್ಕೃತಿಯು ಒಂದೆಡೆಯಲ್ಲಿ ನಿಲ್ಲದೆ, ಜ್ಞಾನವನ್ನೇ ಹಿಂಬಾಲಿಸಿ ಮುಂದರಿಯುವದು. ಜಗತ್ತಿನಲ್ಲಿದ್ದ ಸತ್ಯ, ಶುಭ ಮತ್ತು ಸುಂದರವಾದದ್ದನ್ನೆಲ್ಲ ಬೆರಿಸಿಕೊಂಡು ಬೆಳೆಯುವ ಸಂಸ್ಕೃತಿಯು. ಜಗತ್ತಿನಲ್ಲಿಯ ಎಲ್ಲ ಋಷಿ ಮಹರ್ಷಿಗಳನ್ನು

ಪೂಜಿಸುವದು; ಜಗತ್ತಿನಲ್ಲಿಯ ಎಲ್ಲ ಸಾಧು ಸಂತರನ್ನು ವಂದಿಸುವದು.
ಜಗತ್ತಿನಲ್ಲಿಯ ಎಲ್ಲ ಧರ್ಮಸಂಸ್ಥಾಪನಾಚಾರ್ಯರ ಬಗ್ಗೆ ಆದರಭಾವನೆ
ಯನ್ನು ತಾಳುವದು. ದೊಡ್ಡತನವು ಎಲ್ಲಿ ಕಂಡರೂ ಭಾರತೀಯ ಸಂಸ್ಕೃ
ತಿಯು ಅದನ್ನು ಆರಾಧಿಸುವದು. ಆದರದಿಂದ ಮತ್ತು ಆನಂದದಿಂದ
ಅದನ್ನು ಸಂಗ್ರಹಿಸುವದು.

ಭಾರತೀಯ ಸಂಸ್ಕೃತಿಯು ಸಂಗ್ರಾಹಕ ಶಕ್ತಿಯುಳ್ಳದ್ದು. ಎಲ್ಲರನ್ನು
ಅದು ತನ್ನೆಡೆಗೆ ಬರಮಾಡಿಕೊಳ್ಳುವದು. "ಸರ್ವೇಷಾಮವಿರೋಧೇನ
ಬ್ರಹ್ಮಕರ್ಮ ಸಮಾರಭೇ" ಎಂದೆನ್ನುವ ಸಂಸ್ಕೃತಿ ಇದು. ಸಂಕುಚಿತ
ದೃಷ್ಟಿಯು ಅದಕ್ಕೆ ಬೇಡಾದ ವಸ್ತುವು. ಇದಕ್ಕಾಗಿಯೇ ಭಾರತೀಯ
ಸಂಸ್ಕೃತಿ ಎಂದೊಡನೆ ನನ್ನ ಕೈಗಳು ತಾನಾಗಿಯೇ ವಂದಿಸುತ್ತಿವೆ;
ಕಡಲು ಮುಗಿಲು ಇವೆರಡು ಮಹಾನ್ ವಸ್ತುಗಳು ನನ್ನ ಕಣ್ಣೆದುರು ನಿಲ್ಲು
ತ್ತವೆ; ಬೆಳಕು ತಾವರೆಯೆಂಬ ದಿವ್ಯ ವಸ್ತುಗಳು ನನ್ನ ಕಣ್ಣಿನ ಮುಂದೆ
ನೆಲೆಗೊಳ್ಳುತ್ತವೆ. ತ್ಯಾಗ, ಸಂಯಮ, ವೈರಾಗ್ಯ, ಸೇವೆ, ಪ್ರೇಮ,
ಜ್ಞಾನ, ವಿವೇಕ ಇವೆಲ್ಲವುಗಳ ನೆನಪು ಆಗುತ್ತದೆ. ಭಾರತೀಯ ಸಂಸ್ಕೃತಿ
ಯೆಂದರೆ ಸಾಂತದಿಂದ ಅನಂತಕ್ಕೆ, ಕತ್ತಲೆಯೊಳಗಿಂದ ಬೆಳಕಿಗೆ, ವಿರೋಧ
ದಿಂದ ವಿವೇಕಕ್ಕೆ, ಭೇದದಿಂದ ಅಭೇದಕ್ಕೆ, ಅವ್ಯವಸ್ಥೆಯಿಂದ ವ್ಯವಸ್ಥೆಗೆ,
ಕೆಸರಿನಿಂದ ಕಮಲಕ್ಕೆ, ಸಪ್ಪಳದಿಂದ ಸಂಗೀತದ ಕಡೆಗೆ ವಿಕಾಸವಾಗುವ
ಸಂಸ್ಕೃತಿಯು. ಭಾರತೀಯ ಸಂಸ್ಕೃತಿಯೆಂದರೆ ಸಮರಸವು. ಎಲ್ಲ ಧರ್ಮ
ಗಳ, ಎಲ್ಲ ಜಾತಿಗಳ, ಎಲ್ಲ ವಿಜ್ಞಾನಗಳ ಮತ್ತು ಎಲ್ಲ ಕಾಲದ ಕೂಡುವಿಕೆ
ಯಿಂದುಂಟಾದ ಸಾಮರಸ್ಯವು. ಈ ರೀತಿ ಹಿರಿದಾದ ಕೂಡುವಿಕೆಯನ್ನು
ಹುಟ್ಟಿಸಲೆತ್ನಿಸುವ, ಇಡೀ ಮಾನವ ಜನಾಂಗವನ್ನೇ ಮಾಂಗಲ್ಯದ ನಿಟ್ಟಿಗೆ
ಸಾಗಿಸಲೆಳಸುವ ಈ ಹಿರಿದಾದ ಸಂಸ್ಕೃತಿಯ ಒಬ್ಬ ಚಿಕ್ಕ ಉಪಾಸಕನು-
ಮಾನಸಿಕವಾಗಿಯೂ ಆಗಲಿ-ಜನ್ಮಜನ್ಮಾಂತರಗಳಲ್ಲಿ ನಾನು ಆಗಬೇಕೆಂದು
ಬಯಸುತ್ತೇನೆ. ಬೇರೊಂದು ಇಚ್ಛೆಯೇ ನನಗಿಲ್ಲ.

ಕೃಷ್ಣಾಷ್ಟಮಿ
ಶಕೆ ೧೮೬೯
೨೯—೮—೧೯೩೭

ಪಾಂ. ಸ. ಸಾನೆ
ಲೇಖಕ

# ಅನುವಾದಕನ ಮಾತು

ಈ ಪುಸ್ತಕವನ್ನು ಬರೆದವರು ಶ್ರೀ. ಪಾಂಡುರಂಗ ಸದಾಶಿವ ಸಾನೆ ಯವರು. ಇವರು "ಸಾನೆ ಗುರುಜಿ" ಎಂಬ ಹೆಸರಿನಿಂದಲೆ ಎಲ್ಲರಿಗೂ ಪರಿಚಿತರಾಗಿದ್ದಾರೆ. ಇವರು ರತ್ನಾಗಿರಿ ಜಿಲ್ಹೆಯಲ್ಲಿದ್ದ ಪಾಲಗಡ ಎಂಬ ಊರಲ್ಲಿ ಹುಟ್ಟಿದರು. ಇವರ ಪೂರ್ವಜರು ಆ ಊರಿನ ಖೋತರು. ಸಾನೆ ಗುರುಜಿಯವರ ತಂದೆಯು ಕಾಲದಲ್ಲಿ ಇವರ ಮನೆತನಕ್ಕೆ ವಿಪನ್ನಾವಸ್ಥೆ ಬಂದಿತು. ಇವರ ತಂದೆ-ತಾಯಿಯವರು ಧೈರ್ಯಶೀಲರು ಮತ್ತು ಶೀಲ ವಂತರು. ಅವರು ಬಂದ ವಿಪತ್ತುಗಳನ್ನೆಲ್ಲ ಎದುರಿಸಿ, ಸ್ವಾಭಿಮಾನವನ್ನು ತೊರೆಯದೆ ಯಶಸ್ವಿಯಾಗಿ ಬಾಳುವೆ ಮಾಡಿದರು. ಇವರ ತಾಯಿ ಯಶೋದಾಬಾಯಿಯು ಕಷ್ಟನಷ್ಟಗಳನ್ನು ಸಹಿಸಿ ಮಕ್ಕಳಿಗೆ ಸ್ವಾವಲಂಬನ, ಸಹಿಷ್ಣುತೆ, ಔದಾರ್ಯ ಮೊದಲಾದ ಗುಣಗಳನ್ನು ಕಲಿಸಿದಳು.

ಸಾನೆ ಗುರುಜಿಯವರು ಬಾಲ್ಯದಲ್ಲಿ ಬಹಳ ಕಷ್ಟಗಳನ್ನು ಸಹಿಸಿದರು. ಅವರು ಶುಕ್ಲ ವೃತ್ತಿಯಿಂದ ಉಪಜೀವನ ಮಾಡಿ ಶಿಕ್ಷಣ ಸಾಗಿಸುತ್ತಿದ್ದರು. ಆದರೆ ಅಲ್ಲಿ ಸಹ ಸ್ವಾಭಿಮಾನಕ್ಕೆ ಕುಂದು ಬರುವಂತಹ ಪ್ರಸಂಗ ಬಂದೊಡನೆ ಶುಕ್ಲವೃತ್ತಿಯನ್ನು ಬಿಟ್ಟು ಸ್ವತಃ ದುಡಿದು ಅಡುಗೆ ಮಾಡಿಕೊಂಡು ವಿದ್ಯಾರ್ಜನೆ ಮಾಡಿದರು.

ಸಾಹಿತ್ಯದಲ್ಲಿ ಇವರಿಗೆ ಹುಟ್ಟಿನಿಂದಲೇ ಪ್ರೀತಿ. ಸಂಸ್ಕೃತ, ಮರಾಠಿ ವಿಷಯಗಳು ಇವರ ಪ್ರೀತಿಯವು. ಕಷ್ಟನಷ್ಟಗಳನ್ನು ಎದುರಿಸಿ ಈ ವಿಷಯ ಗಳಲ್ಲಿ ಒಳ್ಳೇ ಪ್ರಾವೀಣ್ಯ ಪಡೆದು ಇವರು ಎಂ.ಎ. ಪರೀಕ್ಷೆ ಪಾಸಾದರು.

ಇವರು ಕಾಲೇಜು ಶಿಕ್ಷಣ ಪಡೆಯುತ್ತಿರುವಾಗ ಲೋಕಮಾನ್ಯರು ಸೆರೆಮನೆಯಿಂದ ಬಿಡುಗಡೆ ಹೊಂದಿ ಅದೇ ಬಂದಿದ್ದರು. ದೇಶದ ರಾಜ ಕಾರಣದಲ್ಲಿ ಒಂದು ಹೊಸ ಹುಮ್ಮಸ್ಸು ಸೂಸುತ್ತಿತ್ತು. ಸಾನೆ ಗುರುಜಿಯವರು ಶ್ರೇಷ್ಠ ಮೇಧಾವಿಗಳಿದ್ದಂತೆ, ಉತ್ಕಟ ಭಾವನೆಯುಳ್ಳವರು. ದೇಶದ ದುಃಸ್ಥಿತಿ ಕಂಡು ಇವರ ಕರುಳು ಕರಗಿತು. ದೇಶದಲ್ಲಿ ನೆಲೆಗೊಂಡ ಹೊಸ ರಾಜಕೀಯ ವಾತಾವರಣವು ಇವರ ಮನಸ್ಸಿನ ಮೇಲೆ ಪರಿಣಾಮ ಮಾಡದೆ ಇರಲಿಲ್ಲ. ಅವರು ದೇಶ ಸೇವೆಯ ವ್ರತ ಕೈಕೊಂಡರು.

# V

ಎಮ್. ಎ. ಆದಮೇಲೆ ಅವರು ಅಮಳನೇರ ತತ್ವಜ್ಞಾನಮಂದಿರ ಸೇರಿ, ಜಗತ್ತಿನಲ್ಲಿ ನೆಲೆಗೊಂಡ ಎಲ್ಲ ಧರ್ಮಗಳ ಆಳವಾದ ಅಭ್ಯಾಸಮಾಡಿ ಸತ್ಯ, ಅಹಿಂಸೆ, ಔದಾರ್ಯ, ನಿರಹಂಕಾರ, ಸೇವೆ ಇವೇ ಮೊದಲಾದ ಸದ್ಗುಣಗಳು ಎಲ್ಲ ಧರ್ಮಗಳ ತಳಹದಿಯಾಗಿವೆ ಎಂಬ ಮಾತನ್ನು ಅರಿತು ಕೊಂಡರು.

ಮುಂದೆ ಅವರು ಅಮಳನೇರ ಸಾಲೆಯಲ್ಲಿ ಶಿಕ್ಷಕರಾಗಿ ವಿದ್ಯಾರ್ಥಿಗಳಲ್ಲಿ ಹೊಸ ವಿಚಾರಗಳನ್ನು ಬೀರಿದರು. ಅವರು ಕಲಿಸುವ ರೀತಿ ವೈಶಿಷ್ಟ್ಯಪೂರ್ಣವಾದದ್ದು. ಇವರು ಉತ್ತಮ ಕತೆಗಾರರು, ರಸವತ್ತಾದ ಕವಿಗಳು; ಶ್ರೇಷ್ಠ ಕಾದಂಬರಿಕಾರರು, ಮೇಲ್ತರಗತಿಯ ಪ್ರಬಂಧಕಾರರು. ಜೀವನ ಸಾಗರದಲ್ಲಿ ಮುಳುಗಿ ಮುಳುಗಿ ಎದ್ದವರು. ವಿವಿಧ ರೀತಿಯ ಅನುಭವ ಪಡೆದವರು. ಇವರ ಬರೆಹಗಾರಿಕೆ ಎಂದರೆ ಕಾಗದದ ಮೇಲೆ ಮೂಡಿಸಿದ ಮಾತುಗಾರಿಕೆ. ಇವರ ಬರೆಹ ಓದುಗರ ಹೃದಯವನ್ನೇ ಸೇರಿಬಿಡುತ್ತದೆ ಸಮ್ಮುಖದಲ್ಲಿ ಕೇಳಿದ ಮಾತಿನಂತೆ.

ಸಾಲೆಯ ಚಿಕ್ಕ ಕ್ಷೇತ್ರವನ್ನು ಬಿಟ್ಟು ಇವರು ೧೯೩೦ರ ಆಂದೋಲನದಲ್ಲಿ ಧುಮುಕಿ ಭಾರತದ ವಿಶಾಲ ಕಾರ್ಯಕ್ಷೇತ್ರವನ್ನು ಸೇರಿದರು. ಅಂದಿನಿಂದ ಇಂದಿನ ವರೆಗೆ ಇವರು ದೇಶದಲ್ಲಿ ತೊಳಲಾಡುವ, ಬಳಲುವ ಲಕ್ಷಾವಧಿ ಬಾಂಧವರಿಗೆ ಸೇವೆ ಸಲ್ಲಿಸುತ್ತಿದ್ದಾರೆ. ಇವರು ಹಲವಾರು ಸಾರೆ ಸೆರೆಮನೆ ಕಂಡಿದ್ದಾರೆ.

ಮರಾಠಿ ವಾಙ್ಮಯ ಸೇವಕರಲ್ಲಿ ಇವರೊಬ್ಬ ಶ್ರೇಷ್ಠ ಗ್ರಂಥಕಾರರು. ಕಾದಂಬರಿ, ಕತೆ, ಕಾವ್ಯ, ಅನುವಾದ, ಪ್ರಬಂಧ ಇವೆ ಮೊದಲಾದ ರೂಪಗಳಲ್ಲಿ ಸುಮಾರು ೫೫ ಗ್ರಂಥಗಳನ್ನು ಮರಾಠಿ ಸರಸ್ವತಿಗೆ ಕಾಣಿಕೆಯಾಗಿ ಸಲ್ಲಿಸಿದ್ದಾರೆ. ಚಿಕ್ಕವರಿಗೆ ಕತೆಗಾರರಾಗಿ, ರಸಿಕರಿಗೆ ಕಾದಂಬರಿಕಾರರಾಗಿ, ಗಂಭೀರ ವೃತ್ತಿಯವರಿಗೆ ಪ್ರಬಂಧಕಾರರಾಗಿ, ಸ್ತ್ರೀಯರಿಗೆ ಗರತಿಯ ಹಾಡು ಕಲೆಹಾಕುವವರಾಗಿ ಮತ್ತು ಮರಾಠಿ ಓದುಗರೆಲ್ಲರಿಗೂ ಬೇರೆ ಭಾಷೆಯ ಅಮೃತವನ್ನು ಅನುವಾದ ಮಾಡಿ ಉಣ್ಣಿಸುವವರಾಗಿ ಇಂದು ಇವರು ಮಹಾರಾಷ್ಟ್ರಕ್ಕೆಲ್ಲ ಮನೆಯ ಜನರಂತೆ ಆತ್ಮೀಯರಾಗಿದ್ದಾರೆ.

ಇವರ ಬರೆಹದ ಶೈಲಿ, ಗಾಂಧಿಜಿಯವರ ಇಂಗ್ಲಿಷಿನಂತೆ ಸರಳವಾಗಿದೆ ಕಳಕಳಿಯುಳ್ಳದ್ದಾಗಿದೆ. ಪ್ರತಿ ಪುಟದಲ್ಲಿ ಕಳಕಳಿ ಕಂಡುಬರುತ್ತದೆ.

ಭಾರತದ ತುಂಬ ವೈವಿಧ್ಯವಿದೆ; ಆಗಾಗ್ಗೆ ಭೇದಗಳೂ ಒಡೆದು ಕಾಣುತ್ತವೆ. ಆದರೆ ಭಾರತದ ಅಖಂಡತ್ವವು, ಐಕ್ಯವು ಕಾಣದೆ ಹೋಗುವದಿಲ್ಲ. ಈ ಐಕ್ಯಭಾವನೆಯನ್ನೇ ಸಾನೆ ಗುರುಜಿಯವರು ತಮ್ಮ ಎಲ್ಲ ಪುಸ್ತಕಗಳಲ್ಲಿ ಎತ್ತಿ ತೋರಿಸಿದ್ದಾರೆ, ಒತ್ತಿ ಹೇಳಿದ್ದಾರೆ.

ಸ್ವತಂತ್ರ ಭಾರತದಲ್ಲಿ ಸಮತೆಯೇ ಜೀವನದ ತಳಹದಿಯಾಗಬೇಕು. ಅದನ್ನು ಬಾಳುವೆಯಲ್ಲಿ, ದೇಶದ ಬಾಳುವೆಯಲ್ಲಿ ತರಲು ಅಖಂಡ ಪ್ರಯತ್ನ ಮಾಡುವದೇ ಪ್ರತಿಯೊಬ್ಬ ನಾಗರಿಕನ, ವಿಶೇಷವಾಗಿ ತರುಣನ ಕರ್ತವ್ಯವಾಗಿದೆ, ಎಂಬ ಮಾತು ಇವರ ವಾಙ್ಮಯ ಓದಿದವರಿಗೆ ಅನಿಸದೆ ಇರಲಾರದು.

"ಭಾರತೀಯ ಸಂಸ್ಕೃತಿ"ಯಲ್ಲಿ ಗುರುಜಿಯವರು ತಮ್ಮ ಹೃದಯ ಸಾಗರವನ್ನೇ ಬರಿದುಮಾಡಿದ್ದಾರೆ. ಇವರ ಭಾಷೆ ಸರಳವಾದದ್ದು; ಭಾವನೆ ತುಂಬಿಸೂಸುತ್ತದೆ. ಮನಸ್ಸಿನ ಮೇಲೆ ಒಳ್ಳೇ ಪರಿಣಾಮ ಮಾಡುವಂಥ ಗ್ರಂಥ ಇದು. ಇಂಥ ಶ್ರೇಷ್ಠ ಹೊತ್ತಿಗೆಯ ಆಸ್ವಾದವು ಕನ್ನಡ ಬಾಂಧವರಿಗೆ ಸಿಗಲೆಂದು ನಾನು ಈ ಅನುವಾದವನ್ನು ಕೈಕೊಂಡೆ.

ನನ್ನ ತಾಯಿನುಡಿ ಮರಾಠಿ, ನಾಡನುಡಿ ಕನ್ನಡ; ನಾನು ಕಲಿತದ್ದು ಕನ್ನಡ. "ಭಾರತೀಯ ಸಂಸ್ಕೃತಿ" ಕೆಲ ಮರಾಠಿ ತಿಳಿಯುವ ಕನ್ನಡ ಗೆಳೆಯರಿಗೆ ಓದಿ ತೋರಿಸಿದೆ. ಅವರು ಅದನ್ನು ಕನ್ನಡದಲ್ಲಿ ಅನುವಾದಿಸಲು ಸೂಚಿಸಿದರು. ನನ್ನ ನಾಡಿಗೆ ಅಲ್ಪಸೇವೆ ಸಲ್ಲಿಸಿದಂತಾಗುವದೆಂದು ನಾನೂ ಈ ಅನುವಾದಕಾರ್ಯ ಕೈಗೊಂಡೆ.

ಅನುವಾದ ಮಾಡಿದಂತೆ ನನ್ನ ಗೆಳೆಯರಾದ ಶ್ರೀ. ಕೆ. ಎಮ್. ಕುಲಕರ್ಣಿ, ಶ್ರೀ. ಮುಳಗುಂದ, ಶ್ರೀ. ಬಾಪುರಾವ ಕುಲಕರ್ಣಿ, ಶ್ರೀ. ಜಯರಾಮಾಚಾರ್ಯ ಮಳಗಿ ವೈದ್ಯ ಇವರಿಗೆ ಓದಿತೋರಿಸಿದೆ. ಅವರು

ಆಗಾಗ್ಗೆ ಯೋಗ್ಯ ಸಲಹೆಗಳನ್ನು, ತಿದ್ದುಪಡಿಗಳನ್ನು ಮಾಡಿದರು. ಅವ ರೆಲ್ಲರಿಗೆ ನನ್ನ ವಂದನೆಗಳು. ಕೆಲವು ಪ್ರಕರಣಗಳ ಅನುವಾದವನ್ನು ಶ್ರೀ ಬೇಂದ್ರೆ ದತ್ತರಾಯರಿಗೆ ಓದಿ ತೋರಿಸಿದೆ. ಅವರು ನನಗೆ ಉತ್ತೇಜ ನವನ್ನು ಕೊಟ್ಟು ಕೆಲವು ಉಪಯುಕ್ತವಾದ ಸೂಚನೆಗಳನ್ನು ಮಾಡಿದರು. ಅವರಿಗೆ ನನ್ನ ಕೃತಜ್ಞತೆಗಳು. ಈ ಅನುವಾದದ ಮುದ್ರಣ ಪ್ರತಿಯನ್ನು ತಯಾರಿಸಿದ ನನ್ನ ಗೆಳೆಯರಾದ ಪೂಜಾರ, ಗುಡಿ ಮತ್ತು ಹುಯಿಲಗೋಳ ಕೃಷ್ಣಾಚಾರ್ಯ ಇವರೆಲ್ಲರಿಗೆ ನಾನು ಕೃತಜ್ಞನಾಗಿದ್ದೇನೆ.

ಅನುವಾದ ಮುಗಿದ ಮೇಲೆ ಅದನ್ನು ಪ್ರಕಟಿಸಲು ನನಗೆ ಅಪ್ಪಣೆ ದೊರಕಿಸಿಕೊಟ್ಟದ್ದಕ್ಕಾಗಿ ಹುಬ್ಬಳ್ಳಿಯ ನನ್ನ ತರುಣ ಮಿತ್ರರಾದ ಶ್ರೀ. ಜೋಶಿ ಶಂಭುರಾವ ಇವರಿಗೆ ನನ್ನ ಕೃತಜ್ಞತೆ. ಸಾನೆ ಗುರುಜಿಯವರ ಎಲ್ಲ ಪುಸ್ತಕಗಳ ಪ್ರಕಾಶನದ ಹಕ್ಕು ಪಡೆದ ಅಮಳನೇರದ ಶ್ರೀ. ಪುಸಾಳಕರ ವಕೀಲರು ನೆರವಾಗಿ, ಕನ್ನಡ ಅನುವಾದವನ್ನು ಮಾಡಲು, ಪ್ರಕಾಶಿಸಲು ಅಪ್ಪಣೆ ಕೊಟ್ಟದ್ದಕ್ಕಾಗಿ ನಾನು ಅವರಿಗೆ ಉಪಕೃತನಾಗಿದ್ದೇನೆ.

ಕನ್ನಡ ಅನುವಾದ ಮಾಡಿದ ಮೊದಲನೆ ಪ್ರಯತ್ನ ಇದು. ಈ ಅನು ವಾದದಲ್ಲಿರುವ ತಪ್ಪು, ಕುಂದುಕೊರತೆಗಳ ಅರಿವು ನನಗೆ ತುಂಬಾ ಇದೆ. ಮೂಲಮರಾಠಿಯಲ್ಲಿಯ ಭಾಷಾಶೈಲಿಯನ್ನು ಆದಷ್ಟು ತರಲು ಪ್ರಯತ್ನಿ ಸಿದ್ದೇನೆ. ದೋಷ ಲೋಪಗಳೆಲ್ಲ ನನ್ನವು, ಉತ್ತಮವಾದುದೆಲ್ಲ ಮೂಲ ಗ್ರಂಥಕಾರನದು.

ಕನ್ನಡ ನಾಡು ನನ್ನ ಈ ಕಾಣಿಕೆಯನ್ನು ಪ್ರೀತಿಯಿಂದ ಸ್ವೀಕರಿಸ ಲೆಂದು ಬೇಡಿಕೊಳ್ಳುತ್ತೇನೆ.

ಸಾನೆ ಗುರುಜಿಯವರ ಆಭಾರವನ್ನಂತೂ ಶಬ್ದದಿಂದ ಮನ್ನಿಸುವದು ಸಾಧ್ಯವೇ ಇಲ್ಲ. ಸಾನೆ ಗುರುಜಿಯವರು ಪಂಢರಪುರದ ವಿಠ್ಠಲ ಮಂದಿರ ವನ್ನು ಹರಿಜನರಿಗಾಗಿ ತೆರೆಯಬೇಕೆಂದು ಆಮರಣ ಉಪವಾಸ ಕೈಕೊಂ ಡದ್ದು ಮತ್ತು ಅವರ ಪ್ರಯತ್ನ ಯಶಸ್ವಿಯಾಗಿ ಇಂದು ಆ ಮಂದಿರವು ಹರಿಜನರನ್ನೊಳಗೊಂಡು ಎಲ್ಲ ಹಿಂದೂ ಜನರಿಗೆ ತೆರೆದಿದ್ದು ಎಲ್ಲರಿಗೂ

ಗೊತ್ತಾದ ಮಾತಾಗಿದೆ. ಇವರು ಅಖಿಲ ಭಾರತದ ಶ್ರೇಷ್ಠ ವ್ಯಕ್ತಿಯಾಗಿದ್ದಾರೆ. ದೇವರು ಅವರಿಗೆ ಆಯುರಾರೋಗ್ಯವನ್ನು ಕೊಟ್ಟು, ದೇಶಕ್ಕೆ ಇನ್ನೂ ಅವರಿಂದ ಸರ್ವತೋಮುಖ ಸೇವೆ ಸಲ್ಲಿಸಲಿ ಎಂದು ನಾನು ಬೇಡಿಕೊಳ್ಳುತ್ತೇನೆ.

ಈ ಪುಸ್ತಕವನ್ನು ಪ್ರಕಾಶಿಸಲು ಒಪ್ಪಿದ ನನ್ನ ಗೆಳೆಯರಾದ ಶ್ರೀ. ಸಂಕೇಶ್ವರ ಬಸವಣ್ಣೆಪ್ಪನವರಿಗೆ ನಾನು ತುಂಬಾ ಕೃತಜ್ಞನಿದ್ದೇನೆ.

೧-೧-೪೮
ಧಾರವಾಡ

ಭಾಸ್ಕರ ಗೋಖಲೆ

# ಭಾರತೀಯ ಸಂಸ್ಕೃತಿ

## ೧. ಅದ್ವೈತದ ತಳಹದಿ

ಭಾರತೀಯ ಸಂಸ್ಕೃತಿಯಲ್ಲಿ ಎಲ್ಲೆಡೆಯಲ್ಲಿ ಅದ್ವೈತದ ನಾದವೇ ತುಂಬಿದೆ. ಈ ಸಂಸ್ಕೃತಿಗೆ ಅದ್ವೈತದ ಮಂಗಲ ಪರಿಮಲವಿದೆ. ಭಾರತದ ಉತ್ತರದಲ್ಲಿ ಎತ್ತರವಾದ ಭವ್ಯವಾದ ಗೌರಿಶಂಕರ ಶಿಖರವು ನಿಂತಂತೆ ಭವ್ಯವೂ ಉಚ್ಚವೂ ಆದ ಅದ್ವೈತದ ದರ್ಶನವು ಭಾರತೀಯ ಸಂಸ್ಕೃತಿಯ ಬೆಂಗಾವಲಾಗಿ ನಿಂತಿದೆ. ಜ್ಞಾನಮೂರ್ತಿಯಾದ ಭಗವಾನ್ ಶಿವನು ಕೈಲಾಸದಲ್ಲಿ ಕುಳಿತು ಅದ್ವೈತದ ಡಮರುವನ್ನು ಅನಾದಿ ಕಾಲದಿಂದ ಬಾರಿಸುತ್ತಿದ್ದಾನೆ. ಶಿವನಿದ್ದಲ್ಲಿ ಶಕ್ತಿಯು, ಸತ್ಯವಿದ್ದಲ್ಲಿ ಸಾಮರ್ಥ್ಯವು, ಪ್ರೇಮವಿದ್ದಲ್ಲಿ ಪರಾಕ್ರಮು; ಅದ್ವೈತವೆಂದರೆ ಶಿವತ್ವವು, ನಿರ್ಭಯತೆಯು. ಈ ಪ್ರಪಂಚದಲ್ಲಿ ಅದ್ವೈತದ ಸಂದೇಶವೇ ಸುಖ ಸಾಗರವನ್ನು ಹುಟ್ಟಿಸಬಲ್ಲದು.

ಭಾರತದಲ್ಲಿಯ ಋಷಿಗಳು ಈ ಮಾತನ್ನು ಕಂಡುಹಿಡಿದರು. ಪವಿತ್ರವಾದ ಈ ಮಂತ್ರವನ್ನು ಪ್ರಪಂಚಕ್ಕೆ ಇತ್ತರು. ಈ ಮಂತ್ರದಷ್ಟು ಪವಿತ್ರವಾದ ಮತ್ತೊಂದು ಮಂತ್ರವು ಜಗತ್ತಿನಲ್ಲಿಲ್ಲ. ಜಗತ್ತಿನಲ್ಲಿ ಒಡಕಿದ್ದರೆ ದುಃಖವು, ಒಕ್ಕಟ್ಟಿದ್ದರೆ ಸುಖವು. ಸುಖಕ್ಕಾಗಿ ಸಾಹಸಪಡುವದಿದ್ದರೆ ಮನುಷ್ಯನಿಗೆ ಅದ್ವೈತವೊಂದೇ ಮಾರ್ಗವು.

"ಯಾರ ಸಲುವಾಗಿ ನಿನ್ನಲ್ಲಿ ಭೇದಭಾವವು ಉತ್ಪನ್ನವಾಗುತ್ತದೆಯೋ ಅವರ ಬಳಿ ಹೋಗಿ ಪ್ರೇಮದಿಂದ ಅವರನ್ನು ಅಪ್ಪಿಕೊಳ್ಳಿರಿ." ಎಂದು ಋಷಿಗಳು ಕಳಕಳಿಯಿಂದ ಹೇಳುತ್ತಾರೆ.

ಸಹನಾವವತು ಸಹನೌಭುನಕ್ತು ಸಹ ವೀರ್ಯಂಕರವಾವಹೈ ।
ತೇಜಸ್ವಿನಾ[illegible]ತಮಸ್ತು ಮಾ ವಿದ್ವಿಷಾವಹೈ ಓಂ ಶಾಂತಿಃ ಶಾಂತಿಃ ಶಾಂತಿಃ ॥

ಈ ಹಿರಿದಾದ ಮಂತ್ರದ ಗೂಢವೇನು ? ಈ ಮಂತ್ರ ಒಂದೇ ಕಡೆಯಲ್ಲಿ ಮಾತ್ರ ಅನ್ನುವದಲ್ಲ. ಇದನ್ನು ಎಲ್ಲ ಕಡೆಯಲ್ಲಿಯೂ ಉಚ್ಚರಿಸಬೇಕು. ಮತ್ತು ಅದರಂತೆ ನಡೆದುಕೊಳ್ಳಬೇಕು. ಈ ಮಂತ್ರವು ಗುರುಶಿಷ್ಯರಿಗಷ್ಟೇ ಅಲ್ಲ. ಬ್ರಾಹ್ಮಣ ಬ್ರಾಹ್ಮಣೇತರರಲ್ಲಿ ಭಿನ್ನಭಾವವಿದೆಯೋ?

ಹಾಗಿದ್ದರೆ ಅವರೆಲ್ಲರೂ ಒಂದೆಡೆ ಬಂದು ಈ ಮಂತ್ರವನ್ನು ಅನ್ನಲಿ. ಸ್ಪೃಶ್ಯ-ಅಸ್ಪೃಶ್ಯರು ಒಬ್ಬರಿಂದೊಬ್ಬರು ದೂರವಿರುವರೋ ? ಹಾಗಾದರೆ ಅವರು ಒಂದೆಡೆಯಲ್ಲಿ ಕೂಡಿ ಈ ಮಂತ್ರವನ್ನು ಉಚ್ಚರಿಸಲಿ. ಹಿಂದು ಮುಸಲ್ಮಾನರು ಒಬ್ಬರನ್ನೊಬ್ಬರು ದ್ವೇಷಿಸುತ್ತಾರೆಯೋ? ಹಾಗಾದರೆ ಕೂಡಲಿ ಅವರು ಒಂದೇ ಸ್ಥಳದಲ್ಲಿ ಮತ್ತು ಈ ಮಂತ್ರವನ್ನು ಉಚ್ಚರಿಸಲಿ. ಗುಜರಾಥಿಗಳು-ಮಹಾರಾಷ್ಟ್ರರು, ಕನ್ನಡಿಗರು-ಮಹಾರಾಷ್ಟ್ರರು ಒಬ್ಬರನ್ನೊಬ್ಬರು ದ್ವೇಷಿಸುವರೋ ? ಹೀಗಿದ್ದರೆ ಅವರೂ ಒಂದೆಡೆಯಲ್ಲಿ ಸೇರಿ ಈ ಮಂತ್ರವನ್ನು ಅನ್ನಲಿ.

ಒಕ್ಕಟ್ಟಿನಿಂದ ಬಾಳುವವರ ಸಲುವಾಗಿ ಈ ಮಂತ್ರವಿಲ್ಲ. ಭಿನ್ನ ಭಾವವನ್ನು ಅಳಿಸುವದಕ್ಕಾಗಿಯೇ ಈ ಮಂತ್ರವಿದೆ. ಜಗತ್ತಿನಲ್ಲಿ ಎಲ್ಲೆಡೆಯಲ್ಲಿ ಕಂಡು ಬರುವ ಭೇದ ಭಾವದ ಕತ್ತಲನ್ನು ಓಡಿಸುವದಕ್ಕೆ ಋಷಿಗಳು ಈ ತೇಜಸ್ಸುಳ್ಳ ದೀಪವನ್ನು ಕೊಟ್ಟಿದ್ದಾರೆ. ಈ ದೀಪವನ್ನು ಕೈಯಲ್ಲಿ ಹಿಡಿದುಕೊಂಡು ನಾವು ನಮ್ಮ ವ್ಯವಹಾರಗಳನ್ನು ಸಾಗಿಸುವಾ, ಆನಂದವು ನಮಗೆ ದೊರೆಯದಿರಲಾರದು. ಅದ್ವೈತವೆಂದರೆ "ತನ್ನಂತೆ ಪರರು" ಎಂಬ ಭಾವನೆಯು. ಸಮರ್ಥ ರಾಮದಾಸರು ಎಲ್ಲ ಅದ್ವೈತದ ತತ್ವಜ್ಞಾನವನ್ನು ಒಂದು ಶ್ಲೋಕದಲ್ಲಿ ಹೇಳಿರುವರೆಂದು ನನ್ನ ಮತ. ಅದ್ವೈತದ ಪ್ರತ್ಯಕ್ಷ ವ್ಯಾವಹಾರಿಕ ಸ್ವರೂಪವನ್ನು ಅವರು ಅದರಲ್ಲಿ ತಿಳಿಸಿಕೊಟ್ಟಿದ್ದಾರೆ. "ನಮ್ಮನ್ನು ಚೂಟಿದರೆ ನಮಗೆ ನೋವಾಗುತ್ತದೆ; ಅದರಂತೆ ಪರರಿಗೆ" ಎಂಬ ಮಾತನ್ನು ನಾವು ಮನಸ್ಸಿನಲ್ಲಿಡಬೇಕು. ನನಗೆ ಬಡೆದರೆ ನೋವು; ಕೂಳಿಲ್ಲದಿದ್ದರೆ ಸಂಕಟ; ಅಪಮಾನವಾದರೆ ಸಾವು; ಶಿಕ್ಷಣ ದೊರೆಯದಿದ್ದರೆ ನಾಚಿಕೆ; ನನ್ನಂತೆಯೇ ಎಲ್ಲರಿಗೆ. ನನ್ನಂತೆಯೇ ಎಲ್ಲರಿಗೂ ಮನಸ್ಸು, ಬುದ್ಧಿ ಮತ್ತು ಹೃದಯವು ಅವೆ. ನನ್ನ ವಿಕಾಸವಾಗಬೇಕು. ನನ್ನ ಜೀವನ ಕುಸುಮ ಅರಳಬೇಕು. ನನಗೆ ಮಾನವು ದೊರೆಯಬೇಕು. ಇದರಂತೆಯೇ ಎಲ್ಲರ ಇಚ್ಛೆಗಳು. ನಮಗೆ ಬಂದ ಸುಖದುಃಖಗಳನ್ನು ಅನುಭವಿಸಿದಂತೆ ನಾವು ಎಲ್ಲರ ಸುಖ ದುಃಖಗಳನ್ನು ಅರಿತುಕೊಳ್ಳುವದೆಂದರೆ ಅದ್ವೈತವನ್ನು ಅನುಭವಿಸಿದಂತೆಯೇ ಸರಿ.

ಎರಡನೆಯವರಿಗೆ ನೋವಾಗುವಂತೆ ನಾವು ವರ್ತಿಸಬಾರದು. ಎಂಬುದನ್ನು ಇದರಿಂದ ನಾವು ಕಲಿಯಬೇಕಾದ ಪಾಠವು. ಎರಡನೆಯವ

ರಿಗೆ ಆನಂದವಾಗುವಂತೆಯೇ ನನ್ನ ನಡತೆ ಇರಬೇಕೆಂದು ನನ್ನ ಅದ್ವೈತವು ನನಗೆ ಹೇಳುತ್ತದೆ. ಅದ್ವೈತವೆಂದರೆ ಅಮೂರ್ತವಾದ ಕಲ್ಪನೆಯಲ್ಲ; ಅದು ಪ್ರತ್ಯಕ್ಷ ವ್ಯವಹಾರ. ಅದೊಂದು ಬಾಯಿಯಿಂದ ಆಡುವ ಮಾತಲ್ಲ. ಅದ್ವೈತವೆಂದರೆ ಅನುಭೂತಿಯು. ಸಹಾನುಭೂತಿಯು.

ಋಷಿಗಳು ಕೇವಲ ಅದ್ವೈತದ ಕಲ್ಪನೆಯಲ್ಲಿಯೇ ತಲ್ಲೀನರಾಗಲಿಲ್ಲ, ಅವರು ಜಡ, ಚೇತನ ಜಗತ್ತಿನೊಡನೆ ಒಂದಾದರು. ರುದ್ರಸೂಕ್ತವನ್ನು ಬರೆದ ಋಷಿಯು ಮನುಷ್ಯರ ಬೇಡಿಕೆಗಳ ಕಾಳಜಿಯನ್ನು ವಹಿಸಿದ್ದಾನೆ. ಮಾನವ ಜನಾಂಗದ ಎಲ್ಲ ಕುಂದುಕೊರತೆಗಳನ್ನು ತನ್ನವೇ ಎಂದು ತಿಳಿದಿದ್ದಾನೆ. ದೇಹ ಮನಸ್ಸು ಮತ್ತು ಬುದ್ಧಿ ಇವುಗಳ ಹಸಿವನ್ನು ಅನುಭವಿಸಿದ್ದಾನೆ, ಅರಿತುಕೊಂಡಿದ್ದಾನೆ.

> “ಘೃತಂ ಚ ಮೆ, ಮಧುಂ ಚ ಮೆ, ಗೋಧೂಮಾಶ್ಚ ಮೆ, ಸುಖಂ ಚ ಮೆ,
> ಶಯನಂ ಚ ಮೇ ಹ್ರೀಶ್ಚ ಮೆ, ಶ್ರೀಶ್ಚ ಮೆ, ಧೀಶ್ಚ ಮೆ, ಧಿಷಣಾ ಚ ಮೆ ||

ತುಪ್ಪ, ಜೇನುತುಪ್ಪ, ಗೋದಿ, ಸುಖ, ಹಾಸುಗೆ, ನಮ್ರತೆ, ಸಿರಿ, ಬುದ್ಧಿ ಇವೆಲ್ಲವೂ ನನಗೆ ಬೇಕು. ಇವನ್ನೆಲ್ಲ ಆ ಋಷಿಯು ತನಗಾಗಿ ಬೇಡುವದಿಲ್ಲ. ಆ ಋಷಿಯು ಜಗದಾಕಾರನಾಗಿದ್ದಾನೆ. ಅವನಿಗೆ ಎಲ್ಲ ಮಾನವರ ವಿಚಾರವಿದೆ; ಇವನ್ನೆಲ್ಲ ಅವನು ಇಡೀ ಮಾನವ ಪ್ರಪಂಚದ ಸಲುವಾಗಿ ಕೋರಿದ್ದಾನೆ. ಇವೆಲ್ಲವೂ ಮಾನವರೆಲ್ಲರಿಗೂ ಹೇಗೆ ಮತ್ತು ಯಾವಾಗ ದೊರಕೀತೋ ಎಂಬ ಕಳಕಳಿಯು ಅವನ ಮನಸ್ಸಿನಲ್ಲಿದೆ. ನನ್ನ ಅಣ್ಣತಮ್ಮಂದಿರಿಗೆ ಅಕ್ಕ ತಂಗಿಯರಿಗೆ ಹೊಟ್ಟೆ ತುಂಬ ಅನ್ನ, ಮೈತುಂಬ ಬಟ್ಟೆ ಯಾವಾಗ ದೊರೆಯುವವು ? ಈ ಪ್ರಪಂಚದಲ್ಲಿ ಜ್ಞಾನ ದೀಪವು ಎಲ್ಲರಿಗೆ ಯಾವಾಗ ಸಿಕ್ಕುವದು ? ಎಲ್ಲರೂ ಸುಖ ಸಮಾಧಾನದಿಂದ ಹೇಗೆ ಬಾಳುವರು? ಈ ಚಿಂತೆ ಆ ರುದ್ರ ಸೂಕ್ತಕಾರ ಋಷಿಗೆ ಅದೆ. ಅವನು ವಿಶ್ವ ಕುಟುಂಬಿ.

“ಪಾವನ ಭಿಕ್ಷೆ” ಎಂಬ ಸೂತ್ರದಲ್ಲಿ ಸಮರ್ಥ ರಾಮದಾಸರು ಇದೇ ತರದ ಭಿಕ್ಷೆಯನ್ನು ಕೊಡಲು ಪ್ರಭುವಿಗೆ ಕೇಳಿದ್ದಾರೆ. ವಿದ್ಯೆ, ಗಾಯನ, ಸಂಗೀತ, ಎಲ್ಲ ಹೃದ್ಯ ಮತ್ತು ಮಂಗಲ ವಸ್ತುಗಳನ್ನು ಮಾನವ ಪ್ರಪಂಚಕ್ಕಾಗಿ ಕೋರಿದ್ದಾರೆ.

ರುದ್ರಸೂಕ್ತವನ್ನು ರಚಿಸಿದ ಕವಿಯು ಸಮಾಜದ ಜೀವನಕ್ಕೆ

ಅವಶ್ಯವಿದ್ದ ವಸ್ತುಗಳನ್ನು ಬೇಡಿದ್ದಾನೆ. ಮತ್ತು ಅವುಗಳನ್ನು ಪೂರೈಸು ವವರಿಗೆ ತನ್ನ ವಂದನೆಗಳನ್ನು ಅರ್ಪಿಸಿದ್ದಾನೆ. ಈ ಋಷಿಗೆ ಅಮಂಗಲ ವಾದದ್ದಾಗಲೀ ಕಶ್ಮಲವಾದದ್ದಾಗಲೀ ಎಲ್ಲಿಯೂ ಕಾಣುವುದೇ ಇಲ್ಲ.

"ಚರ್ಮಕಾರೇಭ್ಯೋನಮಃ, ರಥಕಾರೇಭ್ಯೋ ನಮಃ, ಕುಲಾಲೇಭ್ಯೋನಮಃ ||

ಚರ್ಮಕಾರನಿಗೆ, ರಥಕಾರನಿಗೆ, ಕುಂಬಾರನಿಗೆ ಅವನ ವಂದನೆಗಳು. ತಮ್ಮ ತಮ್ಮ ಕರ್ಮ ಕುಸುಮದಿಂದ ಸಮಾಜ ಪುರುಷನನ್ನು ಪೂಜಿಸುವ ಈ ದುಡಿಯುವವರೆಲ್ಲರು ಈ ಋಷಿಗೆ ವಂದನೀಯರು. ಹೊಲೆಯನು ಅವನಿಗೆ ಅಸ್ಪೃಶ್ಯನಲ್ಲ. ಕುಂಬಾರನು ತುಚ್ಛನಲ್ಲ; ಸಮಾಜಕ್ಕೆ ಜ್ಞಾನ ವನ್ನೀಯುವ ಮಹನೀಯರಷ್ಟೇ ಸಮಾಜಕ್ಕೆ ಗಡಿಗೆಗಳನ್ನು ಸಿದ್ಧಗೊಳಿಸಿ ಪೂರೈಸುವ ಕುಂಬಾರನು ಕೂಡ ಅವನಿಗೆ ಶ್ರೇಷ್ಠನು.

**"There is nothing great or small in the eyes of God"**

ದೇವರಿಗೆ ಯಾರೂ ದೊಡ್ಡವರಲ್ಲ, ಸಣ್ಣವರಲ್ಲ. ಎಲ್ಲರೂ ಸಮಾನರು; ಸೇವೆಯನ್ನು ಸಲ್ಲಿಸುವವರೆಲ್ಲರೂ ಮಂಗಲರು, ಪವಿತ್ರರು.

ಬರಿ ಸೇವೆ ಮಾಡುವವರಿಗೆ ಅಷ್ಟೇ ರುದ್ರಸೂಕ್ತಕಾರನು ತನ್ನ ವಂದನೆಗಳನ್ನರ್ಪಿಸುವದಿಲ್ಲ. ಪತಿತರಿಗೂ ಪ್ರಣಾಮ ಮಾಡುತ್ತಾನೆ. ಮನುಷ್ಯನು ಪತಿತನಾಗುವದೇಕೆ ? ಸಮಾಜದಲ್ಲಿ ಗೆಲೆಗೊಂಡ ದೋಷ ಗಳಿಂದಲೇ ಪತಿತನಾಗುತ್ತಾನೆ. "ಸ್ತೇನಾನಾಂ ಪತಯೆ ನಮೋ" ಎಂದು ಈ ಋಷಿಯು ಹೇಳುತ್ತಾನೆ. ಕಳ್ಳರ ನಾಯಕನಿಗೆ ಋಷಿಯು ವಂದಿಸುತ್ತಾನೆ. ಈ ಋಷಿಯು ಹುಚ್ಚನಲ್ಲ. ಕಳ್ಳನು ಕಳವು ಮಾಡುವದೇಕೆ ? ಶ್ರೀಮಂತರ ಮಕ್ಕಳಿಗೆ ನೂರಾರು ಆಟಿಗೆಯ ಸಾಮಾನುಗಳಿರುತ್ತವೆ. ಬಡವರ ಮಕ್ಕಳಿಗೆ ಒಂದೂ ಇರುವದಿಲ್ಲ. ಆ ಬಡವನ ಮಗನು ಆಟಿಗೆಯ ವಸ್ತುವೊಂದನ್ನು ಕಳವು ಮಾಡಿ ಒಯ್ದರೆ ಅವನಿಗೆ ಘಟಿಕಿಯ ಶಿಕ್ಷೆಯು ದೊರೆಯುವದು. ಹೊಲದಲ್ಲಿ ಹಗಲಿರುಳು ದುಡಿಯುವ ಒಕ್ಕಲಿಗನಿಗೆ ಹೊಟ್ಟೆತುಂಬ ಕೂಳು ದೊರೆಯದಿದ್ದರೆ ಅವನು ಕಾಳನ್ನು ಕಳವು ಮಾಡಿ ಒಯ್ಯುವನು. ಇದರಲ್ಲಿ ಅವನದೇನು ದೋಷವು ? ಅವನು ಕಳ್ಳನಲ್ಲ. ಅವನನ್ನು ಕೂಳಗೇಡಿಯನ್ನಾಗಿ ಮಾಡುವ ಸಮಾಜವು ಕಳ್ಳರ ಸಮಾಜವು. ಈ ಋಷಿಯು ಕಳವಳಿಸಿ ಹೇಳುತ್ತಾನೆ. "ಚೋರರೇ ನೀವು ಚೋರರಲ್ಲ. ಸಮಾಜವು ಸರಿಯಾಗಿ ನಡೆದರೆ ನಿಮಗೆ ಕಳವು ಮಾಡುವ ಆವಶ್ಯಕತೆಯೇ

ಇಲ್ಲ. ನಿಮ್ಮಲ್ಲಿಯ ಮಾನವತೆಯನ್ನು ನಾನು ಕಂಡಿದ್ದೇನೆ. ನಿಮ್ಮಲ್ಲಿಯ ದಿವ್ಯಜ್ಯೋತಿಯು ನನಗೆ ಗೋಚರವಾಗಿದೆ. ನಿಮ್ಮಲ್ಲಿದ್ದ ಆತ್ಮವೈಭವವು ಕಲ್ಲು-ಹೃದಯವವರಿಗೆ ಕಾಣದಿದ್ದರೂ, ನಿರ್ಮಲ ದೃಷ್ಟಿಯವನಾದ ನನಗೆ ಕಾಣದೆ ಇರುವುದು ಹೇಗೆ ?

ಅದ್ವೈತವನ್ನು ಮರೆತ ಸಮಾಜದಲ್ಲಿ ಕ್ರಾಂತಿಯಾಗುತ್ತದೆ. ದೇವರು ಜಗತ್ತಿಗೆ ಪಾಠವನ್ನು ಕಲಿಸಲಿಚ್ಛಿಸುತ್ತಾನೆ. ಹಗಲಿರುಳು ದುಡಿವರೂ ನೆರೆಹೊರೆಯಲ್ಲಿರುವ ನನ್ನ ಬಾಂಧವನಿಗೆ ಇರಲಿಕ್ಕೆ ಅನುವಿಲ್ಲ; ಹೊಟ್ಟೆಗೆ ಅನ್ನವಿಲ್ಲ; ನಾನು ಮಾತ್ರ ಮೇಲಂತಸ್ತಿನ ನನ್ನ ಮನೆಯಲ್ಲಿ ಕುಳಿತು ರೇಡಿಯೊ ಕೇಳುತ್ತ ಕುಳಿತಿದ್ದೇನೆ. ಇದು ಭಾರತೀಯ ಸಂಸ್ಕೃತಿಯಲ್ಲ; ಭಾರತಿಯ ಸಂಸ್ಕೃತಿಯ ಕೊಲೆಯು. ಉಪವಾಸದಿಂದ ಬಳಲುವ ಜನ ರನ್ನು ಕಂಡು ದಾಮಾಜಿಯು ಎಲ್ಲ ಧಾನ್ಯವನ್ನು ಅವರಿಗೆ ಕೊಟ್ಟನು. ಮನೆಯಲ್ಲಿ ಕಳವು ಮಾಡಲಿಕ್ಕೆ ಬಂದ ಚೋರನಿಗೆ "ಇನ್ನೊಂದಿಷ್ಟು ಒಯ್ಯಪ್ಪಾ" ಎಂದು ಸಂತ ಏಕನಾಥರು ಹೇಳಿದರು. ಕಳ್ಳರ ಇರುವಿ ಕೆಯು ನಮಗೆ, ಸಮಾಜಕ್ಕೆ ನಾಚಿಗೆಯ ಮಾತಾಗಬೇಕು.

ಇಂದು ಅದ್ವೈತವು ಒಂದು ಹಾಸ್ಯದ ಮಾತಾಗಿದೆ. ತುಂಬಿದ ಹೊಟ್ಟೆಯ ಮೇಲೆ ಕೈಯಾಡಿಸುತ್ತ ಚರ್ಚಿಸಲಾಗುತ್ತದೆ. ಆದರೆ ಜೀವನ ದಲ್ಲಿ ಅದ್ವೈತವನ್ನು ಆಚರಿಸಿದ ಭಗವಾನ ಬುದ್ಧನು ಹಸಿವೆಗೆ ಈಡಾದ; ಬೇನೆಯಿಂದ ಬಳಲುವ ಹುಲಿಯ ಬಾಯಿಯಲ್ಲಿ ತನ್ನ ತೊಡೆಯನ್ನಿಟ್ಟನು. ಅದ್ವೈತವನ್ನುಂಡ ತುಲಸೀದಾಸನು,ಮರವನ್ನು ಕಡಿಯುವವನ ಕೊಡಲಿಯ ಇದುರು ತನ್ನ ತಲೆಯನ್ನು ಮುಂದೆಮಾಡುತ್ತಾನೆ. ಮತ್ತು ಎಲ್ಲರಿಗೂ ಹಣ್ಣುಹಂಪಲ ಛಾಯೆಯನ್ನೀಯುವ ಆ ಮರವನ್ನು ಉಳಿಸಲೆತ್ನಿಸು ತ್ತಾನೆ. ಅದ್ವೈತವನ್ನು ಅನುಭವಿಸಿದ ಕಮಾಲನು ಹುಲ್ಲು ಕೊಯ್ಯಲಿಕ್ಕೆ ಹೋಗಿದ್ದನು. ಮಂದಗಾಳಿಗೆ ಅಲ್ಲಾಡುವ ಆ ಹುಲ್ಲನ್ನು ನೋಡಿ "ಬೇಡಾ! ನಮ್ಮನ್ನು ಕಡಿಯಬೇಡ" ಎಂದು ಆ ಹುಲ್ಲು ಅನ್ನುತ್ತದೆಂದು ಅವನಿಗೆ ಅನ್ನಿಸಿತು. ಅವನ ಕೈಯೊಳಗಿದ್ದ ಕುಡಗೋಲು ಬಿದ್ದಿತು. ಅದ್ವೈತದ ಅನುಭವವನ್ನು ಪಡೆದ ಋಷಿಗಳ ಆಶ್ರಮಗಳಲ್ಲಿ ಆಡು ಹುಲಿ ಕೂಡಿ ಆಡುತ್ತವೆ; ಚಿಗರೆಗಳು ಸಿಂಹದ ಆಯಾಲವನ್ನು ಕಟ್ಯಾಡಿಸುತ್ತವೆ. ಮುಂಗಲಿ ಹಾವು ಅಪ್ಪಿಕೊಳ್ಳುತ್ತವೆ. ಅದ್ವೈತವೆಂದರೆ ಕ್ರಮೇಣ ಬೆಳೆ

ಯುವ ಪ್ರೇಮವು. ವಿಶ್ವವನ್ನೇ ನಂಬುಗೆಯಿಂದ ಅಪ್ಪಿಕೊಳ್ಳುವ ನಲುಮೆ. ಪರಸ್ಪರ ತಿಳಿವಳಿಕೆಯಿಂದ ಬೆಳೆವ ಸಮಭಾವವದು

ಆದರೆ ಅದ್ವೈತದ ಹುಟ್ಟು ಭೂವಿಯಾದ ಭಾರತದಲ್ಲಿ ಇಂದು ಅದು ಪೂರ್ಣವಾಗಿ ಅಸ್ತವಾಗಿದೆ, ಮಾಯವಾಗಿದೆ. ನಮಗೆ ನೆರೆಹೊರೆಯವರು ಇಲ್ಲ. ಸುತ್ತು ಮುತ್ತಲಿನ ವಿರಾಟ ದುಃಖವು ಕಾಣುವದಿಲ್ಲ. ನಮ್ಮ ಕಿವಿಗಳು ಕಿವುಡಾಗಿವೆ, ನಮಗೆಲ್ಲರಿಗೂ "ಹಾರ್ಟಡಿಸೀಜ" ಆಗಿದೆ.

ಕರುಳು ಕರಗಿ ವೇದದಲ್ಲಿ ಒಬ್ಬ ಮಹರ್ಷಿಯು ಹೀಗೆನ್ನುತ್ತಾನೆ.

"ಮೋಘಮನ್ನಂ ವಿಂದಂತೆ ಅಪ್ರಚೇತಾಃ । ಸತ್ಯಂ ಬ್ರವೀಮಿ ವಧ ಇತ್ಸತಸ್ಯ । ನ ಅರ್ಯಮಣಂ ಪುಷ್ಯತಿ ನೊಸಖಾಯಂ । ಕೇವಲಾಘೊ ಭವತಿ ಕೇವಲಾದಿ॥"

" ಸಂಕುಚಿತ ದೃಷ್ಟಿಯವರಿಗೆ ಧಾನ್ಯದ ರಾಶಿಗಳು ದೊರೆತರೂ ವ್ಯರ್ಥವಾದದ್ದು. ಅದು ಅವರ ಮನೆಯಲ್ಲಿ ರಾಶಿಯಾಗಿ ಇಟ್ಟ ಅನ್ನವಲ್ಲ. ಅದು ಕೂಡಿಟ್ಟ ಮರಣವು. ಯಾವನು ತನ್ನ ಅಣ್ಣ ತಮ್ಮಂದಿರಿಗೆ ಅಕ್ಕ ತಂಗಿಯರಿಗೆ, ಕೊರತೆ ಇದ್ದವರಿಗೆ ಕೊಡದೆ ಸ್ವಾರ್ಥವನ್ನು ಸಾಧಿಸುತ್ತಾನೆಯೋ, ಅವನು ಪಾಪರೂಪನು, ಪಾಪದ ರಾಶಿಯು."

ನೆರೆಹೊರೆಯಲ್ಲಿ ಲಕ್ಷಾವಧಿ ಜನರು ಹೊಟ್ಟೆಗೆ ಅನ್ನವಿಲ್ಲದೆ ಬಳಲುವಾಗ ತಮ್ಮ ಭವ್ಯ ಪ್ರಾಸಾದಗಳಲ್ಲಿ ಅನ್ನ ಬಟ್ಟೆಗಳ ಸಂಗ್ರಹವನ್ನಿಡುವದು ಭಯಾವಹವಾದದ್ದು. "ಅವು ನಿಮ್ಮನ್ನು ನುಚ್ಚುನೂರು ಮಾಡುವ ಬಾಂಬುಗಳು." ಎಂದು ಋಷಿಯು ಹೇಳುತ್ತಾನೆ. ಋಷಿಯ ಈ ಮಾತು ಪಾಶ್ಚಿಮಾತ್ಯ ದೇಶಗಳಲ್ಲಿ ಅನುಭವಕ್ಕೆ ಬಂದಿದೆ. ನಮ್ಮಲ್ಲಿಯೂ ಬಾರದೆ ಇರಲಾರದು.

ಹಸಿವೆಯಿಂದ ಬಳಲುವ ನಾಯಿಗೆ ನಾಮದೇವನು ಚಪಾತಿ ತುಪ್ಪವನ್ನು ತಿನಿಸಿದನು. ಅದೇ ಸಂತರ ಭೂಮಿಯಲ್ಲಿ ಹಸಿವಿಗೀಡಾದ ಮನುಷ್ಯರಿಗೆ ಇಂದು ಅನ್ನವಿಲ್ಲದಂತಾಗಿದೆ. ಮತ್ತು ಇದನ್ನು ಯಾರೂ ವಿಚಾರಿಸುವದೇ ಇಲ್ಲ. ಯಾರಿಗೂ ಇದರ ಪರಿವೇ ಇಲ್ಲ. ಅದ್ವೈತಾಭಿಮಾನಿಗಳಾದ ಶಂಕರಾಚಾರ್ಯರು ಸಂಸ್ಥಾನಿಕರಿಗೆ ತೆರಿಗೆಯನ್ನು ಕಡಿಮೆ ಮಾಡಲು ಹೇಳುವದಿಲ್ಲ; ಸಾಹುಕಾರರಿಗೆ ಬಡ್ಡಿಯನ್ನು ಇಳಿಸಲು ಉಪದೇಶಿಸುವದಿಲ್ಲ; ಕಾರಖಾನೆಯ ಒಡೆಯರಿಗೆ ಕೂಲಿಕಾರರ ಸಂಬಳವನ್ನು ಹೆಚ್ಚಿಸಲೂ ದುಡಿತದ ವೇಳೆಯನ್ನು ಕಡಿಮೆ ಮಾಡಲೂ ಸೂಚಿಸುವದಿಲ್ಲ.

ಎಲ್ಲರೂ ತಮ್ಮ ಪಾದ ಪೂಜೆಯನ್ನೇ ನೋಡುತ್ತಾರೆ. ಒಬ್ಬ ಆಚಾರ್ಯರೂ ಸಹ ತಮ್ಮ ಸಂಚಾರದಲ್ಲಿ ಅದ್ವೈತವನ್ನು ಆಚರಿಸಲು ಪ್ರಯತ್ನ ಮಾಡುವದಿಲ್ಲ.

ಈ ಸಂಸ್ಕೃತಿ ಸಂರಕ್ಷಕರು ಸಾಮ್ಯವಾದವನ್ನು ಹಾಸ್ಯಕ್ಕೀಡುಮಾಡುತ್ತಾರೆ. ಸಾಮ್ಯವಾದವೆಂದರೆ ಆಚಾರದಲ್ಲಿ ತಂದ ವೇದಾಂತವು. ಸಾವಿರಾರು ವರ್ಷ ವೇದಘೋಷವು ನಡೆದಿದೆ. ಕಥಾ ಪುರಾಣ ರೂಪದಿಂದ ಜನರಿಗೆ ಹೇಳಲಾಗುತ್ತಿದೆ. ವೇದಾಂತವನ್ನು ಕಲಿಸುವ ಸಮಾಜವು ವಿಸ್ಮಲಿತವೇಕಾಗಬೇಕು ? ನಮ್ಮ ಅಡಿಗಲ್ಲೇ ಪೊಳ್ಳಾಗಿದೆ. ಅದ್ವೈತವನ್ನು ಕಲಿಸುವ ಸಮಾಜದಲ್ಲಿ, ದ್ವೈತಭಾವದ ತಾಂಡವ ನಡೆದಿದೆ. ಈ ಗೊಂದಲದ ಪರಿಸ್ಥಿತಿಯಲ್ಲಿ ಸುಖಶಾಂತಿಯನ್ನು ನೆಲೆಗೊಳಿಸುವ ಯತ್ನವನ್ನು ಸಾಮ್ಯವಾದಿಗಳು ಕೈಕೊಂಡಿದ್ದಾರೆ.

''ಸರ್ವೇತ್ರ ಸುಖಿನಃ ಸಂತು, ಸರ್ವೇ ಸಂತು ನಿರಾಮಯಾಃ"

"ಎಲ್ಲರೂ ಸುಖದಿಂದ ಇರಲಿ; ಎಲ್ಲರೂ ನಿರೋಗಿಗಳಾಗಿ ಬಾಳಲಿ;" ಎಂಬ ಮಂತ್ರವನ್ನು ಬಾಯಿಂದ ಅಂದರೆ ಸುಖವೂ ಸಿಗುವದಿಲ್ಲ. ಆರೋಗ್ಯವೂ ಲಭಿಸುವದಿಲ್ಲ. ಮಂತ್ರವೆಂದರೆ ಸಿದ್ಧಿ ಸಾಧನವು. ಗುರಿಯನ್ನು ಜೀವನದಲ್ಲಿ ತರಲು ಸವೆಯಬೇಕಾಗುತ್ತಿದೆ. ಸಾಯಬೇಕಾಗುತ್ತಿದೆ. ಈ ಮಂತ್ರವನ್ನನ್ನುವಾಗ ಎಷ್ಟು ಜನರಿಗೆ ಔಷಧವಿಲ್ಲ, ಸ್ವಚ್ಛವಾದ ಹವೆಯಿಲ್ಲ, ನೀರು ಇಲ್ಲ, ಆರೋಗ್ಯದ ಜ್ಞಾನವಿಲ್ಲ; ಇರಲು ಹೊಲಸು ಮನೆಗಳು, ಇವೆಲ್ಲವುಗಳ ವಿಚಾರವು ಬರುತ್ತಿದೆಯೋ ? ನಮ್ಮ ಜನರಲ್ಲಿ ಡಂಭಾಚಾರವು ಹೆಚ್ಚಿದೆ. ನಾಲಗೆಯ ತುದಿಯಲ್ಲಿ ದೊಡ್ಡ ದೊಡ್ಡ ಮಾತುಗಳು; ಹೊಟ್ಟೆಯಲ್ಲಿ ಏನೂ ಇಲ್ಲ. ಧರ್ಮವು ಜೀವನದಲ್ಲಿ ಬೆರೆಯದೆ ಜೀವನವು ಸುಂದರವಾಗುವಂತಿಲ್ಲ. ರೊಟ್ಟಿಯ ತುಣುಕನ್ನು ತುಟಿಯ ಮೇಲಿಟ್ಟರೆ ನಡೆಯುವಂತಿಲ್ಲ; ಅದು ಹೊಟ್ಟೆಯೊಳಗೆ ಹೋದರೆ ಮಾತ್ರ ದೇಹವು ತೇಜಸ್ಸುಳ್ಳದ್ದೂ, ಬಲವುಳ್ಳದ್ದೂ ಆಗುವದು. ಹಿರಿ ವಚನಗಳು ಕೃತಿಯಲ್ಲಿ ರೂಪಾಂತರ ಹೊಂದಿದರೆ ಸಮಾಜವು ಸುಖಿಯಾಗುವದು, ಆರೋಗ್ಯ ಸಂಪನ್ನವಾಗುವದು.

ಸಾಮ್ಯವಾದಿಗಳು ಮಂತ್ರಗಳನ್ನು ಅನ್ನುತ್ತ ಕೂಡ್ರುವದಿಲ್ಲ. ಈ ಮಹಾನ್ ಮಂತ್ರಗಳು ಆಚಾರದಲ್ಲಿ ಯಾವಾಗ ರೂಪುಗೊಳ್ಳುವವು; ಈ

ಕಳಕಳಿಯು ಅವರಿಗೆ ಇದೆ. ಅದಕ್ಕಾಗಿಯೇ ಅವರ ಸಾಹಸ. ನಮಗೆ ನಿಮ್ಮ ಧರ್ಮಗಿರ್ಮ ತಿಳಿಯುವದಿಲ್ಲವೆಂದು ಅವರು ಅನ್ನುತ್ತಾರೆ. ಆದರೆ ನಿಜವಾಗಿ ಧರ್ಮದಂತೆ ನಡೆದುಕೊಳ್ಳುವವರು ಅವರೇ. ಸಮಾಜಕ್ಕೆ ಅನ್ನವನ್ನು ಕೊಡಬಯಸುತ್ತಾರೆ. ಸಮಾಜದಲ್ಲಿಯ ಅನ್ಯಾಯ, ದಾಸ್ಯ, ದೈನ್ಯವನ್ನು ಓಡಿಸಲು ಪ್ರಯತ್ನಪಡಿಸುತ್ತಾರೆ. ಸಮಾಜದಲ್ಲಿಯ ಕೆಟ್ಟ ಗುಣಗಳನ್ನು ಹೋಗಲಾಡಿಸುವದಿದ್ದರೆ ಅದ್ವೈತವನ್ನು ಆಚರಿಸಿರಿ. ಎಮ್ಮಂತೆ ಪರರು ಎಂಬುವದನ್ನು ಕಲಿಯಲು ಹೇಳುತ್ತಾರೆ. ಸಮಾಜವಾದಿಗಳು ತಮಗೆ "ಭಾಯಿ" ಎಂದು ಕರೆದುಕೊಳ್ಳುತ್ತಾರೆ. "ನಾವೆಲ್ಲರೂ ಬಂಧುಗಳು", "ಅಮೃತಸ್ಯ ಪುತ್ರಾಃ" ಅಮೃತರೂಪವಾದ ಚೈತನ್ಯದ ಮಕ್ಕಳು. ಬನ್ನಿರಿ; ಬನ್ನಿರಿ. ಎಲ್ಲರೂ ಒಂದೆಡೆಯಲ್ಲಿ ದುಡಿಯುವಾ, ಆಡುವಾ; ತಿನ್ನುವಾ, ಕಲಿಯುವಾ; ನಗುವಾ; ಹಾಡುವಾ; ಇದು ಸಾಮ್ಯವಾದಿಗಳ ಕರೆ.

ಹಾವು, ಮುಂಗಲಿಗಳು ಜತೆಯಲ್ಲಿದ್ದು ಆಡುವ, ಋಷಿಗಳ ಆಶ್ರಮದ ಹೆಗ್ಗುರಿಯು ನಮ್ಮಿಂದ ಬಹಳ ದೂರವಿದೆಯೆಂಬ ಮಾತು ನಿಜವು. ಮಾನವನು ನಲುಮೆಯಿಂದ ವಿಶ್ವದಲ್ಲಿಯ ವಿರೋಧವನ್ನು ದೂರ ಮಾಡುತ್ತಾನೆಂಬ ಮಾತು ನಮಗೆ ಗೋಚರವಾದಂತೆ ಕಾಣುವದಿಲ್ಲ. ಮನುಷ್ಯರೆಲ್ಲರೂ ಪ್ರೀತಿಯಿಂದ ಒಂದೆಡೆಯಲ್ಲಿ ಬಾಳಬೇಕು. ಇದರಲ್ಲಿ ಕಠಿಣವಾದ ಮಾತೇನು? ಇಂಥ ಪ್ರಯೋಗವನ್ನು ನಮ್ಮ ಭರತ ಭೂಮಿಯಲ್ಲಿ ಋಷಿಗಳು ಮಾಡಲೆತ್ನಿಸಿದ್ದರು. ಅದ್ವೈತದ ತಾರಕಮಂತ್ರದಿಂದ ಇಂಥ ಪ್ರೇಮೈಕ್ಯವನ್ನು ಹುಟ್ಟಿಸಲು ಸಾಹಸ ಪಡುತ್ತಿದ್ದರು. ಆದರೆ ಇದೇ ಪರಂಪರೆ ಮುಂದುವರಿಸುತ್ತೇವೆ ಎಂದು ಅನ್ನುವವರು ಇಂದು ಎಲ್ಲೆಡೆಯಲ್ಲಿಯೂ ಒಡಕನ್ನು ಹೆಚ್ಚಿಸುತ್ತಿದ್ದಾರೆ. ವೈಷಮ್ಯವನ್ನು ಬೆಳೆಯಿಸುತ್ತಿದ್ದಾರೆ.

ನಿಸರ್ಗವು ನಮಗೆ ಅದ್ವೈತದ ಪಾಠವನ್ನೇ ಕಲಿಸುತ್ತದೆ. ಮೋಡಗಳು ಎಲ್ಲ ನೀರನ್ನು ಸುರುವಿಬಿಡುತ್ತವೆ. ಮರಗಳು ಹಣ್ಣುಗಳನ್ನು ಕೊಡುತ್ತವೆ. ಹೂವುಗಳು ಪರಿಮಳವನ್ನು ಹರಡುತ್ತವೆ. ನದಿಗಳು ಹಸಿಯನ್ನು ಕೊಟ್ಟುಬಿಡುತ್ತವೆ. ಸೂರ್ಯ ಚಂದ್ರಮರು ಬೆಳಕನ್ನು ಸೂರಿ ಮಾಡುತ್ತಾರೆ. ನಮ್ಮಲ್ಲಿದ್ದದ್ದನ್ನು ಎಲ್ಲರಿಗೂ ಕೊಟ್ಟುಬಿಡುವಾ. ಎಲ್ಲರೂ ಕೂಡಿ ಉಪಭೋಗಿಸಲಿ. ಆಕಾಶದಲ್ಲಿಯ ಚಿಕ್ಕೆಗಳು ಎಲ್ಲರಿಗಾಗಿ ಅವೆ. ಜೀವನವನ್ನಾಧರಿಸುವ ವಾಯುವು ಎಲ್ಲರಿಗಾಗಿ ಇದ್ದಾನೆ. ಆದರೆ ಮನು

ಷ್ಯನು ಗೋಡೆಗಳನ್ನು ಕಟ್ಟಿ, ತನ್ನ ಒಡೆತನದ ಆಸ್ತಿಯನ್ನು ಮಾಡತೊಡ ಗಿದ್ದಾನೆ. ಭೂಮಿತಾಯಿಯು ಎಲ್ಲರ ತಾಯಿಯು; ಎಲ್ಲರಿಗಾಗಿಯೂ ಇದ್ದಾಳೆ. ಎಲ್ಲರೂ ಕೂಡಿ ಹರಗುವಾ, ಬಿತ್ತುವಾ, ಬೆಳೆಯುವಾ; ಆದರೆ ಮನುಷ್ಯನು ಅದರೊಳಗಿನ ತುಂಡುಗಳನ್ನು ಬೇರೆ ಮಾಡಿಕೊಂಡು ಇದು ನನ್ನದು ಎಂದು ಹೇಳುತ್ತಿದ್ದಾನೆ. ಹೀಗಾಗಿ ಜಗತ್ತಿನಲ್ಲಿ ಅಶಾಂತಿಯು ಹಬ್ಬುತ್ತಿದೆ. ದ್ವೇಷ, ಮತ್ಸರಗಳು ಬೆಳೆಯುತ್ತವೆ. ನಾವು ಸಮಾಜದೊಡನೆ ಬೆರೆಯಬೇಕು.ಪಿಂಡವು ಬ್ರಹ್ಮಾಂಡದಲ್ಲಿ ಬೆರೆಯಬೇಕು.ಕೊನೆಗೆ ವ್ಯಕ್ತಿಯು ಸಮಾಜಕ್ಕಾಗಿಯೇ ಬಾಳಬೇಕಾಗಿದೆ. ಕಲ್ಲು ಕಟ್ಟಡಕ್ಕಾಗಿ ಇದೆ. ಬಿಂದುವು ಸಿಂಧುವಿಗಾಗಿ ಇದೆ. ಆದರೆ ಈ ಅದ್ವೈತವನ್ನು ನೋಡುವರಾರು? ಅನು ಭವಿಸುವವರಾರು? ಈ ಅದ್ವೈತವನ್ನು ಜೀವನದಲ್ಲಿ ತರುವದೆಂದರೆ ಎಂಥ ಆನಂದದ ಮಾತು ! !

ಎಲ್ಲೆಡೆಯಲ್ಲಿಯೂ ಅಣ್ಣ ತಮ್ಮಂದಿರನ್ನೇ ಕಾಣುವವನ ಭಾಗ್ಯವು ಹಿರಿದಾದದ್ದು. ಈ ಭಾಗ್ಯವನ್ನು ಅನುಭವಿಸುವ ಹಸಿವು, ಹುಚ್ಚು ಸಂತ ರಿಗೆ. ಇಡೀ ಸಮಾಜವೇ ತನ್ನಷ್ಟೇ ಪೂಜ್ಯವಾದದ್ದು, ಪ್ರಿಯವಾದದ್ದು, ಎಂದು ಅನಿಸುವವರ ಭಾಗ್ಯವನ್ನು ಬಣ್ಣಿಸುವವರಾರು ? ಅವರಿಗೆ ಎಲ್ಲ ಕಡೆಯಲ್ಲಿಯೂ ಚೈತನ್ಯಮೂರ್ತಿಗಳೇ ಕಾಣುತ್ತವೆ. ಕಲ್ಲಿನಲ್ಲಿ ಜೀವ ವನ್ನು ಕಾಣುವ ಸಂತರಿಗೆ, ಮಾನವನಲ್ಲಿಯ ಜೀವಕಳೆಯು ಕಾಣದೇ ಹೋಗುವದೇ ? ಚೈತನ್ಯಮಯ ಆತ್ಮನ ರೂಪವು ಎಲ್ಲ ಕಡೆಯಲ್ಲಿಯೂ ಹಬ್ಬಿದೆ. ಈ ಚೈತನ್ಯಮಯ ಮೂರ್ತಿಗಳ ಸೇವೆಯನ್ನು ಮಾಡಲು,ಈ ಸಂ ತರು ಹಾತೊರೆಯುತ್ತಾರೆ. ಸಾವಿರ ಕೈಗಳಿದ್ದರೆ, ಸಾವಿರಾರು ಮಾತಾಡುವ ಮೂರ್ತಿಗಳಿಗೆ ಅನ್ನವನ್ನು ನೀಡುತ್ತಿದ್ದೆವು. ಬಟ್ಟೆಗಳನ್ನು ಉಡಿಸುತ್ತಿದ್ದೆವು. ಎಂದು ಈ ಸಂತರಿಗೆ ಅನಿಸುತ್ತದೆ.

ಆದರೆ ಲಕ್ಷಗಟ್ಲೆ ಹೊಟ್ಟೆಗಿಲ್ಲದ, ಬಟ್ಟೆಗಳಿಲ್ಲದ ದೇವರ ಪೂಜೆಯನ್ನು ಮಾಡಲು ಮುಂದೆ ಬರುವವರು ಯಾರಿದ್ದಾರೆ? ಅದ್ವೈತವೆಂದರೆ ವಿಲ ಯನ. ಆತ್ಮಸಾಕ್ಷಾತ್ಕಾರ. "ಕಂಡೆ ನನ್ನ ಸಾವು ನಾನು" ನಾವು ಲಯ ಹೊಂದದೇ ವಿಶ್ವ ವ್ಯಾಪಿಯಾದ ಪರಮೇಶ್ವರನ ದರ್ಶನವಾಗುವಂತಿಲ್ಲ.

ಅಹಂಕಾರದ ಸಾವಿಲ್ಲದೆ ಸ್ವರ್ಗವಿಲ್ಲ. ನಿಮ್ಮ ನಿಮ್ಮ ಅಹಂಕಾರವನ್ನು ಕುಗ್ಗಿಸಿರಿ. ಸ್ವಂತದ ಪೂಜೆಯನ್ನು ಬಿಡಿರಿ. ಅಹಂಕಾರವು ಕಿರಿಯದಾದಂತೆ

ಪರ ಬ್ರಹ್ಮವು ಹಿರಿಯದಾಗಿ ನಿಮಗೆ ಗೋಚರವಾಗುವದು. ಬುದ್ಧನು ಅಹಂ ಕಾರವನ್ನು ಬಿಟ್ಟನು.ಅದರಿಂದಲೇ ಅವನು ನಿರ್ವಾಣವನ್ನು ಪಡೆದನು .ತನ್ನ ತನದ ದೀಪವನ್ನು ನೊಂದಿಸಿದನು. ಆಗ್ಗಿಯೇ ಅವನಿಗೆ ಇಡೀ ಸೃಷ್ಟಿಗೆ ತನ್ನ ಅಪರಂಪಾರವಾದ ಪ್ರೀತಿಯುನ್ನು ಕೊಡಲು ಸಾಧ್ಯವಾಯಿತು.

ಅದ್ವೈತವೆಂದು ಉಚ್ಚರಿಸುವದೆಂದರೆ ನಮ್ಮ ಸ್ವಾರ್ಥದ ಮೇಲೆ ಕೆಂಡ ಇಟ್ಟಂತೆ. ಪ್ರಾಣವನ್ನೇ ಎಸೆದೊಗೆಯಲು ಸಿದ್ಧರಿದ್ದರೆ ಮಾತ್ರ ವೇದಾಂತದ ಮಾತನ್ನು ಆಡಬೇಕೆಂದು ಸಂತ ತುಕಾರಾಮರು ಹೇಳಿದ್ದಾರೆ. ಎರಡನೆಯವರಿಗೆ ನಮ್ಮ ಸರ್ವಸ್ವವನ್ನು ಕೊಡಲು ಉದ್ಯುಕ್ತರಾಗುವದೆಂದರೆ ಅದ್ವೈತದ ದೀಕ್ಷೆಯನ್ನು ಹೊಂದಿದಂತೆ

ಶಂಕರಾಚಾರ್ಯರ ಅದ್ವೈತ ತತ್ವಜ್ಞಾನದ ಸಿಂಹಗರ್ಜನೆಯನ್ನು ಕೇಳಿ ಉಳಿದ ತತ್ವಜ್ಞಾನಗಳೆಲ್ಲ ಮಾಯವಾದವೆಂದು ಹೇಳುತ್ತಾರೆ. ಸಿಂಹವನ್ನು ನೋಡಿದೊಡನೆ ನರಿ ನಾಯಿಗಳಷ್ಟೇ ಅಲ್ಲ ಆನೆಗಳು ಸಹ ಕಳವಳಗೊಳ್ಳುತ್ತವೆ. ಶಂಕರಾಚಾರ್ಯರ ಅದ್ವೈತವನ್ನು ಕಂಡು ದ್ವೈತ ವಾದಿಗಳೆಲ್ಲ ಓಡಿ ಹೋದರು. ಆದರೆ ಸಮಾಜದಲ್ಲಿಯ ದ್ವೈತವು ಹೋಗಲಿಲ್ಲ ! ಸಮಾಜದಲ್ಲಿ ನೆಲೆಗೊಂಡ ಆಲಸ್ಯತನ, ಅಜ್ಞಾನ, ರೂಢಿಗಳು ಡಂಬಾಚಾರ, ಕೀಳು— ಮೇಲ್ಮೆಯ ಭಾವವು, ಸ್ಪೃಶ್ಯಾಸ್ಪೃಶ್ಯತೆಯು, ವೈಷಮ್ಯ, ಬಡತನ, ದಾಸ್ಯ, ದೈನ್ಯ, ದುರ್ಬಲತೆ, ಹೇಡಿತನ, ಇವೆಲ್ಲವೂ ಓಡಿಹೋಗಲಿಲ್ಲ. ಇದೆಲ್ಲ ದ್ವೈತದ ಸಂತಾನ, ಸಮಾಜದಲ್ಲಿ ಒಡಕು ಇದ್ದರೆ ಇಂಥ ಭೀಷಣ ಚಿತ್ರವು, ನಮಗೆ ತೋರುತ್ತದೆ. ಬಾಯಿಂದ ಆಡಲಾದ ಅದ್ವೈತವು, ಅಲ್ಪಸ್ವಲ್ಪವಾದರೂ ಕೃತಿಯಲ್ಲಿ ರೂಪುಗೊಂಡಿದ್ದರೆ ನಮ್ಮ ಸಮಾಜವು ಇಂದಿನ ಅಧೋಗತಿಯ ಮಟ್ಟಕ್ಕೆ ಇಳಿಯುತ್ತಿದ್ದಿಲ್ಲ.

ಆದ್ದರಿಂದಲೇ ಸ್ವಾಮಿ ವಿವೇಕಾನಂದರು ಬಹಳ ವ್ಯಸನಪಟ್ಟು ಒಂದೆಡೆಯಲ್ಲಿ ಹೀಗೆ ಹೇಳಿದ್ದಾರೆ. "ಹಿಂದೂ ಧರ್ಮದಷ್ಟು ಉದಾರ ತತ್ವಗಳನ್ನು ಹೇಳುವ ಇನ್ನೊಂದು ಧರ್ಮವಿಲ್ಲ. ಮತ್ತು ಪ್ರತ್ಯಕ್ಷ ಆಚರಣೆಯಲ್ಲಿ ಹಿಂದುಗಳಷ್ಟು ಅನುದಾರ ಇನ್ನೊಂದು ಜನಾಂಗವಿಲ್ಲ."

ನೂರಾರು ವರ್ಷ ಅದ್ವೈತದ ನಾದವು ಕೇಳಬರುತ್ತದೆ. ಆದರೆ ನಮ್ಮ ಮಠಗಳನ್ನು ಬಿಟ್ಟು ನಾವು ಕಾಡು ಜನರ ಹತ್ತರ ಸಹ ಹೋಗಿಲ್ಲ.

ಭಿಲ್ಲರು, ಗೊಲ್ಲರು, ತೋಡರು, ನೂರಾರು ಕಾಡು ಜಾತಿಗಳಿವೆ. ಆದರೆ ಅಹಂಕಾರದಿಂದಲೇ ನಾವು ಅವರಿಂದ ದೂರ ಉಳಿದಿದ್ದೇವೆ. ಅದ್ವೈತದ ಮೇಲೆ ಟೀಕೆಯನ್ನು ಬರೆಯುವವರು, ಅವನ್ನು ಓದುವವರು ದಿನದ ನಿತ್ಯ ವ್ಯವಹಾರದಲ್ಲಿ ಅದ್ವೈತ ಶೂನ್ಯರಾಗಿಯೇ ನಡೆಯುತ್ತಿದ್ದರು.

ಅದ್ವೈತವು ಭಾರತೀಯ ಸಂಸ್ಕೃತಿಯ ಆತ್ಮ. ಈ ತತ್ವವನ್ನು ಜೀವನದಲ್ಲಿ ಕ್ರಮೇಣ ಹೆಚ್ಚಾಗಿ ಆಚರಿಸುವುದೆಂದರೆ ಭಾರತೀಯ ಸಂಸ್ಕೃತಿಯನ್ನು ಬೆಳೆಯಿಸಿದಂತಾಗುವದು. ನಮ್ಮ ಎಲ್ಲ ಕೃತಿಗಳಲ್ಲಿ, ವಿಚಾರಗಳಲ್ಲಿ, ಅದ್ವೈತದ ಪರಿಮಳವನ್ನು ಹರಡಿದರೆ ಮಾತ್ರ ನಮಗೆ ಭಾರತೀಯ ಸಂಸ್ಕೃತಿಯ ಜೀವಾಳದ ತಿರುಳು ತಿಳಿಯಿತೆಂದು ಅನ್ನಬಹುದು. ಇಲ್ಲದಿದ್ದರೆ ಈ ಸಂಸ್ಕೃತಿಯ ಹೆಸರನ್ನು ಕೂದ ಉಚ್ಚರಿಸುವದೆಂದರೆ, ಆ ಹಿರಿದಾದ ಋಷಿಗಳ ಮತ್ತು ಸಾಧು ಸಂತರ ವಿಡಂಬನೆಯೇ ಸರಿ !!

---

# ೨. ಅದ್ವೈತದ ಸಾಕ್ಷಾತ್ಕಾರವು*

ಅದ್ವೈತದ ಸಾಕ್ಷಾತ್ಕಾರವೆಂದರೆ ಎಲ್ಲ ಚರಾಚರ ಸೃಷ್ಟಿಯ ಕೊನೆಯ ಮೆಟ್ಟು. ಮನುಷ್ಯರನ್ನು ಬಿಟ್ಟು ಉಳಿದ ಚರಾಚರ ಸೃಷ್ಟಿಯೊಡನೆ ಸಮರಸವಾಗಿ ಸಮದರ್ಶಿ ಎನ್ನಿಸಿಕೊಳ್ಳುವುದು ಅದ್ವೈತದ ಪರಮಾವಧಿಯು ಮನುಷ್ಯನಿಗೆ ಎಂದು ಸಾಧ್ಯವಾಗುವದೋ ಆಗಲಿ; ಆದರೆ ಅವನು ಮಾನವಜಾತಿಯನ್ನಾದರೂ ಕುರಿತು ವಿಶಾಲದೃಷ್ಟಿಯುಳ್ಳವನಾಗಬಾರದೇ ?

ಈ ಭರತ ಭೂಮಿಯಲ್ಲಿ ಪ್ರಾಚೀನ ಕಾಲದಿಂದ ಭಿನ್ನ ಭಿನ್ನ ಸಂಸ್ಕೃತಿಗಳ ತಿಕ್ಕಾಟವು ನಡೆದೇ ಇದೆ. ಭಾರತದ ಹೊರಗಿನಿಂದ ಬಂದ ಆರ್ಯರಲ್ಲಿಯೂ ಮತ್ತು ಈ ದೇಶದ ಮೂಲ ನಿವಾಸಿಗಳಾದ ಸಂಸ್ಕೃತಿ ಸಂಪನ್ನರಾದ ಅನಾರ್ಯರಲ್ಲಿಯೂ ಬಹುಕಾಲದ ವರೆಗೆ ತಿಕ್ಕಾಟವು ನಡೆದಿತ್ತು. ಈ ಹಗೆತನದ ವರ್ಣನೆಗಳು ವೇದದಲ್ಲಿ ಅವೆ. ದಕ್ಷಿಣ ದೇಶದ ವಾನರ

ರೆಂದರೆ ಈ ಅನಾರ್ಯರೇ; ಲಂಕೆಯಲ್ಲಿ ರಾವಣನೆಂಬ ಆರ್ಯನಿದ್ದನು.† ಅವನು ತನ್ನ ಸಾಮ್ರಾಜ್ಯವನ್ನು ನಾಸಿಕದ ವರೆಗೆ ಹಬ್ಬಿಸಿದ್ದನು. ವಾಲಿ ಮತ್ತು ರಾವಣರಲ್ಲಿ ಯುದ್ಧವಾಯಿತು. ರಾವಣನು ತುಚ್ಛತೆಯಿಂದ ಈ ದಕ್ಷಿಣ ದೇಶದ ಕಪ್ಪುವರ್ಣದ ನಿವಾಸಿಗಳಿಗೆ ವಾನರರೆಂದು ಕರೆಯುತ್ತಿದ್ದ. ಆದರೆ ಕೆಲವು ಆರ್ಯರು, ಅನಾರ್ಯರೊಡನೆ ಪ್ರೀತಿಯಿಂದ ನಡೆದುಕೊಂಡರು. ಅಗಸ್ತ್ಯ ಋಷಿಯು ವಿಂಧ್ಯವನ್ನು ದಾಟಿ ದ್ರಾವಿಡ ಜನಾಂಗದೊಡನೆ ಬೆರೆತನು. ಈ ಜನರ ಭಾಷೆಯ ನುಡಿಗಟ್ಟನ್ನು ಬರೆದನು. ತಮಿಳು ಭಾಷೆಯ ನುಡಿಗಟ್ಟಿನ ಆದ್ಯ ಕರ್ತನು ಅಗಸ್ತ್ಯ ಋಷಿಯೆಂದು ಈಗಲೂ ಭಾವಿಸುತ್ತಾರೆ. ತಮಿಳವು ಅತಿ ಪ್ರಾಚೀನ ಮತ್ತು ಸುಸಂಸ್ಕೃತವಾದ ಭಾಷೆಯು. ಆರ್ಯ ಋಷಿಗಳು ದ್ರಾವಿಡ ನಾಡಿನಲ್ಲಿ ತಮ್ಮ ಆಶ್ರಮಗಳನ್ನು ಏರ್ಪಡಿಸಿದರು. ಪರಸ್ಪರರ ಸಂಸ್ಕೃತಿಯ ಅರಿವು ಮಾಡಿಕೊಳ್ಳಲು ಆರಂಭವಾಯಿತು. ಅನಾರ್ಯರ ಪಕ್ಷವನ್ನು ವಹಿಸಲು ಇದೇ ಋಷಿಗಳು ರಾಮನನ್ನು ಒತ್ತಾಯ ಪಡಿಸಿದರು. ರಾಮನು ರಾವಣನನ್ನು ಸೋಲಿಸಿದನು. ಆರ್ಯ, ಅನಾರ್ಯರನ್ನು ಕೂಡಿಸಿದವರಲ್ಲಿ ರಾಮನೇ ಮೊದಲಿನ ಮಹಾ§ಪುರುಷನು. ರಾಮನು ಪ್ರೀತಿಯಿಂದ ಎಲ್ಲರನ್ನು ತನ್ನ ಸಮೀಪ ಬರಮಾಡಿಕೊಂಡನು, ಅದ್ವೈತವನ್ನು ಬೆಳೆಯಿಸಿದನು. ಗೆಳೆತನದಿಂದ ಬಾಳುವದನ್ನು ಕಲಿಸಿದನು. ರಾಮನು ಮಾನವತೆಯ ಉಪಾಸಕನು, ಮಾನವ ಧರ್ಮದ ಅರಿವು ಅವನಿಗೆ ಅದೆ.

ಆರ್ಯ, ಅನಾರ್ಯರು ಬೆರೆಯಲಾರಂಭಿಸಿದರು. ಅವರಲ್ಲಿ ಮದುವೆಗಳಾದವು, ಆರ್ಯತ್ವದ ದೊಡ್ಡಸ್ತಿಕೆಯ ಜಂಬವನ್ನು ಕೊಚ್ಚುವ ಕೆಲವು ಮುಂದಾಳುಗಳು ಮೇಲಿಂದ ಮೇಲೆ ತಲೆ ಎತ್ತುತ್ತಿದ್ದರು. ಅನಾರ್ಯರನ್ನು ನಾಶಗೊಳಿಸಲು ಹಂಬಲಿಸುತ್ತಿದ್ದರು. ಇಂದು ಹಿಟ್ಲರನು "ಜ್ಯೂ ಜನ

---

† ರಾವಣನು ಆರ್ಯನಲ್ಲ. ಅ ವನು ದ್ರಾವಿಡ ಜನಾಂಗದವನೆಂಬುದಕ್ಕೆ "ವಿದ್ಯಾಧರೋಪ್ಸರೋ ಯಕ್ಷ ರಕ್ಷೋ ಗಂಧರ್ವ ಕಿನ್ನರಾಃ । ಪಿಶಾಚೋ ಗುಹ್ಯಕೋ ಸಿದ್ಧೋ ಭೂತೋಮೀ ದೇವ ಯೋನಯಃ ।" ಈ ಶ್ಲೋಕ ಸಾಕ್ಷಿ ರಾವಣನು ಕುಬೇರನ (ಯಕ್ಷನ) ಬಂಧು ಎಂದು ಹೇಳಲಾಗುತ್ತಿದೆ.

§ ಜನಾಂಗಿಕ ಹಾಸು ಹೊಕ್ಕು ಈ ಮೊದಲೇ ಆಗಿದೆ. ರಾಮನು ಅನಾರ್ಯರ ಸಹಾಯದಿಂದ ತನ್ನ ಪ್ರತಿಷ್ಠೆಯನ್ನು ದಕ್ಷಿಣದ ತುತ್ತತುದಿಯವರೆಗೆ ಸ್ಥಾಪಿಸಿದನು.

ರನ್ನು ಬಹಿಷ್ಕರಿಸಿ, ನಾಶಗೊಳಿಸಲು ಹಂಬಲಿಸುವಂತೆ, ಒಂದು ಕಾಲದಲ್ಲಿ ಜನಮೇಜಯನು ನಾಗ ಜಾತಿಯನ್ನೇ ನಿರ್ನಾಮಗೊಳಿಸಲು ಸಿದ್ಧನಾಗಿದ್ದ. ನಾಗರೆಂಬುವರು ಒಂದು ಅನಾರ್ಯ ಪಂಗಡ ಈಗಲೂ ಬದುಕಿ ಬಾಳುತ್ತಿದ್ದಾರೆ. ಅರ್ಜುನನು ನಾಗ ಕನ್ನೆಯರನ್ನು ಮದುವೆಯಾಗಿದ್ದನು. ನಾಗ ಕನ್ಯೆಯ ಮಗನಾದ ಬಭ್ರುವಾಹನನನ್ನು ಅಭಿಮನ್ಯುವಿಸಿಗಿಂತ ಕೀಳನೆಂದು ಅವನು ಭಾವಿಸುತ್ತಿದ್ದನು. ನಾಗ ನಾಯಕನೊಬ್ಬನು ಪರೀಕ್ಷಿತನ ಕೊಲೆಯನ್ನು ಮಾಡಿದನು. ಜನಮೇಜಯನು ರೊಚ್ಚಿಗೆದ್ದನು. ನಾಗ ಜಾತಿಯನ್ನೇ ಸುಟ್ಟು ಬೂದಿ ಮಾಡಬೇಕೆಂದು ಆಜ್ಞೆಯನ್ನು ವಿಧಿಸಿದನು. ಅಲ್ಲಲ್ಲಿ ನಾಗರನ್ನು ಸುಟ್ಟರು. ನಾಗರಿಗೆ ಆಶ್ರಯವನ್ನಿತ್ತವರಿಗೆ ಕಠಿಣ ಶಿಕ್ಷೆ ಕೊಡಲಾಗುವದೆಂದು ಸಾರಲಾಯಿತು.

ಈ ಸಮಯದಲ್ಲಿ ಭಾರತೀಯ ಸಂಸ್ಕೃತಿಯ ಸಂರಕ್ಷಣೆಯ ಪುರಸ್ಕರ್ತನಾದ ಆಸ್ತಿಕ ಮಹರ್ಷಿಯು ಅವತರಿಸಿದನು. ಮಾಂಗಲ್ಯದಲ್ಲಿ ನಂಬುಗೆಯಿದ್ದವನೇ ಆಸ್ತಿಕನು. ಅದ್ವೈತವನ್ನು ಹುಟ್ಟಿಸಲೆತ್ನಿಸುವವನೇ ಆಸ್ತಿಕನು. ಪ್ರತ್ಯಕ್ಷ ಸಂಸಾರದಲ್ಲಿ ಮಹರ್ಷಿ ಆಸ್ತಿಕನಿಗೆ ಅದ್ವೈತ ನೋಡುವದಿತ್ತು. ಪ್ರಪಂಚದಲ್ಲಿ ನೆಲೆಗೊಂಡ ವೈಷಮ್ಯ, ದ್ವೇಷ ಇವುಗಳನ್ನು ದೂರ ಮಾಡಲು ಯತ್ನಿಸದೆ, ಪರಲೋಕದ ಮಾತನ್ನೇ ಆಡುವವರು ನಾಸ್ತಿಕರು. ಸುತ್ತುಮುತ್ತಲು ಸೌಂದರ್ಯವನ್ನು ಬೀರುವವನೇ ಆಸ್ತಿಕನು. ಇಂದು ಆಸ್ತಿಕರೆಂದು ಹೇಳಿಕೊಳ್ಳುವವರು ನಾಸ್ತಿಕರಿದ್ದಾರೆ. ಮತ್ತು ನಾಸ್ತಿಕರೆಂದು ಕರೆಯಲ್ಪಡುವವರು ನಿಜವಾಗಿ ಆಸ್ತಿಕರಿದ್ದಾರೆ. "ಯಜ್ಞ ಮಾಡದವನಿಗೆ ಈ ಲೋಕವಂತೂ ಇಲ್ಲೇ ಇಲ್ಲ. ಪರಲೋಕವಂತೂ ದೂರೇ ಉಳಿಯಿತು." ಎಂದು ಗೀತೆಯಲ್ಲಿ ಹೇಳಿದೆ. ಇದರಿಂದ ಈ ಲೋಕದ ಮಹತ್ವವನ್ನು ಅರಿಯಬೇಕು. ಜೀವ ಯಾತ್ರೆ, ಲೋಕಯಾತ್ರೆ ಎಂಬ ಶಬ್ದಗಳಿಗೆ ಪ್ರಾಚೀನ ಮುನಿಗಳು ಮಹತ್ವವನ್ನು ಕೊಡುತ್ತಿದ್ದರು. ಸಂಸಾರವು ತುಚ್ಛವೆಂದು ಅವರು ಎಂದೂ ಮನ್ನಿಸಲಿಲ್ಲ. ಸ್ವಂತದ ಸಂಸಾರವನ್ನು ನೋಡುವದು ಮಾಯೆಯೆಂದು ಅವರು ಭಾವಿಸಿದರು. ಈ ಜಗತ್ತಿನಲ್ಲಿ ನಾನೊಬ್ಬನೇ ಏನು ಮಾಡಬಲ್ಲೆ ? ಸಮಾಜದಿಂದಲೇ ನನ್ನ ಪೋಷಣೆಯು. ಈ ಸಮಾಜಕ್ಕೆ ಸೇವೆಯನ್ನು ಸಲ್ಲಿಸುವದರಲ್ಲಿಯೇ ವ್ಯಕ್ತಿಯ ವಿಕಾಸವದೆ, ಅರಳುವಿಕೆ ಇದೆ.

ಸಮಾಜದ ತುಂಡುಗಳಾಗುವ ದೃಶ್ಯವನ್ನು ಆ ಮಹರ್ಷಿ ಆಸ್ತಿಕನು ಹೇಗೆ ಶಾಂತತನದಿಂದ ಸಹಿಸಬಲ್ಲನು ! ನಾಗಜನರನ್ನು ಸುಡುವ, ಸುಡಿಸುವ, ಜನಮೇಜಯನ ಇದಿರು ಹೋಗಿ ನಿಂತನು. ಆಸ್ತಿಕನ ತಾಯಿಯು ನಾಗಕನ್ನಿಕೆಯಾಗಿದ್ದಳು ! "ನಾನೂ ನಾಗಕನ್ನಿಕೆಯ ಹೊಟ್ಟೆಯಲ್ಲಿ ಹುಟ್ಟಿದವನು. ನನ್ನನ್ನು ಈ ಬೆಂಕಿಯ ದೊಂಬಿಯಲ್ಲಿ ಚಲ್ಲು, ನೂಕಿಸು ಎಂದು ಆಸ್ತಿಕ ಮಹರ್ಷಿಯು ಜನಮೇಜಯನಿಗೆ ಹೇಳಿದನು. ತಪಸ್ವಿ ಆಸ್ತಿಕನ ತ್ಯಾಗವೃತ್ತಿಯನ್ನು ನೋಡಿ ಜನಮೇಜಯನ ಕಣ್ಣು ತೆರೆದವು. ವಿಶ್ವವಂದ್ಯ ಆಸ್ತಿಕನಂಥ ಮಹರ್ಷಿಗೆ ಜನ್ಮವೆತ್ತನಾಗಜಾತಿಯು ಹೀನವೇ, ತುಚ್ಛವೇ?

ಜನಮೇಜಯನು ಆಸ್ತಿಕನ ಕಾಲು ಹಿಡಿದನು. ನಾಗಮೇಧವನ್ನು ನಿಲ್ಲಿಸಿದನು. ಅಂದು ಭರತ ಭೂಮಿಯ ಉಜ್ವಲವಾದ ಭವಿತವ್ಯವನ್ನು ಮಹರ್ಷಿ ಆಸ್ತಿಕರು ನಿವೇದಿಸಿದರು. "ಜನಮೇಜಯನೇ ! ಜಗತ್ತಿನಲ್ಲಿ ಯಾರೂ ತುಚ್ಛರಲ್ಲ. ನೀಚರಲ್ಲ; ಉಚ್ಚರಲ್ಲ; ಎಲ್ಲರಲ್ಲಿ ದಿವ್ಯತ್ವವು ವಾಸವಾಗಿದೆ. ಆರ್ಯರಲ್ಲಿ ಗುಣಗಳಿದ್ದಂತೆ, ಅನಾರ್ಯರಲ್ಲಿಯೂ ಇವೆ. ಇಬ್ಬರಲ್ಲಿಯೂ ದೋಷಗಳಿವೆ. ನಾವು ದೋಷಗಳನ್ನು ಎಣಿಸದೆ, ಆ ದೋಷದ ರಾಶಿಯಲ್ಲಿ ಅಡಗಿದ ಗುಣಸಂಪತ್ತಿಯನ್ನು ನೋಡುವಾ ! ಎರಡನೇ ಜಾತಿಯವರನ್ನು ಕೀಳರೆಂದು ಕರೆಯುವವರೇ ನಾಸ್ತಿಕರು. ಈ ವಿಶಾಲವಾದ ದೇಶದಲ್ಲಿ ಅನೇಕ ವಂಶ ಜಾತಿಗಳು ಅವೆ. ನೀವು ಆರ್ಯರು ಹೊರಗಿನಿಂದ ಇಲ್ಲಿ ಬಂದು ನೆಲೆಗೊಂಡಿದ್ದೀರಿ. ಅದರಂತೆ ಇನ್ನೂ ಕೆಲವು ಜಾತಿಯವರು ಬರಬಹುದು. ನೀವು ಹಾಕಿ ಕೊಟ್ಟ ಪಾಠವನ್ನೇ ಅವರು ತೀಡುವರು. ಈ ಭರತ ಭೂಮಿಯಲ್ಲಿ ನೂರಾರು ಜಾತಿಯವರು, ವಂಶದವರು, ಒಂದೆಡೆಯಲ್ಲಿ ಬಾಳುತ್ತಾರೆ. ಎಂಬ ಪ್ರಯೋಗವನ್ನು ಕೈಕೊಳ್ಳುವಾ. ಆರ್ಯರು, ಅನಾರ್ಯರು, ಒಂದಾಗಿ ನಿಲ್ಲಲಿ; ಆರ್ಯರ ದೇವತೆಗಳನ್ನು ಅನಾರ್ಯರು ಸ್ವೀಕರಿಸಲಿ;ಅನಾರ್ಯರ ದೇವತೆಗಳನ್ನು ಆರ್ಯರು ತಮ್ಮವಾಗಿ ಮಾಡಿಕೊಳ್ಳಲಿ. ಆರ್ಯರ ಚಂದವಾದ ಅಂದವಾದ ನೀತಿ—ನಡಾವಳಿಗಳನ್ನು ಅನಾರ್ಯರು ಕಲಿಯುವರು; ಅನಾರ್ಯರಲ್ಲಿದ್ದವುಗಳನ್ನು ಆರ್ಯರು ಕಲಿಯಲಿ; ಈ ರೀತಿ ಹೊಸದೊಂದು ಭವ್ಯವಾದಸಂಸ್ಕೃತಿಯು ಹುಟ್ಟಿಬಾಳಲಿ.ಭಾರತೀಯ ಸಂಸ್ಕೃತಿಯೆಂದರೆ ನೂರಾರು ಬಣ್ಣದ ಸಾವಿರ ಪಕಳೆಯ ತಾವರೆಯು. ಈ ತಾವರೆಯಲ್ಲಿ ವಿವಿ

ಥವಾದ ಪರಿಮಲಗಳು ಹುಟ್ಟಲಿ. ಬೇರೆ ಬೇರೆ ಬಣ್ಣಗಳು; ಬೇರೆ ಬೇರೆ ಪರಿಮಲಗಳು; ಜನಮೇಜಯನೇ, ನಾಗ ಜಾತಿಯವರಿಗೆ ಹಾವು ಪ್ರೀಯವಾದ ದೇವತೆಯು. ನಿನ್ನ ತಾತನು ಒಂದು ಹಾವನ್ನು ಕೊಂದು, ಆ ಸತ್ತ ಹಾವನ್ನು ಒಬ್ಬ ಋಷಿಯ ಕೊರಳಲ್ಲಿ ಹಾಕದನು. ನಾಗದೇವತೆಯ ವಿಡಂಬನೆ ಇದು. ನಾಗರ ನಾಗ ಪೂಜೆಯನ್ನು ನೀವು ಆರ್ಯರು ಮಾಡಲು ಆರಂಭಿಸಿರಿ. ಪಂಚಾಂಗದಲ್ಲಿ ಇನ್ನು ಮುಂದೆ ನಾಗರ ಪಂಚಮಿ ಹಬ್ಬವೆಂದು ರೂಢವಾಗಲಿ. ಆರ್ಯನಾಗರ ಐಕ್ಯದ ಈ ಕುರುಹು ಮುಂದೆ ಬಾಳುವ ಪೀಳಿಗೆಯುವರಿಗೆ ಮಾರ್ಗದರ್ಶಕವಾಗಲಿ. ''

ಇದೊಂದು ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯವು. ಅಭೇದದಲ್ಲಿ ಭೇದವು, ಭೇದದಲ್ಲಿ ಅಭೇದವು, ಇದು ಭಾರತೀಯ ಸಂಸ್ಕೃತಿಯ ಸ್ವರೂಪವು. " ಏಕಂ ಸತ್ ವಿಪ್ರಾಃ ಬಹುಧಾವದಂತಿ '' (ಸತ್ಯ ವಸ್ತುವು ಒಂದೇ ಅದೆ. ಆದರೆ ತಿಳಿದವರು ಅದನ್ನು ಬಹು ವಿಧದಲ್ಲಿ ಕರೆಯುತ್ತಾರೆ.) ಎಂಬ ಅಮೌಲ್ಯವಾದ ಮಂತ್ರವನ್ನು ಪ್ರಾಚೀನ ಋಷಿಯೊಬ್ಬನು ಹೇಳಿಟ್ಟಿದ್ದಾನೆ. ನೀರು ಒಂದೇ ವಸ್ತುವು. ಆದರೆ ನಾವು ಅದನ್ನು ಜಲ, ವಾರಿ ನಿರ್ ಎಂಬ ಹೆಸರಿನಿಂದ ಕರೆಯುತ್ತೇವೆ. ಇದೇ ರೀತಿ ನಾವು ಈ ವಿಶ್ವದ ಬೆನ್ನ ಹಿಂದೆ ಇದ್ದ ಶಕ್ತಿಯನ್ನು ಭಿನ್ನ ಹೆಸರಿನಿಂದ ಸಂಬೋಧಿಸುತ್ತೇವೆ, ನಮ್ಮ ಬಡಿದಾಟವೆಲ್ಲ ಹೆಸರಿಗಾಗಿ. ನಿಜವನ್ನು ಅರ್ಥವನ್ನು ತಿಳಕೊಳ್ಳುವ ಪ್ರಯತ್ನ ಮಾಡಿದರೆ ನಾವು ಮಾಡಿದ ಮತ್ತು ಮಾಡುವ ಅನರ್ಥವನ್ನು ನೋಡಿ ನಗೆಬರುತ್ತದೆ. ಮತ್ತು ನಾಚಿಗೆಯಿಂದ ತಲೆ ಬಾಗುತ್ತದೆ.

ಆರ್ಯ ಅನಾರ್ಯರ ನೂರಾರು ದೇವತೆಗಳು ಒಂದಾದವು. ದೇವತೆಗಳ ಐಕ್ಯವು ಸಾಧಿಸಿದ್ದರಿಂದ ಮಾನವನಲ್ಲಿಯ ಒಕ್ಕಟ್ಟು ಸಾಧ್ಯವಾಯಿತು. ದೇವತೆಗಳ ಹೀನ ಸ್ವರೂಪಕ್ಕೆ ಆಧ್ಯಾತ್ಮಿಕ ಹಿನ್ನಲೆ ಕೊಡಲಾಯಿತು. ಅದ್ವೈತವನ್ನು ಆಚರಿಸಿ ಅನುಭವಿಸಲು ಎಂತಹ ಹಿರಿದಾದ ಭವ್ಯವಾದ ಪ್ರಯತ್ನವಿದು.

ಭಾರತೀಯ ಸಂಸ್ಕೃತಿಯಲ್ಲಿ ಒಂದೊಂದು ತತ್ವವನ್ನು ಮನಸ್ಸಿನಲ್ಲಿ ಧೃಡಪಡಿಸುವದಕ್ಕಾಗಿ, ಕೆಲವೊಂದು ಸಂಕೇತಗಳನ್ನು ಹೇಳಿದ್ದಾರೆ. ಈ ಸಂಕೇತದ ಆಚೆಗಿನ ಸತ್ವವು ಇಲ್ಲದಂತಾದರೆ ಅವು ಹೆಣಗಳಂತಾಗುವವು. ಸಂಕೇತಗಳಲ್ಲಿಯ ಅರ್ಥವು ಅಳಿದು ಹೋಗಿ, ಅವುಗಳ ಪೂಜೆಯು

ಯಾಂತ್ರಿಕವಾಗುತ್ತಿದೆ. ಅದ್ವೈತವನ್ನು ಮನಗಾಣಿಸುವದಕ್ಕೆ ಒಂದು ಹಿರಿದಾದ ಸಂಕೇತ ಹೇಳಲಾಗಿದೆ.

ಸ್ನಾನಕ್ಕಾಗಿ ಸಮುದ್ರಕ್ಕೆ, ಸಾಗರಕ್ಕೆ ಅಥವಾ ನದಿಗೆ ಹೋಗಿರಿ ಎಂದು ಹೇಳಿದೆ. ಸ್ನಾನವನ್ನು ಮಾಡುವ ಸ್ಥಳದ ಭಾವವು ನಮ್ಮ ಮನಸ್ಸಿನಲ್ಲಿಯೂ ಸೇರುವದು. ನಳದ ಮೇಲೆ ಸ್ನಾನ ಮಾಡುವವನ ಮನಸ್ಸು, ನಳದಂತೆಯೇ ಸಂಕುಚಿತವಾಗುವ ಸಂಭವವಿದೆ. ಭಾವಿಯೇನೋ ನಳದಕಿಂತ ಒಳಿತು. ಆದರೆ ಅದು ಸಹ ನಾಲ್ಕು ಕಡೆಗೆ ಕಟ್ಟಿದ್ದು, ಅದರ ಬಾಯಿಯು ಅಕುಂಚಿತವಾದದ್ದು ಇರುತ್ತದೆ. ಆದರೆ ಹೊಳೆಯು? ಭರದಿಂದ ಹರಿಯುತ್ತದೆ. ನೂರಾರು ಮೈಲು ನಡೆದಡೆ ಹೊಳೆಯಲ್ಲಿ ಮೈ ತೊಳೆದರೆ ಪುಣ್ಯವು ಸಿಕ್ಕುವದಂತೆ ! ಯಾವ ಪುಣ್ಯವು ?

ನಳದ ಕೆಳಗೆ ತೊಯ್ದ ತಲೆಯು ನಳದಂತೆ ಆಗುವದು. ನದಿಯಲ್ಲಿ ಮುಳುಗಿದ ತಲೆಯು ನದಿಯಂತೆ ಆಗುವದು. ನದಿಯ ಪಾಪಹಾರಿಯು. ಮೈ ಮೇಲಿನ ಹೊಲಸಿನೊಡನೆ ತಲೆ ಮತ್ತು ಹೃದಯದಲ್ಲಿ ಅಡಗಿದ ಹೊಲಸು ನದಿಯಲ್ಲಿ ಹರಿದುಹೋಗುವದು. ಹೊಳೆಯೆಂದರೇನು? ಅಲ್ಲಲ್ಲಿ ಹರಿದಾಡುವ ಚಿಕ್ಕಪುಟ್ಟ ಪ್ರವಾಹಗಳ ಐಕ್ಯದ ಪರಮ ಮಂಗಲದರ್ಶನವು! ನದಿಯೆಂದರೆ ಅದ್ವೈತದ ಮೂರ್ತಿಯು, ಹೊಳೆಯೆಂದರೆ ಚಂದವೂ ಉದಾರವೂ ಆದ ಕೂಡಿ ಮಾಡಿದ ಕಾರ್ಯವು, ಸಂಣ ಪುಟ್ಟ ಪ್ರವಾಹಗಳು ಪರಸ್ಪರರನ್ನು ಕೀಳೆಂದು ಭಾವಿಸುವದಿಲ್ಲ. ಗಟಾರದಿಂದ ಬಂದ ಪ್ರವಾಹವಿರಲಿ. ಅಥವಾ ಮತೆಲ್ಲಿಂದಾದರೂ ಬಂದ ಪ್ರವಾಹವಿರಲಿ, ಎಲ್ಲವೂ ಒಂದೆಡೆಯಲ್ಲಿ ಸೇರುತ್ತವೆ. "ನಮ್ಮಲ್ಲಿದ್ದ ಹೊಲಸು ತಳಕ್ಕೆ ಹೋಗುವದು.ಮತ್ತು ನಮ್ಮಲ್ಲಿ ಅಡಗಿದ ಪ್ರಸನ್ನತೆಯು ಹೊರ ಹೊಮ್ಮುವದು." ಎಂಬ ಆತ್ಮವಿಶ್ವಾಸವು ಈ ಪ್ರವಾಹಗಳಿಗಿದೆ. ಈ ಅಮರ ಶ್ರದ್ಧೆಯಿಂದಲೆ ಅವು ಒಂದರಲ್ಲೊಂದು ಕೂಡುತ್ತವೆ. ಮತ್ತು ಇದೆ ರೀತಿ ಕೂಡಿ ಮಾಡಿದ ಕಾರ್ಯದಿಂದ ಒಂದು ದೊಡ್ಡ ಕಾರ್ಯವಾಗುತ್ತದೆ. ಈ ಪ್ರವಾಹಗಳು ಪರಸ್ಪರರಿಂದ, ಸೊಕ್ಕಿನಿಂದ, ಅಹಂಕಾರದಿಂದ ದೂರ ಉಳಿದಿದ್ದರೆ ಅವುಗಳ ವಿಕಾಸವೂ, ಬೆಳವಣಿಗೆಯೂ ಆಗುತ್ತಿದ್ದಿಲ್ಲ. ಅವು ಉದ್ದ,ಅಗಲ ಮತ್ತು ಆಳ ಆಗುತ್ತಿರಲಿಲ್ಲ. ನೂರಾರುಕೂರಿಗೆ ಭೂಮಿಯು ಬೆಳೆಯುತ್ತಿರಲಿಲ್ಲ.ಆ ಅಹಂಕಾರಿಯಾದ ಪ್ರವಾಹಗಳು ಒಣಗಿಹೋಗುತ್ತಿದ್ದವು.ಅವುಗಳಲ್ಲಿ ಹುಳ ಕೊಳೆ ಹಬ್ಬು

ತ್ತಿತ್ತು. ಆದರೆ ಅವು ತಮ್ಮಲ್ಲಿಯ ಹುಟ್ಟು ಪಾವಿತ್ರ್ಯವನ್ನು ಕಂಡು ಒಂದಾದವು. ಮತ್ತು ಹೊಳೆಯೆಂದು ಹೆಸರಾದವು !

ನದಿಯಲ್ಲಿ ಮುಳುಗಿದ ತಲೆಯಲ್ಲಿ ಇಂಥ ವಿಚಾರಗಳು ತಲೆದೋರ ಬೇಕು. ನದಿಯ ಈ ಅದ್ವೈತ ಗಾಯನದ ದನಿಯನ್ನು ಬುದ್ಧಿಯು ಲಾಲಿಸಬೇಕು. ಆದರೆ ಗಂಗೆಯಲ್ಲಿ ಸ್ನಾನ ಮಾಡುವ ಗಂಗಾಪುತ್ರರು ಕಲ್ಲಿಗಿಂತ ಕಲ್ಲಾಗಿದ್ದಾರೆ! ಎಲ್ಲ ಪ್ರವಾಹಗಳನ್ನು ಬರಮಾಡಿಕೊಳ್ಳುವ ಆ ಪವಿತ್ರ ಹೊಳೆಯಲ್ಲಿಯೇ ನಿಂತು, ಎರಡನೆಯವರ ಉಪಹಾಸವನ್ನು ಮಾಡುತ್ತಾರೆ. "ನೀನು ತುಚ್ಛನು; ನೀನು ಪತಿತನು; ದೂರಾಗು;" ಎಂದು ಈ ಮಹನೀಯರು ಬಾಯಿಂದ ರುದ್ರವನ್ನು ಅನ್ನುತ್ತ, ನದಿಯಲ್ಲಿ ಮುಳಗುತ್ತ, ಮ್ಲಾನವರ ಅಪಮಾನವನ್ನು ಮಾಡುತ್ತಾರೆ. ನೂರಾರು ವರುಷ ನದಿಯಲ್ಲಿ ತಲೆ ಮುಳುಗಿಸಿದರೂ ತಲೆಬುರುಡೆ ಬುರಡೆಯೇ ಆಗಿ ಉಳಿದಿದೆ.

ನದಿಯಕಿಂತ ಸಂಗಮವು ಶ್ರೇಷ್ಠವಾದದ್ದು, ಪವಿತ್ರವಾದದ್ದು. ಅದ್ವೈತದ ಅನುಭಾವವನ್ನು ಪಡೆದ ಇಬ್ಬರು ಸಂತರ ಭೆಟ್ಟಿಯೆಂದರೆ ಎಂಥ ಪವಿತ್ರ ದರ್ಶನವು. ವಶಿಷ್ಠ-ವಾಮದೇವನ ಬೆಟ್ಟಿ, ಮಹಾತ್ಮಾಜಿ-ರವೀಂದ್ರರ ಬೆಟ್ಟಿ, ಜವಾಹರಲಾಲ-ಮಾನವೇಂದ್ರರಾಯರ ಭೆಟ್ಟಿ ಎಂದರೆ ಒಂದು ಮಹಾಕಾವ್ಯವೇ.

"ಸತಾಂ ಸದ್ಭಿಃ ಸಂಗಃ ಕಥಮಪಿ ಹಿ ಪುಣ್ಯೇನ ಭವತಿ" ಸಾವಿರಾರು ಪ್ರವಾಹಗಳನ್ನು ಕೂಡಿಕೊಂಡು ಒಂದು ಹೊಳೆಯು, ಇನ್ನೊಂದು ಅಂತ ಹದೇ ಆದ ಹೊಳೆಯನ್ನು ಪ್ರೇಮಭರದಿಂದ ಅಪ್ಪಿಕೊಳ್ಳುತ್ತದೆ.

ಗಂಗಾ, ಯಮುನಾ, ಸರಸ್ವತಿ ನದಿಗಳ ಸಂಗಮವು ಬಹಳೇ ಪವಿತ್ರವೆಂದು ನಾವು ಮನ್ನಿಸಿದ್ದೇವೆ. ಎತ್ತರವಾದ, ಶುಭ್ರವಾದ ಮತ್ತು ನಿರ್ಮಲವಾದ ಹಿಮಾಲಯದಿಂದ ಗಂಗೆ, ಯಮುನೆಯರಿಬ್ಬರೂ ಹೊರ ಟಿದ್ದಾರೆ. ಶುಭ್ರವಾದ ಗಂಗೆಯು ಅಹಂಕಾರ ಯುಕ್ತಳಾಗಿ ಸ್ವಲ್ಪ ಮೇಲಿನಿಂದ ಹರಿಯುತ್ತಾಳೆ. ಕಪ್ಪು ಯಮುನೆಯು ಸ್ವಲ್ಪ ಅಂತರವ ನ್ನಿಟ್ಟುಕೊಂಡು ಹರಿಯುತ್ತಾಳೆ. ಆದರೆ ಕಪ್ಪು ಯಮುನೆಯನ್ನು ಪ್ರೀತಿ ಯಿಂದ ಆಲಿಂಗಿಸದೆ, ಗಂಗೆಗೆ ನೂರು ಮುಖದಿಂದ ಸಾಗರ ರಾಜನನ್ನು ಭೆಟ್ಟಿಯಾಗುವದು ಶಕ್ಯವಿದ್ದಿಲ್ಲ. ಅಹಂಕಾರಿ ಗಂಗೆಯು ನಮ್ರತೆಯಿಂದ

ನಿಂತಳು. ಅತ್ತಕಡೆಯಿಂದ ಯಮುನೆಯು ಬಂದಳು, ಗಂಗೆಯು ಕೈ ಒಡ್ಡಿದಳು. "ಬಾ, ಮುದ್ದು ಯಮುನೇ, ಬಾ. ನೀನು ಕಪ್ಪು ಬಣ್ಣದವ ಳೆಂದು ನಾನು ನಿನ್ನನ್ನು ಹೀಯಾಳಿಸಿದೆನು. ಆದರೆ ನಿನ್ನ ದಂಡೆಯ ಮೇಲೆಯೇ ಗೋಪಾಲ ಕೃಷ್ಣನು ಭಕುತಿ ಪ್ರೀತಿಯ ಮಳೆಗರೆದಿದ್ದಾನೆ; ಸಿರಿ ಹೀನರನ್ನೂ ಶ್ರೀಮಂತರನ್ನೂ ಒಂದು ಮಾಡಿದನು. ಎಲ್ಲರಿಗೂ "ಸಹನೌ ಭುನಕ್ತು" ಎಂಬ ಮಾತಿನ ಅನುಭವವನ್ನು ಉಣಿಸಿದನು. ನಿನ್ನ ದಂಡೆಯ ಮೇಲೆ ಐಕ್ಯದ ಕೊಳಲನ್ನೂದಿದನು. ಮುಗಿಲಿನಲ್ಲಿಯ ದೇವತೆ ಗಳು ನಿನ್ನ ನೀರಿನಲ್ಲಿ ಮೀನಗಳಾದರು. ನಿನ್ನ ಮಹಿಮೆಯು ಹಿರಿದಾ ದದ್ದು. ನೀನು ಕಣ್ಣಿಗೆ ಕಪ್ಪು ತೋರಿದರೂ, ನಿನ್ನ ಅಂತಃಕರಣವು ನಿರ್ಮಲವಾಗಿದೆ. ಬಾ, ಗೆಳತಿ ಬಾ. ಅಪ್ಪಿಕೊ." ಗಂಗೆಯ ಕಂಠವು ಸದ್ಗದಿತವಾಯಿತು. ಅವಳಿಗೆ ಮಾತನಾಡಲು ಸಹ ಸಾಧ್ಯವಾಗಲಿಲ್ಲ.

ಯಮುನೆಯು ಹಿಗ್ಗಿದಳು. ಮತ್ತು ಅಂದಳು "ಅಕ್ಕಾ ನೀನು ನನ್ನನ್ನು ಬಣ್ಣಿಸುತ್ತೀ. ಆದರೆ ನಿನ್ನ ಮಹಿಮೆಯೂ ಅಪಾರವಿದೆ. ನನ್ನ ದಂಡೆಯ ಮೇಲೆ ಭಕ್ತಿಯು ಬೆಳೆಯಿತು, ಆದರೆ ನಿನ್ನ ದಂಡೆಯ ಮೇಲೆ ಜ್ಞಾನವು ಮೊಳೆತು, ಸಸಿಯಾಗಿ ವೃಕ್ಷವಾಯಿತು. ಯೋಗಿಗಳ ಅರಸನಾದ ಭಗವಾನ್ ಪಶುಪತಿಯು ನಿನ್ನ ದಂಡೆಯ ಮೇಲೆಯೇ ಜ್ಞಾನದಲ್ಲಿ ತಲ್ಲೀನನಾದನು. ನೂರಾರು ಋಷಿ ಮಹರ್ಷಿಗಳು ನಿನ್ನ ದಂಡೆಯ ಮೇಲೆ ತಪಸ್ಸನ್ನು ಮಾಡಿರುತ್ತಾರೆ. ದೊಡ್ಡ ದೊಡ್ಡ ರಾಜರು ಸಾಮ್ರಾಜ್ಯ ತ್ಯಾಗ ಮಾಡಿ ನಿನ್ನ ದಂಡೆಯ ಮೇಲೆ ಬ್ರಹ್ಮಚಿಂತನೆಯಲ್ಲಿ ಮಗ್ನರಾಗು ತ್ತಾರೆ. ನೀನೆಂದರೆ ಜ್ಞಾನದ ಮೂರ್ತಿಯು. ನಿನ್ನ ನಿರ್ಮಲವಾದ ಪಾದದಡಿಯಲ್ಲಿ ನನ್ನನ್ನು ಕರೆದುಕೊ."

ಗುಪ್ತವಾಗಿರುವ ಸರಸ್ವತೀ ನದಿಯ ಗಂಭೀರ ದನಿಯು ಕೇಳ ಬಂದಿತು. "ಜ್ಞಾನವಿಲ್ಲದ ಭಕ್ತಿಯು ಕುರುಡು, ಭಕ್ತಿಯಿಲ್ಲದ ಜ್ಞಾನವು ಶುಷ್ಕವು. ಕರ್ಮದಲ್ಲಿ ಜ್ಞಾನ, ಭಕ್ತಿಗಳನ್ನು ಸುರಿಸದಿದ್ದರೆ ಅವೆರಡಕ್ಕೂ ಅರ್ಥವಿಲ್ಲ. ಜ್ಞಾನಮಯಳಾದ ಗಂಗೆಯು ಭಕ್ತಿಯುಕ್ತಳಾದ ಯಮುನೆ ಯನ್ನು ಕೂಡಲಿ. ಮತ್ತು ಕರ್ಮಮಯಳಾದ ನನಗೆ ಜ್ಞಾನ ಭಕ್ತಿಗಳ ಸ್ಪರ್ಶವಾಗಲಿ."

ಗಂಗಾ, ಯಮುನಾ, ಸರಸ್ವತಿಗಳೆಂದರೆ, ಜ್ಞಾನ, ಭಕ್ತಿ ಮತ್ತು

ಕರ್ಮಗಳ ಸಂಗಮವೆಂದು ನನಗೆ ಅನಿಸುತ್ತದೆ. ಗಂಗಾ ಜಮುನಾ ಪಾತ್ರೆಯು ಪವಿತ್ರವೆಂದು ನಾವು ಭಾವಿಸುತ್ತೇವೆ. ಎರಡೂ ಕಣ್ಣೊಳಗಿಂದ ಹೊರಗೆ ಬರುವ ಅಶ್ರುಗಳಿಗೆ ಗಂಗಾ, ಯಮುನಾ ಎಂದು ಸಂಬೋಧಿಸುತ್ತೇವೆ. ಗಂಗೆ, ಯಮುನೆಯರು ನಮ್ಮ ಜೀವನದಲ್ಲಿ ಸೇರಿದ್ದಾರೆ. ಆದರೆ ಎಲ್ಲಿ ಸೇರಬೇಕಾಗಿತ್ತು ಅಲ್ಲಿ ಇನ್ನೂ ಅವುಗಳಿಗೆ ಪ್ರವೇಶ ದೊರಕಿಲ್ಲ. "ಬಿಳಿ ಛಾಯೆಯ" ಗಂಗೆಯು ದುಡಿಯುವ ಯಮುನೆಯನ್ನು ಇನ್ನೂ ಕೂಡಿಲ್ಲ. ಸಮಾಜದಲ್ಲಿಯ ಬಿಳಿ ಛಾಯೆಯವರು ತಾವು ಪವಿತ್ರರೆಂದು ತಿಳಿದುಕೊಂಡು ಬಹುಜನ ಸಮಾಜದಿಂದ ಸಿಡಿದು ದೂರಾಗಿ ನಿಂತುಕೊಂಡಿದ್ದಾರೆ. ವರಿಷ್ಠ, ಕನಿಷ್ಠರು ಒಬ್ಬರನ್ನೊಬ್ಬರು ಪ್ರೇಮದಿಂದ ಕೂಡದಿದ್ದರೆ ಭಾರತದ ಹಣೆಬರಹವಾದ ದಾಸ್ಯವು ದೂರಾಗುವದಿಲ್ಲ.

ಸಮುದ್ರ ಸ್ನಾನವನ್ನು ಮಾಡುವದೆಂದರೆ ಪಾವಿತ್ರ್ಯದ ಕೊನೆಯ ಮೇರೆಯು, "ಸಾಗರೆ ಸರ್ವತೀರ್ಥಾನಿ''. ಜಗತ್ತಿನಲ್ಲಿಯ ಎಲ್ಲ ಪ್ರವಾಹಗಳು ಸಮುದ್ರದಲ್ಲಿ ವಿಲೀನವಾಗುತ್ತವೆ. ಅದಕ್ಕಾಗಿಯೇ ಸಮುದ್ರವು ಹಗಲಿರುಳು ಉಕ್ಕೇರುತ್ತದೆ. ಮಳೆ ಬೀಳಲಿ, ಬೀಳದೆ ಇರಲಿ ಸಮುದ್ರವು ಬತ್ತುವಂತಿಲ್ಲ. ಎಲ್ಲವನ್ನೂ ಬರಮಾಡಿಕೊಳ್ಳುವವನ ಹತ್ತಿರ ತೀರ್ಥಗಳೆಲ್ಲವೂ ಇರುತ್ತವೆಂದು ಋಷಿಗಳು ಹೇಳುತ್ತಾರೆ. 'ಸಜ್ಜನರಲ್ಲಿಯೇ ದೇವರು' ಭೇದಾಭೇದವ ಆಚೆಗೆ ಹೋಗಿರುವ ಸಜ್ಜನರಲ್ಲಿಯೇ ದೇವರು ವಾಸಿಸಿರುತ್ತಾನೆ. ಪ್ರತ್ಯಕ್ಷ ಕಾಣುವ ದೇವನು ಅವರಲ್ಲಿ ಇರುತ್ತಾನೆ.

ಭಾರತೀಯ ಸಂತರು ನಮಗೆ ಈ ಪಾಠವನ್ನು ಹಾಕಿಕೊಟ್ಟರು. ಆದರೆ ಅದರಲ್ಲಿಯ ಮಹಾನ್ ಅರ್ಥವನ್ನು ನಾವು ಮನಗಂಡಿಲ್ಲ. ಸಂಗಮ ಮತ್ತು ಸಮುದ್ರಗಳಲ್ಲಿ ಸ್ನಾನವನ್ನು ಮಾಡಿದಾಕ್ಷಣಕ್ಕೆ ಪಾಪಗಳೆಲ್ಲವೂ ಸುಟ್ಟು ಹೋಗುವದಿಲ್ಲ. ಅಲ್ಲಿ ಸ್ನಾನ ಮಾಡಿ ಜೀವನದಲ್ಲಿ ಅದ್ವೈತದ ಸಂದೇಶವನ್ನು ಬೀರಿ ಅದರಂತೆ ಆಚರಿಸಿದರೆ ಮಾತ್ರ ಸಮಾಜವು ನಿಷ್ಪಾಪ ಮತ್ತು ನಿರ್ದೋಷಿಯಾಗುವದು. ಸಮಾಜದಲ್ಲಿ ಕೊರತೆಯು ಬೀಳಲಿಕ್ಕಿಲ್ಲ. ಕೊಳೆಯು ಉಳಿಯಲಿಕ್ಕಿಲ್ಲ. ಮತ್ತು ದುಃಖವು ಕಾಣಲಿಕ್ಕಿಲ್ಲ. ಎಲ್ಲ ಕಡೆಯಲ್ಲಿಯೂ ಪ್ರಸನ್ನ ವಾತಾವರಣವು ಉತ್ಪನ್ನವಾಗುವದು.

ಜೀವನದಲ್ಲಿ ಇಂಥ ಅದ್ವೈತದ ಸಾಕ್ಷಾತ್ಕಾರವನ್ನು ತರಲು ಯತ್ನಿಸುವ ಭಾರತ ಪುತ್ರರಾರಾದರೂ ಇದ್ದಾರೆಯೇ ? ನಾವು ಎಲ್ಲ ಕಡೆಯಲ್ಲಿ

ಕೆಸರಿನ ಗುಂಡಿಗಳನ್ನು ನಿರ್ಮಾಣ ಮಾಡಿದ್ದೇವೆ. ಚಿತ್ಪಾವನ, ದೇಶಸ್ಥ, ಕರ್ಹಾಡೆ, ಹಿರಣ್ಯಕೇಶಿ ವಗೈರೆ ಬ್ರಾಹ್ಮಣರಲ್ಲಿಯು ನೂರಾರು ಒಳಪಂಗಡಗಳು; ಮೊದಲು ಜಾತಿ ಭೇದಗಳು ಅದರಲ್ಲಿ ನೂರಾರು ಒಳಭೇದಗಳು ! ನಾವೆಲ್ಲರೂ ಭೇದಗಳ ಸಂಕುಚಿತ ಗುಂಡಿಗಳಲ್ಲಿ ಡರಾಂವ್, ಡರಾಂವ್ ಎಂದು ಒದರುವ ಕಪ್ಪೆಗಳಾಗಿದ್ದೇವೆ. ಕೆಸರಿನಲ್ಲಿಯೇ ಹಾರಾಡುವದು; ಕೆಸರನ್ನೇ ತಿನ್ನುವದು ನಮ್ಮ ಪವಿತ್ರ ಧ್ಯೇಯವಾಗಿದೆ.

ಜಾತಿ ಉಪಜಾತಿ, ಸ್ಪೃಶ್ಯ ಅಸ್ಪೃಶ್ಯ, ಬ್ರಾಹ್ಮಣ ಬ್ರಾಹ್ಮಣೇತರ, ಹಿಂದು ಮುಸಲ್ಮಾನ ಹೀಗೆ ನೂರಾರು ಗುಂಡಿಗಳಿವೆ. ಇದರ ಹೊರತಾಗಿ ಗುಜರಾಥ, ಮಹಾರಾಷ್ಟ್ರ, ಬಂಗಾಲ, ಕರ್ನಾಟಕ ಮುಂತಾದ ಪ್ರಾಂತೀಯ ಭೇದಗಳೂ ಅವೆ ! ಕೊಳಚೆಯ ಕೂಪದಲ್ಲಿ ಇರುವ ವರೆಗೆ ಪ್ರಸನ್ನತೆಯ ಪ್ರಸಾದವು ದೊರೆಯುವದಿಲ್ಲ. ಗುಂಡಿಯಲ್ಲಿ ನೀರು ನಿಂತರೆ ಹೊಲಸು ಹುಟ್ಟುವದು. ಅಲ್ಲಿ ಹುಳಗಳು ಬೆಳೆಯುವವು. ರೋಗಗಳು ಉತ್ಪನ್ನವಾಗುವವು. ನಮ್ಮ ದೇಶವು ಒಳ್ಳೇಯ ದಿವಸಗಳನ್ನು ಕಾಣಬೇಕೆಂದು ಬಯಸುವವರು, ಈ ಕೊಳಚೆಯ ಗುಂಡಿಗಳನ್ನು ದೂರ ಮಾಡಬೇಕು, ಭೇದದ ಭಿತ್ತಿಗಳನ್ನು ನೆಲಸಮ ಮಾಡಬೇಕು. ಗುಂಡಿಯೊಳಗಿನ ನೀರು ಹರಿಯಲಿ. ಎಲ್ಲ ಪ್ರವಾಹಗಳು ಪ್ರೇಮದಿಂದ ಕೂಡಲಿ. ಸಾಗರವು ಉಕ್ಕೇರಲಿ.

“ಭೇದಗಳನ್ನೆಲ್ಲ ನಾನು ಸುಡುವೆನು. ಇದಕ್ಕೆ ವೇದವೇ ಪ್ರಮಾಣವು.” ಎಂಬ ಪ್ರತಿಜ್ಞೆಯನ್ನು ತುಕಾರಾಮ ಮಹಾರಾಜರು ಮಾಡಿದರು. ಸಮಾಜ ಕಲ್ಯಾಣವನ್ನು ಬಯಸುವ ಭಾರತೀಯರೆಲ್ಲರೂ ಈ ಪ್ರತಿಜ್ಞೆಯನ್ನು ಮಾಡೇತೀರಬೇಕು.

ಭಾರತೀಯ ಸಂಸ್ಕೃತಿಯ ಉಪಾಸಕರೇ ! ಮಾಡಿದಷ್ಟು ಪಾಪವು ಸಾಕು. ಏಳಿರಿ, ಹರಿಜನರನ್ನು ಹತ್ತಿರ ಕರೆಯಿರಿ. ಪದದಲಿತರೆಲ್ಲರನ್ನೂ ಪ್ರೀತಿಯಿಂದ ಅಪ್ಪಿಕೊಳ್ಳಿರಿ. ನಾವೆಲ್ಲರೂ ಒಂದೇ ದೇವರ ಮಕ್ಕಳು. ನಿರ್ಮಲವಾದ, ಶುಭ್ರವಾದ ಒಂದೇ ಚೈತನ್ಯದ ರೂಪಗಳು. ನಾವು ಪ್ರೇಮಪೂರಿತರಾದಷ್ಟು, ಅದ್ವೈತರಾದಷ್ಟು ಹೆಚ್ಚು ಆನಂದದಿಂದ, ಭಾಗ್ಯದಿಂದ ಬಾಳುವೆವು.

ಎರಡನೆಯವರನ್ನು ತಿರಸ್ಕರಿಸಿದರೆ, ನೀವೂ ತಿರಸ್ಕರಿಸಲ್ಪಡುವಿರಿ.

ಎರಡನೆಯವರನ್ನು ಕೀಳೆಂದು ಭಾವಿಸುವವನಿಗೆ ಒದೆತವು ಸಿಗುವದು. ನಮ್ಮ ಪಾಪದ ಫಲಗಳನ್ನೇ ನಾವು ಇಂದು ಉಣ್ಣುತ್ತೇವೆ. ದಾಸ್ಯವನ್ನೇ ಬಿತ್ತಿದ್ದೆವು. ಇಂದು ಅದಕ್ಕಾಗಿಯೇ ಅದನ್ನೇ ಹೊಟ್ಟೆತುಂಬಾ ಉಣ್ಣುತ್ತೇವೆ. ಎಲ್ಲ ಕಡೆಯಲ್ಲಿಯೂ ಗುಲಾಮಗಿರಿಯನ್ನು ಪೋಷಿಸಿದೆವು. ಹೆಂಗಸರ ಮೇಲೆ ಹೇರಲಾದ ಗಂಡಸರ ಗುಲಾಮಗಿರಿ, ಬುದ್ಧಿವಂತರು ಬುದ್ಧಿಹೀನ ಜನತೆಯ ಮೇಲೆ ನಡೆಯಿಸುವ ಗುಲಾಮಗಿರಿ, ಅಸ್ಪೃಶ್ಯರ ಮೇಲೆ ಸ್ಪೃಶ್ಯರ ಗುಲಾಮಗಿರಿ, ನೂರು ಮುಖದ ಗುಲಾಮಗಿರಿಯನ್ನು ಹುಟ್ಟಿಸಿ ಬೆಳೆಯಿಸಿದೆವು. ಮತ್ತು ನಾವು ಇಂದು ಸಂಪೂರ್ಣವಾಗಿ ದಾಸ್ಯದಲ್ಲಿ ಬಿದ್ದೆವು.

ಅದ್ವೈತದ ಆಧಾರದ ಮೇಲೆ ಮರಾಠಿಗರ ರಾಜ್ಯವು ಹುಟ್ಟಿ ಬೆಳೆಯಿತು. ಆದರೆ ಭೇದ ಉತ್ಪನ್ನವಾದ ಕೂಡಲೇ ಅಳಿದುಹೋಯಿತು. "ಮರಾಠಿಗರನ್ನು ಒಂದೆಡೆಯಲ್ಲಿ ಕೂಡಿಸಿರಿ" ಎಂಬ ಮಂತ್ರದಿಂದ ಮರಾಠಿಗರ ರಾಜ್ಯವು ಮೊಳೆತು ಹಬ್ಬಿತು. ಆದರೆ ಬ್ರಾಹ್ಮಣ, ಮರಾಠಾ, ಪ್ರಭು, ಶೂದ್ರ ಇವರಲ್ಲಿ ಸ್ಪರ್ಧೆಯು ಸುರುವಾಯಿತು. ವರಿಷ್ಠ ಕನಿಷ್ಠ ಭಾವನೆಗಳು ಉತ್ಪನ್ನವಾದವು. ಮತ್ತು ಭಗವಾ ಝೆಂಡಾ ಸುಟ್ಟು ಬೂದಿಯಾಯಿತು. ಮರಾಠರು ಉತ್ತರ ಹಿಂದುಸ್ಥಾನಕ್ಕೆ ಹೋದರು. ಆದರೆ ಅವರು ಅಲ್ಲಿ ರಜಪೂತ, ಜಾಟ ಮೊದಲಾದ ಜಾತಿಯವರನ್ನು ಕೂಡಿಕೊಳ್ಳಲಿಲ್ಲ. ಆದ್ದರಿಂದಲೇ ಅವರು ಸೋಲಬೇಕಾಯಿತು. "ಮರಾಠರೆಲ್ಲರನ್ನೂ ಕೂಡಿಸಿರಿ" ಎಂಬ ಮಂತ್ರವನ್ನು ಹೇಳಲು ಸಮರ್ಥ ರಾಮದಾಸರು ಇದ್ದರು. "ಹಿಂದುಗಳೆಲ್ಲರನ್ನೂ ಕೂಡಿಸಿರಿ" ಎಂದು ಹೇಳುವ ಇನ್ನೊಬ್ಬ ಸಮರ್ಥರು ಪೇಶ್ವೆಯವರ ಕಾಲದಲ್ಲಿ ಇರಬೇಕಾಗಿತ್ತು. ಮತ್ತು ಇವತ್ತು "ಹಿಂದೀಯರೆಲ್ಲರೂ ಒಂದೆಡೆ ಕೂಡಿರಿ" ಎಂದು ಹೇಳುವ ಮಹಾತ್ಮರು ಬೇಕಾಗಿದ್ದಾರೆ ಮತ್ತು ಅವರಿದ್ದಾರೆ.

ಅದ್ವೈತವನ್ನು ಜೀವನದಲ್ಲಿ ಅನುಭವಿಸುವ ಮಹಾತ್ಮರ ಇರುವಿಕೆಯೇ ಮಾನವ ಜಾತಿಯ ಆಸೆಯು. ಕಿರಿಯನಾದ ಮಾನವನು ಎಷ್ಟು ಹಿರಿಯನಾಗಬಹುದು ಇದನ್ನೇ ಮಹಾಪುರುಷರು ತೋರಿಸುತ್ತಾರೆ. ಆಕಾಶದಲ್ಲಿ ಸೂರ್ಯನು ಕೋಟ್ಯವಧಿ ಅಂಶ ಉಷ್ಣತೆಯಿಂದ ಉರಿಯುತ್ತಿರುತ್ತಾನೆ. ಅಂತೆಯೇ ನಮ್ಮ ದೇಹದಲ್ಲಿ, ೯೮° ಅಂಶ ಉಷ್ಣತೆಯು

ಆದೆ. ಭಗವಾನ್ ಬುದ್ಧನಂಥ ಮಹಾತ್ಮರು ಹುಲಿಯನ್ನು ಸಹ ಪ್ರೀತಿಸು ವದನ್ನು ನೋಡಿ, ಮನುಷ್ಯನು ತನ್ನ ನೆರೆಹೊರೆಯವರ ಮೇಲೆ ಅಲ್ಪ ಸ್ವಲ್ಪವಾದರೂ ದಯೆಯನ್ನು ತೋರಿಸಲೆತ್ನಿಸುತ್ತಾನೆ! ಸಮಾಜವು ಮುಂದುವರಿಯಬೇಕು; ಮೇಲಕ್ಕೇರಬೇಕು; ಇದಕ್ಕೆ ವಿಶ್ವವನ್ನೇ ಪ್ರೀತಿಸುವ ಮಹಾಪುರುಷರ ಆವಶ್ಯಕತೆ ಇದೆ. ಅವರು ಪ್ರೀತಿಯ ಕಡಲನ್ನೇ ಉಕ್ಕೇರಿಸಿದರೆ ನಮ್ಮ ಜೀವನದಲ್ಲಿ ಪ್ರೇಮ ಬಿಂದುಗಳು ಕಾಣುವದು ಶಕ್ಯವು! "ಸಂತೊ ತಪಸಾ ಭೂಮಿಂ ಧಾರಯಂತಿ" ಸಂತರು ತಮ್ಮ ಪ್ರೇಮ ಮತ್ತು ತಪಶ್ಚರ್ಯದಿಂದ ಸಮಾಜ ಧಾರಣೆ ಮಾಡುತ್ತಾರೆ.

ಅದ್ವೈತ ಮಂತ್ರವನ್ನು ಜಪಿಸುತ್ತ ನಮ್ಮ ಪೂರ್ವಜರು ಜೀವನ ದಲ್ಲಿ ಸಂಗೀತವನ್ನು ಸುರಿಸುವವರಾಗಿದ್ದರು. ಹಿಂದು ಮುಸಲ್ಮಾನ ರಲ್ಲಿಯೂ ಅವರು ಆಸ್ಥೆಯಿಂದ ಒಕ್ಕಟ್ಟನ್ನು ಬೆಳೆಸುತ್ತಿದ್ದರು. ಹಿಂದೂ ರಾಜರು ಮುಸಲ್ಮಾನ ಪೀರರಿಗೆ ಮತ್ತು ಮುಸಲ್ಮಾನ ಬಾದಶಹರು ಹಿಂದೂ ದೇವಾಲಯಗಳಿಗೆ ವತನಗಳನ್ನು ಹಾಕಿಕೊಟ್ಟಿದ್ದಾರೆ. ಹಿಂದೂ ರಾಜರು ಮೊಹರಮ್ ಹಬ್ಬವನ್ನು ಆಚರಿಸುತ್ತಿದ್ದರು. ಮತ್ತು ಮುಸಲ್ಮಾ ನರು ಹಿಂದುಗಳ ಉತ್ಸವಗಳಲ್ಲಿ ಭಾಗವಹಿಸುತ್ತಿದ್ದರು. ಅಮಳನೇರದ ಸಖಾರಾಮ ಮಹಾರಾಜರ ರಥಕ್ಕೆ ಮಲಗಿ ಹೂಗಳನ್ನು ಕೊಡುವ ಮೊದಲನೇ ಮಾನವು ಮುಸಲ್ಮಾನರದದೆ. ಮತ್ತು ಟೆಂಗಿನಕಾಯಿಯನ್ನು ಪ್ರಸಾದವೆಂದು ಕೊಡುತ್ತಾರೆ. ಹಿಂದೂ ರಥಕ್ಕೆ ಮಲಗಿ ಹೂವನ್ನು ಅರ್ಪಿಸುವ ಮೊದಲನೇ ಮಾನವು ಮುಸಲ್ಮಾನರಿಗಂತೆ! ಇಂದಿನ ಕಾಲದಲ್ಲಿ ಇದು ಶುದ್ಧ ಮೂರ್ಖತನದ ಮತ್ತು ಸ್ವಾಭಿಮಾನದ ಶೂನ್ಯ ತೆಯ ಮಾತೆಂದು ಅನ್ನಬಹುದು. ಆದರೆ ನಮ್ಮ ಪೂರ್ವಜರ ದೃಷ್ಟಿಯು ವಿಶಾಲವಾದದ್ದಿತ್ತು. ಭಾರತ ದೇಶಕ್ಕೆ ಬಂದು ನೆಲೆಗೊಂಡ ಎಲ್ಲ ಜನಾಂಗಗಳಲ್ಲಿ ಪ್ರೇಮ ಸಂಬಂಧಗಳನ್ನು ಬೆಳೆಸುವದು ತಮ್ಮ ಪವಿತ್ರ ಕರ್ತವ್ಯವೆಂದು ಅವರು ತಿಳಿದುಕೊಂಡಿದ್ದರು. ಆಸ್ತಿಕ ಮಹರ್ಷಿಯು ಹಚ್ಚಿದ ನಂದಾದೀಪವನ್ನು ಅವರಿಗೆ ನೊಂದಿಸುವದಿದ್ದಿಲ್ಲ. ಮುಸಲ್ಮಾನರ ಮೊಹರಮ್ಮದಲ್ಲಿ ಹಿಂದುಗಳು ಭಾಗವಹಿಸುತ್ತಿದ್ದರು. ಹಿಂದೂ ಜಮೀನ ದಾರರ ಮನೆಗೆ ಮುಸಲ್ಮಾನರು ತಾಬೂತವನ್ನು ಒಯ್ಯುತ್ತಿದ್ದರು. ಮತ್ತು

ಜಮೀನದಾರರು ಅದಕ್ಕೆ ಸಕ್ಕರೆ ಕಾಯಿ ಕೊಡುತ್ತಿದ್ದರು. ನಾನು ಚಿಕ್ಕವನಿದ್ದಾಗ ನಮ್ಮೂರಲ್ಲಿ ಇಂಥ ಪ್ರೇಮ ಸಂಬಂಧಗಳನ್ನು ಕಣ್ಣಾರೆ ಕಂಡಿದ್ದೇನೆ. ಬಡ ಮುಸಲ್ಮಾನ ಹುಡುಗರು ತಾಬೂತಕ್ಕಾಗಿ ಹಾಳೆಗಳನ್ನು ಕೇಳಲು ಬರುತ್ತಿದ್ದರು. ಅವರ ತಾಬೂತಗಳು ಸುಂದರವಾಗಲೆಂದು ನಾವೂ ಉತ್ತಮವಾದ ಹಾಳೆಗಳನ್ನು ಅವರಿಗೆ ಕೊಡುತ್ತಿದ್ದೆವು.

ನಾವು ಕರೆದರೆ ನಮ್ಮ ಉತ್ಸವಗಳಿಗೆ ಮುಸಲ್ಮಾನರು ಬರುತ್ತಿದ್ದರು. ನನ್ನ ಒಬ್ಬ ಗೆಳೆಯನ ಹತ್ತರ ಒಬ್ಬ ಮುಸಲ್ಮಾನ ಹುಡುಗನು ಗಣಪತಿ ಅಥರ್ವಶೀರ್ಷವನ್ನು ಕಲಿತನು. ಅಮಳನೇರದ ಇನ್ನೊಬ್ಬ ಗೆಳೆಯನ ಮನೆಗೆ ದತ್ತ ಜಯಂತಿಗೆ ಅವನ ಮುಸಲ್ಮಾನ ಗೆಳೆಯರು ಬರುತ್ತಿದ್ದರು.

ನಮ್ಮ ಪೂರ್ವಜರು ನಮಗಿಂತ ಹೆಚ್ಚು ಚೆನ್ನಾಗಿ ಸಮಾಜಶಾಸ್ತ್ರವನ್ನು ಅರಿತವರಾಗಿದ್ದರು. ನಾವು ಸಾಮ್ರಾಜ್ಯವಾದಿ ಪರಕೀಯ ಸತ್ತೆಯ ಗುಲಾಮರಾಗಿದ್ದೇವೆ. ಅವರು ನಮ್ಮಲ್ಲಿದ್ದ ಭೇದಗಳನ್ನು ಬೆಳೆಸುತ್ತಾರೆ. ಹೊಸ ಹೊಸ ಭೇದಗಳನ್ನು ಹುಟ್ಟಿಸುತ್ತಿದ್ದಾರೆ. ಭೇದವನ್ನು ಹುಟ್ಟಿಸಿ ನಮ್ಮನ್ನಾಳಬೇಕೆನ್ನುವ ಸರಕಾರಕ್ಕೆ ನಾವು ಸಹಾಯ ನೀಡುತ್ತೇವೆ. ನಾವು ಭೇದಗಳನ್ನು ಹುಟ್ಟಿಸುತ್ತೇವೆ. ಭೇದಕ್ಕೆ ಅಭೇದವೇ ಮದ್ದು. ಒಡಕಿಗೆ ಒಕ್ಕಟ್ಟೇ ಉಪಾಯ. ವಿಷಕ್ಕೆ ಅಮೃತವೇ ಉಪಾಯ. ಮತ್ತಾವದೂ ನಡೆಯುವದಿಲ್ಲ.

ನಮ್ಮ ಹಿರಿಯರ ಪ್ರಯೋಗಗಳನ್ನೇ ನಾವು ಮುಂದುವರಿಸುವಾ. ಅದ್ವೈತವನ್ನು ಹೆಚ್ಚಾಗಿ ಪ್ರತ್ಯಕ್ಷ ಆಚರಣೆಯಲ್ಲಿ ತರುವಾ. ಭಾರತ ಭೂಮಿಯಲ್ಲಿ ಮೊದಲು ಒಕ್ಕಟ್ಟನ್ನು ಸಾಧಿಸೋಣ: ಆ ಮೇಲೆ ಮಾನವ ಜನಾಂಗದತ್ತ ಸಾಗೋಣ. ಈ ಭರತ ಭೂಮಿಯು ಜಗತ್ತಿಗೆ ತೀರ್ಥಯಾತ್ರೆಯ ಸ್ಥಾನವಾಗುವದು. ಬೇರೆ ಬೇರೆ ಧರ್ಮ, ಭಿನ್ನ ಭಿನ್ನ ಸಂಸ್ಕೃತಿಗಳು ಒಂದೆಡೆಯಲ್ಲಿ ನೆಲೆಗೊಂಡದ್ದು ನೋಡಿ, ಎಲ್ಲ ದೇಶಗಳು ಭರತ ಭೂಮಿಯಡಿಗೆ ಧಾವಿಸುವವು. ದೇವರು ನಮ್ಮ ಮೇಲೆ ಹೊರಿಸಿದ ಪವಿತ್ರವಾದ ಕರ್ತವ್ಯವಿದು. ಈ ಹೆಗ್ಗುರಿಯು ನಮ್ಮನ್ನು ಕರೆಯುತ್ತಿದೆ. ಈ ಹೆಗ್ಗುರಿಯನ್ನು ಸಾಧಿಸುವದಕ್ಕಾಗಿ ನಾವು ನಮ್ಮಲ್ಲಿಯ ಕ್ಷುದ್ರ ಭಾವವನ್ನು ಎಸೆದು ಒಗೆಯಬೇಕು. ಇದಕ್ಕಾಗಿ ಭಾರತೀಯ ಸಂಸ್ಕೃತಿಯ ಉಪಾಸಕರೆಲ್ಲರು ಶ್ರದ್ಧೆಯಿಂದ ತ್ಯಾಗಪೂರ್ವಕವಾಗಿ ನಿಲ್ಲಬೇಕಾಗಿದೆ.

# ೩. ಬುದ್ಧಿಯ ಹಿರಿಮೆ

ಭಾರತೀಯ ಸಂಸ್ಕೃತಿಯಲ್ಲಿ ಅಂಧ ಶ್ರದ್ಧೆಗೆ ಅನುವಿಲ್ಲ. ಎಲ್ಲ ಕಡೆಯಲ್ಲಿಯೂ ವಿಚಾರದ ಪ್ರಾಧಾನ್ಯವೇ ಕಂಡು ಬರುತ್ತದೆ. ವೇದವು ಈ ಸಂಸ್ಕೃತಿಯ ಅಡಿಗಲ್ಲೆಂದು ಎಲ್ಲರೂ ಒಪ್ಪುತ್ತಾರೆ. ಆದರೆ ವೇದವೆಂದರೇನು? ವೇದವೆಂದರೆ ಜ್ಞಾನವು. ಜ್ಞಾನವು ಭಾರತೀಯ ಸಂಸ್ಕೃತಿಯ ಆಧಾರವು. ಜ್ಞಾನದ ಅಡಿಗಲ್ಲಿನ ಮೇಲೆ ನಿಂತ ಸಂಸ್ಕೃತಿ ಇದು.

ವೇದಗಳ ಸಂಖ್ಯೆ ಎಷ್ಟು? ವೇದಗಳು ಅನಂತವಾಗಿವೆ. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಇವಷ್ಟೇ ವೇದಗಳಲ್ಲ. ಈ ಸಂಸ್ಕೃತಿಗೆ ಒಬ್ಬನೇ ಋಷಿಯಲ್ಲ. ಒಬ್ಬನೇ ಸಂದೇಶವಾಹಕನಲ್ಲ. ಒಂದೇ ವೇದವಲ್ಲ. ಭಾರತೀಯ ಸಂಸ್ಕೃತಿಯು ಮುಗಿಲಿನಂತೆ ವಿಶಾಲವಾಗಿದೆ. ಸಾಗರದಷ್ಟು ಆಳವಾಗಿದೆ.

ಜೀವನವನ್ನು ಆಂದವಾಗಿ ಮಾಡುವ ಪ್ರತಿಯೊಂದು ವಿಚಾರವೂ ವೇದವೇ. ನಾವು ಆನಂದದಿಂದ ಉತ್ಸಾಹದಿಂದ ಹೇಗೆ ಇರಬೇಕೆಂಬುದನ್ನು ಆಯುರ್ವೇದವು ಹೇಳುವದು. ಸಮಾಜವನ್ನು ರಕ್ಷಿಸುವದನ್ನು ಧನುರ್ವೇದವು ಕಲಿಸುವದು. ಸಮಾಜದ ಮನರಂಜನೆಯನ್ನು ಯಾವ ರೀತಿಯಿಂದ ಮಾಡಬೇಕು ಮತ್ತು ಸಮಾಜವು ತನ್ನ ದುಃಖವನ್ನು ಹೇಗೆ ಮರೆಯಬೇಕು ಎಂಬುವದನ್ನು ಗಾಂಧರ್ವ ವೇದವು ಹೇಳುವದು. ಇವೆಲ್ಲ ವೇದಗಳೇ.

ಕಾಲ, ಜ್ಞಾನ ಇವೆರಡೂ ಅನಂತವಾಗಿವೆ. ಹೊಸ-ಹೊಸ ಜ್ಞಾನವು ಉದಯವಾಗುತ್ತದೆ. ಇದನ್ನೆಲ್ಲ ಸ್ವಾಗತಿಸಲು ಭಾರತೀಯ ಸಂಸ್ಕೃತಿಯು ಸಜ್ಜಾಗಿ ಎಲ್ಲಕ್ಕೂ ಮೊದಲು ಮುಂದುವರಿಯುತ್ತದೆ. ಈ ಸಂಸ್ಕೃತಿಗೆ ಜ್ಞಾನಕ್ಕಿಂತ ಹೆಚ್ಚು ಪವಿತ್ರವಾದ ಇನ್ನೊಂದು ವಸ್ತುವಿಲ್ಲ. ಈ ಸಂಸ್ಕೃತಿಯು ನಿತಾಂತವಾಗಿ ಜ್ಞಾನೋಪಾಸಕರನ್ನೆಲ್ಲ ಆದರಿಸುತ್ತದೆ.

ಋಷಿಗಳೆಲ್ಲರೂ ಒಂದೇ ಕಾಲದಲ್ಲಿ ಬಾಳಿದರೆಂಬುದನ್ನು ಈ ಸಂಸ್ಕೃತಿಯು ಮನ್ನಿಸುವದಿಲ್ಲ. ಹೀಗೆನ್ನುವದು ಅಹಂಕಾರದ ಮಾತಾಗುವದು. ಅದು ಪರಮೇಶ್ವರನ ಅಪಮಾನವು. ಜ್ಞಾನವೆಲ್ಲವು ಮುಗಿದರೆ ಸೃಷ್ಟಿಯು ಇರುವ ಕಾರಣವೇ ಇಲ್ಲ. ತೆನೆಗಳು ತಲೆದೋರಿದ ಮೇಲೆ ಜೋಳದ ಬೆಳೆಯನ್ನು ಕೊಯ್ಯುವದೊಂದೇ ಕೆಲಸ ಉಳಿಯುವದು. ಶೋಧಿಸಲಿಕ್ಕೆ

ಏನೂ ಉಳಿಯದಿದ್ದರೆ, ಮಾನವನ ಉತ್ಪತ್ತಿಗೆ ಅರ್ಥವೇ ಇಲ್ಲದಂತಾಗು ವದು.

ಹೊಸ ವಿಚಾರಗಳು ಹುಟ್ಟಿ, ಹೊಸ ಜ್ಞಾನವು ನಮಗೆ ಸಿಗುತ್ತದೆ. ನೆಪ್‌ಚ್ಯೂನ, ಯುರೇನಸ್ ಎಂಬ ಗ್ರಹಗಳು ನಮಗೆ ಮೊದಲು ಗೋಚರ ವಾಗಿದ್ದಿಲ್ಲ. ಈಗ ನಮಗೆ ಆಕಾಶದಲ್ಲಿ ಹೊಸ ಹೊಸ ಚಿಕ್ಕೆಗಳು ತೋರು ವಂತೆ ಜೀವನದಲ್ಲಿ ನವವಿಚಾರಗಳು ತಲೆದೋರುತ್ತವೆ. ಬೇರೆ ಶಾಸ್ತ್ರಗಳ ಪ್ರಗತಿಯನ್ನು ವಿಚಾರಿಸಿದರೆ, ಜೀವನ ಶಾಸ್ತ್ರವು ಇನ್ನೂ ಬಾಲ್ಯಾವಸ್ಥೆ ಯಲ್ಲಿ ಇದ್ದಂತೆ ಕಂಡುಬರುತ್ತದೆ. ಜೀವನ ಶಾಸ್ತ್ರದಲ್ಲಿ ಇನ್ನೂ ನಿಶ್ಚಿತವಾದ ಒಂದೂ ಸಿದ್ಧಾಂತ ಇಲ್ಲ. ಭೂಮಿತಿಯಲ್ಲಿ, ಸ್ವಯಂಸಿದ್ಧ, ಶಂಕಾತೀತ, ಸಂಶಯಾತೀತ ಕೆಲವೊಂದು ಸಿದ್ಧಾಂತಗಳಿವೆ. ಪೃಥ್ವಿಯ ಮೇಲೆ ಯಾವ ದೇಶದಲ್ಲಿ ಹೋದರೂ ಎರಡು ಎರಡು ನಾಲ್ಕು. ಇಂಥ ಅಪವಾದರಹಿತ ವಾದ ಒಂದೂ ತತ್ವವು ಜೀವನಶಾಸ್ತ್ರದಲ್ಲಿ ಇಲ್ಲ. ಸತ್ಯವು ಚಲೋ ಅಥವಾ ಕೆಟ್ಟ, ಅಹಿಂಸೆ ಯೋಗ್ಯವೋ ಅಥವಾ ಅಯೋಗ್ಯವೋ, ಬ್ರಹ್ಮಚರ್ಯವು ಇರಬೇಕೋ ಇರಬಾರದೋ ಇವೆಲ್ಲ ಪ್ರಶ್ನೆಗಳ ಉತ್ತರಗಳನ್ನು ನಿಶ್ಚಿತವಾಗಿ ಮನುಷ್ಯನ ಮನಸ್ಸು ಕೊಟ್ಟಿಲ್ಲ.

ಹೀಗಿರುವದರಿಂದ ಭಾರತೀಯ ಸಂಸ್ಕೃತಿಯು ಯಾವ ಮಾತಿನ ಬಗ್ಗೆಯೂ ಹಟವನ್ನು ಹಿಡಿಯುವದಿಲ್ಲ. "ಬುದ್ಧೇಃ ಫಲಮನಾಗ್ರಹಃ" ಯಾವ ತತ್ವದ ಹಟವನ್ನು ಬುದ್ಧಿವಂತರು ಹಿಡಿಯುವದಿಲ್ಲ. ಶ್ರೀಕೃಷ್ಣನಾ ದರೂ "ಯಥೇಚ್ಛಸಿ ತಥಾ ಕುರು" ಎಂದು ಅರ್ಜುನನಿಗೆ ಹೇಳಿ ಬುದ್ಧಿಗೆ ಮಹತ್ವವನ್ನು ಕೊಟ್ಟನು. ವಿಚಾರದಂತೆ ಆಚರಿಸುವದೇ ವೇದಧರ್ಮವು. ಬುದ್ಧಿಗೆ ತೋಚಿದಂತೆ ನಡೆಯುವದು. "ನಿಮ್ಮಲ್ಲಿ ಉರಿಯುವ ಜ್ಞಾನ ದೀಪವನ್ನು ನೊಂದಿಸಬೇಡಿರಿ" ಎಂದು ಭಾರತೀಯ ಸಂಸ್ಕೃತಿಯು ಹೇಳು ತ್ತದೆ. ನಿನ್ನ ಹೃದಯದಲ್ಲಿ ವಾಸಿಸುವ ಬುದ್ಧಿಯ ದನಿಯನ್ನು ಚಿತ್ತಗೊಟು ಲಾಲಿಸು. ಆ ಬುದ್ಧಿಯ ಶಂಕಾತೀತವಾದ ದನಿಯು ಹೇಳಿದಂತೆ ನಡಿ. "ಮನಃ ಪೂತಂ ಸಮಾಚರೇತ್" ಎಂಬ ವಚನದ ಅರ್ಥವಿದು. ಋಷಿಗಳು ಹೇಳುತ್ತಾರೆ, ತತ್ವಜ್ಞಾನಿಗಳು ಹೇಳುತ್ತಾರೆಂದು ಅಲ್ಲ; ನಿನ್ನ ಬುದ್ಧಿಯು ಹೇಳುತ್ತದೆ. ಆದ್ದರಿಂದಲೇ ಹೀಗೆ ನಡೆದು ಕೊ. ನೀನು ನಿನ್ನ ಆತ್ಮವನ್ನು ಅವಮಾನಿಸಬೇಡ. ಬುದ್ಧಿಯನ್ನು ಹಿಚಕಬೇಡ.

ವೇದಗಳು ಅಪೌರುಷೇಯಗಳೆಂಬ ಕಲ್ಪನೆಯು ಭ್ರಾಮಕವಾದದ್ದು.

ಅದು ಮನುಷ್ಯನ ಬುದ್ಧಿಯ ಪಸರವೇ; ವೇದವನ್ನು ಮನ್ನಿಸುವದೆಂದರೆ ಬುದ್ಧಿಯನ್ನು ಮನ್ನಿಸಿದಂತೆ. ವೇದದಲ್ಲಿರುವ ಎಲ್ಲ ಮಂತ್ರಗಳಲ್ಲಿ ಗಾಯತ್ರಿ ಮಂತ್ರವು ಪವಿತ್ರವಾದದ್ದು. ಈ ಮಂತ್ರಕ್ಕೆ ಇಷ್ಟು ಪ್ರಾಧಾನ್ಯವೇಕೆ ? ಈ ಮಂತ್ರದ ಉಪಾಸನೆಯನ್ನು ಮಾಡಿದರೆ ಹೊಸ ಜನ್ಮವೆತ್ತಿದಂತಾಗುತ್ತದೆ. ಏನಿದೆ, ಈ ಮಂತ್ರದಲ್ಲಷ್ಟು ? ಬುದ್ಧಿಯ ನಿರ್ಮಲತೆಯನ್ನು ಕೋರಲಾಗಿದೆ ಈ ಮಂತ್ರದಲ್ಲಿ. ಧಿಯೋ ಯೋ ನಃ ಪ್ರಚೋದಯಾತ್.

"ತೇಜಸ್ಸುಳ್ಳ ಪ್ರೇರಣೆಯನ್ನೀಯುವ ಸೂರ್ಯನ ಪರಮ ಶ್ರೇಷ್ಠ ತೇಜಸ್ಸಿನ ಉಪಾಸನೆಯನ್ನೆ ನಾವು ಮಾಡುತ್ತೇವೆ. ಆ ಸೂರ್ಯನು ನಮ್ಮ ಬುದ್ಧಿಗೆ ಚಾಲನೆಯನ್ನು ಕೊಡಲಿ.'' ವಿಶ್ವಾಮಿತ್ರನು ದೇವರಲ್ಲಿ ತನ್ನ ಸಮಾಜಕ್ಕಾಗಿ ನಿರ್ಮಲವಾದ ಬುದ್ಧಿಯ ಕಾಣಿಕೆಯನ್ನೇ ಕೋರಿದನು. ಆಕಳುಗಳನ್ನು, ಪುತ್ರರನ್ನು, ಗೆಲವನ್ನು ಕೋರಿದ ಅನೇಕ ಮಂತ್ರಗಳಿವೆ ವೇದದಲ್ಲಿ. ಆದರೆ ಈ ಚಿಕ್ಕ ಮಂತ್ರವು ಮಿಕ್ಕುಳಿದ ಎಲ್ಲ ಮಂತ್ರಗಳಿಗಿಂತ ಮಹತ್ವವನ್ನು ಪಡೆಯಿತು. ಇದರ ಮೇಲಿಂದ ಭಾರತೀಯ ಪೂರ್ವಜರು ಯಾವ ವಸ್ತುವಿಗೆ ಹೆಚ್ಚು ಮಹತ್ವವನ್ನು ಕೊಡುತ್ತಿದ್ದರೆಂಬುವದು ಕಂಡುಬರುತ್ತದೆ.

"ನಾನು ಹೇಳಿದ್ದು ನಿಮ್ಮ ಬುದ್ಧಿಗೆ ತೋಚಿದರೆ ಗ್ರಹಿಸಿರಿ, ಇಲ್ಲದಿದ್ದರೆ ತ್ಯಜಿಸಿರಿ.'' ಎಂದು ಮನು ಹೇಳಿದ್ದಾನೆ. "ನೂರಾರು ಮಂತ್ರಗಳು ಅಗ್ನಿಯು ತಂಪೆಂದು ಹೇಳಿದರೆ ಈ ಮಾತಿಗೆ ಯಾವನು ಮಹತ್ವ ಕೊಡುವನು?" ಎಂದು ಶಂಕರಾಚಾರ್ಯರು ಅಂದಿದ್ದಾರೆ. ಜ್ಞಾನ ಸುವರ್ಣವನ್ನು ತರ್ಕದ ಒರೆಗಲ್ಲಿನಿಂದ ಪರೀಕ್ಷಿಸಿ ಅದನ್ನು ಗ್ರಹಿಸಿರಿ. ಎಂದು ಪ್ರಾಚೀನ ಕವಿಗಳು ಹೇಳಿದ್ದಾರೆ. ಮಹಾಭಾರತದಲ್ಲಿ "ಕೋಯಂ ಧರ್ಮಃ ಕುತೋ ಧರ್ಮ'' ಎಂಬ ಪ್ರಶ್ನೆಯನ್ನು ಭೀಷ್ಮರಿಗೆ ಕೇಳಲಾಗಿದೆ. ಧರ್ಮವು ಎಲ್ಲಿಂದ ಬರುತ್ತದೆ ? ಈಶ್ವರನು ಬಂದು ಯಾರ ಕಿವಿಯಲ್ಲಿಯಾದರೂ ಹೇಳುತ್ತಾನೆಯೋ ? ವಿಚಾರವಂತರು ಚಿಂತನ ಮಾಡಿ, ಅಭ್ಯಾಸ ಮಾಡಿ ಧರ್ಮವನ್ನು ನಿರ್ಮಿಸುತ್ತಾರೆಂದು ಭೀಷ್ಮರು ಹೇಳಿದರು.

"ಮತಿಭಿರುಧೃತಮ್" ತಮ್ಮ ತಮ್ಮ ಬುದ್ಧಿಯಿಂದ ತತ್ವಗಳನ್ನು ಶೋಧಿಸುತ್ತಾರೆ. ವೇದ ಧರ್ಮವೆಂದರೆ ವಿಚಾರ ಧರ್ಮವು; ಬುದ್ಧಿಗೆ ಮಹತ್ವವನ್ನು ಕೊಡುವ ಧರ್ಮವು. ಶೃತಿ-ಶೃತಿಗಳಲ್ಲಿ. ಸ್ಮೃತಿ-ಸ್ಮೃತಿಗಳಲ್ಲಿ, ಋಷಿ-ಋಷಿಗಳಲ್ಲಿ, ಭೇದಗಳು ಕಂಡುಬರುತ್ತವೆ. ಇದರ ಅರ್ಥ

ವೇನು? ಎಲ್ಲರೂ ಸ್ವತಂತ್ರ ರೀತಿಯಿಂದ ವಿಚಾರ ಮಾಡುತ್ತಿದ್ದರು. ಎಂಬುದೇ ಇದರ ಅರ್ಥವು. ತಮ್ಮ ತಮ್ಮ ಕಾಲದ ಪರಿಸ್ಥಿತಿಯನ್ನು ವಿಚಾರಿಸುತ್ತಿದ್ದರು. ಋಷಿಗಳು ಕುರುಡರಿದ್ದಿಲ್ಲ. ಅವರು ಗಿಳಿಗಳಂತೆ ಕುರುಡು ಪಾಠ ಮಾಡುತ್ತಿದ್ದಿಲ್ಲ. ತೇಜಸ್ಸುಳ್ಳ ಗಾಯತ್ರಿ ಮಂತ್ರದ ಉಪಾಸಕರಿದ್ದರು. ಹೆಜ್ಜೆ ಹೆಜ್ಜೆಗೆ ಬದಲಾವಣೆಗಳನ್ನು ಮಾಡುತ್ತಿದ್ದರು. "ಹಿರಿಯರ ಮಾತು ಪ್ರಮಾಣ"ವೆಂದರೆ ಅವರು ರೊಚ್ಚಿಗೇಳುತ್ತಿದ್ದರು. ಅವರು ಜ್ಞಾನದ ಚರ್ಚೆಯನ್ನು ಮಾಡಿ ಶಾಂತರೀತಿಯಿಂದ ಎಲ್ಲ ದೃಷ್ಟಿಯಿಂದಲೂ ವಿಚಾರಿಸುತ್ತಿದ್ದರು.

ಪ್ರಾಚೀನ ಕಾಲದ ಇತಿಹಾಸದ ಸಿಂಹಾವಲೋಕನವನ್ನು ಮಾಡಿದರೆ ವಿಚಾರದ ಒಂದು ಪ್ರಚಂಡ ಚಳವಳಿಯೇ ಕಂಡು ಬರುತ್ತದೆ. ಬರೇ ಯಾಸ್ಕಾಚಾರ್ಯರ ನಿರುಕ್ತವನ್ನು ತಿರುವಿ ಹಾಕಿದರೆ ಬೇರೆ ಬೇರೆ ದೃಷ್ಟಿಯಿಂದ ವೇದದ ಅಭ್ಯಾಸವನ್ನು ಮಾಡಲು ಮಂಡಲಗಳು ಏರ್ಪಡಿಸಿದ್ದು ಕಾಣಬಹುದು. ಇತಿ ನೈರುಕ್ತಾಃ; ಇತಿ ಆಖ್ಯಾಯಿಕಾಃ; ಇತಿ ಐತಿಹಾಸಿಕಾಃ; ಹೀಗೆ ಬೇರೆ ಬೇರೆ ಮಂಡಲಗಳ ಹೆಸರುಗಳನ್ನು ಯಾಸ್ಕರು ನಿರ್ದೇಶಿಸಿದ್ದಾರೆ. ಇದೇ ರೀತಿ ಉಪನಿಷತ್ಕಾಲದಲ್ಲಿ ತತ್ವಜ್ಞಾನದ ಒಂದು ಅಖಂಡವಾದ, ಪ್ರಚಂಡವಾದ ಚರ್ಚೆ ನಡೆದದ್ದು ಕಂಡುಬರುತ್ತದೆ. ನೂರಾರು ಮತಗಳ, ಪಂಥಗಳ, ಸೂಕ್ಷ್ಮ ಛಾಯೆಗಳನ್ನೂ ತೋರಿಸುವ ತತ್ವಜ್ಞಾನಿಗಳನ್ನು ನಾವು ಕಾಣಬಹುದು. ಬಿಚ್ಚುಮನಸ್ಸಿನಿಂದ ವಾದವಿವಾದ ಮಾಡುತ್ತಿದ್ದರು. ಮನಸ್ಸಿಗೆ ಸರಿ ತೋರಿದರೆ ಗ್ರಹಿಸುತ್ತಿದ್ದರು. ಮತ್ತೂ ಅದರಂತೆ ಬದಲಾವಣೆಗಳನ್ನೂ ಸಹ ಮಾಡುತ್ತಿದ್ದರು. ಇಂಥ ದೃಶ್ಯವಾಗಿತ್ತು ಅದು. ನಿಸ್ಸಂಶಯವಾಗಿ ನಿರ್ಭಯವಾಗಿ ತಮ್ಮ ತಮ್ಮ ವಿಚಾರಗಳನ್ನು ಮುಂದಿಡುತ್ತಿದ್ದರು. ಈ ಚರ್ಚೆಗಳನ್ನು ಕೇಳಲು ನೂರಾರು ಜನರು ಕೂಡುತ್ತಿದ್ದರು.

ಮೀಮಾಂಸಕರು ಈಶ್ವರನನ್ನು ಮನ್ನಿಸುತ್ತಿದ್ದಿಲ್ಲ. ಚಾರ್ವಾಕ ಪಂಥದವರಿಗೆ ಪರಲೋಕವು ಮಾನ್ಯವಿದ್ದಿಲ್ಲ. ಸೃಷ್ಟಿಯೆಲ್ಲವೂ ಪರಮಾಣುವಿನಿಂದಲೇ ಹುಟ್ಟಿದೆ ಎಂದು ಕಣಾದನು ಸಾರಿದ್ದನು. ಎಲ್ಲವೂ ಕ್ಷಣಿಕವಾದದ್ದೆಂದು ಬುದ್ಧ ಪಂಥದವರು ಮನ್ನಿಸುತ್ತಿದ್ದರು. ನೂರಾರು ಮತಗಳು ಇದ್ದವು. ಆದರೆ ಯಾವ ಮತದವರೂ ಎರಡನೇ ಮತದವರನ್ನು ಕಾಡಲಿಲ್ಲ. ಹೊಸ ವಿಚಾರಗಳನ್ನು ಹರಡಿಸುವವರನ್ನು ಯುರೋಪ

ದಲ್ಲಿ ಸುಟ್ಟಿದ್ದಾರೆ. ಭಾರತದಲ್ಲಿ ಈ ರೀತಿ ಯಾರೂ ಮಾಡಿಲ್ಲ. ಪ್ರತಿಯೊಬ್ಬನ ಪ್ರಾಮಾಣಿಕ ಮತಕ್ಕೆ ಇಲ್ಲಿ ಮಾನವಿದೆ, ಆದರವಿದೆ.

ಜ್ಞಾನವು ಹುಡುಗಾಟಿಕೆಯ ಮಾತೆಂದು ಯಾರೂ ತಿಳಿದಿದ್ದಿಲ್ಲ. ಒಂದೊಂದು ಮಾತನ್ನು ಅರಿತುಕೊಳ್ಳಲು ತಪಗಳಷ್ಟು ಕಾಲವು ಬೇಕಾಗುತ್ತಿತ್ತು. ಉಪನಿಷತ್ತಿನಲ್ಲಿ ಅಲ್ಲಲ್ಲಿ ಜ್ಞಾನವನ್ನು ದೊರಕಿಸುವದಕ್ಕಾಗಿ ಬ್ರಹ್ಮಚರ್ಯವನ್ನು ಪಾಲಿಸಿ, ತಪಃಶ್ಚರ್ಯೆಗಳನ್ನು ಮಾಡಿ ಜ್ಞಾನದಲ್ಲಿಯೇ ಮಗ್ನನಾದ ಹಲವರ ವರ್ಣನೆಯಿದೆ. ಜ್ಞಾನ ದೊರಕಿಸುವದಕ್ಕಾಗಿ ಬೇಕಾದಲ್ಲಿಗೆ ಹೋಗುತ್ತಿದ್ದರು. ಬ್ರಾಹ್ಮಣರು ಕ್ಷತ್ರಿಯರ ಕಡೆಗೆ, ಕ್ಷತ್ರಿಯರು ಬ್ರಾಹ್ಮಣರ ಕಡೆಗೆ ಹೋಗುತ್ತಿದ್ದರು. ತುಲಾಧಾರ ವೈಶ್ಯನ ಕಡೆಗೆ ಬ್ರಾಹ್ಮಣನು ಜ್ಞಾನದ ಭಿಕ್ಷೆಗಾಗಿ ಹೋಗಿದ್ದನು. ಎಲ್ಲಿ ಇದ್ದರೂ ಜ್ಞಾನವು ಪವಿತ್ರವಾದ ವಸ್ತುವು. ಸೂರ್ಯನ ಪ್ರಕಾಶವು ಯಾವ ಕಡೆಯಿಂದ ಬಂದರೂ ಅದನ್ನು ಸ್ವೀಕರಿಸಲೇಬೇಕು. ಗಿಡದ ಬೇರುಗಳು ಎಲ್ಲ ಸ್ಥಳದಿಂದ ಹಸಿಯನ್ನು ದೊರಕಿಸುವದಕ್ಕಾಗಿ ಯತ್ನಿಸುತ್ತವೆ. ಇದರಂತೆ ಜ್ಞಾನೋಪಾಸಕನ ದೃಷ್ಟಿ ಇರಬೇಕು. ಕಚ ದೇವನು ದೈತ್ಯ ಗುರುಗಳ ಕಡೆಗೆ ಹೋಗುವನು; ಮತ್ತು ದೈತ್ಯಗುರುವು ಅವನನ್ನು ಸ್ವಾಗತಿಸಿ ಜ್ಞಾನದ ಕಾಣಿಕೆಯನ್ನು ಕೊಡುವನು. ಜ್ಞಾನದ ಕ್ಷೇತ್ರದಲ್ಲಿ ಶತ್ರು ಮಿತ್ರಗಳೆಂಬ ಭೇದಗಳಿಲ್ಲ.

ನಚಿಕೇತನು ಪ್ರತ್ಯಕ್ಷ ಮೃತ್ಯುದೇವನ ಬಳಿಗೆ ಜ್ಞಾನದ ಭಿಕ್ಷೆಯನ್ನು ಬೇಡಿದನು. ಇದಕ್ಕಿಂತ ಜ್ಞಾನದ ಮಹತ್ವವನ್ನು ಹೇಗೆ ತಿಳಿಸಬೇಕು. ಜ್ಞಾನವನ್ನು ಗಳಿಸುವದಿದ್ದರೆ ಪ್ರತ್ಯಕ್ಷ ಸಾವಿನ ಕಡೆಗೆ ಹೋಗುವ ಪ್ರಸಂಗವಾದರೂ ಬರಬಹುದು! ಜ್ಞಾನಕ್ಕೆ ಭೀತಿ ಇಲ್ಲ. ಜ್ಞಾನವು ಬೇಕು ಎಂದು ಅನ್ನುವವನು ಮೂರೂ ಖಂಡಗಳಲ್ಲಿ ಹೋಗಲು ಮತ್ತು ತ್ಯಾಗ ಮಾಡಲು ಸಿದ್ಧನಿರುವನು.

ಸಮಾಜಕ್ಕೆ ಹೊಸ ವಿಚಾರಗಳನ್ನು ನೀಡುವದು ದೊಡ್ಡ ಸಾಧನೆಯು. ವಿಚಾರದ ಕಣ್ಣನ್ನು ಸಮಾಜಕ್ಕೆ ಕೊಡುವದಕ್ಕಿಂತ ಹೆಚ್ಚು ಧನ್ಯತೆ ಎತರಲ್ಲಿದೆ? ಜ್ಞಾನಚಿಂತನದಿಂದ ನಮಗೆ ಹೊಳೆದ ವಿಚಾರವನ್ನು ನಾವು ಪ್ರಕಟ ಮಾಡಲೇಬೇಕು. ವಿಚಾರಗಳಿಂದ ನಮಗೆ ಹೊಳೆದ ವಿಚಾರವನ್ನು ನಾವು ಪ್ರಕಟ ಮಾಡಲೇಬೇಕು. ವಿಚಾರಗಳು ಪಕ್ವವಾದ ಮೇಲೆ ನಿರ್ಭಯತೆಯಿಂದ ಎಲ್ಲರ ಮುಂದೆ ಇಡಬೇಕು. ಹಾಗೇ ಬಿಡಬಾರದು.

ಜ್ಞಾನದ ಹೊರಗಿನ ಅಂಗವು ಹೇಗೇ ಇರಲಿ. ಆ ಅಂಗಗಳ ಪೂಜೆಯನ್ನು ಮನುಷ್ಯನು ಎಷ್ಟು ನಿಸ್ವಾರ್ಥತೆಯಿಂದ ಮಾಡುತ್ತಾನೆ ಇದನ್ನೇ ನಾವು ಕಾಣಬೇಕು. ಜ್ಞಾನದ ಬಾಹ್ಯಾಂಗವು ವ್ಯಾಕರಣವಿರಬಹುದು. ಆದರೆ ಅದೇ ಪರಬ್ರಹ್ಮ ಸ್ವರೂಪವೆಂದು ಅರಿತು, ಪಾಣಿನಿಯಂಥ ಒಬ್ಬನು ಹಗಲಿರುಳು ಪೂಜಿಸುವನು. ನಮ್ಮ ಸಂಸ್ಕೃತಿಯು ಅವನಿಗೆ ಭಗವಾನ್ ಎಂಬ ಪದವಿಯನ್ನು ಕೊಡುವದು. ಪಾಣಿನಿಯು ಜ್ಞಾನದ ಒಂದು ರೂಪದಲ್ಲಿ ತಲ್ಲೀನನಾಗಿದ್ದನು. ಶಂಕರಾಚಾರ್ಯರು ಭಗವಾನ್ ಪಾಣಿನಿಯೆಂದು ಅಲ್ಲಲ್ಲಿ ಉಲ್ಲೇಖಿಸುತ್ತಾರೆ. ಮತ್ತಾವದೂ ಅವನಿಗೆ ಸೇರುತ್ತಿದ್ದಿಲ್ಲ. ಹೊಳೆಯುತ್ತಿದ್ದಿಲ್ಲ. ಹೀಗೇ ಒಂದು ದಿವಸ ವ್ಯಾಕರಣವನ್ನು ಕಲಿಸುತ್ತಿರುವಾಗ ಪಾಣಿನಿಯ ತಪೋವನದಲ್ಲಿ ಒಂದು ಹುಲಿಯು ಬಂದಿತು. ಅದನ್ನು ನೋಡಿ ಪಾಣಿನಿಯು ಓಡಿಹೋಗಲಿಲ್ಲ. ಹುಲಿಯನ್ನು ನೋಡಿ ಪಾಣಿನಿಯು "ವ್ಯಾಜಿಘ್ರತಿ ಸ ವ್ಯಾಘ್ರಃ" ಎಂದು ವ್ಯಾಘ್ರ ಶಬ್ದದ ವ್ಯುತ್ಪತ್ತಿಯನ್ನು, ಹೇಳಲಾರಂಭಿಸಿದನು. ಆ ಆನಂದದಲ್ಲಿಯೇ ಅವನು ತಲ್ಲೀನನಾಗಿದ್ದನು. ಶಿಷ್ಯರೆಲ್ಲರೂ ಓಡಿ ಹೋಗಿದ್ದರು. ಹುಲಿಯು ಪಾಣಿನಿಯ ಮೇಲೆ ಹಾರಿ ಅವನನ್ನು ತಿಂದುಬಿಟ್ಟಿತು. ಎಂಥ ದೊಡ್ಡ ಜ್ಞಾನೋಪಾಸನೆಯು! ಜ್ಞಾನೋಪಾಸನೆಯನ್ನು ಮಾಡುವವರು ಉಳಿದದೆಲ್ಲವನ್ನೂ ಮರೆತುಬಿಡುತ್ತಾರೆ. ಏನೋ ಸಮಾಧಿಯಲ್ಲಿದ್ದಂತೆ! ಎಲ್ಲ ಕಡೆಯಲ್ಲಿಯೂ ಧ್ಯೇಯವನ್ನೇ ಕಾಣುವದು ಎಂದರೆ ಸಮಾಧಿಯು. ಧ್ಯೇಯವನ್ನೇ ಬಿಟ್ಟು ಉಳಿದ ಸೃಷ್ಟಿಯನ್ನು ಮರೆಯುವದೆಂದರೆ ಸಮಾಧಿಯು! ಸಮಾಧಿ ಎಂದರೆ ಇಡೀ ಸೃಷ್ಟಿಯ ಮರೆವು ಅಲ್ಲ.

ಜ್ಞಾನದ ಯಾವದೇ ಕ್ಷೇತ್ರವಿರಲಿ. ಆ ಜ್ಞಾನವನ್ನು ಹಿಂಬಾಲಿಸಿ ಕೊನೆಯ ಮಟ್ಟನ್ನು ಮುಟ್ಟುವವನು ಮತ್ತು ಅತಿಶಯ ಎತ್ತರವಾದ ಶಿಖರವನ್ನು ಹತ್ತುವವನು ಋಷಿಯು. ದುಡ್ಡು, ಸುಖಗಳನ್ನು ಬಯಸುವವರು ಇಂಥ ಉದ್ಯೋಗವನ್ನು ಕೈಕೊಳ್ಳುವದಿಲ್ಲ. ತಪಸ್ವಿಗಳೇ ಜ್ಞಾನವನ್ನು ಕೊಡುವರು. ಜ್ಞಾನವೇ ಆಗಲಿ, ವಿಜ್ಞಾನವೇ ಆಗಲಿ ಅದನ್ನು ಸಿದ್ಧಮಾಡಿ, ಜೀವನದಲ್ಲಿ ತರಲು ಮಹಾತ್ಮರಿಗೆ ಮಾತ್ರ ಸಾಧ್ಯವಾದ ಮಾತು. ಜ್ಞಾನೋಪಾಸಕನು ಸತತವಾಗಿ ಮುಂದುವರಿಯುವನು. ಜ್ಞಾನದೇವನ ದರ್ಶನವಾಗದೆ ಅವರು ನಿಲ್ಲುವಂತೆ ಇಲ್ಲ. ಜೀವನದ ವಿವಿಧ ಕ್ಷೇತ್ರಗಳಲ್ಲಿ ಸಂಶೋಧನೆ ಮಾಡಲು ಬೇಕಾದಷ್ಟು ಅನುವು ಅದೆ.

ಭಾರತೀಯ ಸಂಸ್ಕೃತಿಯು ಪ್ರತಿಯೊಬ್ಬ ಸಂಶೋಧಕನನ್ನು ಸ್ವಾಗತಿಸಲು ಸಜ್ಜಾಗಿನಿಂತಿದೆ. ಸಂಶೋಧನವನ್ನು ಮಾಡುವಾಗ ಊಟದ ಅರಿವೂ ಕೂಡ ಇಲ್ಲದ ನ್ಯೂಟನ್‌ನೂ ಋಷಿಯೇ. ೫೦ ವರ್ಷ ಅಭ್ಯಾಸ ಮಾಡಿ ಸಮಾಜಕ್ಕೆ ಹೊಸ ಕಣ್ಣನ್ನು ಇತ್ತ ಕಾರ್ಲ ಮಾರ್ಕ್ಸನೂ ಮಹರ್ಷಿಯೇ. ಜಗತ್ತಿನಲ್ಲಿಯೇ ವಿಚಾರಕ್ರಾಂತಿಯನ್ನುಂಟು ಮಾಡಿದ ಡಾರ್ವಿನನನ್ನು ಋಷಿಯೆಂದು ಯಾರು ಮನ್ನಿಸಲಿಕ್ಕಿಲ್ಲ? ಇಂಗ್ಲಂಡಿನ ಒಂದು ಗುಡಿಸಲದಲ್ಲಿದ್ದು ಸಹಕಾರ್ಯದ ಹೊಸ ಹೊಸ ಮಾರ್ಗಗಳನ್ನು ಹುಡುಕಿ ಅವನ್ನು ಜಗತ್ತಿಗೆ ಕೊಡಲು ಸಾಹಸಪಟ್ಟ, ಗಡಿಪಾರು ಮಾಡಲ್ಪಟ್ಟ ಪ್ರಿನ್ಸ ಕ್ರೊಪೊಟ್‌ಕಿನ್ ಇವರಿಗೆ ಋಷಿಯೆಂದೆನ್ನದೆ ಇನ್ನಾರಿಗೆ ಅನ್ನಬೇಕು?

ಭಾರತೀಯ ಸಂಸ್ಕೃತಿಯು ಇವರೆಲ್ಲರನ್ನೂ ಪೂಜಿಸುವದು. ವಿಶ್ವ ಭಾರತಿ ವಿದ್ಯಾಪೀಠವನ್ನು ಪ್ರಾರಂಭಿಸಿ ಜಗತ್ತಿನಲ್ಲಿದ್ದ ಎಲ್ಲ ಋಷಿಗಳನ್ನು ಬರಮಾಡಿಕೊಂಡು ಭಾರತವು ಆದರಿಸುತ್ತದೆಂಬ ಮಾತನ್ನು ರವೀಂದ್ರನಾಥರು ಜಗತ್ತಿನ ನಿದರ್ಶನಕ್ಕೆ ತಂದಿದ್ದಾರೆ. ಜಗತ್ತಿನಲ್ಲಿಯ ಹಿರಿಯ ಆಚಾರ್ಯರನ್ನು ಇಲ್ಲಿ ಬರಮಾಡಿಕೊಂಡು ಅವರನ್ನು ಆದರಿಸಿದ್ದಾರೆ. ರವೀಂದ್ರನಾಥರಿಗೆ ಭಾರತೀಯ ಸಂಸ್ಕೃತಿಯ ಆತ್ಮದ ಅರಿವು ಇದೆ. ಅವರು ಈ ಸಂಸ್ಕೃತಿಯ ನಿಜವಾದ ಉಪಾಸಕರು.

ಭಾರತೀಯ ಸಂಸ್ಕೃತಿಯಲ್ಲಿ ಜ್ಞಾನಕ್ಕೆ ವಿರೋಧವೆಂದೂ ಇದ್ದಿಲ್ಲ. ಕ್ರಾಂತಿಕಾರಕ ಮತಗಳನ್ನು ಸಹ ಮುಂದಿಡುವವರನ್ನು ಗೌರವಿಸಲಾಗುತ್ತಿತ್ತು. ಮತ್ತು ಆ ಮತಗಳನ್ನು ವಿಚಾರಿಸುತ್ತಿದ್ದರು. ಆಯಾ ಮತಗಳ ಬೆನ್ನ ಹಿಂದೆ ಇರುವ ಕಳಕಳಿಯನ್ನು, ಅನುಭವವನ್ನು, ಅಭ್ಯಾಸವನ್ನು ನೋಡುತ್ತಿದ್ದರು. ಆಯಾ ಮತಸ್ಥಾಪಕರ ತ್ಯಾಗ ಮಾಡುವ ಸಿದ್ಧತೆಯನ್ನು ನೋಡಲಾಗುತ್ತಿತ್ತು. ಭಾರತೀಯ ಸಂಸ್ಕೃತಿಯು ಒಮ್ಮೆಲೇ ಹೊಸ ಮತಗಳನ್ನು ಗ್ರಹಿಸುತ್ತಿದ್ದಿಲ್ಲ. ಆದರೆ ಪ್ರತಿಯೊಂದು ಬಗೆಯ ಮತಗಳಿಗೆ ಅನುವು ಇತ್ತು. ಸತ್ಯವಿದ್ದದ್ದು ಕಾಲದ ಪ್ರವಾಹದಲ್ಲಿ ಉಳಿಯುತ್ತದೆ. ಅಸತ್ಯವಿದ್ದದ್ದು ಅಳಿಯುತ್ತದೆ. ಎಂಬುದನ್ನು ತೋರಿಸಿ ಕೊಡುತ್ತಿತ್ತು.

ಪರಮೇಶ್ವರನ ಮೂಲ ರೂಪವೆಂದರೆ ಜ್ಞಾನವು ಎಂದು ನಮ್ಮ ಸಂಸ್ಕೃತಿಯು ಹೇಳುತ್ತದೆ. ಪರಮೇಶ್ವರನೆಂದರೇನು? ಬ್ರಹ್ಮವೆಂದರೇನು? "ಜ್ಞಾನಂ ಬ್ರಹ್ಮ" ಎಂದು ಹೇಳಿದೆ. ಇದಕ್ಕಿಂತ ಉತ್ತಮವಾದ ಪರಮೇಶ್ವರನ ವ್ಯಾಖ್ಯೆಯನ್ನು ಜಗತ್ತಿನಲ್ಲಿ ಯಾರೂ ಮಾಡಿಲ್ಲ. ಈಶ್ವರನ

ಉಪಾಸನೆ ಎಂದರೆ ಜ್ಞಾನದ ಉಪಾಸನೆಯು, ಜ್ಞಾನದ ಉಪಾಸನೆಯನ್ನು ಅನಂತವಾದ ರೂಪಗಳಿಂದ ಮಾಡುವದು. ಸಮಾಜ ಶಾಸ್ತ್ರ, ಖಗೋಲ ಶಾಸ್ತ್ರ, ಭೂಗೋಲ, ಇತಿಹಾಸ, ಆಯುರ್ವೇದ, ತತ್ವಜ್ಞಾನ, ಯೋಗ, ಕರ್ಮಯೋಗ, ಗಣಿತ, ಸಂಗೀತ ಇವು ಎಲ್ಲ ಶಾಸ್ತ್ರಗಳೇ ಆಗಲಿ ಅಥವಾ ವಿಷಯಗಳೇ ಆಗಲಿ, ಇವೆಲ್ಲವೂ ಆ ಜ್ಞಾನರೂಪಿಯಾದ ಪರಮೇಶ್ವರನ ಅಂಶಗಳೇ. ಇವುಗಳ ಪೂಜೆಯೆಂದರೆ ಪರಮೇಶ್ವರನ ಪೂಜೆಯು. ಇವೆಲ್ಲವೂ ಆ ಜ್ಞಾನಸೂರ್ಯನ ಕಿರಣಗಳು. ಮಹಾಭಾರತದಲ್ಲಿಯ ಶ್ಲೋಕಗಳಷ್ಟೇ, ಗಣಿತದಲ್ಲಿಯ ಪ್ರಮೇಯಗಳು ಪೂಜ್ಯವಾದವು. ಶೃತಿ ಸ್ಮೃತಿಗಳ ಅಭ್ಯಾಸದಷ್ಟೇ, ಸೃಷ್ಟಿಶಾಸ್ತ್ರದ ಅಭ್ಯಾಸವು ಪವಿತ್ರವಾದದ್ದು. ಸನಾತನ ಧರ್ಮದ ಈ ವಿಶಾಲವಾದ ದೃಷ್ಟಿಯನ್ನು ನಾವು ಮತ್ತೆ ಕಲಿಯಬೇಕಾಗಿದೆ. ಬೌದ್ಧಿಕ ವಿಕಾಸದ ಕೊನೆಯ ಶಿಖರವನ್ನು ಪುನಃ ಮುಟ್ಟಬೇಕಾಗಿದೆ. ಅಂದರೆ ಮಾತ್ರ ಭಾರತೀಯ ಸಂಸ್ಕೃತಿಯು ಹೊಸ ತೇಜಸ್ಸಿನಿಂದ ಕಂಗೊಳಿಸುವದು. ಕೆಲವೊಂದು ಸಂಸ್ಕೃತಿ ಸಂರಕ್ಷಕ ಚಟುವಟಿಕೆಗಳು ಇಂದು ನಡೆದಿವೆ. ಹೊಸ ವಿಚಾರದ ಗಾಳಿಯ ಸುಳಿವು ಸಹ ಮುಟ್ಟದಂತೆ ಸನಾತನಿಗಳೆಂದು ಅನಿಸಿಕೊಳ್ಳುವ ಈ ಜನರು ಕೋಟೆಗಳನ್ನು ಕಟ್ಟಲಾರಂಭಿಸಿದ್ದಾರೆ. ಇವರು ಸಂಸ್ಕೃತಿ ಸಂರಕ್ಷಕರಲ್ಲ; ಸಂಸ್ಕೃತಿ ಭಕ್ಷಕರು. ಭಾರತೀಯ ಸಂಸ್ಕೃತಿಯ ಹೆಣವನ್ನು ಅಪ್ಪಿಕೊಳ್ಳಲು ಇಚ್ಛಿಸುತ್ತಾರೆ ಇವರು. ಮತ್ತು ಒಳಗಿನ ಪ್ರಾಣವನ್ನು ಹಿಚುಕುತ್ತಿದ್ದಾರೆ. ಇವರು ಸನಾತನಿಗಳಲ್ಲ, ಅಸನಾತನಿಗಳು.

ಸನಾತನವೆಂದರೇನು ? "ಸನಾತನನೋ ನಿತ್ಯನೂತನಃ''-ಯಾವಾಗಲೂ ಹೊಸ ಹೊಸ ರೂಪಗಳನ್ನು ಪ್ರಕಟಿಸುವದೇ ಸನಾತನವು. ಇದೇ ಉಳಿಯುವ ಬದುಕು. ಹೊಸದಾಗಿ ಚಿಗಿಯದೆ ಇದ್ದ ಮರವು ಮರಣ ಹೊಂದಿತೆಂದು ತಿಳಿಯಬೇಕು. ಜ್ಞಾನೇಶ್ವರಿಯ ಕೊನೆಯ ಅಧ್ಯಾಯದಲ್ಲಿ ಜ್ಞಾನೇಶ್ವರರು ಹೇಳಿದ್ದಾರೆ. "ಗೀತಾತತ್ವವು ದಿನಾಲು ಹೊಸದಾಗಿ ಕಾಣುತ್ತದೆ.'' ಗೀತೆಯಲ್ಲಿಯ ಶಬ್ದಗಳ ಅರ್ಥವು ನಮಗೆ ಬೇರೆಯಾಗಿ ಕಾಣುವದು. ಯಾಕಂದರೆ ನಾವು ಆ ಶಬ್ದಗಳನ್ನು ಇಪ್ಪತ್ತನೆಯ ಶತಮಾನದಲ್ಲಿದ್ದ ಪರಿಸ್ಥಿತಿಯನ್ನರಿತು ನೋಡುವೆವು. ಅರ್ಥವು ವಿಕಾಸ ಹೊಂದುತ್ತದೆ. ಶಬ್ದವು ಕಿರಿಯದಿದ್ದರೂ ಅದರಲ್ಲಿ ಅಡಕವಾದ ಅರ್ಥವು ಹಿರಿಯದಿರುತ್ತದೆ. ವಿಚಾರದ ಉತ್ಕ್ರಾಂತಿಯು ಸತತವಾಗಿ ನಡೆದೇ ಇರುತ್ತದೆ.

ಭಾರತೀಯ ಸಂಸ್ಕೃತಿಯ ಭವ್ಯಕಟ್ಟಡವು ಹೊಸ ವಿಚಾರದ ಗಾಳಿಯಿಂದ ಬೀಳುವದೆಂದು ಭಾವಿಸುವವರು ಈ ಸಂಸ್ಕೃತಿಯ ಸಂರಕ್ಷಕರೇ ? ಹೊಸ ವಿಚಾರದ ಗಾಳಿಯಿಂದ ಬೀಳುವಂಥ ಕಟ್ಟಡವಿದ್ದರೆ ಅದು ಉಳಿದಾದರೂ ಪ್ರಯೋಜನವೇನು ? ಸ್ವಲ್ಪ ಸಹ ಗಾಳಿ ಸಹನವಾಗದಂಥ ಕ್ಷಯರೋಗಿಯಂತೆ ನಮ್ಮ ಸಂಸ್ಕೃತಿ ಅದೆ ಎಂಬುದೇ ಅರ್ಥವಾಗುವದಿಲ್ಲವೇ ಇದರಿಂದ ! ಭಾರತೀಯ ಸಂಸ್ಕೃತಿಯು ಇಷ್ಟು ಪೊಳ್ಳಾಗಿದೆಯೋ ? ನನ್ನ ದೃಷ್ಟಿಗಂತೂ ಹಾಗೆ ತೋರುವದಿಲ್ಲ. ಜ್ಞಾನದ ಅನುಭವದ ಅಡಿಗಲ್ಲಿನ ಮೇಲೆ ಕಟ್ಟಿದ ಈ ಭವ್ಯ ಕಟ್ಟಡವು ಎಂದಿಗೂ ಬೀಳುವ, ಅಲೆಯುವ ಭಯವಿಲ್ಲ. ಕೋಟೆಗಳನ್ನು ಕಟ್ಟಿ, ಗೋಡೆಕಟ್ಟಿ ಮುಸುಗಿನಲ್ಲಿ ಎಂದೂ ಇರಲಾರದು. ಮುಸುಗಿನಲ್ಲಿದ್ದು ಪವಿತ್ರವೆಂದು ಅನಿಸಿಕೊಳ್ಳುವದು ಬೇಡ ನಮ್ಮ ಸಂಸ್ಕೃತಿಗೆ. ಹೊಸ ವಿಚಾರಗಳು ನಮ್ಮ ಸಂಸ್ಕೃತಿಗೆ ಬೇಡಾದ ಬದುಕಲ್ಲ. ಅನುಭವದ ಒರೆಗಲ್ಲಿಗೆ ಹಚ್ಚಿದ ಜ್ಞಾನದ ಪಾಯದ ಮೇಲೆ ನಿಂತ ಯಾವ ಸಂಸ್ಕೃತಿಯನ್ನೂ ನಮ್ಮ ಸಂಸ್ಕೃತಿಯು ವಿರೋಧಿಸುವದಿಲ್ಲ.

ಜಗತ್ತಿನಲ್ಲಿ ನಡೆದ ಎಲ್ಲ ಪ್ರಯೋಗಗಳನ್ನು ಭಾರತೀಯ ಸಂಸ್ಕೃತಿಯು ಬಳಸುತ್ತದೆ. ಭಾರತೀಯ ಸಂಸ್ಕೃತಿಯ ಹೆಬ್ಬಾಗಿಲು ತೆರೆದದೆ. ಸಾಮ್ಯವಾದದ ವಿಚಾರಗಳು ಬಂದರೆ ಅದರಲ್ಲಿ ಶ್ರೀಕೃಷ್ಣನ ಬಾಲ್ಯಚರಿತ್ರೆಯನ್ನು ಭಾರತೀಯ ಸಂಸ್ಕೃತಿಯು ಕಾಣುವದು.

ಗೋಕುಲದಲ್ಲಿ ಬೆಣ್ಣೆಯನ್ನು ಕಳವು ಮಾಡಿದ ಶ್ರೀಕೃಷ್ಣನು, ಕಾಲಕೆಳಗೆ ತುಳಿಯಲ್ಪಟ್ಟವರ ಪಕ್ಷವನ್ನು ವಹಿಸಿದ ಶ್ರೀಕೃಷ್ಣನು, ಸಾಮ್ರಾಜ್ಯಗಳನ್ನು ಮಣ್ಣುಮುಕ್ಕಿಸುವ ಶ್ರೀಕೃಷ್ಣನು, ಭಾರತೀಯ ಸಂಸ್ಕೃತಿಯ ಆತ್ಮನನ್ನು ಅರಿತವನಿಗೆ ಸಾಮ್ಯವಾದದಲ್ಲಿ ಕಾಣುವನು. 'ಸತ್ಯಕ್ಕೆ ಅಸತ್ಯಕ್ಕೆ ಸಾಕ್ಷಿಯು ನಮ್ಮ ಮನಸ್ಸೇ.' ಎಂದು ಹೇಳುವ ತುಕಾರಾಮನ ದರ್ಶನವು, 'ನಿಮ್ಮ ಬುದ್ಧಿಗೆ ತಿಳಿದಂತೆ ನಡೆಯಿರಿ' ಎಂದು ಹೇಳುವ ಧ್ಯೇಯಾಸಕ್ತರಾದ ಹೊಸ ವಿಚಾರವನ್ನು ಹರಡುವವರಲ್ಲಿ, ನಿಜವಾದ ಸಂಸ್ಕೃತಿಯ ಉಪಾಸಕನಿಗೆ ಆಗುವದು. ಭಯ, ನಾಶ, ಸಾವು ಈ ಶಬ್ದಗಳ ಗುರುತು ಭಾರತೀಯ ಸಂಸ್ಕೃತಿಗೆ ಇಲ್ಲ. ಯಾಕಂದರೆ ಜ್ಞಾನವು ಅಳಿಯುವದಲ್ಲ. ಮತ್ತು ಅಳಿಯದಂಥ ಜ್ಞಾನವೇ ಈ ಸಂಸ್ಕೃತಿಯ ತಳಪಾಯವಾಗಿದೆ.

ವಿಚಾರಪೂರ್ವಕವಾಗಿಯೇ ಪ್ರತಿಯೊಂದು ಹೆಜ್ಜೆಯನ್ನು ಮುಂದಿ

ಡಲು ಭಾರತೀಯ ಸಂಸ್ಕೃತಿಯು ಹೇಳುತ್ತದೆ. 'ದೃಷ್ಟಿಪೂತಂ ನ್ಯಸೇತ್ ಪಾದಂ ವಸ್ತ್ರಪೂತಂ ಪಿಬೇತ್ ಜಲಂ'—ವಿಚಾರ ಮಾಡಿ ವರ್ತಿಸಿರಿ; ಅರಿವೆಯಲ್ಲಿ ಸೋಸಿ ನೀರು ಕುಡಿಯಿರಿ. ವಿಚಾರವನ್ನು ಯಾವಾಗಲೂ ಜೊತೆಯಲ್ಲಿ ಇಡಲು ನಮ್ಮ ಸಂಸ್ಕೃತಿಯು ಹೇಳುತ್ತಿದೆ. ಧರ್ಮವೆಂದರೇನು? ಪ್ರತಿಯೊಂದು ಕ್ರಿಯೆಯನ್ನು ಕಣ್ಣು ತೆರೆದು ಮಾಡುವದೆಂದರೆ ಧರ್ಮವು. ಮುಂಜಾನೆ ಬೇಗ ಎದ್ದು ಸ್ನಾನ ಸಂಧ್ಯೆಯನ್ನು ಮಾಡುವದಿಷ್ಟೇ ಧರ್ಮದ ಅರ್ಥವಲ್ಲ. ಇಪ್ಪತ್ತನಾಲ್ಕು ತಾಸು ನಮ್ಮಿಂದಾಗುವ ಕರ್ಮಗಳೆಲ್ಲ ಧರ್ಮವು. ಜೀವವಿರುವವರೆಗೆ ಮಾಡುವ ಎಲ್ಲ ಕರ್ಮಗಳೂ ಧರ್ಮವೇ. ಧರ್ಮವೇನು ದೇವರ ಮನೆ ಮೂರ್ತಿಯಲ್ಲಿಯೇ ಇರುವದೊ? ಧರ್ಮವು ಎಲ್ಲೆಡೆಯಲ್ಲಿಯೂ ಅದೆ. ನಾವು ಹೋದಲ್ಲೆಲ್ಲ ನಮಗೆ ಹವೆಯು ಬೇಕು; ಅದರಂತೆ ಧರ್ಮವೂ ಬೇಕು. ಅಡುಗೆಮನೆಯಲ್ಲಿಯೇ ಇರಲಿ, ವಿಧಿಮಂಡಳದಲ್ಲಿಯೇ ಇರಲಿ, ಕಾರಖಾನೆಯಲ್ಲಿಯೇ ಇರಲಿ, ಎಲ್ಲಿ ಇದ್ದರೂ ನಮ್ಮ ಕರ್ಮಗಳು ಧರ್ಮಮಯವಿರಬೇಕು.

ಧರ್ಮಮಯವೆಂದರೆ ವೇದಮಯ, ವಿಚಾರಮಯವಿರಬೇಕು. ಅಂದರೆ ಪ್ರತಿಯೊಂದು ಕೆಲಸವನ್ನು ತಿಳಿದು ಮಾಡಬೇಕು. ಆದರೆ ಬುದ್ಧಿಯು ಶುದ್ಧವಿರಬೇಕಾದರೆ ಹೃದಯವೂ ಬೇಕು. ಹೃದಯವು ಶುದ್ಧವಿರಬೇಕಾದರೆ ಬುದ್ಧಿಯೂ ಬೇಕು. ಹೃದಯ ಮತ್ತು ಬುದ್ಧಿಗಳ ತನ್ಮಯತೆಯಲ್ಲಿ ಹುಟ್ಟಿದ ಮಹಾವಿಚಾರವೆಂದರೆ ಧರ್ಮವು. ಈ ರೀತಿ ತನ್ಮಯತೆ ಇದ್ದವರನ್ನು ನಾವು ಧರ್ಮಸಂಸ್ಥಾಪಕರೆಂದು ಕರೆಯುತ್ತೇವೆ. ಒಬ್ಬನೇ ಧರ್ಮಸಂಸ್ಥಾಪಕನಿರುತ್ತಾನೆಂದು ನಮ್ಮ ಸಂಸ್ಕೃತಿಯು ಒಪ್ಪುವದಿಲ್ಲ. ಸಮರ್ಥ ರಾಮದಾಸರು ಹೇಳಿದ್ದಾರೆ- "ಧರ್ಮಸಂಸ್ಥಾಪನೆಯನ್ನು ಮಾಡುವ ನರರು ಹಿಂದೆ ಆಗಿದ್ದಾರೆ. ಮುಂದೆ ಆಗುವರು.'' ಆಯಾ ಕಾಲದಲ್ಲಿದ್ದ ಪರಿಸ್ಥಿತಿಯನ್ನು ಕೂಲಂಕಷವಾಗಿ ವಿಚಾರ ಮಾಡಿ, ಬಹುಜನ ಸಮಾಜದ ಸುಖ-ದುಃಖಗಳನ್ನು ಅರಿತು, ಮಹಾಪುರುಷರು ಯುಗಧರ್ಮವನ್ನು ಕೊಡುತ್ತಾರೆ. ಆ ಕಾಲಕ್ಕೆ ತಕ್ಕ ದೃಷ್ಟಿಯನ್ನು ಕೊಡುತ್ತಾರೆ ಮತ್ತು ಹೊಸ ವಿಚಾರಗಳನ್ನು ನೀಡುತ್ತಾರೆ. ಇದು ಧರ್ಮದ ಬೆಳವಣಿಗೆಯ ರೀತಿಯು.

ಭಾರತೀಯ ಧರ್ಮವು ಬೆಳೆಯುವ ಧರ್ಮವು. ಹೊಸದನ್ನು ತನ್ನದಾಗಿ ಮಾಡಿಕೊಂಡು ಮುಂದುವರಿಯುತ್ತದೆ. ಹೊಸ ಹೊಸ ಕ್ಷೇತ್ರದಲ್ಲಿ

ನುಗ್ಗಿ ಜ್ಞಾನವನ್ನೆಲ್ಲ ಬೆರಿಸಿಕೊಂಡು ಸಮಾಜ ಧಾರಣೆಯನ್ನು ಮಾಡು ವದು. ವಿಚಾರವಿಲ್ಲದೆ ಸಮಾಜವು ನಿಲ್ಲುವ ಬಗೆ ಹೇಗೆ? ಜ್ಞಾನವು ಶಕ್ತಿ ಯಾಗಿದೆ. ಸನಾತನ ಧರ್ಮವು ಅದನ್ನು ಸ್ವೀಕರಿಸದೆ ಹೇಗೆ ಬಿಡುವದು?

ಕೆಂಪಾದ ಸೂರ್ಯನನ್ನು ಹಿಡಿಯಲಿಚ್ಛಿಸುವ ಹನುಮಂತನಂತೆ, ಭಾರತೀಯ ಸಂಸ್ಕೃತಿಯು ಕ್ಷಿತಿಜದ ಮೇಲೆ ಮೂಡುವ ಭವ್ಯವಾದ, ಹೊಸದಾದ, ದಿವ್ಯವಾದ ವಿಚಾರಗಳನ್ನು ಅಪ್ಪಿಕೊಳ್ಳಲು ಬಯಸುತ್ತದೆ. ಭಾರತೀಯ ಸಂಸ್ಕೃತಿಯು ಒಂದೆಡೆಯಲ್ಲಿ ಕೂಡ್ರುವವರ ಸಂಸ್ಕೃತಿಯಲ್ಲ. ಅದು ಗತಿಶೀಲವಾದದ್ದು, ಮುಂದುವರಿಯುವಂತಹದು. ಅದು ಎಲ್ಲಿಯೂ ನಿಲ್ಲುವಂತಿಲ್ಲ. ದಿನಾಲು ಸತ್ಯದ ಹೊಸ ಹೊಸ ದರ್ಶನವನ್ನು ಪಡೆಯಲು ಹೆಣಗಾಡುತ್ತದೆ. "ಈಗ ಸಾಕು" ಎಂಬ ಉದ್ಗಾರಗಳನ್ನು ಸತ್ಯ ಸಂಶೋಧಕರು ಎಂದಿಗೂ ತೆಗೆಯುವದಿಲ್ಲ. ಅನಂತ ಕ್ಷೇತ್ರವು ಅವರ ಕಣ್ಣೆದುರಿಗೆ ಅದೆ. ಮಹಾತ್ಮಾ ಗಾಂಧಿಯವರ ಜೀವನವನ್ನೇ ನೋಡಿರಿ. ತಮ್ಮ ಬುದ್ಧಿಯ ದೀಪದ ಸಹಾಯದಿಂದ, ಅವರು ಸೇರದೆ ಇದ್ದ ಕ್ಷೇತ್ರವೇ ಪ್ರಪಂಚದಲ್ಲಿ ಇಲ್ಲ. ರಾಜಕೀಯ ರಂಗದಲ್ಲಿ ಹೊಸ ಪ್ರಯೋಗ ಗಳನ್ನು ನಡೆಸಿಯೇ ಇದ್ದಾರೆ. ರಾಷ್ಟ್ರೀಯ ಶಿಕ್ಷಣ, ಗ್ರಾಮೋದ್ಯೋಗ, ಸಮಾಜ ಸುಧಾರಣೆ, ಆರೋಗ್ಯ, ಊಟಉಡಿಗೆ ಮತ್ತು ಬ್ರಹ್ಮಚರ್ಯಾದಿ ಮನಸ್ಸಿಗೆ ಸಂಬಂಧಿಸಿದ ವಿಷಯಗಳೇ ಇರಲಿ ಇವೆಲ್ಲ ಕ್ಷೇತ್ರಗಳಲ್ಲಿ ಮಹಾತ್ಮಾಜಿಯವರು ಸೇರಿದ್ದಾರೆ. ಅವರು ಬುದ್ಧಿಯ ಉಪಾಸಕರು; ಅವರು ನಿಜವಾದ ಸನಾತನೀ ವೇದಧರ್ಮದ ಅನುಯಾಯಿಗಳು.

ಬುದ್ಧಿವಂತ ಮನುಷ್ಯನು ನಿರ್ಭಯನಿರುತ್ತಾನೆ. ಅವನು ಯಾರ ಎದುರೂ ಬಾಲ ಬಡಿಯುತ್ತ ಕೂಡ್ರುವದಿಲ್ಲ. ನಿಸ್ಸಂದೇಹವಾಗಿ ಮುಂದೆ ಹೆಜ್ಜೆಯನ್ನಿಡುವನು. ಪುರಾಣ ಮತವಾದಿಗಳು "ಕಲಿಯುಗ ಕಲಿಯುಗ" ಎಂದೆನ್ನುತ್ತಾರೆ. ಹೊಸ ವಿಚಾರಿಗಳು "ಯಂತ್ರಯುಗ ಯಂತ್ರಯುಗ" ಎಂದು ಜಪಿಸುತ್ತಾರೆ. ಆದರೆ ಮಹಾತ್ಮಾಜಿಯವರು "ನಾನು ನನ್ನ ಯುಗವನ್ನೇ ಆರಂಭಿಸುವೆನು. ಚರಕಾ ಯುಗವನ್ನು ತರುವೆನು. ಗ್ರಾಮೋದ್ಯೋಗ ಯುಗವನ್ನಾರಂಭಿಸುವೆನು." ಹೀಗೆನ್ನುತ್ತಿರಬೇಕು. ಬುದ್ಧಿವಂತರು ಎರಡನೆಯವರು ಅಂದದ್ದನ್ನು ಅನ್ನುವದಿಲ್ಲ. ತೀಡಿದ್ದನ್ನೇ ತೀಡುವದಿಲ್ಲ. ಅವನು ಸ್ವತಃ ವಿಚಾರದ ಯುಗವನ್ನು ತನ್ನ ಸುತ್ತಲೂ ನಿರ್ಮಾಣ ಮಾಡಲು ಉತ್ಸುಕನಿರುತ್ತಾನೆ.

ಸ್ವತಂತ್ರ ಬುದ್ಧಿಯು ಜಗತ್ತಿನಲ್ಲಿ ತೀರ ಕಡಿಮೆ. ಸನಾತನಿಗಳು ಹತ್ತು ಸಾವಿರ ವರ್ಷಗಳ ಹಿಂದೆ ಬಾಳಿದ ಋಷಿಗಳ ಗುಲಾಮರಾಗಿದ್ದಾರೆ. ಆದರೆ ಹೊಸ ಪೀಳಿಗೆಯವರು ಪಾಶ್ಚಾತ್ಯ ಪಂಡಿತರ ಗುಲಾಮರಾಗಿದ್ದಾರೆ. ಆದರೆ ಭಾರತೀಯ ಸಂಸ್ಕೃತಿಯು ನಿಮ್ಮ ಸ್ವಂತ ದೀಪವನ್ನು ಹಚ್ಚಲು ಹೇಳುತ್ತದೆ. ನಿಮ್ಮ ದೇಶದ ಪರಂಪರೆಯ, ನೆರೆಹೊರೆಯ ದೇಶಗಳ ವಿಚಾರವನ್ನು ಮಾಡಿ, ನಿಮ್ಮ ಸಮಾಜಕ್ಕೆ ಕಲ್ಯಾಣವನ್ನೀಯುವದನ್ನು ಆರಿಸಿಕೊಳ್ಳಿರಿ.

ಸತ್ಯವನ್ನರಿಯುವ ಹಸಿವು, ಸತ್ಯಕಾಮನ ಈ ಭೂಮಿಯಲ್ಲಿ ಹುಟ್ಟಿದೆಯೋ ಇಲ್ಲವೋ ?

ಮಾನವ ಜಾತಿಯವರು ಆರಂಭಿಸಿದ ಎಲ್ಲ ಉದ್ಯೋಗ ಮತ್ತು ವಿಚಾರ ಕ್ಷೇತ್ರಗಳಲ್ಲಿ ನಾವು ನುಗ್ಗಬೇಕಾಗಿದೆ. ಯಂತ್ರ ಶಾಸ್ತ್ರ, ಕಟ್ಟಡಗಳ ಶಾಸ್ತ್ರ, ಶಿಲ್ಪ ಶಾಸ್ತ್ರ, ಶಿಕ್ಷಣ ಶಾಸ್ತ್ರ, ಸಾಹಿತ್ಯ, ಕಲೆ, ಆಟನೋಟ, ಸಮಾಜ ಶಾಸ್ತ್ರ, ಅರ್ಥಶಾಸ್ತ್ರ, ಮಾನವಶಾಸ್ತ್ರ–ಸತ್ಯದ ಸಾಕ್ಷಾತ್ಕಾರವಾದಂಥ ಈ ಕ್ಷೇತ್ರಗಳಲ್ಲಿ ದಣಿಯದೆ, ಸೋಲದೆ ದುಮುಕುವ ಜನರು ಭಾರತೀಯ ಸಂಸ್ಕೃತಿಯ ಅರಿವಿನಲ್ಲಿ ಹುಟ್ಟಬೇಕಾಗಿದೆ. ಸಹಕಾರಿ ಚಳವಳಿಯಾಗಲೀ, ಹೊಸ ಉದ್ಯೋಗವನ್ನೆ ಆರಂಭಿಸುವದಾಗಲಿ, ಕೂಲಿಕಾರರ ಸಂಘಟನೆಯೇ ಆಗಲಿ, ನಾವು ಎಲ್ಲ ಕಡೆಯಲ್ಲಿ ಹೋಗಲು ಸಿದ್ಧರಾಗಬೇಕು. ಅಭ್ಯಾಸನನ್ನು ಮಾಡಲೇಬೇಕು. ಪ್ರಯೋಗಗಳನ್ನಾದರೂ ಕೈಕೊಳ್ಳಲೇಬೇಕು. ಇದೇ ದೇವರ ಪೂಜೆ. ದೇವರು ನಮಗೆ ಕೊಟ್ಟ ಶಕ್ತಿಯನ್ನು ಬೆಳೆಸುವದೆಂದರೆ ಅವನ ಪೂಜೆಯು. ಪರಮೇಶ್ವರನು ಇತ್ತ ಬುದ್ಧಿಯ ವಿಕಾಸವನ್ನು ಮಾಡುವದೆಂದರೆ ನಿಜವಾದ ಧರ್ಮವನ್ನು ಆಚರಿಸಿದಂತೆ.

ಆಯಾ ಕಾಲದ ಸಮಸ್ಯೆಗಳನ್ನು ಆ ಕಾಲದ ವಿಚಾರವಂತರು ಬಿಡಿಸುವದಿರುತ್ತದೆ. ಅರ್ವಾಚೀನ ಬುದ್ಧಿಯ ಇದಿರು ಅರ್ವಾಚೀನ ಸಮಸ್ಯೆಗಳಿವೆ. ಭಾರತೀಯ ಸಂಸ್ಕೃತಿಗೆ ಇದು ಅಸಾಧ್ಯವೇ ? ಜಗತ್ತಿನಲ್ಲಿ ಎಲ್ಲ ರಾಷ್ಟ್ರಗಳ ಜೊತೆಗೆ ಸಮಾನತೆಯಿಂದ ಕೂಡ್ರುವ ಅಧಿಕಾರವು, ವೇದಘೋಷದಿಂದಾಗಲೀ, ಪೂರ್ವಜರನ್ನು ಹೊಗಳಿಯಾಗಲೀ, ಸಿಕ್ಕುವಂತಿಲ್ಲ. ಹೊಸ ಸಮಸ್ಯೆಗಳಿಗೆ ನಾವು ಕೈಹಾಕಲೇಬೇಕು. ಪ್ರಯೋಗಾಲಯಗಳನ್ನು ಅಂದರೆ ಹೋಮಶಾಲೆಗಳನ್ನು ನಾವು ಆರಂಭಿಸಬೇಕು. ಸತ್ಯದೇವನ ಎಲ್ಲ ಅಂಗಾಂಗಗಳನ್ನು ತಿಳಿದುಕೊಳ್ಳುವ ಪ್ರಯೋಗಗಳು ಸುರುವಾಗಲಿ.

ಇನ್ನು ನಾವು ಎಲ್ಲಿಯೂ ನಿಲ್ಲಬಾರದು. ವಿವಿಧ ಕ್ಷೇತ್ರಗಳಲ್ಲಿ ನುಗ್ಗಬೇಕು. ಗ್ರಾಮ ಸಂಘಟನೆ, ಖಾದಿ ಶಾಸ್ತ್ರ, ಸಮಾಜ ಶಾಸ್ತ್ರ, ಹೊಸ ನೀತಿ, ಯಾವದೇ ಕ್ಷೇತ್ರವಿರಲಿ, ಆ ವಿಷಯಗಳನ್ನು ಆಳವಾಗಿ ವಿಚಾರಿಸಿ, ಹೊಸ ಜ್ಞಾನವನ್ನು ನಿರ್ಮಿಸೋಣ. ಅಲ್ಲಲ್ಲಿ ಸಂಗ್ರಹಾಲಯ, ಪ್ರಯೋಗಾಲಯ, ಮತ್ತು ಗ್ರಂಥಾಲಯಗಳನ್ನು ನಿಲ್ಲಿಸುವಾ! ಬೌದ್ಧಿಕ ಮತ್ತು ವೈಚಾರಿಕ ಸಹಕಾರ್ಯವನ್ನು ದೊರಕಿಸುವಾ. ಜ್ಞಾನವು ಸಹಕಾರದಿಂದ ದೊರಕುವ ವಸ್ತುವು. ಸಹಕಾರವೇ ಪ್ರತಿಯೊಂದು ವಿಚಾರದ ಮೂಲವು. ಹಿಂದಿನ ನೂರಾರು ವಿಚಾರಗಳ ತಳಪಾಯದ ಮೇಲೆ ಹೊಸ ವಿಚಾರವು ನಿಲ್ಲುತ್ತದೆ. ಗಾಂಧಿಯವರು ಟಿಳಕರ ಕಲ್ಪನೆಗಳನ್ನು ಅರಳಿಸುವರು. ಜವಾಹರಲಾಲರು ಗಾಂಧಿಯವರ ವಿಚಾರಗಳನ್ನು ಮುಂದಕ್ಕೊಯ್ಯುವರು. ಇದು ಜ್ಞಾನದ ಪ್ರತಿಯೊಂದು ಕ್ಷೇತ್ರದಲ್ಲಿಯ ರೀತಿಯು. ಇಲ್ಲಿ ಅಹಂಕಾರಕ್ಕೆ ಅನುವು ಇಲ್ಲ. ಇಲ್ಲಿ ಜ್ಞಾನೇಶ್ವರನ ಪೂಜೆಯನ್ನು ನಮ್ರತೆಯಿಂದ ಮತ್ತು ನಿಷ್ಠೆಯಿಂದ ಮಾಡಲಾಗುತ್ತದೆ.

ಭಾರತೀಯ ಸಂಸ್ಕೃತಿಯು ಹೇಳುತ್ತಲಿದೆ— "ಮುದ್ದು ಮಕ್ಕಳೇ! ಜಗತ್ತಿನಲ್ಲಿ ಜ್ಞಾನವನ್ನು ಗಳಿಸುವದಕ್ಕಾಗಿ ಪ್ರಾಣಾರ್ಪಣವನ್ನು ಮಾಡಲು ಸಿದ್ಧರಾದ ನೂರಾರು ಜನರು ಹುಟ್ಟುತ್ತಾರೆ. ಅದರಂತೆ ನಮ್ಮಲ್ಲಿಯೂ ಆಗಲಿ. ವಿಚಾರ ಪೂಜೆಯು ಇಲ್ಲಿಯೂ ಆರಂಭವಾಗಲಿ."

ವಿಚಾರಗಳು ಖಡ್ಗದ ಅಲಗಿಗಿಂತ ಹದನವಾದವು. ವಿಚಾರವು ಹೊಸ ಜೀವನವನ್ನೇ ಕೊಡುತ್ತದೆ. ಅಗ್ನಿಯನ್ನು ಪ್ರಜ್ವಲಿಸಬೇಕು. ವಿಚಾರದ ಬೆಂಕಿಯು ಮತ್ತೆ ಉರಿಯದೆ ಕಶ್ಮಲಗಳು ಸುಟ್ಟು ಹೋಗುವಂತಿಲ್ಲ.

ಭಾರತದಲ್ಲಿ ಇಂದು ಕ್ರಾಂತಿಯ ಸಮಯವೊಂದು ಒದಗಿದೆ. ಈ ಕ್ರಾಂತಿಯು ಬರೇ ರಾಜಕೀಯದಲ್ಲಿ ಒಂದೇ ಅಲ್ಲ. ಇದೊಂದು ಶತಮುಖವಾದ ಕ್ರಾಂತಿಯು. ಇಡೀ ಪ್ರಪಂಚವನ್ನೆ ಹುಡುಕುವದದೆ, ನೋಡುವದದೆ; ಎಲ್ಲ ಕಲ್ಪನೆಗಳನ್ನು ಪರೀಕ್ಷಿಸಬೇಕಾಗಿದೆ. ಹೊಸ ಕಾಲ, ಹೊಸ ಕಣ್ಣು; ದುಡಿಯುವವರಿಗೆ ಒಂದು ತುತ್ತು ಅನ್ನವು ಹೇಗೆ ಸಿಕ್ಕೀತೆಂದು ನೋಡುವುದು ಇಂದಿನ ಧರ್ಮವಾಗಿದೆ. ರಾಷ್ಟ್ರಕ್ಕೆ ಉಪಯುಕ್ತವಾದ ಯಾವದಾದರೊಂದು ಹೊಸ ಉದ್ಯೋಗವನ್ನು ಕೈಕೊಂಡು ಅದರಲ್ಲಿಯೆ ತನ್ಮಯರಾಗುವದೆಂದರೆ ಸಾಧನೆಯು.

ನಿರ್ಮಲ ವಿಚಾರ ಮತ್ತು ಶುದ್ಧ ದೃಷ್ಟಿ ಇವುಗಳ ನಿತಾಂತ ಅಗತ್ಯವು ಇಂದು ನಮಗಿದೆ. ಸ್ವಾರ್ಥ, ಉಲಕೋಚಿತನ, ಅಧೀರತೆ, ಸೋಮಾರಿತನ ನಮಗೆ ಬೇಡ. ನಿರ್ಮಲತೆಗೆ ಆಳವಾದ ಅಭ್ಯಾಸವು ಅವಶ್ಯವಾದದ್ದು. ಪ್ರಯತ್ನವೂ ಬೇಕು, ದುಡಿತವೂ ಬೇಕು; ಸಮಾಜ ವಿಷಯಕವಾದ ಪ್ರೇಮವೂ, ಕಳಕಳಿಯೂ ಇರಬೇಕು. ಸಮಾಜವು ಹೇಗೆ ಸುಖಿಯಾದೀತು? ಎಂಬ ಕಳಕಳಿಯು ನಿಮ್ಮಲ್ಲಿದ್ದರೆ ನೀವು ವಿಚಾರವನ್ನು ಮಾಡುವಿರಿ. ಆಗ ನಿಮಗೆ ವಿಚಾರವು ತೋಚುವದು. ಆ ಮೇಲೆ ಅದು ಆಚಾರದಲ್ಲಿ ಬರುವದು. ಈ ವಿಚಾರಕ್ಕೆ ಮತ್ತು ಆಚಾರಕ್ಕೆ ಯುಗಧರ್ಮವೆನ್ನುವರು.

---

# ಪ್ರಯೋಗಗಳನ್ನು ಮಾಡುವ ಋಷಿಗಳು

ಭಾರತೀಯ ಸಂಸ್ಕೃತಿಯು ಬುದ್ಧಿಪ್ರಧಾನವಾದ ಸಂಸ್ಕೃತಿಯು. ಆದರೆ ಬರೇ ಬುದ್ಧಿಯಷ್ಟೇ ಅಲ್ಲ, ಹೃದಯದ ಕರೆಯನ್ನು ಸಹ ಅದು ಲಾಲಿಸಿದೆ. ನಿರ್ಮಲ ಹೃದಯ ಮತ್ತು ಬುದ್ಧಿ ಇವು ವಸ್ತುತಃ ಒಂದೇ. ನಿರ್ಮಲ ಬುದ್ಧಿಯಲ್ಲಿ ಸ್ನೇಹವಿರುತ್ತದೆ, ಮತ್ತು ನಿರ್ಮಲ ಹೃದಯದಲ್ಲಿ ಬುದ್ಧಿಯ ಪ್ರಕಾಶವು ಕಂಡುಬರುತ್ತದೆ. ನಿರ್ಮಲ ಹೃದಯ ಮತ್ತು ಬುದ್ಧಿ ಇವು ನಮ್ಮ ಸಂಸ್ಕೃತಿಯ ಆಧಾರಸ್ತಂಭಗಳು.

ಉದಾರ ವಿಚಾರಗಳ ಮೇಲೆ ಆಧಾರ ಪಡೆದದ್ದರಿಂದ ಈ ಸಂಸ್ಕೃತಿಯು ಹಲವಾರು ಬದಲಾವಣೆಗಳನ್ನು ಹೊಂದಿದೆ. ಧರ್ಮದಲ್ಲಿ ಎರಡು ಭಾಗಗಳಿರುತ್ತವೆ. ಒಂದು ಶಾಶ್ವತ ತತ್ವದ ಭಾಗವು, ಇನ್ನೊಂದು ಅಶಾಶ್ವತ ತತ್ವದ್ದು. ಇದನ್ನು ನಾವು ಜಗತ್ತಿನಲ್ಲಿ ಎಲ್ಲ ಕಡೆಯಲ್ಲಿಯೂ ಕಾಣಬಹುದು. ನಮ್ಮ ಶರೀರವು ಬದಲಾಗುತ್ತದೆ. ಆದರೆ ಆತ್ಮನು ಬದಲಾಗದೆ ಹಾಗೆಯೇ ಇರುತ್ತಾನೆ. ಸಮಾಜದಲ್ಲಿ ವ್ಯಕ್ತಿಗಳು ಮೂಡುತ್ತವೆ, ಮಡಿಯುತ್ತವೆ. ಆದರೆ ಸಮಾಜವು ಚಿರಂತನವಾದದ್ದು. ನದಿಯ ಪ್ರವಾಹದಲ್ಲಿಯ ಬಿಂದುಗಳು ಪ್ರತಿಕ್ಷಣಕ್ಕೆ ಬದಲಾಗುತ್ತವೆ. ಆದರೆ ಪ್ರವಾಹವು ಶಾಶ್ವತವಾದದ್ದು.

ಧರ್ಮದ ಯಮರೂಪವಾದ ಭಾಗವು ಬದಲಾವಣೆ ಹೊಂದುವದಿಲ್ಲ. ಆದರೆ ನಿಯಮರೂಪವಾದ ಭಾಗವು ಬದಲಾಗುತ್ತದೆ. ಧರ್ಮದ ಯಮಭಾಗವೆಂದರೆ ಎಂದಿಗೂ ಬದಲಾಗದ ಭಾಗವು. ಸತ್ಯ, ಅಹಿಂಸೆ, ಸಂಯಮ, ದಯೆ, ಪ್ರೇಮ, ಪರೋಪಕಾರ, ಬ್ರಹ್ಮಚರ್ಯ ಇವೇ ಮೊದಲಾದುದಕ್ಕೆ ಯಮವೆಂದು ಕರೆಯುವರು. ಸಂಧ್ಯಾವಂದನೆ, ಸ್ನಾನ, ಗಂಧ ಇವು ನಿಯಮ ಭಾಗಕ್ಕೆ ಹೊಂದಿದವು. ಯಮವು ಅಚಲ ಧರ್ಮವು, ಮತ್ತು ನಿಯಮವು ಚಲಧರ್ಮವು. ಯಮದ ವಿಚಾರ ಬಿಟ್ಟು, ನಿಯಮಗಳಿಗೆ ಹೆಚ್ಚು ಮಹತ್ವವು ಪ್ರಾಪ್ತವಾದೊಡನೆ ಸಮಾಜವು ನಾಶ ಹೊಂದುವದು ಖಂಡಿತವೆಂದು ಸ್ಮೃತಿಗಳು ಸಾರಿ ಹೇಳುತ್ತವೆ. ಆದರೆ ಈ ಸ್ಮೃತಿ ವಚನವು ನಮ್ಮ ನೆನಸಿನಲ್ಲಿಯೇ ಇಲ್ಲ. ಆದರೆ ಇಂದು ನಾವು ನಿಯಮದ ಸ್ತೋಮವನ್ನು ಬೆಳಿಸಿದ್ದೇವೆ. ಜನಿವಾರ, ಗಂಧ, ಚಂಡಿಕೆ ಇವೇ ಧರ್ಮವಾಗಿವೆ. ಯಮದ ಅರಿವೇ ಇಲ್ಲ ನಮಗೆ. ನಿಯಮವೇ ಜೀವನ ಸರ್ವಸ್ವವಾಗಿದೆ.

ಚಲವಸ್ತುವನ್ನು ಅಚಲವೆಂದು, ಅಚಲವಾದದ್ದನ್ನು ಚಲವೆಂದು ಭಾವಿಸಿದಾಗ ಧರ್ಮದ ಸುಂದರವಾದ ಸ್ವರೂಪವು ಅಳಿದುಹೋಗುತ್ತದೆ. ಹೆಜ್ಜೆ ಹೆಜ್ಜೆಗೆ ನಮಗೆ ನಿಯಮಗಳನ್ನು ಬದಿಗಿಡಬೇಕಾಗುತ್ತದೆ. ಆದರೆ ನಾವು ಹೀಗೆ ಮಾಡುವದಿಲ್ಲ. ನಮ್ಮ ಪೂರ್ವಜರು ಹೀಗೆ ಮಾಡುತ್ತಿರಲಿಲ್ಲ. ಅವರು ನಿಯಮಗಳನ್ನು ಯಾವಾಗಲೂ ಯಮದ ಅಂಕಿತದಲ್ಲಿಯೇ ಇಡುತ್ತಿದ್ದರು.

ಒಂದು ಕಾಲದಲ್ಲಿ ನಿಯೋಗ ಪದ್ಧತಿಯು ಧರ್ಮವಾಗಿತ್ತು. ಆರ್ಯಾವರ್ತದಲ್ಲಿ ಭೂಮಿಯು ವಿಪುಲವಿದ್ದಾಗ, ಮತ್ತು ಜನಸಂಖ್ಯೆಯು ಕಡಿಮೆ ಇದ್ದಾಗ ನಿಯೋಗವು ನಿಯಮವಾಗಿತ್ತು. ಮುಂದೆ ಈ ನಿಯಮವು ಬದಲಾವಣೆ ಹೊಂದಿತು. ಮತ್ತು ಕೆಲಕಾಲದ ಮೇಲೆ ಅದು ನಷ್ಟವಾಯಿತು. ಆ ಆ ಕಾಲದಲ್ಲಿ ಸಮಾಜ ಧಾರಣೆಯು ಯೋಗ್ಯವಾಗಿರಬೇಕೆಂದು ಆಯಾ ಕಾಲಕ್ಕೆ ಉಪಯುಕ್ತವಾದ ನಿಯಮಗಳನ್ನು ಸಮಾಜದ ವಿಚಾರವಂತ ಮುಂದಾಳುಗಳು ಮಾಡುತ್ತಿದ್ದರು. ಸ್ತ್ರೀಯರ ಸಂಖ್ಯೆಯು ಕಡಿಮೆಯಾದರೆ ಒಬ್ಬ ಸ್ತ್ರೀಯನ್ನು ಅನೇಕರು ಪತ್ನಿಯೆಂದು ಲಗ್ನವಾಗುವದು ನೀತಿನಿಯಮವಾಗುವದು. ಇದೇ ರೀತಿ ಸ್ತ್ರೀಯರು ಹೆಚ್ಚಾಗಿ ಪುರುಷರು ಕಡಿಮೆಯಾದರೆ ಬಹುಪತ್ನಿತ್ವವು ನೀತಿನಿಯಮವಾಗುವದು. ಅರಬಸ್ತಾನ

ದಲ್ಲಿ ಈ ರೀತಿ ಪೈಗಂಬರರು ಹೇಳಿದರು. ಈ ರೂಢಿಗಳು, ನಿಯಮಗಳು ಮತ್ತು ನಡೆವಳಿಕೆಗಳು ಆಯಾ ಕಾಲಕ್ಕನುಸರಿಸಿ ಇರುತ್ತವೆ. ಸಮಾಜದ ಸ್ಥಿತಿಯೊಡನೆ ಅವೂ ಬದಲಾವಣೆಯನ್ನು ಹೊಂದುತ್ತವೆ.

ಪ್ರಾಚೀನ ಕಾಲದ ಇತಿಹಾಸದ ಅವಲೋಕನೆಯನ್ನು ಮಾಡಿದರೆ ನೂರಾರು ಬದಲಾವಣೆಗಳನ್ನು ಕಾಣಬಹುದು. ವೇದಕಾಲದಲ್ಲಿ ಅಣ್ಣ ತಂಗಿಯರ ಮದುವೆಯಾದ ಉದಾಹರಣೆಗಳು ಅವೆ. ಯಮ ಮತ್ತು ಯಮೀ ಇವರ ಸಂವಾದವು ಪ್ರಸಿದ್ಧವದೆ. ಯಮಿಯು ತನ್ನ ಅಣ್ಣನಿಗೆ ಕೇಳುತ್ತಾಳೆ- "ಅಣ್ಣಾ, ನೀನು ನನ್ನನ್ನು ಏಕೆ ಮದುವೆಯಾಗುವದಿಲ್ಲ ?" ಯಮನು ಉತ್ತರವಿತ್ತನು—"ಮೊದಲು ಹೀಗೆ ಮಾಡುತ್ತಿದ್ದರು. ಆದರೆ ಈಗ ಹೀಗೆ ಮಾಡುವದು ಅಧರ್ಮವಾಗಿದೆ. ಜನರು ನಮ್ಮನ್ನು ದೂಷಿಸುವರು.'' ಸಮಾಜವು ನಿಯಮಬದ್ಧವಾಗುತ್ತಿತ್ತು. ಸಮಾಜವು ಪ್ರಯೋಗಗಳನ್ನು ಏರ್ಪಡಿಸುತ್ತಿತ್ತು. "ಸಪ್ತ ಮರ್ಯಾದಾ ಕವಯಸ್ತತಕ್ಷುಃ" "ಈ ಏಳು ಮರ್ಯಾದೆಗಳನ್ನು ಜಾಣರು ಹಾಕಿಕೊಟ್ಟಿದ್ದಾರೆ." ಎಂಬ ವಚನವಿದೆ. ಈ ಏಳು ಮರ್ಯಾದೆಗಳನ್ನು ಉಲ್ಲಂಘಿಸುವದು ಪಾಪವೆಂದು ತಿಳಿಯುತ್ತಿದ್ದರು. ಆ ಕಾಲದಲ್ಲಿಯ ಕವಿಗಳು ಅಂದರೆ ಜಾಣರು ಸಮಾಜದ ಪರಿಸ್ಥಿತಿಯನ್ನು ವಿಶಾಲ ಮತ್ತು ಸೂಕ್ಷ್ಮ ದೃಷ್ಟಿಯಿಂದ ಪರೀಕ್ಷಿಸಿ ಹೊಸ ನಿಯಮಗಳನ್ನೂ ಮರ್ಯಾದೆಗಳನ್ನೂ ಹಾಕಿಕೊಡುತ್ತಿದ್ದರು. "ಉಪೈಮಿ ಚಿಕಿತುಷಿ ಜನಾಯ" ಎಂದು ವಶಿಷ್ಠ ಋಷಿಯು ಒಂದು ಸೂಕ್ತದಲ್ಲಿ ಹೇಳಿದ್ದಾನೆ. ''ಚಿಕಿತ್ಸೆಯನ್ನು ಮಾಡುವ ಜಾಣರ ಕಡೆಗೆ ನನ್ನ ತಪ್ಪಾವದೆಂದು ತಿಳಿದುಕೊಳ್ಳಲು ಹೋಗುತ್ತೇನೆ.'' ಸಮಾಜದಲ್ಲಿ ಇಂಥ ಮಹಾತ್ಮರು ಇದ್ದರು. ಅವರನ್ನು ವಿಚಾರಿಸಲಾಗುತ್ತಿತ್ತು. ನಾಗಪೂರದ ವಿದ್ವದ್ ರತ್ನರಾದ ಡಾ. ದಪ್ತರಿಯವರು ಬರೆದಿದ್ದಾರೆ. "ಆಯಾ ಕಾಲದ ಸಪ್ತರ್ಷಿಗಳು ಹೊಸ ಧರ್ಮವನ್ನು ಕೊಡುತ್ತಾರೆ. ಮನು ಮತ್ತು ಸಪ್ತರ್ಷಿಗಳು ಯುಗಧರ್ಮವನ್ನು ಹೇಳುತ್ತಿದ್ದರು. ಆ ಏಳು ಜನರು ಒಂದು ಮುಖದಿಂದ ಹೇಳಿದ್ದು ಆಯಾ ಕಾಲದಲ್ಲಿಯ ಯುಗಧರ್ಮವಾಗುತ್ತಿತ್ತು."

ಉದಾಹರಣೆಗಾಗಿ ಇವತ್ತಿನ ಆಂದೋಲನದಲ್ಲಿ ಯೋಗ್ಯ ಧರ್ಮವು ಬೇಕಾಗಿದ್ದರೆ, ಭಾರತದಲ್ಲಿಯ ಏಳು ಹಿರಿದಾದ ಪುರುಷರನ್ನು ಒಂದೆಡೆ ಕೂಡಿಸಬೇಕು. ಅವರು ಒಮ್ಮತದಿಂದ ಹೇಳಿದ್ದನ್ನು ಯುಗಧರ್ಮವೆಂದು

ತಿಳಿಯಬೇಕು. ರಾಧಾಕೃಷ್ಣನ್, ಮಹಾತ್ಮಾಗಾಂಧಿ, ಡಾ. ಕುರ್ತಕೋಟಿ, ಪಂ. ಮದನಮೋಹನ ಮಾಲವೀಯ, ಪಂ. ಜವಾಹರಲಾಲ ನೆಹರು, ಡಾ. ಅಂಬೇಡಕರ ಮೊದಲಾದ ಬೇರೆ ಬೇರೆ ವಿಚಾರದ ಜನರನ್ನು ಒಂದು ಕಡೆಯಲ್ಲಿ ಕೂಡಿಸಬೇಕು. ಅವರು ತಮ್ಮ ಒಮ್ಮತದಿಂದ ಹೇಳಿದ್ದು ಇಂದಿನ ಧರ್ಮವಾಗಬೇಕು. ಅದು ಇಂದಿನ ಸ್ಮೃತಿಯು. ಇದು ನಮ್ಮ ಪ್ರಾಚೀನ ಕಾಲದ ರೀತಿಯಾಗಿತ್ತು. ಸ್ಮೃತಿ-ಗ್ರಂಥಗಳನ್ನು ಅವಲೋಕಿಸಿದರೆ ನೂರಾರು ಬದಲಾವಣೆಗಳನ್ನು ನಾವು ಕಾಣಬಹುದು. ಗಂಡುಹುಡುಗರಂತೆ ಹೆಣ್ಣುಹುಡುಗೆಯರ ಉಪನಯನವನ್ನು ಮಾಡುವ ಪದ್ಧತಿ ಇತ್ತು. ಹೆಣ್ಣುಹುಡುಗೆಯರು ಗಂಡುಹುಡುಗರಂತೆ ಶಿಕ್ಷಣವನ್ನು ಪಡೆಯುತ್ತಿದ್ದರೆಂಬುದೇ ಇದರ ಅರ್ಥವು. ಪ್ರಾಚೀನಕಾಲದಲ್ಲಿ ವಾದವಿವಾದವನ್ನು ಮಾಡುವ ಜಾಣ ನಾರಿಯರನ್ನು ಅಲ್ಲಲ್ಲಿ ಕಾಣಬಹುದು. ವೇದದಲ್ಲಿ ಸ್ತ್ರೀ ಋಷಿಗಳು ರಚಿಸಿದ ಸೂಕ್ತಗಳಿವೆ. ಗೋದಾವರಿ ನದೀತೀರದ ಮೇಲೆ ಸಂಧ್ಯಾವಂದನೆಯನ್ನು ಮಾಡುವ ಸೀತಾದೇವಿಯ ವರ್ಣನೆಯು ರಾಮಾಯಣದಲ್ಲಿ ಅದೆ. ಸ್ತ್ರೀಯರಿಗೆ ಜ್ಞಾನದ ಅಧಿಕಾರವಿತ್ತು. ಬ್ರಹ್ಮವಾದಿನಿಯರು ಇದ್ದರು. ಸಭೆಗಳಲ್ಲಿ ನಡೆದ ಚರ್ಚೆಯಲ್ಲಿ ಭಾಗವಹಿಸುತ್ತಿದ್ದರು. ಎಪ್ಪತ್ತು ವರ್ಷಗಳ ವರೆಗೆ ಬ್ರಹ್ಮಚಾರಿಣಿ ಮತ್ತು ಬ್ರಹ್ಮವಾದಿನಿಯೆಂದು ಹೆಸರಾದ ಓರ್ವ ತಪಸ್ವಿನೀ ನಾರಿಯ ಉಲ್ಲೇಖವು ಮಹಾಭಾರತ ಉದ್ಯೋಗಪರ್ವದಲ್ಲಿದೆ.

ವಿದ್ಯಾರ್ಥಿ, ವಿದ್ಯಾರ್ಥಿನಿಯರು ಒಂದೇ ಋಷಿಯ ಆಶ್ರಮದಲ್ಲಿ ವಿದ್ಯಾರ್ಜನ ಮಾಡುವ ಉಲ್ಲೇಖಗಳು ಸಂಸ್ಕೃತ ನಾಟಕಗಳಲ್ಲಿ ಅವೆ. ಶಾಕುಂತಲ ನಾಟಕದಲ್ಲಿ ಅನುಸೂಯಾ ಮತ್ತು ಪ್ರಿಯಂವದಾ ಇವರು ವಿದ್ಯಾರ್ಥಿನಿಗಳಾಗಿದ್ದರೆಂದು ಉಲ್ಲೇಖವಿದೆ. ವಾಲ್ಮೀಕಿಯ ಆಶ್ರಮದಲ್ಲಿ ವಿದ್ಯಾರ್ಥಿನಿಯರಿದ್ದ ವರ್ಣನೆಯು ಉತ್ತರ ರಾಮಚರಿತ್ರೆಯಲ್ಲಿದೆ. ಒಂದು ಸಾಲೆಯಿಂದ ಇನ್ನೊಂದು ಸಾಲೆಗೆ ಹೋಗುವಂತೆ, ಒಂದು ಆಶ್ರಮವನ್ನು ಬಿಟ್ಟು, ಇನ್ನೊಂದು ಆಶ್ರಮಕ್ಕೆ ಹೋಗುವ ಪದ್ಧತಿಯೂ ಇತ್ತು. ಮುಂಜಿವೆಯಾದ ಮೇಲೆ ಕಲಿಯಲಿಕ್ಕೆ ಹೋಗುವ ಪರಿಪಾಠವಿದ್ದಾಗ ಪ್ರೌಢ ವಿವಾಹಗಳು ರೂಢವಿರುವದು ಸಹಜವಾದದ್ದು. ಈ ಪ್ರೌಢ ವಿವಾಹಗಳಲ್ಲಿ ಕೆಲವು ಪ್ರೇಮ ವಿವಾಹಗಳೂ ಇರಬಹುದು. ಅದರೆ ಪ್ರೌಢ ವಿವಾಹಗಳ ಪದ್ಧತಿಯಲ್ಲಿ ಬದಲಾವಣೆಯಾಗುವದು ವಿಹಿತವೆಂದು

ಕೆಲವು ವಿಚಾರವಂತರಿಗೆ ಅನಿಸಿರಬೇಕು. ಏಕತ್ರ ಕುಟುಂಬ ಪದ್ಧತಿಯು ನಮ್ಮ ದೇಶದಲ್ಲಿ ಪ್ರಾಚೀನ ಕಾಲದಿಂದ ಅದೆ. ಈ ಪದ್ಧತಿಯನ್ನು ಯಶಸ್ಸುಳ್ಳದ್ದನ್ನಾಗಿ ಮಾಡುವ ಹೊಣೆಯು ವಿಶೇಷವಾಗಿ ಹೆಣ್ಣು ಮಕ್ಕಳದೇ ಅದೆ. ವಯಸ್ಸಾದವರಿಗೆ ಮಾವನ ಮನೆಯವರೊಂದಿಗೆ ಬೆರೆಯುವದು ಸಾಧ್ಯವಾಗುವದಿಲ್ಲ. ಅವರ ಪ್ರೀತಿಯು ಪತಿಯ ಮಟ್ಟಿಗೆ ಇರುತ್ತದೆ. ಆದರೆ ಅದೇ ಸಣ್ಣವರಿದ್ದಾಗ ಮದುವೆಯಾದರೆ ತವರು ಮನೆ, ಅತ್ತೆಯ ಮನೆ, ಹೀಗೆ ಮೇಲಿಂದ ಮೇಲೆ ಹೋಗಿ ಬರುವದರಿಂದ ಅತ್ತೆಯ ಮನೆಯಲ್ಲಿದ್ದ ಭಾವಸಾದಿನಿಯರೊಡನೆ ಪ್ರೀತಿ ಸಂಬಂಧವು ಬೆಳೆಯುವದು. ಬಾಲ್ಯದಲ್ಲಿ ಪ್ರೇಮ ಸಂಬಂಧವು ಹೆಚ್ಚಾಗಿ ಬೆಳೆಯುತ್ತದೆ. ಏಕತ್ರ ಕುಟುಂಬ ಪದ್ಧತಿಯನ್ನು ನೆಲೆಗೊಳಿಸುವುದಕ್ಕಾಗಿ ಪ್ರೌಢ ವಿವಾಹದ ರೂಢಿಯನ್ನು ಬದಲು ಮಾಡಿ ಬಾಲ್ಯ ವಿವಾಹಗಳನ್ನು ಏರ್ಪಡಿಸಿರಬೇಕು.

ಅಥವಾ ಹುಡುಗ ಹುಡಿಗೆಯರು ಕಲಿತದ್ದರಿಂದ ಭಿಕ್ಷು, ಭಿಕ್ಷುಣಿಯರಾಗಿ ಹೋಗಬಹುದೆಂದು ಅಂಜಿರಬೇಕು. ಆದರೆ ಕಾಮವಾಸನೆಯನ್ನು ಗೆಲ್ಲುವದು ಸಾಧ್ಯವಿಲ್ಲದಾಗ ಇಂಥ ಸಂಘಗಳು ವ್ಯಭಿಚಾರಕ್ಕೆ ಅನುವು ಕೊಡಬಹುದೆಂದು ತಿಳಿದು ಸಮಾಜ ನಿಯಮವನ್ನು ಮಾಡುವವರು ಬಾಲವಿವಾಹದ ಪದ್ಧತಿಯನ್ನು ರೂಢಿ ಮಾಡಿರಬೇಕು.

ಕಾರಣಗಳು ಏನೇ ಇರಲಿ, ಬದಲಾವಣೆಯಾದದ್ದು ನಿಜ. ಆ ಪೂರ್ವಜರು ಪ್ರಯೋಗ ಮಾಡುವವರಿದ್ದರು. ಯಾವ ನಿಯಮಗಳನ್ನೂ ಅಚಲವೆಂದು ಅವರು ತಿಳಿಯುತ್ತಿದ್ದಿಲ್ಲ. ಮೇಲಿನ ವರ್ಣದವರು ಕೆಳಗಿನ ವರ್ಣದವರೊಡನೆ ಮದುವೆಯಾಗುತ್ತಿದ್ದರು. ವರಿಷ್ಠ ವರ್ಣದ ಗಂಡಸರು ಕನಿಷ್ಠ ವರ್ಣದ ಹೆಣ್ಣುಮಕ್ಕಳೊಡನೆ ಮದುವೆಯಾಗುತ್ತಿದ್ದರು. "ಭಾರ್ಯಾಚತಸ್ರೋ ವಿಪ್ರಾಣಾಮ್," ಎಂದು ಸ್ಮೃತಿಯ ವಚನವಿದೆ. ಬ್ರಾಹ್ಮಣನು ನಾಲ್ಕೂ ವರ್ಣದ ಸ್ತ್ರೀಯರೊಡನೆ ಲಗ್ನವಾಗಬಹುದು. ಇದರಲ್ಲಿ ಯಾಜ್ಞವಲ್ಕ್ಯನು ಬದಲಾವಣೆ ಮಾಡಿ ಶೂದ್ರ ಸ್ತ್ರೀಯನ್ನು ಬಿಟ್ಟು ಇತರ ಮೂರು ವರ್ಣದ ಸ್ತ್ರೀಯರೊಡನೆ ವಿವಾಹವಾಗಬಹುದೆಂದು ಅಂದನು. ಈ ರೀತಿ ಸ್ಮೃತಿಕಾರರು ಬದಲು ಮಾಡುತ್ತಿದ್ದರು.

ಕೆಲವು ಸ್ಮೃತಿಗಳಿಗೆ ಪುನರ್ವಿವಾಹವು ಸಮ್ಮತವಿದೆ, ಕೆಲವು ಸ್ಮೃತಿಗಳಿಗೆ ಇಲ್ಲ. "ಪರಾಶರ" ಸ್ಮೃತಿಯು ಕಲಿಯುಗಕ್ಕಾಗಿ ಎಂದು

ಹೇಳಿದೆ. ಅದರಲ್ಲಿ ಪುನರ್ವಿವಾಹಕ್ಕೆ ಅಡ್ಡಿ ಇಲ್ಲ. ಪೇಶ್ವೆಯವರ ಮುಖ್ಯ ನ್ಯಾಯಾಧೀಶರಾದ ರಾಮಾಶಾಸ್ತ್ರಿಯವರ ಕಥೆಯು ಪ್ರಸಿದ್ಧವಿದೆ. ಅವರು ಪುನರ್ವಿವಾಹಕ್ಕೆ ಸಮ್ಮತಿಯನ್ನಿತ್ತರು. ಓರ್ವ ಸ್ತ್ರೀ ಕೀರ್ತನಕಾರಳು ತುಲಸಿ ಬಾಗದಲ್ಲಿ ಕೀರ್ತನ ನಡೆದಾಗ ರಾಮಾಶಾಸ್ತ್ರಿಯವರಿಗೆ ಕೇಳಿದಳು— "ರಾಮಾಶಾಸ್ತ್ರಿಗಳವರೇ! ಪುರುಷರಿಗೆ ಬೇಕಾದಷ್ಟು ಸಾರೆ ಲಗ್ನವಾಗಲಿಕ್ಕೆ ಅನುವು ಇದೆ. ಮೊದಲ ಹೆಂಡತಿಯು ಸತ್ತು ಹತ್ತು ದಿವಸ ಸಹ ಆಗಿರುವದಿಲ್ಲ. ಅಷ್ಟರಲ್ಲಿ ಎರಡನೇ ಮದುವೆಯನ್ನು ಮಾಡಲು ಉತ್ಸುಕರಾಗಿರುತ್ತಾರೆ. ಸ್ತ್ರೀಯರು ಹೀಗೆ ಮಾಡಿದರೆ ಅದರಲ್ಲಿ ಅವರದೇನು ತಪ್ಪು? ಸ್ತ್ರೀಯರು ಮತ್ತೆ ವಿವಾಹವಾಗಬಯಸಿದರೆ ಅವರಿಗೆ ಅಪ್ಪಣೆ ಯಾಕಿರಬಾರದು?" ರಾಮಾಶಾಸ್ತ್ರಿಯವರು ಉತ್ತರವಿತ್ತರು— "ಸ್ಮೃತಿಗಳನ್ನು ಬರೆದವರು ಪುರುಷರು. ಅವರು ಬರೇ ಗಂಡಸರ ಸುಖಗಳನ್ನಷ್ಟೇ ವಿಚಾರಿಸಿದರು. ಸ್ತ್ರೀಯರ ಸುಖ-ದುಃಖಗಳ ಕಲ್ಪನೆ ಅವರಿಗೆ ಹೇಗೆ ಬರಬೇಕು?"

ನೀತಿ ನಡಾವಳಿಗಳಲ್ಲಿ ಬದಲಾವಣೆಯಾಗುತ್ತಿತ್ತೆಂಬುದೇ ಇದರ ಅರ್ಥವು. ಆದರೆ ಬದಲು ಮಾಡದಿರುವದೆಂದರೆ ಅದು ದೊಡ್ಡ ತಪ್ಪೆಂದು ನಮ್ಮ ಸಮಾಜದ ಲಕ್ಷದಲ್ಲಿ ಬರುವದಿಲ್ಲ. ಹಳೆಯ ಕಾಲದ ನೀತಿ ನಡಾವಳಿಗಳು ಇಂದು ಹೇಗೆ ಉಪಯುಕ್ತವಾಗುವವು? ಸಣ್ಣವರಿದ್ದಾಗಿನ ಉಡುಪು ಹಿರಿಯರಾದಾಗ ಒಪ್ಪುವದೇ? ಉಡುಪನ್ನು ದೊಡ್ಡದಾಗಿ ಮಾಡಬೇಕು. ಇಲ್ಲದಿದ್ದರೆ ನಾನು ಯಾವಾಗಲೂ ಕಿರಿಯವನಾಗಿರಬೇಕೆಂದು ಬೇಡಿಕೊಳ್ಳಬೇಕಾಗುವದು. ರೂಢಿಯ ಉಡುಪು ಯಾವಾಗಲೂ ಬದಲಾಯಿಸುತ್ತಿರಬೇಕು. ಬೇಸಿಗೆಯಲ್ಲಿಯ ಉಡುಪು ಚಳಿಗಾಲದಲ್ಲಿ ಬರುವದಿಲ್ಲ. ಚಳಿಗಾಲದ ಉಡುಪು ಬೇಸಿಗೆಯಲ್ಲಿ ತೊಡುವದಾಗುವದಿಲ್ಲ. ಇದು ಸೃಷ್ಟಿ ನಿಯಮವು. ಈ ರೀತಿ ಮಾಡದಿದ್ದರೆ ಚಳಿಯಲ್ಲಿ ಸಿಕ್ಕು ಸಾಯಬೇಕಾಗುವದು; ಬೇಸಿಗೆಯಲ್ಲಿ ಬೇಗೆಯಿಂದ ಪೇಚಾಡಬೇಕಾಗುವದು.

ಹಿಂದು ಧರ್ಮವು ಮುಳುಗಿತು, ಮುಳುಗಿತು, ಎಂದು ಕೆಲವರು ಅನ್ನುತ್ತಾರೆ. ಯಾವನಾದರೊಬ್ಬನು ಗಂಧವನ್ನು ಹಚ್ಚದಿದ್ದರೆ, ಮೀಶೆಯನ್ನು ಬೋಳಿಸಿದರೆ, ಜನಿವಾರವನ್ನು ಹಾಕದಿದ್ದರೆ ಧರ್ಮವು ರಸಾತಲಕ್ಕೆ ಹೋಯಿತೆಂದು ಈ ಮಹನೀಯರು ತಿಳಿಯುತ್ತಾರೆ. ಚಿತ್ರಾವತಿ

ಹಾಕದಿದ್ದರೆ, ಪ್ರಾಣಾಹುತಿಯನ್ನು ತಕ್ಕೊಳ್ಳದಿದ್ದರೆ, ಧರ್ಮವು ಅಳಿಯಿ ತೆಂದು ಅನ್ನುತ್ತಾರೆ. ಆದರೆ ಈ ಧರ್ಮವು ಎಷ್ಟು ಜನರದು? ಮತ್ತು ಈ ಧರ್ಮದ ಮಹತ್ವವಾದರೂ ಏನು ?

ಇವು ಹೊರಗಿನ ಗುರುತುಗಳು. ಇವು ಬದಲಾಗುತ್ತವೆ. ಮತ್ತು ಬದಲು ಆಗೇ ತೀರುವವು. ಹೊಸ ಕಾಲದಲ್ಲಿ ಹೊಸ ಗುರುತುಗಳು ಹುಟ್ಟುವವು. ಒಂದು ಕಾಲದಲ್ಲಿ ಟೊಪ್ಪಿಗೆ ಹಾಕುವದು ಮಂಗಲ ಚಿನ್ಹ ವಾಗಿತ್ತು. ಇಂದು ಬಕ್ಕನೆತ್ತಿಯಿಂದ ಅಡ್ಡಾಡುವದೇ ಐಕ್ಯದ ಕುರುಹು ಎಂದು ಯಾರಿಗಾದರೂ ಅನಿಸಿದರೆ ಅದರಿಂದ ಧರ್ಮವು ತೇಲುವ ಮುಣು ಗುವ ಪ್ರಶ್ನೆ ಹೇಗೆ ಉಂಟಾಗುವದು ?

ಚಹಾದ ಕಪ್ಪಿನಲ್ಲಿ ಮುಳುಗುವಷ್ಟು ಅಥವಾ ಮೀಸೆಯೊಡನೆ ನಾಶ ವಾಗುವಷ್ಟು ಹಿಂದು ಧರ್ಮವು ದುರ್ಬಲವಿಲ್ಲ. ಬುದ್ಧಿಯ ಉಪಾಸನೆಯು ಅಳಿದರೆ ಮಾತ್ರ ಹಿಂದೂ ಧರ್ಮವು ನಾಶವಾಗುವದು. "ನಮ್ಮ ಬುದ್ಧಿಯು ತೇಜಸ್ಸುಳ್ಳದ್ದಾಗಿ ಉಳಿಯಲಿ'' ಎಂಬ ಗಾಯತ್ರೀ ಮಂತ್ರದೊಳಗಿನ ಪ್ರಾರ್ಥನೆಯು ಅಳಿದೊಡನೆ ಅಳಿಯುವದು. ಪಂಡಿತ ಮೋತಿಲಾಲರು ತಮಗೆ ಯೋಗ್ಯವೆನಿಸಿದ ಪದಾರ್ಥಗಳನ್ನು ತಿನ್ನುತ್ತಿರಬಹುದು; ಕುಡಿಯು ತ್ತಿರಬಹುದು; ಆದರೆ ಅವರು ತಮ್ಮ ಬುದ್ಧಿಗೆ ತೋಚಿದ್ದನ್ನೇ ಮಾಡುತ್ತಿ ದ್ದರು. ಅವರು ಆಮರಣ ಗಾಯತ್ರೀ ಮಂತ್ರದ ಉಪಾಸಕರಾಗಿದ್ದರು. ಅವರ ಕೊರಳಲ್ಲಿ ಜನಿವಾರವಿರಲಿಕ್ಕಿಲ್ಲ. ಆದರೆ ನಿಜವಾದ ಗಾಯತ್ರೀ ಮಂತ್ರವು ಅವರ ಜೊತೆಗಿತ್ತು. ಸಾಯುವ ಕಾಲಕ್ಕೆ ಸಹ ಆ ಮಹಾಪುರು ಷನ ನಾಲಗೆಯ ಮೇಲೆ ಗಾಯತ್ರೀ ಮಂತ್ರವೇ ಇತ್ತು! ಗಾಯತ್ರೀ ಮಂತ್ರವನ್ನು ಅನ್ನುತ್ತಲೇ ಅವರ ಆತ್ಮ ಹಂಸವು ಹಾರಿಹೋಯಿತು.

ಸಾಯುವ ಕಾಲಕ್ಕೆ ಆತ್ಮನು ಮಹತ್ವದ್ದಷ್ಟೇ ತನ್ನ ಜೊತೆಗೆ ತೆಗೆದು ಕೊಂಡು ಹೋಗುತ್ತಾನೆ. ನಾವು ಒಂದು ಊರಿಂದ ಇನ್ನೊಂದೂರಿಗೆ ಪ್ರವಾಸಕ್ಕೆ ಹೋಗುವಾಗ ಅವಶ್ಯವಿದ್ದ ವಸ್ತುಗಳನ್ನಷ್ಟೇ ಸಂಗಡ ಒಯ್ಯು ತ್ತೇವೆ. ಮತ್ತು ಉಪಯೋಗವಿಲ್ಲದವುಗಳನ್ನು ಬಿಟ್ಟು ಹೋಗುತ್ತೇವೆ. ಮೋತಿಲಾಲರು ತಮ್ಮ ಜೊತೆಗೆ, ಈ ಜಗತ್ತನ್ನೇ ಬಿಟ್ಟು ಹೋಗುವಾಗ, ಯಾವ ವಸ್ತುವನ್ನು ಒಯ್ದರು? ಅವರ ಜೀವನದ ಹಸಿವು ಯಾವದಿತ್ತು ? ಶುದ್ಧ ವಿಚಾರದ್ದು, ಬುದ್ಧಿ ಸ್ವಾತಂತ್ರ್ಯದ್ದು, ಜ್ಞಾನದ ಬೆಳಕಿನದು. "ಹೆಚ್ಚು ಬೆಳಕು, ಹೆಚ್ಚು ಬೆಳಕು" ಅನ್ನುತ್ತ ಜರ್ಮನಿಯ ಮಹಾಕವಿ

ಗಟೀ ಪ್ರಾಣ ಬಿಟ್ಟನು. "ತೇಜಸುಳ್ಳ ಬುದ್ಧಿ, ಸ್ವತಂತ್ರ ಬುದ್ಧಿ," ಎಂದು ಮೋತಿಲಾಲರು ಜಪಿಸುತ್ತ ಹೋದರು.

ದಿನಾಲು ಗಾಯತ್ರೀ ಮಂತ್ರವನ್ನು ಜಪಿಸುವವರಿಗೆ ಅಂತ್ಯಕಾಲದಲ್ಲಿ ಅದರ ನೆನಪು ಆಗುವದೇ ? ಆ ಮಹತ್ತರವಾದ ಮಂತ್ರವು ರಕ್ತವನ್ನು ಸೇರಿದೆಯೋ ? ಅವರಿಗೆ ಜನಿವಾರವೇ ಹೆಚ್ಚು ಮಹತ್ವದ ವಸ್ತುವೆಂದು ಅನಿಸುತ್ತದೆ. ಆದರೆ ಗಾಯತ್ರೀ ಮಂತ್ರದಲ್ಲಿರುವ ದಿವ್ಯ ವಿಚಾರಗಳು ಮಹತ್ವದ್ದೆನ್ನಿಸುವದಿಲ್ಲ. ವಿಚಾರದ ಉಪಾಸನೆಯನ್ನು ಮಾಡುವವರೇ, ಜ್ಞಾನವನ್ನು ದೊರಕಿಸುವದಕ್ಕಾಗಿ ಹೆಣಗಾಡುವವರೇ ನಿಜವಾಗಿ ಗಾಯತ್ರೀ ಮಂತ್ರವನ್ನು ಕಾಯುವವರು. ಇದಕ್ಕಾಗಿಯೇ ಸ್ವಾಮಿ ವಿವೇಕಾನಂದರು ಅಂದಿದ್ದಾರೆ. "ಬ್ರಾಹ್ಮಣರು ಪಾಶ್ಚಿಮಾತ್ಯ ದೇಶಗಳಲ್ಲಿಯೇ ಹೆಚ್ಚಾಗಿದ್ದಾರೆ." ಕ್ಷಣಕ್ಷಣಕ್ಕೆ ಜ್ಞಾನದ ಉಪಾಸನೆಯನ್ನು ಆಮರಣ ಮಾಡುವವರು ಯಾರಾದರೂ ನಮ್ಮಲ್ಲಿ ಇದ್ದಾರೆಯೋ ? ಜನಿವಾರವನ್ನು ಕಾಯ್ದರೆ ಹಿಂದೂ ಧರ್ಮವನ್ನು ಕಾಯ್ದಂತಾಗುವದಿಲ್ಲ. ಇಂಥವರು ಕೀಲೀಕೈಯನ್ನು ಉಳಿಸುವವರು. ಕೈಯೊಳಗಿನ ಉಂಗುರವನ್ನು ಕಾಯುವವರು.

ಸಮಾಜದಲ್ಲಿ ಧರ್ಮವು ಅದೆಯೊ, ಇಲ್ಲವೋ ಹೇಗೆ ಅರಿತುಕೊಳ್ಳಬೇಕು ? ತ್ಯಾಗದಿಂದ. ತ್ಯಾಗಿಯ ಹತ್ತಿರವೇ ಧರ್ಮದ ಆತ್ಮವು ಇರುತ್ತದೆ. ಧರ್ಮಹೀನರೆಂದು ಕರೆಯಲ್ಪಡುವ ತರುಣರ ಹತ್ತಿರ ತ್ಯಾಗವಿದ್ದರೆ ಅವರೇ ನಿಜವಾದ ಧರ್ಮವಿದ್ದವರು. ಚಂಡಿಕೆಗಾಗಿ ಬಹಳ ಕಾಳಗಗಳಾಗಿವೆ. ಅದೇ ಚಂಡಿಕೆಯನ್ನು ಕಿತ್ತು ಒಗೆದವರಿಗೆ ಧರ್ಮಹೀನರೆಂದು ಇಂದು ಕರೆಯುವದು ಹುಡುಗಾಟಿಕೆಯ ಮಾತಾಗುವದು. ಇಂಥವರ ಹತ್ತರ "ಇದಕ್ಕಾಗಿ ನಾನು ಸಾಯಬೇಕಾದರೂ ಸಿದ್ಧನಿದ್ದೇನೆ" ಅಂಬುವ "ಇದು" ಅದೆಯೋ ಇಲ್ಲವೋ ? ನಿತ್ಯ ನೂಲಬೇಕೆಂದು ನಿಯಮ ಮಾಡಿದವರಿಗೆ ನೂಲಲು ಟಕಳಿಯನ್ನು ಕೊಡಲಿಲ್ಲವೆಂದು ಸತ್ಯಾಗ್ರಹ ಚಳವಳಿಯಲ್ಲಿ ತುರಂಗದಲ್ಲಿದ್ದ ಎಷ್ಟೋ ತರುಣರು ಆಮರಣ ಉಪವಾಸವನ್ನು ಮಾಡಿದರು. ಪ್ರತಿಯೊಬ್ಬ ವ್ಯಕ್ತಿಯ ಜೀವನದಲ್ಲಿ ಏನಾದರೊಂದು ಮಹತ್ವದ್ದು ಇದ್ದೇ ಇರುತ್ತದೆ. ಹಳೆಯ ಪ್ರತೀಕಗಳು, ಚಿತ್ರಗಳು, ವ್ರತಗಳು, ನಿಯಮಗಳು ಬದಲಾವಣೆ ಹೊಂದುತ್ತಲೇ ಇರುವವು.
[illegible] ತಗಳು ಪ್ರತೀಕಗಳು ಬರುವವು.

ಆ ಪ್ರತೀಕಕ್ಕಾಗಿ, ವ್ರತಕ್ಕಾಗಿ ಸಾಯಲು ಸಿದ್ಧನಿದ್ದರೆ ಸಾಕು.

ಇಂಗ್ಲಂಡದಲ್ಲಿ ಬರ್ಟ್ರಾಂಡ ರಸೆಲ್‌ನೆಂಬ ಒಬ್ಬ ಪ್ರಜ್ಞಾವಂತ ವಿದ್ವಾನೆ. ಅವನು ನೀತಿಗಳು ಎರಡು ಬಗೆಯವೆಂದು ಹೇಳುತ್ತಾನೆ. (Positive and Negative ಇದ್ದರೆ ಕ್ರಿಯಾತ್ಮಕ-ನಿಷ್ಕ್ರಿಯಾತ್ಮಕ ನೀತಿಗಳೆಂದು ಹೇಳಬೇಕಾಗುವುದು.) ಋಣ ನೀತಿಯು ಸಮಾಜಕ್ಕಾಗಿ ಏನೂ ಮಾಡುವುದಿಲ್ಲ. ಅದರ ಉಪಾಸಕರು ಗಂಧ, ಜಪ, ಮಾಲೆ, ಸ್ನಾನ, ಮುಂತಾದ ಧರ್ಮದ ಬಾಹ್ಯಾಂಗಗಳನ್ನು ಆಚರಿಸುವರು. ಆದರೆ ನೀವು ಅವನಿಗೆ "ಸಮಾಜದಲ್ಲಿಯ ಹಸಿವು ದೂರವಾಗುವುದಕ್ಕಾಗಿ ಏನು ಮಾಡುತ್ತೀ ? ಸಮಾಜಕ್ಕೆ ಒಳ್ಳೆಯ ಶಿಕ್ಷಣ ಸಿಗಬೇಕೆಂದು ಯತ್ನಿಸುತ್ತೀಯೋ ? ಸಮಾಜದಲ್ಲಿಯ ದಾಸ್ಯ, ಅನ್ಯಾಯ, ಬಡಿದಾಟ ಇವನ್ನು ಹೋಗಲಾಡಿಸುವದಕ್ಕೆ ಏನಾದರೂ ಮಾಡಿದ್ದೀಯಾ ? ಸ್ತ್ರೀಯರ ಸ್ಥಿತಿ ಸುಧಾರಿಸಲು ಏನು ಮಾಡಿದಿ ?'' ಹೀಗೆ ಕೇಳಿದರೆ ಅವನು ನೇತಿ, ನೇತಿ, ಎಂದು ಉತ್ತರವನ್ನು ಕೊಡುತ್ತಾನೆ. ಧನನೀತಿಯ ಉಪಾಸಕರು ಇದರ ವಿರುದ್ಧ ಇರುವರು. ಅವರು ಸ್ನಾನ, ಸಂಧ್ಯಾವಂದನೆಯನ್ನು ಮಾಡುತ್ತಿರಲಿಕ್ಕಿಲ್ಲ. ಗುಡಿಗೆ ಕೀರ್ತನಕ್ಕೆ ಹೋಗುತ್ತಿರಲಿಕ್ಕಿಲ್ಲ. ಮಾಲೆ, ಭಸ್ಮಗಳನ್ನು ಧರಿಸುತ್ತಿರಲಿಕ್ಕಿಲ್ಲ. ಆದರೆ ಸಮಾಜದಲ್ಲಿ ನೆಲೆಸಿದ ಅನ್ಯಾಯವನ್ನು ಹೋಗಲಾಡಿಸಲು ಧಾವಿಸುವರು. ಅವನು ದೀನ-ದಲಿತರ ಪಕ್ಷವನ್ನೇ ಕಟ್ಟುವನು. ಎಲ್ಲೆಲ್ಲಿ ಸಂಕಟಗಳಿವೆ, ವಿಪತ್ತು ಬಂದಿದೆ, ಅನ್ಯಾಯವು ನಡೆದದೆ, ಅಸಾಹಾಯ್ಯತೆ ಇದೆ, ಬಲುಮೆ ಇದೆ, ಅಲ್ಲಲ್ಲಿ ಹೋಗಿ ಅವನ್ನು ದೂರ ಮಾಡಲಿಕ್ಕೆ ವೀರನಂತೆ ನಿಲ್ಲುವನು. ಪ್ರಸಂಗ ಬಂದರೆ ತನ್ನ ಜೀವವನ್ನಾದರೂ ಕೊಡುವನು.

ಸಂಪ್ರದಾಯ ವಾದಿಗಳು ಋಣನೀತಿಗೆ ಹೊಂದಿದವರು. ಹೊಸ ಕಾರ್ಯಕರ್ತರು ಧನನೀತಿಗೆ ಹೊಂದಿದವರು. ಕರ್ಮಶೂನ್ಯ ಋಣನೀತಿಯು ಪ್ರಸಾರವಿದ್ದ ಸಮಾಜವು ಮಣ್ಣು ಮುಕ್ಕುವದು ಖಂಡಿತ. ಸಮಾಜಕ್ಕೆ ಸೇವೆಯನ್ನು ಪ್ರತ್ಯಕ್ಷ ಸಲ್ಲಿಸುವ ಧನನೀತಿಯ ಉಪಾಸಕರಿದ್ದ ಸಮಾಜವು ಮೇಲಕ್ಕೇರುವದು, ಮುಂದುವರಿಯುವದು.

ಈ ಧನನೀತಿಯ ಉಪಾಸಕರು ಸಮಾಜದ ರೊಚ್ಚಿಗೆ ಈಡಾಗಬೇಕಾಗುತ್ತದೆ. ಶಂಕರಾಚಾರ್ಯರು ಬರೇ ಅದ್ವೈತವನ್ನು ಸಿದ್ಧಮಾಡಲಿಲ್ಲ. ಅವರು ಅದನ್ನು ನಿತ್ಯದ ವ್ಯವಹಾರದಲ್ಲಿ ತರಲು ಬಹಳ ಕಷ್ಟ

ಪಟ್ಟರು. ಬೇರೆ ಬೇರೆ ದೇವತೆಗಳ ಉಪಾಸನೆಯನ್ನು ಮಾಡುವ ಸಂಪ್ರದಾಯದವರು ಪರಸ್ಪರರನ್ನು ದ್ವೇಷಿಸುತ್ತಿದ್ದರು. ಆದರೆ ಶಂಕರಾಚಾರ್ಯರು ಅವರಿಗೆ ಹೀಗೆ ಹೇಳಿದರು. "ಎಲ್ಲ ದೇವತೆಗಳು ಒಂದೇ ಶಕ್ತಿಯ ರೂಪಕಗಳು. ಗಣಪತಿ, ಶಿವ, ಸೂರ್ಯ, ಶಕ್ತಿ, ವಿಷ್ಣು ಇವೆಲ್ಲವೂ ಒಂದೇ ಚಿತ್‌ಶಕ್ತಿಯ ರೂಪಗಳು. ಈ ಐದೂ ದೇವರನ್ನು ಕೂಡಿಸಿ ಪೂಜಿಸಿರಿ. ಪಂಚಾಯತನ ಪೂಜೆಯನ್ನು ಆರಂಭಿಸಿರಿ. ಭೇದದಲ್ಲಿ ಅಭೇದವನ್ನು ಕಂಡುಕೊಳ್ಳಿರಿ. ಅದ್ವೈತವು ಕೃತಿಯಲ್ಲಿ ಬರಲಿ. ಮತ್ತು ನಿಮ್ಮಲ್ಲಿಯ ಬಡಿದಾಟಗಳು ಮುಗಿಯಲಿ."

ಪಂಚಾಯತನ ಪೂಜೆಯನ್ನು ಶಂಕರಾಚಾರ್ಯರು ಸುರುವು ಮಾಡಿದರು. ಇದು ಹೊಸ ಪ್ರಯೋಗವು. ಅದ್ವೈತದ ಪ್ರತ್ಯಕ್ಷ ಪ್ರಯೋಗವು. ಇದಕ್ಕಾಗಿ ಶಂಕರಾಚಾರ್ಯರನ್ನು ಸನಾತನಿಗಳು ಕಾಡಿದರು. ಇವರು ಪ್ರಚ್ಛನ್ನ ಬೌದ್ಧರು, ಭತ್ತ ಮೊಸರನ್ನು ಕಲಿಸುವವರು, ಎಂದು ದೂಷಿಸಲ್ಪಟ್ಟರು. ಅವರನ್ನು ಬಹಿಷ್ಕರಿಸಲಾಯಿತು. ಶಂಕರಾಚಾರ್ಯರು ಮರಣೋನ್ಮುಖಳಾದ ತಮ್ಮ ತಾಯಿಯ ಭೆಟ್ಟಿಗೆ ಹೋದರು. ಅವರ ತಾಯಿಯು ತೀರಿದಳು. ಮೃತ ದೇಹವನ್ನು ಸ್ಮಶಾನಕ್ಕೆ ಸಾಗಿಸಲು ಯಾರೂ ಬರಲಿಲ್ಲ! ಶಂಕರಾಚಾರ್ಯರು ತಮ್ಮ ತಾಯಿಯ ದೇಹವನ್ನು ಮೂರು ತುಂಡು ಮಾಡಿದರು! ಮಲಬಾರದಲ್ಲಿ ಮೃತದೇಹದ ಮೇಲೆ ಮೂರು ಗೆರೆಗಳನ್ನು ಕೊರೆಯುವ ಪರಿಪಾಠವಿದೆ. ಮೂರು ತುಂಡಿನ ಕಠೋರವಾದ ಗುರುತು ಇದು!

ಸಂತರು, ಶರಣರು, ದಾಸರು ಸಂಸ್ಕೃತ ಭಾಷೆಯಲ್ಲಿದ್ದ ಜ್ಞಾನವನ್ನು ಜನಸಾಮಾನ್ಯರ ಭಾಷೆಯಲ್ಲಿ ತರುವ ಮಹತ್ಕಾರ್ಯವನ್ನು ಮಾಡಿದರು. ಜ್ಞಾನವಿಲ್ಲದೆ ಮನುಷ್ಯನು ಬದುಕುವ ಬಗೆ ಹೇಗೆ? ಸೂರ್ಯನ ಕಿರಣಗಳು ಜೀವಮಾತ್ರಕ್ಕೆ ಅವಶ್ಯವಿದ್ದಂತೆ, ಜ್ಞಾನಕಿರಣಗಳೂ ಬೇಕು. ಜ್ಞಾನವು ಕೆಲವೊಂದೇ ಜನರ ಸೊತ್ತಾಗುವದು ಘೋರ ಅನ್ಯಾಯ. ಸಂತರು ಇದರ ವಿರುದ್ಧ ಬಂಡಾಯವನ್ನು ಹೂಡಿದರು. ಜ್ಞಾನೇಶ್ವರ, ತುಕಾರಾಮ, ಬಸವೇಶ್ವರ, ಮುಕುಂದರಾಯ ಮೊದಲಾದವರು ಈ ಬಂಡಾಯವನ್ನು ಕೂಡಿಕೊಂಡರು. "ವೇದದ ಅರ್ಥವು ನಮಗೆ ಗೊತ್ತು. ಬೆನ್ನಿನ ಮೇಲೆ ಅದರ ಭಾರವನ್ನು ಹೊತ್ತವರಿಗೆ ಅಲ್ಲ." ಎಂದು ಸಂತ ತುಕಾರಾಮರು ಹೇಳಿದರು. ಸನಾತನಿಗಳ ವಿರೋಧವನ್ನು

ಲೆಕ್ಕಿಸದೆ, ಜೀವನದಲ್ಲಿ ಪ್ರತ್ಯಕ್ಷ ಅದ್ವೈತದ ಅನುಭಾವವನ್ನು ಪಡೆದು ಅವರಂತೆ ನಡೆಯುವವರಿಗೆ ಮಾತ್ರ ವೇದವು ತಿಳಿಯುತ್ತದೆ. ವೇದವೆಂದರೆ ಜ್ಞಾನದ ಸಾಕ್ಷಾತ್ಕಾರ. ಜ್ಞಾನವು ಪ್ರತ್ಯಕ್ಷ ಆಚರಿಸುವದಕ್ಕಾಗಿ ಅದೆ. ಹೊಟ್ಟೆ ತುಂಬಿದ ಮೇಲೆ ಮಾಡುವ ಚರ್ಚೆಗಾಗಿ ಅಲ್ಲ.

ಮೊದಲನೇ ಬಾಜಿರಾವ ಪೇಶ್ವೆಯವರು ತಮ್ಮಿಂದ ಮಸ್ತಾನಿಗೆ ಹುಟ್ಟಿದ ಮಗನ ಮುಂಜಿಯನ್ನು ಮಾಡಿದಾಗ ಎಲ್ಲರೂ ನಕ್ಕರು. ಅವರ ಅಪಮಾನವನ್ನು ಮಾಡಿದರು. ಆದರೆ ಭಾರತೀಯ ಸಂಸ್ಕೃತಿಯ ಆತ್ಮ ವನ್ನು ಬಾಜೀರಾಯರು ಕಂಡುಹಿಡಿದಿದ್ದರು.

ನಾಲ್ಕು ಬಗೆಯ ಭಕ್ತರಿರುವರೆಂದು ಗೀತೆಯು ಹೇಳುತ್ತದೆ. ನನ್ನ ದೃಷ್ಟಿಯಿಂದ ಇದರಲ್ಲಿ ವಿಶಾಲವಾದ ತತ್ವವು ಅಡಕವಾಗಿವೆ. ಸಮಾಜದ ಉನ್ನತಿ ಮಾಡುವ ಇಡೀ ಶಾಸ್ತ್ರವೇ ಇದರಲ್ಲಿ ಅಡಕವಾಗಿದೆ. "ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ." ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ ಎಂಬ ನಾಲ್ಕು ವಿಧದ ಭಕ್ತರಿದ್ದಾರೆ.

ಆರ್ತ ಭಕ್ತನೆಂದರೆ ಯಾವನು? ಆರ್ತನೆಂದರೆ ದೇವರ ಬಳಿ ದುಃಖವನ್ನು ಹೇಳುವವನು. ಯಾರ ದುಃಖವನ್ನು? ನಿಜವಾದ ಭಕ್ತನು ತನ್ನ ಸ್ವಂತ ದುಃಖವನ್ನು ಹೇಳುತ್ತಾನೆಂದು ನನಗನಿಸುವದಿಲ್ಲ. ಇವನು ಉದಾರ ಆರ್ತನು. ಈ ನಾಲ್ಕು ವಿಧದ ಭಕ್ತರು ಉದಾರರೆಂದು ಬಣ್ಣಿಸ ಲಾಗಿದೆ. ಜಗತ್ತಿನಲ್ಲಿಯ ದುಃಖವನ್ನು ಕಂಡು ದುಃಖಿಯಾಗುತ್ತಾನೆ. ಈ ಆರ್ತ ಭಕ್ತನು. ಸಮಾಜದಲ್ಲಿ ಕಂಡುಬರುವ ಅನ್ಯಾಯವನ್ನು ಕಂಡು ಇವನ ಹೃದಯವು ಮರುಗುತ್ತದೆ. ಚಿಕ್ಕವರಿದ್ದಾಗಲೇ ಸಮರ್ಥ ರಾಮ ದಾಸರು "ತಾಯಿ, ವಿಶ್ವದ ಚಿಂತೆಯೆ ನನಗಿದೆ" ಎಂದು ಹೇಳಿದರು. ಸಮರ್ಥರಂಥ ಉದಾರ ಆರ್ತರಿಗೆ ಮೊದಲು ಸಮಾಜದ ಚಿಂತೆಯು ಇರುತ್ತದೆ. ಸಮಾಜವು ಸುಸಂಪನ್ನ ಹೇಗಾಗುವದು? ಸುಸಂಸ್ಕೃತ ವಾಗುವ ಮಾರ್ಗ ಯಾವುದು? ಅನ್ನ ವಸ್ತ್ರವು ಸಿಗುವ ರೀತಿ ಯಾವುದು? ಜ್ಞಾನ ವಿಜ್ಞಾನವು ವಿಪುಲವಾಗುವದು ಹೇಗೆ? ಇವೆಲ್ಲ ಚಿಂತೆಯು ಇವ ರಿಗೆ. ಇದೊಂದು ಚಿಂತೆಯಿಂದ ಅವರ ಹೃದಯ ಕಳವಳಗೊಳ್ಳುತ್ತದೆ. ಇಡೀ ಸಂಸಾರವು ಅಡವೀಪಾಲಾಗಿದ್ದದ್ದು ಅವರಿಗೆ ಕಂಡುಬರುತ್ತದೆ. ಜನರು ಅಡ್ಡ ಹಾದೀ ಹಿಡಿದು ದುಃಖದಲ್ಲಿ ಬಳಲುತ್ತಾರೆ; ಇದು ಅವರಿಗೆ ಕಾಣುತ್ತದೆ. ಈ ಉದಾರ ಭಕ್ತರ ಮನಸ್ಸಿಗೆ ಶಾಂತಿ ಇಲ್ಲ. ಬಡವರ

ಗೋಳು ಅವರ ಕಿವಿಗೆ ಬೀಳುತ್ತದೆ. ಇದು ಭಕ್ತರ ಮೊದಲನೇ ಮೆಟ್ಟು. ಜಗತ್ತಿನಲ್ಲಿದ್ದ ದುಃಖದೊಡನೆ ಅವರು ಒಂದಾಗುತ್ತಾರೆ.

ಈ ಉದಾರ ಆರ್ತನಲ್ಲಿ ಆ ಮೇಲೆ ಉದಾರ ಜಿಜ್ಞಾಸೆಯು ಹುಟ್ಟುತ್ತದೆ. ದುಃಖವಿದ್ದದ್ದು ನಿಜ. ಆದರೆ ಇದು ಹುಟ್ಟುವದಾದರೂ ಹೇಗೆ? ಯಾಕೆ? ಎಂಬ ಕಾರಣ ಮೀಮಾಂಸೆಯನ್ನು ಇವನು ಮಾಡಲಾರಂಭಿಸುತ್ತಾನೆ. ಪ್ಲೇಗು ಯಾಕೆ ಬರುತ್ತದೆ? ಇದರ ಕಾರಣಗಳನ್ನು ಇವನು ಶೋಧಿಸುವನು. ತನ್ನ ಮೈಗೆ ಚುಚ್ಚಿಕೊಳ್ಳುವನು; ಪ್ರಯೋಗಗಳನ್ನು ಮಾಡುವನು. ಇದೇ ರೀತಿ ಜಗತ್ತಿನಲ್ಲಿಯ ಭೂಕಂಪ, ಶೀತಜ್ವರ, ಉಪದಂಶ, ಬಿರುಗಾಳಿ, ಮಿಡಚಿಯ ಉಪದ್ರವ ಮೊದಲಾದ ಉಪದ್ರವ ಆಪತ್ತುಗಳ ಕಾರಣಗಳನ್ನು ಶೋಧಿಸಲು ಉದ್ಯುಕ್ತರಾಗುತ್ತಾರೆ. ಸಾಮಾಜಿಕ ವಿಷಮತೆಯ ವಿಚಾರವನ್ನು ಮಾಡುತ್ತಾರೆ. ಒಂದು ಕಡೆ ಅಂತಸ್ತಿನ ಮನೆ, ಇನ್ನೊಂದು ಕಡೆ ಗುಡಿಸಲು; ಕೆಲವರ ಕಾಲಲ್ಲಿ ಕೆರವು, ಬೂಟು, ಇತರರು ಬರಿಗಾಲಿನಿಂದ ನಡೆಯುವವರು, ಕೆಲವರು ಹಗಲಿರುಳು ದುಡಿಯುವವರು, ಉಳಿದವರು ಗಾದಿಗಿರ್ದೆಗಳ ಮೇಲೆ ಬಿದ್ದು ಆರಾಮು ತೆಗೆದುಕೊಳ್ಳುವವರು; ಅಜೀರ್ಣದಿಂದ ಬಳಲುವವರು ಕೆಲವರು, ಹಸಿವಿನಿಂದ ಸಾಯುವವರು ಇತರರು; ಕೆಲವರಿಗೆ ಮಾತ್ರ ಜ್ಞಾನ, ಉಳಿದವರಿಗೆ ಇಡೀ ಜನ್ಮ ಅಜ್ಞಾನದ ಅಂಧಕಾರ; ಈ ರೀತಿ ದುಃಖಗಳು ಯಾಕಿವೆ? ಗುಲಾಮಗಿರಿಯು ಯಾಕಿದೆ? ಇವೆಲ್ಲವೂ ಯಾಕಿವೆ? ಇದನ್ನೆಲ್ಲ ಯೋಚಿಸುವರು.

ವಿಚಾರವನ್ನು ಮಾಡಲಾರಂಭಿಸಿದರೆ ಮನುಷ್ಯನಿಗೆ ಕೆಲವು ಕಾರಣಗಳು ಕಾಣುವವು. ಆ ಮೇಲೆ ಈ ಕಾರಣಗಳನ್ನು ದೂರಮಾಡಲು ಉಪಾಯಗಳನ್ನು ಕಂಡುಹಿಡಿಯಲು ಪ್ರಯತ್ನಿಸುವರು. ಆದರೆ ನಿಜವಾದ ಉಪಾಯವು ಯಾವುದು? ದುಃಖಗಳನ್ನು ದೂರಮಾಡಲು ಅನೇಕ ಉಪಾಯಗಳು ಜಿಜ್ಞಾಸು ಭಕ್ತನಿಗೆ ಕಾಣುತ್ತವೆ. ಆದರೆ ಅವೆಲ್ಲವೂ ಹಿತಕಾರಕವೆಂದು ಹೇಳಲು ಬರುವದಿಲ್ಲ.

ಇದು ಭಕ್ತಿಯ ಮೂರನೇ ಮೆಟ್ಟು. ಈ ಉಪಾಯಗಳನ್ನೆಲ್ಲ ಕೂಲಂಕಷವಾಗಿ ವಿಚಾರಿಸಿ ಇದರಲ್ಲಿ ಯಾವದು ನಿಜವಾಗಿ ಉಪಯೋಗಬೀಳುವದೆಂಬದನ್ನು ಅರ್ಥಾರ್ಥಿ ಭಕ್ತನು ನೋಡುವನು. ಅರ್ಥವೆಂದರೆ ಕಲ್ಯಾಣವು. ಮಂಗಲವನ್ನು ಮಾಡುವದು ಯಾವ ಮಾರ್ಗದಿಂದ ಸಾಧಿಸುವದು? ಅರ್ಥಾರ್ಥಿಯೆಂದರೆ ಪ್ರತಿಯೊಂದು ವಸ್ತುವಿನೊಳಗಿನ

ಅರ್ಥವನ್ನು ಕಾಣುವವನು. ಮೌಲ್ಯವನ್ನು ನೋಡುವವನು. ಮಹತ್ವ ವನ್ನು ಗೊತ್ತು ಮಾಡುವವನು.

ಸಮಾಜದಲ್ಲಿ ನೆಲೆಗೊಂಡ ವೈಷಮ್ಯ, ವಿರೋಧಗಳನ್ನು, ಭೇದ ಮತ್ತು ಬರಗಾಲಗಳನ್ನು ದೂರಮಾಡುವದು ಸಮಾಜವಾದಕ್ಕೆ ಸಾಧ್ಯವೇ ? ಯಂತ್ರಗಳು ಗುಣಕಾರಿಗಳು ಅಹುದೋ, ಅಲ್ಲವೋ ? ಗ್ರಾಮೋದ್ಯಮ ಗಳನ್ನು ಪ್ರಾರಂಭಿಸಬೇಕೋ ? ಯಂತ್ರ ಪೂಜೆಯನ್ನು ಸುರುವು ಮಾಡ ಬೇಕೋ ? ಹಿಂದು-ಮುಸಲ್ಮಾನ ಸಮಸ್ಯೆಯ ಸ್ವರೂಪವು ಆರ್ಥಿಕವೋ ಅಥವಾ ಅದಕ್ಕೆ ಬೇರೆ ಏನಾದರೂ ಕಾರಣಗಳಿವೆಯೋ ? ಹಿಂಸೆ, ಅಹಿಂಸೆ ಗಳಲ್ಲಿ ಯಾವದನ್ನು ಅವಲಂಬಿಸಬೇಕು ? ನಿಃಶಸ್ತ್ರ ಪ್ರತೀಕಾರವು ಪರಿ ಣಾಮಕಾರಕವಾದದ್ದು ಅದೆಯೋ, ಇಲ್ಲವೋ ? ಸಾಮ್ರಾಜ್ಯಾಂತರ್ಗತ ಸ್ವರಾಜ್ಯವು ನೆಟ್ಟಗೋ ಅಥವಾ ಸಂಪೂರ್ಣ ಸ್ವಾತಂತ್ರ್ಯವು ಇರಬೇಕೋ ? ಹುಡುಗರು ಹುಡುಗೆಯರು ಸಹ ಶಿಕ್ಷಣವನ್ನು ಹೊಂದಬೇಕೋ-ಬಾರದೋ? ಶಿಕ್ಷಣವನ್ನು ಮಾತೃಭಾಷೆಯಲ್ಲಿ ಕೊಡಬೇಕೋ ಅಥವಾ ಪರಭಾಷೆಯ ಲ್ಲಿಯೋ? ಪ್ರೌಢವಿವಾಹ ಬಾಲವಿವಾಹಗಳಲ್ಲಿ ಯಾವುದು ಹಿತಕರವಾದದ್ದು? ಒಂದೇ ತರದ ಉಡುಪು ಇರಬೇಕೇನು ? ಘಟಸ್ಫೋಟದ ಅಧಿಕಾರವು ಬೇಕೋ, ಬೇಡವೋ ? ಸ್ತ್ರೀಯರಿಗೆ ಆಸ್ತಿಯಲ್ಲಿ ಹಕ್ಕು ಇರಬೇಕೋ ಅಥವಾ ಇರಬಾರದೋ ?

ಸಮಾಜದಲ್ಲಿಯ ಇಂಥ ನೂರಾರು ದುಃಖಗಳನ್ನು ದೂರ ಮಾಡ ಲಿಕ್ಕೆ ನೂರಾರು ಉಪಾಯಗಳು ಜಿಜ್ಞಾಸು ಆರ್ತನಿಗೆ ಕಾಣುತ್ತವೆ. ಇವು ಗಳಲ್ಲಿ ಹಿತಕರವಾದ ಉಪಾಯಗಳನ್ನಷ್ಟೇ ಈ ಭಕ್ತರು ತಮ್ಮ ಹೃದಯ ದಲ್ಲಿ ಇಟ್ಟುಕೊಳ್ಳುವರು. ತನಗೆ ತೋಚಿದ ವಿಚಾರಗಳಲ್ಲಿ ಹಿತಕರ ವಿಚಾರಗಳನ್ನಷ್ಟೇ ತನ್ನವಾಗಿ ಮಾಡಿಕೊಳ್ಳುತ್ತಾನೆ. ಅರ್ಥಾರ್ಥಿ ಭಕ್ತನು ಜ್ಞಾನಿಯಾಗುತ್ತಾನೆ. ನಿರ್ಮಲ, ನಿಃಶಂಕ, ಅರ್ಥಯುಕ್ತವಾದ ಜ್ಞಾನ ದೊಡನೆ ಇವನು ಸಂಲಗ್ನವಾಗುತ್ತಾನೆ. ಆ ಪ್ರಯೋಗಕ್ಕಾಗಿ ತನ್ನ ಜೀವನ ವನ್ನು ಉಪಯೋಗಿಸುವನು. ಆ ಜ್ಞಾನದ ಪ್ರಯೋಗಗಳನ್ನು ಆರಂಭಿಸು ವನು. ನಿಂದೆಯನ್ನು, ಅವಮಾನವನ್ನು, ಕಷ್ಟಗಳನ್ನು ಈ ಪ್ರಯೋಗ ಕ್ಕಾಗಿ ಸಹನ ಮಾಡುವನು. ಇದಕ್ಕಾಗಿ ಅವನು ಫಾಶಿಯಾಗಲೀ, ಗುಂಡಿನೇಟನ್ನಾಗಲೀ ಸಹಿಸಲು ಸಿದ್ಧನಿರುವನು. ಈ ಸತ್ಯದ ಪ್ರಯೋಗ ವನ್ನು ಮಾಡುವಲ್ಲಿ, ಸತ್ಯದ ಹಿರಿಮೆಯನ್ನು ಹೆಚ್ಚಿಸುವದರಲ್ಲಿ ಅವನಿಗೆ

ಅಪಾರ ಆನಂದವಾಗುತ್ತದೆ. ಇದೇ ಅವನ ಸರ್ವಸ್ವವು, ಮೋಕ್ಷವು.

ಎಲ್ಲರ ಸುಖ-ದುಃಖಗಳೊಡನೆ ಒಂದಾಗುವದು, ದುಃಖದ ವೇದನೆಗಳನ್ನು ಅರಿಯುವದು, ಅರಿತು ಕಳವಳಗೊಳ್ಳುವದು, ಆ ವೇದನೆಯ ಕಾರಣಗಳನ್ನು ಶೋಧಿಸುವದು, ತೋಚಿದ ಉಪಾಯಗಳಲ್ಲಿ ಪರಿಣಾಮಕಾರಕವಾದ, ಮಂಗಲಮಯವಾದ, ಹೆಚ್ಚು ಸತ್ಯಮಯವಾದ ಉಪಾಯವನ್ನು ಕಂಡುಹಿಡಿಯುವದು, ಮತ್ತು ಅದನ್ನು ಆಚರಣೆಯಲ್ಲಿ ತರುವದಕ್ಕಾಗಿ ಇಡೀ ಆಯುಷ್ಯವನ್ನೇ ವೆಚ್ಚಮಾಡುವದು ಋಷಿಗಳ ಮಹಾನ್ ಧ್ಯೇಯವಾಗಿದೆ. ಈ ರೀತಿ ಪ್ರಯೋಗಗಳನ್ನು ಮಾಡುತ್ತ ಅವರು ಪ್ರಾಣವನ್ನು ಅರ್ಪಿಸುತ್ತಾರೆ. ಪ್ರಾಚೀನ ಕಾಲದಿಂದ ಇಂಥ ಸಂತರು ಭಾರತೀಯ ಸಂಸ್ಕೃತಿಯಲ್ಲಿ ಆಗಿದ್ದಾರೆ; ಇಂದಾದರೂ ಇದ್ದಾರೆ. ಇಂಥ ಪ್ರಯೋಗಗಳನ್ನು ಮಾಡುವ ನಿರ್ಭಯ, ಸತ್ಯಮಯ ಮತ್ತು ಧ್ಯೇಯನಿಷ್ಠ ವೀರರೇ ಸಮಾಜವನ್ನು ಮುಂದಕ್ಕೆ ಒಯ್ಯುತ್ತಾರೆ. ಇಂಥ ಜ್ಞಾನೋಪಾಸಕರಾದ ವಿಷ್ಣು ವೀರರು ಯಾರಿಗೂ ಅಂಜುವದಿಲ್ಲ. ಯಾವ ಸತ್ತಾಧಿಕಾರಿಗಳಿಗೂ ಅಂಜುವಂತಿಲ್ಲ. ಇವರು ಧ್ಯೇಯಕ್ಕೆ ಮತ್ತು ದೇವರಿದುರು ಮಾತ್ರ ಬಾಗುವರು. ಧ್ಯೇಯ ದೇವರ ಹೊರತು ಇನ್ನೊಂದು ದೇವರಿಲ್ಲ ಇವರಿಗೆ.

ಈ ರೀತಿ ಧ್ಯೇಯದಿಂದಲೆ ಉರಿಯುವ ಮಹಾತ್ಮನೊಬ್ಬನು ನಿಂತರೆ ಇಡೀ ಸಮಾಜವೇ ಎಚ್ಚರಿಯದೆ ಇರಲಾರದು. ಅವನ ಮಹಾನ್ ಪ್ರಯೋಗದಲ್ಲಿ ಜನರೆಲ್ಲರೂ ಸಹಕರಿಸುವರು. ದೊಡ್ಡದೊಂದು ವೃಕ್ಷ ತಪಸ್ಸೆಯಿಂದ ಸಾವಕಾಶವಾಗಿ ಬೆಳೆಯುತ್ತದೆ. ಮತ್ತು ಅದಕ್ಕೆ ಹಣ್ಣುಗಳು ಬರುತ್ತವೆ. ಆ ಮೇಲೆ ಗಾಳಿಯು ಬೀಸುವದು. ಹಣ್ಣುಗಳು ಉದುರಿ ಬೀಳುವವು. ಒಣಗಿ ಬೀಜಗಳು ಹೊರಬರುವವು. ಆ ವೃಕ್ಷದ ಬೀಜಗಳನ್ನು ಬಿರುಗಾಳಿಯು ಎಲ್ಲ ದಿಕ್ಕುಗಳಲ್ಲಿ ಬೀರುವದು; ಆ ಮೇಲೆ ದೊಡ್ಡ ದೊಡ್ಡ ಅರಣ್ಯಗಳಾಗುವವು. ಇದೇ ರೀತಿ ಭವ್ಯ-ದಿವ್ಯವಾದ ಸತ್ಯದ ಪ್ರಯೋಗಗಳನ್ನು ಮಾಡುವವನು ಹುಟ್ಟುವನು. ಅವನು ಏರ್ಪಡಿಸಿದ ಪ್ರಯೋಗಗಳ ಬೀಜಗಳು ಲಕ್ಷಾವಧಿ ಹೃದಯಗಳಲ್ಲಿ ನಾಟುವವು. ಆ ಮೇಲೆ ಇಂಥವನ ಸುತ್ತಲು ಅವನ ಧ್ಯೇಯದ ಲಕ್ಷಾವಧಿ ಉಪಾಸಕರು ನಿಲ್ಲುವರು. ಯಾಕಂದರೆ ಮನುಷ್ಯನು ನಿಜವಾಗಿ ಸತ್ಯಮಯನಾಗಿದ್ದಾನೆ. ಅವನ ಆತ್ಮನ ಹುಟ್ಟುಸ್ವಭಾವವು ಎಚ್ಚರಗೊಳ್ಳು

ತ್ತದೆ. ಮಂಗಲಕರವಾದ ಕರೆಯನ್ನು ಅವನ ಹೃದಯವು ಲಾಲಿಸುತ್ತದೆ.

ದೊಡ್ಡ ಚಳವಳಿಯು ಬೆಳೆಯುವ ರೀತಿ ಇದು. ಪ್ರಚಂಡ ಕ್ರಾಂತಿಗಳು ಹಬ್ಬುವ ಬಗೆ ಇದು. ಮಾನವ ಜಾತಿಯು ಒಂದು ಹೆಜ್ಜೆ ಮುಂದುವರಿಯುವದು. ಈ ರೀತಿ ಪ್ರಯೋಗಗಳನ್ನು ಮಾಡುತ್ತ ನಡೆದದೆ ಮಾನವ ಜನಾಂಗವು. ಪ್ರಯೋಗಗಳನ್ನು ಮಾಡದೆ ಇರುವ ಸಮಾಜವು ಅಳಿಯುವದು; ಈ ರೀತಿ ಪ್ರಯೋಗಗಳನ್ನು ಏರ್ಪಡಿಸದೇ ಇದ್ದ ಸಂಸ್ಕೃತಿಗೆ ಒಂದು ಪೈ ಸಹ ಬೆಲೆ ಇಲ್ಲ.

---

## ೫. ವರ್ಣ

ವರ್ಣಾಶ್ರಮ ಧರ್ಮವೆಂಬ ಶಬ್ದಸಮುಚ್ಚಯವನ್ನು ನಾವು ಬಹಳ ಸಾರೆ ಕೇಳಿದ್ದೇವೆ. ವರ್ಣಾಶ್ರಮ ಸ್ವರಾಜ್ಯ ಸಂಘವೆಂಬ ಹೆಸರಿನ ಸಂಘವೂ ಇದೆ. ಆದರೆ ವರ್ಣ, ಸಂಘ ಇವುಗಳನ್ನು ಕುರಿತು ಗಂಭೀರವಾದ ವಿಚಾರವು ಆದದ್ದು ವಿಶೇಷವಾಗಿ ಎಲ್ಲಿಯೂ ಕಂಡು ಬರುವದಿಲ್ಲ. ಈ ಪ್ರಕರಣದಲ್ಲಿ ವರ್ಣವನ್ನು ಕುರಿತು ಅಲ್ಪ ಸ್ವಲ್ಪ ವಿವೇಚನವನ್ನು ಮಾಡುವಾ.

ಪ್ರತಿಯೊಬ್ಬನು ತನ್ನ ತನ್ನ ವರ್ಣದಂತೆ ನಡೆಯಬೇಕೆಂದು ಹೇಳಲಾಗುತ್ತದೆ. ವರ್ಣದಂತೆ ನಡೆಯುವದೆಂದರೆ ಏನು? ಬ್ರಾಹ್ಮಣ, ವೈಶ್ಯ, ಕ್ಷತ್ರಿಯ, ಶೂದ್ರರು ತಮ್ಮ ಧರ್ಮದಂತೆ ವೃತ್ತಿಯಂತೆ ನಡೆಯಬೇಕೆಂದು ಹೇಳಲಾಗುತ್ತದೆ. ಹೀಗೆನ್ನುವದೆಂದರೆ ಒಂದು ಮಾತು ನಾವು ಗ್ರಹಿಸಿದಂತೆ. ಅದೆಂದರೆ ತಾಯಿತಂದೆಯರಲ್ಲಿದ್ದ ಎಲ್ಲ ಗುಣಧರ್ಮಗಳು ಮಕ್ಕಳಲ್ಲಿ ಇದ್ದೇ ಇರುತ್ತವೆ ಎಂಬ ಮಾತು. ಆದರೆ ಪ್ರಪಂಚದಲ್ಲಿ ಹೀಗಿದ್ದದ್ದು ನಮಗೆ ಕಂಡುಬರುವದಿಲ್ಲ. ತಾಯಿತಂದೆಗಳ ಬೇಕು ಬೇಡಗಳು ಮತ್ತು ಮಕ್ಕಳ ಬೇಕು ಬೇಡಗಳು ಭಿನ್ನವಿರುತ್ತವೆ. ತಾಯಿತಂದೆಯನ್ನು ತೀರ ಹೋಲದೇ ಇದ್ದಂಥ ಮಕ್ಕಳನ್ನು ನಾವು ಕಾಣುತ್ತೇವೆ. ಹಿರಣ್ಯಕಶ್ಯಪನ ಹೊಟ್ಟೆಯಲ್ಲಿ ಪ್ರಲ್ಹಾದನು ಹುಟ್ಟುವನು.

ತಾಯಿ ತಂದೆಯರ ಗುಣಗಳು ಮಕ್ಕಳಲ್ಲಿ ಬರದಿದ್ದರೂ, ಸುತ್ತು ಮುತ್ತಲಿನ ವಾತಾವರಣದ ಪರಿಣಾಮವು ಬಾಲಮನಸ್ಸಿನ ಮೇಲೆ ಆಗದೇ

ಇರುವದಿಲ್ಲ. ಅವರ ಜೀವನದಲ್ಲಿ ಅದು ಮೂಡುವದು. ಕೀರ್ತನಕಾರರ ಮಕ್ಕಳು. ಮನೆಯಲ್ಲಿ ಕವಿತೆ-ಕಥೆಗಳನ್ನು ಕೇಳುವರು, ಹಾಡುವವನ ಮಕ್ಕಳು ತಂಬೂರಿ, ಪೇಟಿ, ತಬಲಾ ಇವುಗಳ ಜೊತೆಯಲ್ಲಿ ಬೆಳೆಯುವರು. ನೇಕಾರನ ಮಕ್ಕಳಿಗೆ ನೂಲುವದು, ಕೆಚ್ಚುವದು, ಹೆಣೆಯುವದು, ನೇಯುವದು ಇದರ ಪರಿಚಯವಾಗುವದು. ಒಕ್ಕಲಿಗರ ಮಕ್ಕಳಿಗೆ ರಂಟೆ, ಕುಂಟೆ, ಕೂರಿಗೆ, ಇವೇ ಮೊದಲಾದ ವಸ್ತುಗಳ ಪರಿಚಯವಾಗುವದು. ಸೈನಿಕರ ಹುಡುಗರು ಕುದುರೆಯ ಮೇಲೆ ಕೂಡ್ರುವರು, ಕತ್ತಿ, ಬಂದೂಕು ಹಿಡಿಯುವದನ್ನು ಕಲಿಯುವರು. ಅಂಗಡಿಕಾರರ ಮಕ್ಕಳು ತೂಗಲಿಕ್ಕೆ ಕಲಿಯುವರು. ಚಿತ್ರಕಾರನ ಮಗನು ಚಿತ್ರಗಳನ್ನು ನೋಡಿ ಮನರಂಜನೆಯನ್ನು ಮಾಡಿಕೊಳ್ಳುತ್ತಾನೆ. ಸಮಗಾರರ ಹುಡುಗರು ಚರ್ಮದೊಡನೆ ಆಡುವರು. ಹೀಗೆ ಆಯಾ ವಾತಾವರಣವನ್ನು ಹುಡುಗರು ಹೊಂದುವರು ಎಂಬ ಮಾತು ನಿಜ.

ಆದರೆ ಮನುಷ್ಯನು ಕೇವಲ ಪರಿಸ್ಥಿತಿಯ ದಾಸನೇ ? ಸುತ್ತುಮುತ್ತಲಿನ ವಾತಾವರಣದ ಪರಿಣಾಮವಾಗುವದು ನಿಜ. ಆದರೆ ಮೂಲತಃ ಅವನಲ್ಲಿ ಆ ಪರಿಸ್ಥಿತಿಯ ಗುಣವಿದ್ದರೆ ಪರಿಣಾಮವಾಗುವದು. ಬೀಜವೇ ಇಲ್ಲದಿದ್ದರೆ ಎಷ್ಟು ನೀರು ಸುರುವಿದ್ದರೂ ಅಂಕುರಿಸುವದು ಹೇಗೆ ? ಬೀಜವು ಬೇಕು. ಹುಟ್ಟುಗುಣಗಳು ಬೇಕು.

ಮಕ್ಕಳು ತಾಯಿತಂದೆಯರನ್ನು ಹೋಲುತ್ತಾರೆ. ಮತ್ತು ಪರಿಸ್ಥಿತಿಯ ಪರಿಣಾಮದಿಂದ ಮಕ್ಕಳ ಜೀವನದಲ್ಲಿ ಅವರ ವರ್ಣವು ಬರುವದೇ ಶಕ್ಯವಾದದ್ದು ಎಂದು ಪ್ರಾಚೀನಕಾಲದಲ್ಲಿ ಭಾವಿಸಿದರು. ಆ ಕಾಲದ ಪ್ರಯೋಗಗಳಿಗನುಸರಿಸಿ ಇದು ಯೋಗ್ಯವಿರಬಹುದು. ಆದರೆ ನಾವು ಅದನ್ನು ನಿಜವೆಂದು ಗ್ರಹಿಸುವ ಕಾರಣವಿಲ್ಲ. ಇಂದು ಶಾಸ್ತ್ರಗಳು ಹೆಚ್ಚಾಗಿವೆ, ಬೆಳೆದಿವೆ. ಶಾಸ್ತ್ರೀಯ ದೃಷ್ಟಿಯಿಂದ ವರ್ಣಚಿಕಿತ್ಸೆಯನ್ನು ಮಾಡುವದು ಸಾಧ್ಯವಿದೆ ಮತ್ತು ಅವಶ್ಯವೂ ಇದೆ.

ಪ್ರತಿಯೊಬ್ಬನು ತನ್ನ ವರ್ಣದಂತೆಯೇ ವರ್ತಿಸಬೇಕು. ಎಂಬ ಮಾತು ಸ್ವಯಂಸಿದ್ಧವಾದದ್ದು. ನಾವು ನಾಲ್ಕು ವರ್ಣಗಳನ್ನು ಗೊತ್ತುಪಡಿಸಿದೆವು. ಅವನ್ನು ವ್ಯಾಪಕದೃಷ್ಟಿಯಿಂದ ಗೊತ್ತುಪಡಿಸಿದ್ದೆವು. ಜ್ಞಾನೋಪಾಸನೆ ಮಾಡುವವರು ಬ್ರಾಹ್ಮಣರು; ಆದರೆ ಜ್ಞಾನವು ನೂರಾರು ವಿಧವಾಗಿದೆ. ಅನಂತ ವೇದಗಳಿವೆ. ಕಾಲದೊಡನೆ ಜ್ಞಾನವೂ ಬೆಳೆಯಲಿದೆ.

ಮಾನಸ, ನೀತಿ, ಅಧ್ಯಾತ್ಮ, ಪುನರ್ಜನ್ಮ, ಸೃಷ್ಟಿ, ಜ್ಯೋತಿಷ್ಯ, ರಸಾಯನ, ವಾತಾವರಣ, ವಿದ್ಯುತ್, ಸಂಗೀತ, ದೇಹ, ಶಸ್ತ್ರಕ್ರಿಯಾ, ಭೂಗರ್ಭ, ಪ್ರಾಣಿ, ಬೀಜ ಮುಂತಾದ ನೂರಾರು ಶಾಸ್ತ್ರಗಳಿವೆ. ಜ್ಞಾನೋಪಾಸನೆ ಮಾಡುವದೊಂದು ವರ್ಣವು, ಆದರೆ ಈ ವರ್ಣದಲ್ಲಿ ನೂರಾರು ಅಂಗಗಳಿವೆ.

ಇದರಂತೆ ಕ್ಷತ್ರಿಯವರ್ಣ. ವಿಮಾನಯುದ್ಧ, ನೌಕಾಯುದ್ಧ, ಜಲಯುದ್ಧ, ವಾಯುಯುದ್ಧ ಹೀಗೆ ನೂರಾರು ಬಗೆಯ ಯುದ್ಧಗಳಿವೆ.

ವೈಶ್ಯವರ್ಣ. ಕೃಷಿ, ಗೋರಕ್ಷಣ, ವಾಣಿಜ್ಯವೆಂದರೆ ವೈಶ್ಯವರ್ಣದ ಕರ್ಮಗಳು. ಆದರೆ ಈ ಪ್ರತಿಯೊಂದು ಕರ್ಮದಲ್ಲಿ ಮತ್ತೆ ನೂರಾರು ಭಾಗಗಳಿವೆ. ಕೆಲವರು ತಂಬಾಕ, ಹತ್ತಿ, ಗೋದಿ, ಶೇಂಗಾ ಬೆಳೆಯುವರು. ಮತ್ತೆ ಕೆಲವರು ಹಣ್ಣುಗಳನ್ನು ಬೆಳೆಯುವರು. ಕೃಷಿಕರ್ಮಗಳಲ್ಲಿದ್ದ ವಿಭಾಗಗಳಂತೆ ವಾಣಿಜ್ಯದಲ್ಲಿಯೂ ಇವೆ. ಹತ್ತಿ, ಧಾತು, ತುಪ್ಪ, ಕಬ್ಬಿಣ, ಅರಿವೆ ಇವೇ ಮುಂತಾದ ವಸ್ತುಗಳನ್ನು ಮಾರುವ ಬೇರೆ ಬೇರೆ ವ್ಯಾಪಾರಸ್ಥರಿದ್ದಾರೆ. ಇದರಂತೆ ಉದ್ಯೋಗ ದಂಧೆಗಳು ನೂರಾರು ಬಗೆಯವು. ಆಯಾ ಉದ್ಯೋಗಗಳಲ್ಲಿ ಕೆಲಸ ಮಾಡುವವರು ಶೂದ್ರವರ್ಣಕ್ಕೆ ಸೇರಿದವರು.

ಹೀಗೆ ನಾಲ್ಕು ವರ್ಣಗಳಲ್ಲಿ ಸಾವಿರಾರು ವಿಧಗಳಿವೆ. ಈ ಸಾವಿರಾರು ವಿಧಗಳಲ್ಲಿ ಹುಡುಗರು ಯಾವದನ್ನು ಅಂಗೀಕರಿಸಬೇಕು ? ಇವುಗಳಲ್ಲಿಯ ಯಾವ ವರ್ಣಕ್ಕೆ ಸೇರಬೇಕು ?

ವರ್ಣವೆಂದರೆ ಬಣ್ಣ. ದೇವರು ನನಗೆ ಕೊಟ್ಟ ಬಣ್ಣವು ಯಾವುದು? ಯಾವ ಗುಣಧರ್ಮಗಳನ್ನಿತ್ತು ನನ್ನನ್ನು ಈ ಲೋಕಕ್ಕೆ ಕಳಿಸಿದ್ದಾನೆ. "ಕೂವು" ಎನ್ನುವದು ಕೋಗಿಲೆಯ ಜೀವನದ ಬಣ್ಣವು. ಮಧುರವಾದ ಪರಿಮಲವನ್ನು ಹರಡುವದು ಗುಲಾಬೀ ಹೂವಿನ ಧರ್ಮವು. ನನ್ನಿಂದ ಯಾವ ಪರಿಮಲವು ಹೊರಸೂಸುವದದೆ ? ಯಾವ ಬಣ್ಣದ ವಿಕಾಸವನ್ನು ನಾನು ಮಾಡತಕ್ಕದ್ದು ಅದೆ ?

ಪ್ರತಿಯೊಬ್ಬನಲ್ಲಿದ್ದ ಗುಣಧರ್ಮದ ಪರೀಕ್ಷೆಯನ್ನು ಮಾಡದೆ ಇದು ಹೇಗೆ ತಿಳಿಯುವದು ? ಯಾವ ಬಣ್ಣವನ್ನು ತಕ್ಕೊಂಡು ಬಾಲಕನು ಹುಟ್ಟಿದ್ದಾನೆ ? ಇದನ್ನರಿಯಬೇಕಾದರೆ ಶಾಸ್ತ್ರೀಯ ಸಂಶೋಧನೆಯು ಅವಶ್ಯ. ನಾವೆಲ್ಲರು ಹುಟ್ಟಿದಾಗ ಒಂದೇ ವರ್ಣದವರಿರುತ್ತೇವೆಂದು ಕೆಲವು ಸ್ಮೃತಿ

ಗಳಲ್ಲಿ ಹೇಳಿದೆ. ಮೊದಲು ನಮಗೆ ವರ್ಣವಿರುವದಿಲ್ಲ. ಇದರ ಅರ್ಥ ವೇನು ? ವರ್ಣವೇನೋ ಇರುತ್ತದೆ. ಆದರೆ ಸ್ಪಷ್ಟವಾಗಿರುವದಿಲ್ಲ. ಎಂಟು ವರ್ಷದವರೆಗೆ ನಾವು ವರ್ಣಹೀನರಿರುತ್ತೇವೆ. ವರ್ಣವು ತಿಳಿದ ಮೇಲೆ ಉಪನಯನವನ್ನು ಮಾಡುವದು. ವರ್ಣವು ತಿಳಿಯದಿದ್ದರೆ ಉಪನಯನ ವನ್ನು ಮಾಡುವದಾದರೂ ಹೇಗೆ ?

ಎಂಟು, ಹತ್ತು ವರ್ಷದವರಾದ ಮೇಲೆ ಹುಡುಗರ ಬಣ್ಣ ತಿಳಿಯ ಹತ್ತುತ್ತದೆ. ಕೆಲವರಿಗೆ ಓದುವದೇ ಸೇರುತ್ತದೆ. ಯಾವನಾದರೊಬ್ಬನು ಹಾಡುತ್ತ ಕೂಡ್ರುವನು. ಮತ್ತೊಬ್ಬನು ಗಡಿಯಾರವನ್ನು ಜೋಡಿಸುವನು. ಮತ್ತೆ ಕೆಲವರು ಕುಸ್ತಿ ಆಡುವರು, ಗಿಡಗಂಟಿಗಳಲ್ಲಿ ಮಗ್ನರಾಗುವರು, ಹೊಡೆದಾಡುವರು, ಪಕ್ಷಿಗಳನ್ನು ಕವಣೆಯಿಂದ ಕೊಲ್ಲುವರು. ಭಿನ್ನ ಭಿನ್ನ ಒಲುವುಗಳು ಹುಡುಗರಲ್ಲಿ ಕಂಡುಬರುವವು. ಬೇರೆ ಬೇರೆ ಗುಣ ಧರ್ಮ ಗಳು ತೋರುವವು.

ಸ್ವತಂತ್ರ ದೇಶಗಳಲ್ಲಿ ಶಿಕ್ಷಣ ಕ್ಷೇತ್ರದಲ್ಲಿ ಬೇರೆ ಬೇರೆ ಪ್ರಯೋಗ ಗಳನ್ನು ಏರ್ಪಡಿಸುತ್ತಾರೆ. ಹುಡುಗರ ಹುಟ್ಟುಗುಣವನ್ನರಿಯಲು ಯತ್ನಿ ಸುತ್ತಾರೆ. ದೊಡ್ಡ ಪ್ರಯೋಗಾಲಯದಲ್ಲಿ ನೂರಾರು ವಸ್ತುಗಳನ್ನು ಇಡು ತ್ತಾರೆ. ಅಲ್ಲಿ ಬಣ್ಣಗಳು ಇರುತ್ತವೆ; ವಾದ್ಯಗಳೂ, ಯಂತ್ರಗಳೂ, ಪುಸ್ತಕ ಗಳೂ ಇರುತ್ತವೆ. ಸುತ್ತಲಿನ ತೋಟದಲ್ಲಿ ಕುದುರೆಗಳು, ಹೂವಿನ ಗಿಡಗಳು, ಬೇರೆ ಬೇರೆ ತರಹದ ಧಾನ್ಯಗಳು, ಸಾಯಕಲ್ಲುಗಳು, ಹೀಗೆ ಅನೇಕ ನಮೂನೆಯ ವಸ್ತುಗಳನ್ನು ಇಡುತ್ತಾರೆ. ಹುಡುಗರಿಗೆ ಆ ಪ್ರಯೋಗಾಲ ಯದಲ್ಲಿ ಮತ್ತು ಸುತ್ತು ಮುತ್ತಲಿನ ತೋಟದಲ್ಲಿ ಅಡ್ಡಾಡಲು, ಆಡಲು ಹೇಳುತ್ತಾರೆ. ಕೆಲವು ಶಿಕ್ಷಕರು ಅವರನ್ನು ನಿರೀಕ್ಷಿಸುತ್ತಾರೆ. ಆ ಬಾಲ ಕರು ಯಾವ ಯಾವ ವಸ್ತುವಿನೊಡನೆ ಆಡಬಯಸುತ್ತಾರೆ, ಯಾವ ವಸ್ತುಗಳು ಅವರಿಗೆ ಸೇರುತ್ತವೆ, ಇದನ್ನು ನೋಡಿ, ಆಮೇಲೆ ಈ ಶಿಕ್ಷಕರು ಟಿಪ್ಪಣಿ ಮಾಡಿ ಇಡುವರು. ಈ ರೀತಿ ಕೆಲವು ದಿನ ನಿರೀಕ್ಷಣೆ ಮಾಡಿ ಆ ಬಾಲಕರ ಸೇರಿಕೆಗಳನ್ನು ಅರಿತು ಅವರ ಪಾಲಕರಿಗೆ ಅವರವರ ಮಕ್ಕಳ ಒಲವು ತಿಳಿಸುವರು. ಆಮೇಲೆ ಆಯಾ ವಿದ್ಯಾರ್ಥಿಗಳ ಗುಣ ಧರ್ಮಗಳು ವಿಕಾಸಹೊಂದುವಂತಹ ಶಿಕ್ಷಣವನ್ನು ದೊರಕಿಸಿಕೊಡುವದು ಪಾಲಕರ ಮತ್ತು ಶಿಕ್ಷಣ ಖಾತೆಯವರ ಕರ್ತವ್ಯವಾಗಿರುತ್ತದೆ.

ಉಪನಯನವೆಂದರೆ ವಿದ್ಯಾರ್ಥಿಗಳನ್ನು ಶಿಕ್ಷಕನಿಗೆ ಒಪ್ಪಿಸುವದು.

ಯಾವ ಶಿಕ್ಷಕನಿಗೆ ಒಪ್ಪಿಸಬೇಕು ? ಆಯಾ ವಿದ್ಯಾರ್ಥಿಗಳ ಹುಟ್ಟುಗುಣ ಧರ್ಮಗಳನ್ನು ವಿಕಾಸ ಮಾಡಲು ಶಕ್ಯವಿದ್ದ ಶಿಕ್ಷಕನಿಗೆ ಒಪ್ಪಿಸಬೇಕು. ಸಂಗೀತದಲ್ಲ ತರಬೇತಿ ಹೊಂದಬೇಕೆನ್ನುವ ವಿದ್ಯಾರ್ಥಿಯನ್ನು ಗಣಿತ ಶಿಕ್ಷಕನ ಕಡೆ ಒಪ್ಪಿಸಿದರೆ ಏನು ಪ್ರಯೋಜನ? ಅಂಥವನು ಆ ಬಾಲ ಕೋಗಿಲೆಯ ಗೋಣನ್ನು ಹಿಚುಕುವನು. ಆ ಹುಡುಗನ ಆತ್ಮದ ಕೊಲೆ ಯನ್ನೇ ಮಾಡುವನು.

ಯಾವ ರಾಷ್ಟ್ರದಲ್ಲಿ, ಯಾವ ರಾಜ್ಯದ ಆಡಳಿತೆಯಲ್ಲಿ ವ್ಯಕ್ತಿಯ ವರ್ಣದ ಯೋಗ್ಯ ಪರೀಕ್ಷೆಯಾಗಿ, ಆ ವರ್ಣದ ಅರಳುವಿಕೆಗೆ ಪೂರ್ಣ ಅವಸರವು ದೊರೆಯುವದೋ ಮತ್ತು ಅದರ ವಿಕಾಸದ ಮಾರ್ಗದಲ್ಲಿಯ ತೊಂದರೆಗಳೆಲ್ಲವೂ ದೂರವಾಗುವವೋ, ಆ ರಾಷ್ಟ್ರವು ನಿಜವಾಗಿ ಹಿರಿದಾದದ್ದು. ಅಲ್ಲಿಯ ಆಡಳಿತೆಯು ಆದರ್ಶವಾದದ್ದು.

ಆದರೆ ಸ್ವರಾಜ್ಯವಿಲ್ಲದೆ ಹೀಗೆ ಆಗುವದು ಅಶಕ್ಯ. ಇದಕ್ಕಾಗಿಯೇ ಸ್ವರಾಜ್ಯವು ಬೇಕು. ವ್ಯಕ್ತಿಗೆ ದೇವರು ಇತ್ತ ಗುಣಧರ್ಮಗಳ ವಿಕಾಸವಾಗ ಬೇಕೆಂದು ಸ್ವರಾಜ್ಯವು ಬೇಕು. ಸ್ವರಾಜ್ಯವಿಲ್ಲದವರಿಗೆ ನಿಜವಾದ ವರ್ಣ ವಿರುವದು ಅಸಾಧ್ಯವು. ಅಲ್ಲಿಯ ವರೆಗೆ ಹೆಸರಿಗೆ ಮಾತ್ರ ವರ್ಣಗಳು ಇರುವವು. ಆದರೆ ವ್ಯಕ್ತಿಯ ಗುಣಧರ್ಮದ ಶಾಸ್ತ್ರೀಯ ನಿರೀಕ್ಷಣೆ-ಪರೀಕ್ಷೆ ಆಗುವಂತಿಲ್ಲ. ವಿಕಾಸದ ಮಾರ್ಗದಲ್ಲಿಯ ತೊಂದರೆಗಳು ದೂರ ವಾಗುವಂತಿಲ್ಲ.

ಇಂದು ಶಿಕ್ಷಕರಿಗೆ ಅನುಭವದಿಂದ ಕಾಣುವ ಮಾತುಗಳು ಯಾವವು? ಬೇರೆ ಬೇರೆ ಗುಣಧರ್ಮದ ಹುಡುಗರ ಕೊಲೆ ನಡೆದದೆ ಇವತ್ತು. ಎಲ್ಲ ರಿಗೂ ಎಲ್ಲ ಕಾಲ ಅದೇ ಶಿಕ್ಷಣ, ವರ್ಣವಿಕಾಸಕ್ಕೆ ಅನುವಿಲ್ಲ. ಬಡ ತನದ ಮೂಲಕ ತಮ್ಮ ಸೇರಿಕೆಯ ಶಿಕ್ಷಣವನ್ನು ಪಡೆಯುವದು ಯಾವ ಹುಡುಗರಿಗೂ ಸಾಧ್ಯವಿಲ್ಲ. ನಿಜವಾದ ವರ್ಣಾಭಿಮಾನಿಯು ಸ್ವರಾಜ್ಯ ವನ್ನು ದೊರಕಿಸಲು ಪ್ರಾಣವನ್ನರ್ಪಿಸಲಿಕ್ಕೆ ಸಿದ್ಧನಾಗುವನು.

ಸಿರಿವಂತರಿಗೆ ತಮ್ಮ ವರ್ಣದಂತೆ ನಡೆದುಕೊಳ್ಳುವದು ಶಕ್ಯವಿದೆ. ಆದರೆ ಎಲ್ಲರಿಗೂ ಇದು ಶಕ್ಯವೇ? ಲೋಕಮಾನ್ಯರ ವರ್ಣವು ಯಾವ ದಿತ್ತು ? ತತ್ವಜ್ಞಾನದಲ್ಲಿ ತಲ್ಲೀನರಾಗುವದು, ಗಣಿತ ಶಾಸ್ತ್ರದಲ್ಲಿ ತೇಲಾಡು ವದು ಅವರ ಆತ್ಮದ ಧರ್ಮವಿತ್ತು. ಅವರು ಮನಸ್ಸು ಮಾಡಿದ್ದರೆ ಅವರಿಗೆ ಈ ಹುಟ್ಟುಗುಣದ ವಿಕಾಸವನ್ನು ಮಾಡುವದು ಸುಲಭವಿತ್ತು. ಆದರೆ

ಎಲ್ಲವನ್ನು ಭಕ್ಷಿಸುವ ಪಾರತಂತ್ರ್ಯದ ಸ್ಥಿತಿಯಲ್ಲಿ ಲಕ್ಷಾವಧಿ ಜೀವಗಳಿಗೆ ತಮ್ಮ ಗುಣಧರ್ಮಗಳ ಅರಳುವಿಕೆಯನ್ನು ಮಾಡುವದು ಅಸಾಧ್ಯವಿದ್ದದ್ದು ಅವರು ಕಂಡರು. ಅದಕ್ಕಾಗಿಯೇ ಅವರು ಅಂದರು—"ಎಲ್ಲರ ವಿಕಾಸದ ಮಾರ್ಗದಲ್ಲಿ ಅಡ್ಡಿ ಮಾಡುವ ಪಾರತಂತ್ರ್ಯವನ್ನು ಮೊದಲು ಹೋಗಲಾಡಿಸುವಾ.'' ಸ್ವರಾಜ್ಯಕ್ಕಾಗಿಯೇ ಲೋಕಮಾನ್ಯರು ದುಡಿದರು. ರಾಷ್ಟ್ರದಲ್ಲಿ ವರ್ಣವಿಕಾಸವು ನೆಟ್ಟಗೆ ಆಗಬೇಕು. ಇಂದಿಲ್ಲ ನಾಳೆಯಾದರೂ ನಿಜವಾದ ವರ್ಣವಿಕಾಸವು ದೇಶದಲ್ಲಿ ಹಬ್ಬಲಿ, ಎಂದು ಅವರು ಅವಿರತ ಶ್ರಮಪಟ್ಟರು.

ಮಹಾತ್ಮಾ ಗಾಂಧಿಯವರು ಒಮ್ಮೆ ಇದೇ ರೀತಿ ಅಂದರು. ಮಹಾತ್ಮರ ಒಲವು ಸಮಾಜ ಸುಧಾರಣೆಯ ಕಡೆಗೆ ಇದೆ. ಆದರೆ ರಾಷ್ಟ್ರವಿಕಾಸದ ಮಾರ್ಗದಲ್ಲಿ ನಿಜವಾಗಿ ಇದ್ದ ದೊಡ್ಡ ಅಡ್ಡಿಯೆಂದರೆ ಪಾರತಂತ್ರ್ಯವು. ಅದನ್ನು ದೂರಮಾಡಲು ಅವರು ಉದ್ಯುಕ್ತರಾಗಿದ್ದಾರೆ. ಇತಿಹಾಸಾಚಾರ್ಯ ರಾಜವಾಡೆಯವರು ಸಂತಾಪದಿಂದ ಅನ್ನುತ್ತಿದ್ದರು. "ಹೆಜ್ಜೆ ಹೆಜ್ಜೆಗೆ ಸ್ವರಾಜ್ಯದ ನೆನಪಾಗುತ್ತದೆ." ಸ್ವರಾಜ್ಯವಿದ್ದರೆ ಎಂಥ ವಿಶಾಲವಾದ ಜ್ಞಾನಕ್ಷೇತ್ರವನ್ನು ಗೆದ್ದು ತರುತ್ತಿದ್ದನೊ ಈ ವಿದ್ಯಾವಂತನು! ಇದರ ಕಲ್ಪನೆಯೇ ಬರುವಂತಿಲ್ಲ.

ಎಷ್ಟೋ ಕಲಾವಂತರು, ಶಾಸ್ತ್ರೀಯ ಸಂಶೋಧಕರು, ಶಾಸ್ತ್ರಜ್ಞರು, ಇಂದು ಈ ದಾಸ್ಯದಲ್ಲಿ ಮಣ್ಣುಪಾಲಾಗಿ ಸಾಯುತ್ತಿದ್ದಾರೆ. ಪಾರತಂತ್ರ್ಯದಿಂದ ಜಗತ್ತಿಗೆ ಆಗುವ ದೊಡ್ಡ ಹಾನಿ ಇದು.

ಸ್ವರಾಜ್ಯವು ವರ್ಣವಿಕಾಸಕ್ಕಾಗಿಯಾದರೂ ಬೇಕು. ಆದರೆ ಯಾವ ತರದ ಸ್ವರಾಜ್ಯದಲ್ಲಿ ಎಲ್ಲರ ವರ್ಣದ ವಿಕಾಸವಾಗುವದು? ಸಿರಿವಂತರ ಮುಂದಾಳುತನದಲ್ಲಿದ್ದ ಸ್ವರಾಜ್ಯದಲ್ಲಿ ಬಡಬಗ್ಗರ ಮಕ್ಕಳ ಗುಣಧರ್ಮಗಳ ಜೋಪಾಸನೆಯು ಮಾಡಲಾಗುವದೇ? ಎಲ್ಲರ ವರ್ಣವಿಕಾಸವಾಗಬೇಕಾದರೆ ಸಾಮ್ಯವಾದದ ಹೊರತು ಗತ್ಯಂತರವೇ ಇಲ್ಲ. ಸಾಮ್ಯವಾದದ ಅಡಿಗಲ್ಲಿನ ಮೇಲೆ ಸ್ಥಿರವಾದ ಆಡಳಿತದಲ್ಲಿಯೇ ಎಲ್ಲ ಜನರ ನಿಜವಾದ ಉಪನಯನವಾಗುವದು, ವರ್ಣವಿಕಾಸವಾಗುವದು.

"ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ'' ಎಂಬ ಶ್ರೀ ಗೀತೆಯಲ್ಲಿಯ ವಚನವನ್ನು ಅಂದದ್ದು ನಾವು ಮೇಲಿಂದ ಮೇಲೆ ಕೇಳುತ್ತೇವೆ. ಈ ಚರಣದಲ್ಲಿದ್ದ ಧರ್ಮ ಶಬ್ದದ ಅರ್ಥವು ಹಿಂದೂ ಧರ್ಮ, ಮುಸಲ್ಮಾನ ಧರ್ಮವೆಂಬುದು ಅಲ್ಲ. ಇಲ್ಲಿ ಧರ್ಮ ಶಬ್ದದ ಅರ್ಥವು

ವರ್ಣವೆಂದು ಅದೆ. ಅರ್ಜುನನು ಕ್ಷಾತ್ರವೃತ್ತಿಯವನು ಆಗಿದ್ದನು. ಉತ್ತರ ಗೋಗ್ರಹಣದ ವರೆಗೆ ಶತ್ರುಗಳ ರುಂಡಗಳನ್ನು ಚಂಡಿನಂತೆ ಹಾರಿಸಿದ್ದನು. ಅವರಲ್ಲಿಯೇ ಅವನಿಗೆ ಆನಂದವೆನಿಸುತ್ತಿತ್ತು. ಹುಟ್ಟುಗುಣವಾದ ಕ್ಷತ್ರಿಯ ವೃತ್ತಿಯನ್ನು ಮೋಹದಿಂದ ಅರ್ಜುನನು ಬಿಡಲು ಉದ್ಯುಕ್ತನಾಗಿದ್ದನು. ಅವನು ಸನ್ಯಾಸದ ಮಾತನ್ನು ಆಡಲಾರಂಭಿಸಿದ್ದನು. ಭಿಕ್ಷೆ ಬೇಡಿ ಜೀವಿಸುವೆನು ಅನ್ನುತ್ತಿದ್ದನು. ಆದರೆ ಇಂಥ ವೈರಾಗ್ಯವು ಉಳಿಯುವ ಬಗೆ ಹೇಗೆ? ಅವನು ಅಡವಿಯನ್ನು ಸೇರಿದ್ದೆ ಆಗಿದ್ದರೆ ಎಲ್ಲ ಚಿಗರೆಗಳನ್ನೂ ಪಕ್ಷಿಗಳನ್ನೂ ಕೊಂದು, ಅವುಗಳ ಮಾಂಸವನ್ನು ರುಚಿ ಮಾಡಿ ತಿನ್ನುತ್ತಿದ್ದನು. ಮತ್ತು ಅವನು ಅಪಹಾಸ್ಯಕ್ಕೀಡಾಗುತ್ತಿದ್ದನು. ಮನಸ್ಸಿನ ಒಲವಿನಿಂದ, ಚಿಂತನದಿಂದ, ವೈರಾಗ್ಯದಿಂದ ನಿಜವಾದ ಸನ್ಯಾಸವೃತ್ತಿಯು ಬಾರದಿದ್ದರೆ, ಕೇವಲ ಲಹರಿಯಿಂದ ಸನ್ಯಾಸಿಯಾಗುವದು ಡಂಭಾಚಾರವಾಗುತ್ತಿತ್ತು.

ಆತ್ಮದಲ್ಲಿ ಜಿರೆಯುವ ವೃತ್ತಿಯನ್ನು ಅಂಗೀಕರಿಸುವದೆಂದರೆ ಭೀತಿಯುಕ್ತವಾದದ್ದು ಮತ್ತು ಭಯಕಾರಕವಾದದ್ದು. ಅಂತರಂಗದಲ್ಲಿ ಆಸಕ್ತಿಯನ್ನಿಟ್ಟುಕೊಂಡು ಸನ್ಯಾಸಿಯಾದರೆ ಅದರಿಂದ ತನ್ನದೂ ಸಮಾಜದ್ದೂ ಅಧಃಪಾತವಾಗುತ್ತದೆ. ಶಿಕ್ಷಕವೃತ್ತಿ ಇರದವನು ಶಾಲೆಯಲ್ಲಿ ಕಲಿಸುವದೆಂದರೆ ರಾಷ್ಟ್ರದ ಮುಂದಿನ ಪೀಳಿಗೆಯನ್ನು ಅಪಾರ ಹಾನಿಗೆ ಈಡುಮಾಡಿದಂತೆ. ಇದರಿಂದ ಕಲಿಸುವವನ ಮನಸ್ಸಿಗೂ ಸಮಾಧಾನವಿಲ್ಲ. ಕಲಿಯುವವರಿಗೂ ಹಿತವಿಲ್ಲ. ಸಮಾಜವು ನಮ್ಮ ವರ್ಣವು ಕೀಳೆಂದು ಭಾವಿಸಿದರೂ ನಮ್ಮ ವರ್ಣಕ್ಕನುಸರಿಸಿಯೇ ನಾವು ಸಮಾಜಕ್ಕೆ ಸೇವೆಯನ್ನು ಸಲ್ಲಿಸಬೇಕು. ಅದರಿಂದಲೇ ನಮ್ಮ ವಿಕಾಸವಾಗುವದು. ಹಾಲು ನೀರಿನಕಿಂತ ಶ್ರೇಷ್ಠವಾದದ್ದು. ಆದರೆ ಮೀನವು ನೀರಿನಲ್ಲಿಯೇ ಬೆಳವಣಿಗೆಯನ್ನು ಹೊಂದುವದು; ಹಾಲಿನಲ್ಲಿ ಸಾಯುವದು. ನಮ್ಮ ನಮ್ಮ ಧರ್ಮದಂತೆ ನಡೆಯುವದೆಂದರೆ, ನಮ್ಮ ವರ್ಣದಂತೆ ವರ್ತಿಸುವದು. ಸ್ವಂತ ಗುಣಧರ್ಮಗಳಂತೆ ನಡೆಯಬೇಕು, ಮತ್ತು ಸೇವೆಯನ್ನು ಮಾಡಬೇಕು.

"ಯಾವದು ಇಲ್ಲದೆ ಪದಾರ್ಥವು ಇರುವದೇ ಅಸಾಧ್ಯವೊ, ಅದೇ ಧರ್ಮವು." ಎಂದು ಸಂಸ್ಕೃತ ವಾಙ್ಮಯದ ನ್ಯಾಯಶಾಸ್ತ್ರದಲ್ಲಿ ಧರ್ಮದ ವ್ಯಾಖ್ಯೆಯನ್ನು ಮಾಡಿದ್ದಾರೆ. ಸುಡುವದು ಅಗ್ನಿಯ ಧರ್ಮ. ಉಷ್ಣತೆ ಇಲ್ಲದೆ ಅಗ್ನಿಯು ಇರುವದು ಸಾಧ್ಯವೇ ಇಲ್ಲ. ಶೀತಲತೆಯು ನೀರಿನ

ಧರ್ಮ. ಪ್ರಕಾಶಿಸುವದು ಸೂರ್ಯನ ಧರ್ಮ. ನಾವು "ಸೂರ್ಯನಿಗೆ ನೀನು ಪ್ರಕಾಶಿಸಬೇಡ" ಎಂದು ಹೇಳಿದರೆ ಅವನು "ಹೀಗೆ ಮಾಡುವ ದೆಂದರೆ ನನ್ನ ಮರಣ'' ಎಂದು ಉತ್ತರ ಕೊಡುವನು. ಇದು ಧರ್ಮ ಶಬ್ದದ ಅರ್ಥವು. ''ಚರಕವನ್ನು ನಡಿಸಬೇಡಿರಿ'' ಎಂದು ಮಹಾತ್ಮರಿಗೆ ಹೇಳಿದರೆ "ಅದಿಲ್ಲದೆ ನಾನು ಜೀವದಿಂದ ಇರುವದು ಹೇಗೆ ?'' ಅನ್ನುವರು. "ನೀವು ಪದದಲಿತರಿಗಾಗಿ ಇಷ್ಟು ಕಷ್ಟಪಡಬೇಡಿರಿ'' ಎಂದು ಜವಾಹರ ಲಾಲರಿಗೆ ಅಂದರೆ ಅವರು "ನಾನು ಉಸಿರಾಡಿಸುವದಾದರೂ ಯಾತಕ್ಕೆ?'' ಎಂದು ಗದ್ದರಿಸುವರು.

ಯಾವದು ಇಲ್ಲದೆ ನಾವು ಉಳಿಯುವಂತಿಲ್ಲವೋ, ಯಾವದಕ್ಕಾಗಿ ಉಳಿಯಬೇಕು, ಇಲ್ಲದಿದ್ದರೆ ಅಳಿಯಬೇಕೆಂದು ಅನಿಸುತ್ತದೆಯೋ ಅದೇ ನಮ್ಮ ವರ್ಣಧರ್ಮವು. ಒಕ್ಕಲಿಗನಿಗೆ "ನೀನು ಹೊಲ ಹರಗಬೇಡ, ದನ ಗಳನ್ನು ಸಾಕಬೇಡ, ಕಪ್ಪಲಿ ಹೊಡೆಯ ಬೇಡ" ಎಂದು ಹೇಳಿದರೆ ಅವನು ಬೇಸರಿಯುವನು. ನಿಜವಾದ ಶಿಕ್ಷಕನು ಮೇ ತಿಂಗಳ ಸೂಟಿಯಲ್ಲಿ ಬೇಸರಿ ಯುವನು. ಕಲಿಸುವದು ಅವನಿಗೆ ನಿಜವಾಗಿ ಆನಂದದ ಮಾತು. "ಅಂಗಡಿ ಯಲ್ಲಿ ಕೂಡಬೇಡ, ಧಾರಣಿಯನ್ನು ಕೇಳಬೇಡ'' ಎಂದು ವ್ಯಾಪಾರಸ್ಥರಿಗೆ ಅಂದರೆ, ಅವರ ಜೀವನಕ್ಕೆ ಅರ್ಥವೇ ಇಲ್ಲದಂತಾಗುತ್ತದೆ. ನಮ್ಮ ಸೇರಿ ಕೆಯ ಸೇವೆಯ ಕರ್ಮವೆಂದರೆ ನಮ್ಮ ಪ್ರಾಣವು. ಅದಕ್ಕಾಗಿ ಉಳಿಯ ಬೇಕು, ಅಳಿಯಬೇಕೆಂದು ಅನಿಸುತ್ತದೆ.

ನಮ್ಮ ಎಲ್ಲ ಉದ್ಯೋಗಗಳು ನಮ್ಮದಾದ ವರ್ಣಕ್ಕಾಗಿ, ಸೇವಾ ಧರ್ಮಕ್ಕಾಗಿಯೇ ಇರಬೇಕು. ಹಗಲಿರುಳು ದುಡಿದು ನಮ್ಮ ವರ್ಣದ ವಿಕಾಸವನ್ನು ಮಾಡಲು ಬೇಕು. ಮತ್ತು ದೇವರ ಕಡೆಗೆ ಹೋಗಿ ಹೀಗೆ ಅನ್ನಬೇಕು—"ದೇವರೆ ! ನೀನು ಇತ್ತ ಬಂಡವಾಲವನ್ನು ನಾನು ಹೆಚ್ಚಿಸಿ ದೆನು. ಅದರಿಂದ ಸಮಾಜವು ಸುಖಿಯಾಯಿತು; ಸಮಾಜ ಪುರುಷನನ್ನು ಪೂಜಿಸಿದೆನು.'' ದೇವರು ಸಂತೋಷಪಟ್ಟು ನಿಮ್ಮನ್ನು ನಿಜವಾಗಿ ಅಪ್ಪಿ ಕೊಳ್ಳುವನು.

---

# ೬. ಕರ್ಮ

ಭಾರತೀಯ ಸಂಸ್ಕೃತಿಗೆ ಯಾವುದು ಮಹತ್ವವುಳ್ಳದ್ದು? ಸಮಾಜವೋ? ವ್ಯಕ್ತಿಯೋ? ಸಮಾಜಕ್ಕಾಗಿ ವ್ಯಕ್ತಿಯು ಇದೆ. ವ್ಯಕ್ತಿಯೇ ಮಾಯೆಯು. ಸಮಾಜವು ಸತ್ಯವಾದದ್ದು. ಅದ್ವೈತವು ಸತ್ಯವು. ದ್ವೈತವು ಮಿಥ್ಯ. ಸಂಸಾರವು ಮಿಥ್ಯವೆಂದು ಶಂಕರಾಚಾರ್ಯರು ಭಾವಿಸುತ್ತಾರೆ. ಇದರ ಅರ್ಥವೇನು? ವ್ಯಕ್ತಿಯ ಸಂಸಾರವು ಮಿಥ್ಯ. ಕೇವಲ ನಮ್ಮಷ್ಟಕ್ಕೆ ನಾವೇ ನೋಡಿಕೊಳ್ಳುವದೆಂದರೆ ಮಿಥ್ಯಾ ಮಾತು. ನನ್ನ ಸುತ್ತುಮುತ್ತಲಿನವರು ದುಃಖದಿಂದ ಬಳಲುವಾಗ ನಾನು ಸುಖದಿಂದಿರಬೇಕೆನ್ನುವದೆ ಭ್ರಮೆಯು. ನೆರೆಹೊರೆಯ ಮನೆಗಳಿಗೆ ಬೆಂಕಿಹತ್ತಿದಾಗ ನನ್ನ ಮನೆಯು ಸುರಕ್ಷಿತವಿರುವದು ಹೇಗೆ ಸಾಧ್ಯವು? ಪ್ರಪಂಚದಲ್ಲಿ ತಮ್ಮ ಮಟ್ಟಿಗೆ ಮಾತ್ರ ನೋಡಿಕೊಳ್ಳುವದು ಶಕ್ಯವಿಲ್ಲ. ಮನೆತನದಲ್ಲಿ ಪ್ರತಿಯೊಂದು ವ್ಯಕ್ತಿಯು ತಮ್ಮ ತಮ್ಮ ಮಟ್ಟಿಗೆ ನೋಡಹತ್ತಿದರೆ ಆ ಮನೆತನವು ಹಾಳಾಗುವದು. ಇಂಥ ಮನೆತನದಲ್ಲಿ ಆನಂದವು ಹೇಗೆ ಕಂಡು ಬರುವದು? ಸಮಾಧಾನವು ಹೇಗೆ ನೆಲೆಗೊಳ್ಳುವದು? ಮನೆತನದಲ್ಲಿಯ ಪ್ರತಿಯೊಬ್ಬನು ಇತರರ ಸುಖವೇ ತನ್ನ ಸುಖವೆಂದು ತಿಳಕೊಂಡರೆ ಆ ಮನೆತನವು ಮುಂದುವರಿಯುವದು. ಸುಖವೂ ಆನಂದವೂ ಅಲ್ಲಿ ಕಂಡುಬರುವವು.

ಮನೆತನದ ಮಾತೇ ಸಮಾಜಕ್ಕೆ, ಇಡೀ ಪ್ರಪಂಚಕ್ಕೆ. ನಮ್ಮ ಇರುವಿಕೆಯು ಸಮಾಜಕ್ಕಾಗಿ ಅದೆ, ಮಾನವ ಜಾತಿಗಾಗಿ ಅದೆ, ಎಲ್ಲ ಪ್ರಾಣಿಗಳಿಗಾಗಿ ಅದೆ; ಕಲ್ಲು ಅತ್ತಿತ್ತ ಬಿದ್ದರೆ ಅದಕ್ಕೆ ಬೆಲೆ ಇಲ್ಲ. ಆದರೆ ಅದೇ ಕಲ್ಲು ತಾಳ್ಮೆಯಿಂದ ಕಟ್ಟಡದಲ್ಲಿ ಕೂಡ್ರಿಸಿದರೆ ಅದಕ್ಕೆ ಅಮರತ್ವವು ಬರುವದು. ಮಹತ್ವವು ಪ್ರಾಪ್ತವಾಗುವದು. ಅದರಂತೆ ನಾವು ಸಮಾಜ ಮಂದಿರದಲ್ಲಿ ಯೋಗ್ಯ ಸ್ಥಾನದಲ್ಲಿ ನೆಲೆಗೊಳ್ಳಬೇಕು, ಮತ್ತು ಶೋಭಿಸಬೇಕು.

ಸಮಾಜವು ನಿಜವಾದದ್ದು. ವ್ಯಕ್ತಿಯು ಅಲ್ಲ. ಹೀಗೆನ್ನುವದೆಂದರೆ ವ್ಯಕ್ತಿಗೆ ಸ್ವಾತಂತ್ರ್ಯವೇ ಇಲ್ಲವೆಂದು ಅಲ್ಲ. ವ್ಯಕ್ತಿಯು ಸಮಾಜಕ್ಕಾಗಿ ಇರುವದು ನಿಜ. ವ್ಯಕ್ತಿಯು ತನ್ನ ಗುಣಧರ್ಮದಂತೆ ಸಮಾಜಕ್ಕಾಗಿ ಬಾಳುವದು. ನನ್ನಲ್ಲಿದ್ದ ವರ್ಣದ ವಿಕಾಸದಿಂದಲೇ ನಾನು ಸಮಾಜಕ್ಕೆ

ಸೇವೆಯನ್ನು ಸಲ್ಲಿಸುವೆನು. ನನ್ನ ಸೇರಿಕೆಯಂತೆ ನಾನು ಸಮಾಜಕ್ಕೆ ಸೇವೆಯನ್ನು ಸಲ್ಲಿಸುವೆನು. ಸಮಾಜವು ನನ್ನ ವರ್ಣವನ್ನು ನೋಂದಿಸುವದಿಲ್ಲ. ನನ್ನ ವರ್ಣದ ವಿಕಾಸಕ್ಕಾಗಿ ಬೇಕಾಗುವ ಎಲ್ಲ ಸೌಕರ್ಯಗಳನ್ನು ಸಮಾಜವು ನನಗೆ ಒದಗಿಸುವದು. ನನ್ನ ವಿಕಾಸದಿಂದಲೇ ನಾನು ಸಮಾಜವನ್ನು ಪೂಜಿಸುವೆನು. ನನ್ನ ವಿಕಾಸವು ಸಮಾಜವನ್ನು ಕಂಗೊಳಿಸುವದು, ಸುಖಿಸುವದು, ನಗಿಸುವದು, ಪೋಷಿಸುವದು. ನಾನು ಸಮಾಜಕ್ಕಾಗಿ, ಮತ್ತು ಸಮಾಜವು ನನಗಾಗಿ. ನನ್ನಿಂದ ಸಮಾಜಕ್ಕೆ ಶೋಭೆ, ಮತ್ತು ನನಗೆ ಸಮಾಜದಿಂದ ಶೋಭೆ. ಹೀಗಿದೆ ಪರಸ್ಪರ ಸಂಬಂಧವು.

ಮನುಷ್ಯನು ಸಮಾಜಕ್ಕಾಗಿ ದುಡಿಯಬೇಕು; ಆದರೆ ಅವನು ಯಾವ ತರದ ಸೇವೆಯನ್ನು ಸಲ್ಲಿಸಬೇಕು ? ಅದನ್ನು ನಿರ್ಣಯಿಸುವವರು ಯಾರು ?

ಉದ್ಯೋಗವಿಲ್ಲದೆ ಮನುಷ್ಯನು ಜೀವಿಸುವದು ಕಷ್ಟ. ನಾವೆಲ್ಲರೂ ಕರ್ಮಶೂನ್ಯರಾದರೆ ಸಮಾಜವು ನಡೆಯುವದಾದರೂ ಹೇಗೆ? ಇಡೀ ಸೃಷ್ಟಿಯು ಕೆಲಸದಲ್ಲಿ ತೊಡಗಿದೆ. ಪ್ರತಿಯೊಬ್ಬನು ಕರ್ಮವನ್ನು ಮಾಡಲೇಬೇಕು. ನಮ್ಮೆಲ್ಲರಿಗೂ ಹೃದಯವು ಇದೆ, ದೇಹವಿದೆ, ಬುದ್ಧಿ ಇದೆ. ಶರೀರದಿಂದ ಕರ್ಮವನ್ನು ಮಾಡುವದು. ಆ ಕರ್ಮವನ್ನು ಅಂತಃಕರಣದಿಂದ ಮಾಡಬೇಕು. ಮತ್ತು ಮಾಡುವಾಗ ಬುದ್ಧಿಯನ್ನು ಉಪಯೋಗಿಸಬೇಕು. ಹೀಗೆ ಹಗಲಿರುಳು ದೇಹ, ಹೃದಯ, ಮತ್ತು ಬುದ್ಧಿಗಳಿಂದ ಸಮಾಜಕ್ಕಾಗಿ ಆನಂದದಿಂದ ದುಡಿಯಬೇಕು, ಸವೆಯಬೇಕು.

ಆದರೆ ಎಂಥ ಕರ್ಮದಲ್ಲಿ ತೊಡಗಬೇಕು ? ನಮ್ಮ ಸೇರಿಕೆಗೆ ಸರಿಹೋಗುವ, ನಮ್ಮ ವರ್ಣಕ್ಕೆ ಹೊಂದುವ, ನಮ್ಮ ಒಲವಿಗನುಸರಿಸಿ ಇರುವ ಕರ್ಮದಲ್ಲಿಯೇ ತೊಡಗಬೇಕು. ಎರಡನೆಯವರು ಹೇರದೆ ಇದ್ದ ಮತ್ತು ನಮ್ಮ ಸೇರಿಕೆಗೆ ಸರಿಹೋಗುವ ಕರ್ಮದಲ್ಲಿಯೇ ತಲ್ಲೀನರಾಗುವೆವು. ನಮ್ಮ ಮನಸ್ಸಿನ ವಿರುದ್ಧ ನಮಗೆ ಕರ್ಮ ಮಾಡಬೇಕಾದರೆ ನಮ್ಮ ಆತ್ಮವು ದಣಿಯುವದು. ಅದರಿಂದ ಆನಂದವು ದೊರೆಯುವದಿಲ್ಲ. ನಮ್ಮಿಂದ ಆ ಕರ್ಮವು ಯೋಗ್ಯರೀತಿಯಿಂದ ನೆರವೇರಿಸುವದಾಗುವದಿಲ್ಲ. ನಮ್ಮ ಸೇರಿಕೆಗಳಿಗೆ ಹೋಲುವ ಕರ್ಮವನ್ನು ಕೈಕೊಂಡು ಆ ಕರ್ಮದಿಂದ ಸಮಾಜಕ್ಕೆ ಸೇವೆಯನ್ನು ಸಲ್ಲಿಸಬೇಕು. ಸೇವೆ ಸಲ್ಲಿಸುವ ಎಲ್ಲ ಕರ್ಮ

ಗಳೂ ಪವಿತ್ರವಾದವುಗಳು. ಯಾವ ಕರ್ಮವೂ ಮೇಲಲ್ಲ; ಹೀನವಲ್ಲ; ವರ್ಣಗಳಲ್ಲಿಯೂ ಕೀಳು ಮೇಲು ಈ ಭಾವವಿಲ್ಲ. ದೇವರಿಗೆ ಎಲ್ಲ ವರ್ಣಗಳು ಸಮವಿರುತ್ತವೆ! ಸೇವೆಯ ಎಲ್ಲ ಕರ್ಮಗಳ ಯೋಗ್ಯತೆಯೂ ಒಂದೇ.

ಆಯಾ ಕಾಲದಲ್ಲಿ ಸಮಾಜಕ್ಕೆ ಯೋಗ್ಯವಾದ ವಿಚಾರಗಳನ್ನು ಕೊಡುವವನು ಮತ್ತು ಧಾನ್ಯವನ್ನು ಸಲ್ಲಿಸುವ ಒಕ್ಕಲಿಗನು ಇವರಿಬ್ಬರೂ ಅಷ್ಟೇ ಯೋಗ್ಯತೆಯವರು. ಸಮಾಜವನ್ನು ರಕ್ಷಿಸುವ ಸೈನಿಕರು ಮತ್ತು ಸಮಾಜಕ್ಕೆ ಕಪ್ಪಲಿಗಳನ್ನು ತಯಾರಿಸುವ ಸಮಗಾರನು ಇಬ್ಬರೂ ಅಷ್ಟೇ ಶ್ರೇಷ್ಠರು. ಸಾಲೆಯಲ್ಲಿಯ ಶಿಕ್ಷಕನು ಮತ್ತು ಬೀದಿಗಳನ್ನು ಉಡುಗಿ ಸ್ವಚ್ಛಮಾಡುವ ಹೊಲೆಯನು ಇಬ್ಬರೂ ಅಷ್ಟೇ ಶ್ರೇಷ್ಠರು. ಅಂತಃಕರಣವನ್ನು ಸುರಿದು ವಿಚಾರದಿಂದ ಮಾಡಿದ ಸೇವಾಕರ್ಮವು ಮೋಕ್ಷವನ್ನು ದಯಪಾಲಿಸುವದು.

ಸ್ವಕರ್ಮದ ಆಚರಣೆಯಿಂದ ಮೋಕ್ಷವು ಸಾಧ್ಯವಾದದ್ದೆಂದು ಗೀತೆಯಲ್ಲಿ ಹೇಳಿದೆ. ಈಶ್ವರನಿಗೆ ಬೇರೆ ಹೂಗಳು ಸೇರುವದಿಲ್ಲ. ನಿಮ್ಮ ನಮ್ಮ ನಿತ್ಯದ ಕರ್ಮಗಳೆಂದರೆ ಹೂವುಗಳು. ಈ ಕರ್ಮಕುಸುಮಗಳು ರಸಮಯ ಮತ್ತು ಗಂಧಮಯ ಆವೆಯೋ ಇಲ್ಲವೋ ಎಂದು ನೋಡುವದೇ ನಮ್ಮ ಧರ್ಮವು.

ಪ್ರತಿಯೊಬ್ಬನ ಸ್ವಕರ್ಮವು ಭಿನ್ನವಾಗಿರುತ್ತದೆ. ಮತ್ತು ಅದು ಹಾಗೆ ಇರುವದು ಸಹಜವು. ದೇವರು ಒಂದೇ ಬಗೆಯ ಮಾನವರನ್ನು ನಿರ್ಮಿಸುವದಿಲ್ಲ. ಅಚ್ಚುಮನೆಯಿಂದ ಹೊರಟ ಆವೃತ್ತಿಗಳಂತೆ, ದೇವರು ಮಾನವರನ್ನು ಹೊರಗೆಡವುವದಿಲ್ಲ. ಈಶ್ವರನ ಪ್ರತಿಭೆಯು ಇಷ್ಟು ದುರ್ಬಲವಿಲ್ಲ. ನೂರಾರು ವಿಧದ ಪರಿಮಳದ ಮತ್ತು ಬಣ್ಣದ ಹೂಗಳನ್ನು ಅವನು ಅರಳಿಸುವನು. ಅದರಂತೆ ಈ ಜಗತ್ತಿನ ತೋಟದಲ್ಲಿ ಬೇರೆ ಬೇರೆ ಗುಣಧರ್ಮದ ಜನರನ್ನು ಅವನು ನಿರ್ಮಿಸುತ್ತಾನೆ. ತೋಟದಲ್ಲಿ ಬಗೆಬಗೆಯ ಹೂಗಳು ಇರುತ್ತವೆ. ಇವುಗಳಲ್ಲಿ ಹೆಚ್ಚಿನದು ಯಾವದು ? ಕನಿಷ್ಠ ತರಗತಿಯದು ಯಾವದು ? ಅದೇ ಬಣ್ಣದ, ಅದೇ ಪರಿಮಳದ, ಎಲ್ಲ ಹೂಗಳಾಗಿದ್ದರೆ ಯಾರಿಗೂ ಸರಿದೋರುವಂತಿಲ್ಲ. ಗುಲಾಬಿ, ಸಂಪಿಗೆ, ಮಲ್ಲಿಗೆ, ಕಣಗಲ, ಹೀಗೆ ಬೇರೆ ಬೇರೆ ತರದ ಹೂಗಳು ಬೇಕು. ಪ್ರತಿಯೊಂದು ಹೂವಿನ ಬಣ್ಣವೇ ಬೇರೆ, ವಾಸನೆಯೇ ಬೇರೆ. ವಿವಿಧತೆಯೇ ಉದ್ಯಾನದ ಶೋಭೆಯು.

ಹೂದೋಟದಲ್ಲಿ ಅಲ್ಲಲ್ಲಿ ಹಚ್ಚಗಾದ ಹುಲ್ಲು ಬೇಕು. ಅದಿಲ್ಲದೆ ಹೂಗಳು ಶೋಭಿಸಲಾರವು.

ಮಾನವೀ ಸಮಾಜದಲ್ಲಿ ಎಲ್ಲರೂ ಅದೇ ವರ್ಣದವರಾದರೆ ಜೀವನವು ಬೇಸರುಳ್ಳದ್ದಾಗುವದು. ಎಲ್ಲರೂ ಗಾಯಕರಾದರೆ, ಬಾರಿಸುವವರಾದರೆ, ಶಾಸ್ತ್ರಜ್ಞರಾದರೆ ಅಥವಾ ಕುಂಬಾರರಾದರೆ ಸಮಾಜವು ನಡೆಯುವಂತಿಲ್ಲ. ಸಮಾಜದಲ್ಲಿ ಆನಂದವು ಕಾಣುವಂತಿಲ್ಲ. ವಿವಿಧತೆಯಲ್ಲಿ ಆನಂದವು ಇದೆ. ಆದರೆ ಈ ವೈವಿಧ್ಯವು ಸಮಾಜಕ್ಕಾಗಿ ಅದೆ. ಅದು ಯಾರೊಬ್ಬನ ಸೊತ್ತು ಅಲ್ಲ.

ಹುರುಳಿಲ್ಲದ ಶ್ರೇಷ್ಠ ಕನಿಷ್ಠ ಭಾವವು ಸಮಾಜದಲ್ಲಿ ಹಬ್ಬದಿದ್ದರೆ ಮಾತ್ರ ಈ ವಿವಿಧತೆಯಿಂದ ಸಮಾಜದಲ್ಲಿ ಆನಂದವು ನೆಲೆಗೊಳ್ಳುವದು, ಕೀಳು ಮೇಲು ಎಂಬ ವಿಚಾರಗಳು ಭಾರತೀಯ ಸಂಸ್ಕೃತಿಯಲ್ಲಿ ಸೇರಿದಂದಿನಿಂದ ಈ ಸಂಸ್ಕೃತಿಯು ಪೊಳ್ಳಾಗಲಿಕ್ಕೆ ಹತ್ತಿದೆ. ನಮಗೆ ತಿಳಿಯದಂತೆ ಸಮಾಜವು ಅಧಃಪಾತಕ್ಕೆ ಈಡಾಗಿದೆ. ಈ ಒಲವಿನ ವಿರುದ್ಧ ಶ್ರೀಕೃಷ್ಣನು ಬಂಡಾಯವನ್ನು ಹೂಡಿದನು. ಸಮಾಜ ಸೇವೆಯ ಪ್ರತಿಯೊಂದು ಕರ್ಮವು ಶ್ರೇಷ್ಠವೆಂದು ತನ್ನ ಕೃತಿಯಿಂದ ತೋರಿಸಿದನು. ಶ್ರೀಕೃಷ್ಣನು ಆಕಳುಗಳನ್ನು ಕಾಯ್ದನು. ಸಾರಥಿಯಾಗಿ ತೋರಿಸಿದನು. ಎಂಜಲಗೋಮುವನ್ನು ಮಾಡಿದನು. ಮುಸುರಿಯನ್ನು ತೆಗೆದನು. ಮತ್ತು ಗೀತೆಯನ್ನು ಸಹ ಜಗತ್ತಿಗೆ ದಯಪಾಲಿಸಿದನು ! ಪ್ರತಿಯೊಂದು ಕರ್ಮವು ಪವಿತ್ರವಾದದ್ದೆಂದು ಈ ಮಹಾಪುರುಷನು ಡಂಗುರ ಸಾರಿದನು.

"ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಪಿ ಯಾಂತಿ ಪರಾಂಗತಿಮ್" ಎಂದು ಸಾರಿ, ಶ್ರೀಕೃಷ್ಣನು ಮೋಕ್ಷದ ಹೆಬ್ಬಾಗಿಲನ್ನು ತೆರೆದನು. ಸ್ತ್ರೀಯರಿಗೆ ಮೋಕ್ಷದ ಅಧಿಕಾರವಿಲ್ಲವಂತೆ, ಜ್ಞಾನದ ಅಧಿಕಾರವಿಲ್ಲವಂತೆ ! ಶ್ರೀಕೃಷ್ಣನು ಅನ್ನುತ್ತಾನೆ— "ಒಲೆಯ ಹತ್ತಿರ ಕೂಡುವ, ಬೀಸುವ, ಎಂಜಲವನ್ನು ತೆಗೆಯುವ, ತೊಟ್ಟಿಲವನ್ನು ತೂಗುವ ಸ್ತ್ರೀಯು ಮೋಕ್ಷದ ಅಧಿಕಾರಿ ಇದ್ದಾಳೆ." ಗಂಡನ ಸೇರಿಕೆಗಳನ್ನು ತನ್ನವಾಗಿ ಮಾಡಿಕೊಳ್ಳುವ, ಹಗಲಿರುಳು ಮಕ್ಕಳ ಜೋಪಾನದಲ್ಲಿಯೇ ತಲ್ಲೀನಳಾಗಿರುವ ಆ ಕರ್ಮಯೋಗಿನಿಗೆ ಅಲ್ಲದೆ, ಮತ್ತಾರಿಗೆ ಮೋಕ್ಷವು ಸಾಧ್ಯವಿದ್ದದ್ದು ?

ಸಮಾಜ ಸೇವೆಯ ಯಾವ ಕರ್ಮವನ್ನು ನೀವು ಕೈಕೊಂಡರೂ ಅದರಿಂದ ನೀವು ಮುಕ್ತರಾಗುವಿರಿ. ಸಂತರೆಲ್ಲರೂ ಇದನ್ನೇ ಹೇಳಿದ್ದಾರೆ.

ಈ ಸಂತರು ಬರೇ ತಾಳವನ್ನೆ ಕುಟ್ಟುವವರಿದ್ದಿಲ್ಲ. ಅವರು ಸೋಮಾರಿ ಗಳಿದ್ದಿಲ್ಲ. ಅವರು ಪರಪುಷ್ಟರೂ ಅಲ್ಲ. ಸಮಾಜದ ಮೇಲೆ ತಮ್ಮ ಭಾರ ವನ್ನು ಎಂದೂ ಹೇರಿದ್ದಿಲ್ಲ. ಬೇಕಾದ ಸಂತನ ಜೀವನವನ್ನು ಪರೀಕ್ಷಿಸಿ ನೋಡಿರಿ. ಅವನು ಯಾವದಿಲ್ಲ ಯಾವದಾದರೊಂದು ಸಮಾಜಕ್ಕೆ ಉಪ ಯುಕ್ತವಾದ ಕಾರ್ಯದಲ್ಲಿ ತೊಡಗಿದ್ದು ಕಂಡುಬರುವದು. ಕಬೀರನು ನೇಯುತ್ತಿದ್ದನು. ಗೋರಾಕುಂಬಾರನು ಗಡಿಗೆಗಳನ್ನು ತಯಾರಿಸುತ್ತಿ ದ್ದನು. ಸೇನಾ ಇವನು ಕಷ್ಟ ಮಾಡುತ್ತಿದ್ದನು. ಸಜನಕಸಾಯಿ ಇವನು ಕಟಿಕನಿದ್ದನು. ಈ ಎಲ್ಲ ಸಂತರು ಮೋಕ್ಷದ ಅಧಿಕಾರಿಗಳಾಗಿದ್ದರು.

ಕಟಿಕನು ಮುಕ್ತನಾಗುವದು ಹೇಗೆ? ಎಂದು ಯಾರಾವರೂ ಕೇಳ ಬಹುದು. ಸಮಾಜದಲ್ಲಿ ಮಾಂಸಾಹಾರವು ರೂಢವಿರುವವರೆಗೆ ಯಾರಾ ದರೂ ಈ ವ್ಯವಸಾಯವನ್ನು ಕೈಕೊಳ್ಳಲೇಬೇಕು. ಅದೂ ಒಂದು ಸಮಾಜ ಸೇವೆಯ ಕರ್ಮವಾಗುವದು. ಪ್ರಾಣಿಗಳನ್ನು ಕೊಲ್ಲುವ ಮನೆಯನ್ನು ನಗರಸಭೆಯವರು ಮಾಡಿಕೊಡುವರು. ದನಗಳಿಗೆ ನೋವಾಗದಂತೆ ಕೊಲ್ಲುವ ಮತ್ತು ಈ ಕೆಲಸದಲ್ಲಿಯೂ ಜ್ಞಾನವನ್ನು ಉಪಯೋಗಿಸುವ ಕಟಿಕನು ಮುಕ್ತನಾಗುವನು. ಇಂಥವರು ಹೊಲಸು ಹಬ್ಬಗೊಡುವದಿಲ್ಲ. ಸಿಕ್ಕ ಸಿಕ್ಕ ಸ್ಥಳದಲ್ಲಿ ದನಗಳನ್ನು ಕೊಯ್ಯುವದಿಲ್ಲ. ಚಿಕ್ಕ ಬಾಲಕರ ಕಣ್ಣಿಗೆ ಬೀಳದಂತೆ ತನ್ನ ಕೆಲಸವನ್ನು ಸಾಗಿಸುವನು. ಕೆಲವು ಕಟಗರು ಮಾಂಸವನ್ನು ಸಹ ತಿನ್ನುವದಿಲ್ಲ. ಆದರೆ ಅದು ಅವರ ಮನೆತನದ ಉದ್ಯೋಗವೆಂದು ಮತ್ತು ಸಮಾಜಕ್ಕೆ ಅವಶ್ಯವಿದ್ದ ಒಂದು ವ್ಯವಸಾಯ ವೆಂದು ನಡಿಸುತ್ತಾರೆ. ಗೊತ್ತಿಲ್ಲದವರ ಕಡೆಯಿಂದ ದನಗಳಿಗೆ ಕಷ್ಟವಾಗು ವಂತೆ ಅವನ್ನು ಕೊಯ್ಯಿಸುವದಕ್ಕಿಂತ, ಅರಿತವರು ಈ ಕೆಲಸವನ್ನು ಮಾಡು ವದು ಭೂತದಯೆಯ ದೃಷ್ಟಿಯಿಂದ ಹೆಚ್ಚು ಶ್ರೇಯಸ್ಕರವಾದದ್ದು. ಅನಾ ಸಕ್ತರಾಗಿ ಇಂಥ ಕಟಿಕರು ಈ ಕರ್ಮವನ್ನು ಮಾಡುವರು.

ಇದರಂತೆ ಫಾಶಿ ಕಂಬದ ಮೇಲೆ ಏರಿಸುವ ಹೊಲೆಯರು. ಫಾಶಿ ಶಿಕ್ಷೆಯು ಇರುವ ವರೆಗೆಯಾದರೂ ಯಾರಾದರೂ ಈ ಕರ್ಮವನ್ನು ಮಾಡ ಲೇಬೇಕು. ನುರಿತವರಿಗೆ ಇದನ್ನು ಒಪ್ಪಿಸುವದು ಫಾಶಿಗೆ ಗುರಿಯಾದ ಪ್ರಾಣಿಯ ದೃಷ್ಟಿಯಿಂದ ಲೇಸು. ಇಂಗ್ಲಂಡದಲ್ಲಿ ಒಂದು ಕಾಲಕ್ಕೆ ಸಮಾಜದಲ್ಲಿಯ ಯಾವನಾದರೂ ಮುಂದಾಳುವಿಗೆ ಫಾಶಿ ಶಿಕ್ಷೆಯನ್ನು ಕೊಡುವ ಪ್ರಸಂಗ ಬಂದರೆ ದೂರ ದೂರದಿಂದ ರುಂಡವನ್ನು ಹೊಡೆಯುವ

ದರಲ್ಲಿ ತರಬೇತಿ ಹೊಂದಿದವರನ್ನು ಕರೆಯಿಸುತ್ತಿದ್ದರು. ಆದಷ್ಟು ಆ ಕೈದಿಗೆ ಕಡಿಮೆ ದುಃಖವಾಗಬೇಕೆಂಬ ಉದ್ದೇಶವಿತ್ತು.

ಹೀಗೆ ಅನಾಸಕ್ತಿಯಿಂದ ತಮ್ಮ ಕರ್ಮವನ್ನು ಮಾಡುವ ಹೊಲೆಯನಿಗೆ ಮತ್ತು ಕಟುಕನಿಗೆ ಮೋಕ್ಷವಿದೆ. ಯಾರಾದರೂ ತಪ್ಪಿಗೆ ಹೊಣೆಗಾರರಿದ್ದರೆ, ಅದು ಸಮಾಜವು. ಅವರಲ್ಲ. ಈ ರೀತಿ ಸಮಾಜಕ್ಕೆ ಉಪಯೋಗವಾಗುವಂಥ ಎಲ್ಲ ಕರ್ಮಗಳನ್ನು ಮಾಡುವವರು ಮುಕ್ತರಾಗುತ್ತಾರೆಂದು ಗೀತೆಯು, ಮಹಾ ಭಾರತವು ಹೇಳುತ್ತದೆ. ಎಲ್ಲ ಕರ್ಮಗಳ ಬೆಲೆಯು ಒಂದೇ. ಯಾರಿಗೂ ಅಹಂಕಾರವೆನಿಸುವ ಕಾರಣವಿಲ್ಲ. ಯಾರೂ ಉಚ್ಚ ವರ್ಣದವರೆಂದು ಒಣ ಹೆಮ್ಮೆ ಪಡುವ ಕಾರಣವಿಲ್ಲ. ಯಾವನೂ ಕೀಳು ವರ್ಣದವನೆಂದು ತಲೆತಗ್ಗಿಸುವ ಆವಶ್ಯಕತೆ ಇಲ್ಲ. ಎಲ್ಲರೂ ಅಷ್ಟೇ ಶ್ರೇಷ್ಠರು, ಸಮಾನರು.

ಉಪನಿಷತ್ತಿನಲ್ಲಿ ಒಂದು ಸುಂದರವಾದ ಕಥೆಯಿದೆ. ಒಮ್ಮೆ ಇಂದ್ರ, ವಾಯು, ಅಗ್ನಿ ಮುಂತಾದ ದೇವತೆಗಳಲ್ಲಿ ಯಾರು ಶ್ರೇಷ್ಠರು ಎಂದು ವಾದವಿವಾದವು ನಡೆಯಿತು. "ನಾನು ಮಳೆಗರೆಯದಿದ್ದರೆ ಪೃಥ್ವಿಯು ಒಣಗಿ ಹೋಗುವದು; ಜೀವನವು ಅಶಕ್ಯವಾಗುವದು'' ಎಂದು ಇಂದ್ರನು. "ಒಂದು ವೇಳೆ ನೀರಿಲ್ಲದಿದ್ದರೆ ನಡೆಯಬಹುದು. ಆದರೆ ಹವೆಯು ಬೇಕು. ನಾನು ಒಂದು ಕ್ಷಣ ಇಲ್ಲದಿದ್ದರೆ ಉಸಿರು ಕಟ್ಟಿ ಎಲ್ಲರೂ ಸಾಯುವರು." ಎಂದು ವಾಯುವು. "ಉಷ್ಣತೆಯಿಲ್ಲದೆ ಯಾವ ಕೆಲಸವೂ ಸಾಗುವಂತೆ ಇಲ್ಲ'' ಎಂದು ಅಗ್ನಿಯು.

ಹೀಗೆ ವಾದವಿವಾದವು ನಡೆದಾಗ ಓರ್ವ ತೇಜಸ್ವಿನಿಯಾದ ದೇವತೆಯು ಅವರ ಎದುರಿಗೆ ಪ್ರಕಟಳಾದಳು. ಯಾರೆಂದು ಎಲ್ಲರೂ ವಿಚಾರದಲ್ಲಿ ಬಿದ್ದರು. ಅಗ್ನಿಯು ಅವಳ ಹತ್ತಿರ ಹೋಗಿ "ತಾವು ಯಾರು ?'' ಎಂದನು. ಉತ್ತರವನ್ನೀಯದೆ "ನೀನಾರು?'' ಎಂದು ಅಗ್ನಿಗೆ ಕೇಳಿದಳು. ಅಗ್ನಿಯು ಸಿಟ್ಟಿಗೆದ್ದು "ನಾನು ಯಾರು ಗೊತ್ತಿಲ್ಲವೆ ? ನಾನು ಅಗ್ನಿಯು'' ಎಂದು ದರ್ಪದಿಂದ ಅಂದನು. "ತಾವೇನು ಮಾಡಬಲ್ಲಿರಿ?'' ಎಂದು ಕೇಳಿದಳು. "ಬ್ರಹ್ಮಾಂಡವನ್ನೇ ಕ್ಷಣದಲ್ಲಿ ಸುಡಬಲ್ಲೆನು" ಎಂದು ಅಗ್ನಿಯು ಹೇಳಿದನು. "ಓಹೋ, ಹಾಗಾದರೆ ಈ ಕಡ್ಡಿಯನ್ನು ಸುಡಬಲ್ಲಿರಾ?'' ಎಂದಳವಳು. ತನ್ನಲ್ಲಿದ್ದ ಎಲ್ಲ ಜ್ವಾಲೆಗಳನ್ನು ಪ್ರಗಟ ಮಾಡಿದರೂ ಆ ಕಡ್ಡಿಯು ಸುಡಲಿಲ್ಲ. ಅಗ್ನಿಯು ನಾಚಿ ದೂರ ಸರಿದು ನಿಂತನು. ಇದ

ರಂತೆ ಅಹಂಕಾರಿಯಾದ ವಾಯುವಿಗೆ ಆ ಕಡ್ಡಿಯನ್ನು ಸರಿಸುವದಾಗಲಿಲ್ಲ. ಹೀಗೆ ಅಲ್ಲಿ ನೆರೆದ ಎಲ್ಲ ದೇವತೆಗಳು ಅಪಹಾಸ್ಯಕ್ಕೆ ಈಡಾದರು. ಕೊನೆಗೆ ಅಧ್ಯಾತ್ಮ ದೇವತೆಯಾದ ಆ ಉಮಾದೇವಿಯು ಎಲ್ಲರನ್ನುದ್ದೇಶಿಸಿ ಹೇಳಿದಳು. "ಮರುಳರೇ ! ನಾನು ಶ್ರೇಷ್ಠನು, ನಾನು ಶ್ರೇಷ್ಠನು ಎಂದು ಯಾಕೆ ಬಡಿದಾಡುತ್ತೀರಿ ? ಯಾರೂ ಶ್ರೇಷ್ಠರಲ್ಲ; ಕನಿಷ್ಠರೂ ಅಲ್ಲ. ಆ ವಿಶ್ವಶಕ್ತಿಯು ಇಂದ್ರನಿಗೆ ಮಳೆಗರೆಯುವ ಶಕ್ತಿಯನ್ನು ಕೊಟ್ಟಿದೆ. ಅದರಂತೆ ಎಲ್ಲ ದೇವರಿಗೆ. ಆ ಶಕ್ತಿಯನ್ನು ನಿಮ್ಮಿಂದ ಹೀರಿಕೊಂಡ ಮೇಲೆ ನೀವು ಹೆಣಗಳಿದ್ದಂತೆ. ಶಕ್ತಿ ಇದೆಯೆಂದು ಅಹಂಕಾರ ಪಡಬೇಡಿರಿ, ಯಾರನ್ನೂ ಹೀಯಾಳಿಸಬೇಡಿರಿ" ಎಂದು ಹೇಳಿ ಉಮಾದೇವಿಯು ಅದೃಶ್ಯಳಾದಳು.

ಈ ಕಥೆಯು ಬಹಳ ಬೋಧಪ್ರದವದೆ. ಜ್ಞಾನವನ್ನು ನೀಡುವ ಋಷಿಯು, ಬೀದಿಗಳನ್ನು ಉಡುಗುವ ಹೊಲೆಯನನ್ನು ಹೀನನೆಂದು ತಿಳಿಯಕೂಡದು. ಚಿತ್ರಕಾರನು ಹಾಡುವವರನ್ನು ಕಡಿಮೆಯವರೆಂದು ಧಿಃಕರಿಸಬಾರರು. ಕುಂಬಾರನು ನೇಕಾರನನ್ನು ಕನಿಷ್ಠನೆಂದು ಭಾವಿಸಬಾರದು. ನಾವೆಲ್ಲರು ಪರಸ್ಪರರಿಗೆ ನಮಸ್ಕಾರವನ್ನು ಮಾಡಬೇಕು. ಶರಣ, ಶರಣ ಅನ್ನಬೇಕು. ನಾನು ಶರಣ, ನೀನು ಶರಣ, ನೀನೂ ಪವಿತ್ರನು ನಾನೂ ಪವಿತ್ರನು.

ಮಲಮೂತ್ರವನ್ನು ಹೊತ್ತುಕೊಂಡು ಹೋಗುವ ಭಂಗಿಗೆ ಋಷಿಯು ಪ್ರಣಾಮನ್ನೀಯುವನು. ಅವನೂ ನಮ್ರತೆಯಿಂದ ಋಷಿಯನ್ನು ನಮಸ್ಕರಿಸುವನು. ಶರಣ, ಶರಣ, ರಾಮ ರಾಮ, ಸಲಾಮ ಅಲೇಕಂ, ಸಲಾಮ ಅಲೇಕಂ ಹೀಗನ್ನುತ್ತ ನಾವು ಆನಂದದಿಂದ ಬಾಳಬೇಕು.

ಆದರೆ ಶ್ರೀಕೃಷ್ಣನ ಈ ಹಿರಿದಾದ ವಿಶಾಲವಾದ ದೃಷ್ಟಿಯನ್ನು ಭಾರತ ವರ್ಷವು ಇಂದು ಮರೆತಿದೆ. ಕೀಳು ಮೇಲು ಎಂಬ ವಾದವು ಎಲ್ಲ ಕಡೆಯಲ್ಲಿ ಹಬ್ಬಿ ಸಮಾಜದ ಅಡಿಗಲ್ಲೇ ಪೊಳ್ಳಾಗಿದೆ. ಬುದ್ಧಿಜೀವಿಗಳು ಮತ್ತು ದುಡಿಯುವವರು ಹೀಗೆ ಸಮಾಜ ಪುರುಷನ ಎರಡು ತುಂಡುಗಳಾಗಿವೆ. ಬುದ್ಧಿಜೀವಿಗಳು ತಾವು ಮೇಲು ಎಂದು ಭಾವಿಸುತ್ತಾರೆ. ಮತ್ತು ದುಡಿಯುವವರನ್ನು ಕೀಳೆಂದು ಹೀಯಾಳಿಸುವರು. ಇಂದು ಸಿರಿಯನ್ನು ಹುಟ್ಟಿಸುವವನು ತುಚ್ಛನಾಗಿದ್ದಾನೆ; ಗಾದಿಯ ಮೇಲೆ ಕುಳಿತು ಸಂಪತ್ತಿಯನ್ನು ಉಪಭೋಗಿಸುವವರು ದೇವರಾಗಿದ್ದಾರೆ.

ರಾಮಾಯಣದಲ್ಲಿ ಒಂದು ಸಣ್ಣ ಕತೆ ಇದೆ. ರಾಮಚಂದ್ರ ಮತ್ತು ಶಬರಿ ಇವರು ಭೆಟ್ಟಿಯಾದ ಸಂದರ್ಭದಲ್ಲಿ ಬಂದಿದೆ. ಶ್ರೀರಾಮನು ಕೂತ ಕಾಡಿನಲ್ಲಿ ಅಲ್ಲಲ್ಲಿ ಎಂದೂ ಒಣಗದಂಥ, ಬಾಡದಂಥ ಮತ್ತು ಉತ್ತಮವಾದ ಪರಿಮಲವನ್ನು ಹರಡುವ ಹೂಗಳು ಇದ್ದವು. "ಈ ಹೂಗಳು ಇಲ್ಲಿ ಎಲ್ಲಿಂದ ಬಂದವು?'' ಎಂದು ರಾಮನು ಶಬರಿಗೆ ಕೇಳಿದನು. "ಈ ಹೂವಿನದೊಂದು ಇತಿಹಾಸವೇ ಇದೆ.'' ಎಂದಳು. "ಏನದು" ಎಂದು ಕೇಳಲಾಗಿ ಅವಳು ಹೇಳಿದಳು–"ಕೇಳು, ಶ್ರೀರಾಮಾ! ಇಲ್ಲಿ ಮಾತಂಗ ಋಷಿಯ ಆಶ್ರಮವಿತ್ತು. ಒಮ್ಮೆ ಆಶ್ರಮದಲ್ಲಿ ಉರುವಲು ಇದ್ದಿಲ್ಲವೆಂದು ಮಾತಂಗ ಋಷಿಯು ಚಿಂತೆಮಾಡುತ್ತಿದ್ದನು. ಆಶ್ರಮದಲ್ಲಿ ಬಹಳ ವಿದ್ಯಾರ್ಥಿಗಳಿದ್ದರು. ದೂರ ದೂರದ ಋಷಿ ಮುನಿಗಳು ಅಲ್ಲಿ ಬಂದು ವಾಸಮಾಡುತ್ತಿದ್ದರು. ಮಳೆಗಾಲವು ಸಮೀಪಿಸಿತ್ತು. ಮಳೆಗಾಲ ನಾಲ್ಕು ತಿಂಗಳ ಸಲುವಾಗಿ ಉರುವಲ ಸಂಗ್ರಹ ಮಾಡುವದು ಅವಶ್ಯವಾಗಿತ್ತು. ಆದರೆ ವಿದ್ಯಾರ್ಥಿಗಳು ಆ ಕೆಲಸವನ್ನು ಮಾಡಲು ಸಿದ್ಧರಿದ್ದಿಲ್ಲ. ಮುದುಕ ಮಾತಂಗ ಋಷಿಯು ಹೆಗಲ ಮೇಲೆ ಕೊಡಲಿಯನ್ನಿಟ್ಟುಕೊಂಡು ಹೊರಟನು. ಕೂಡಲೇ ಎಲ್ಲ ವಿದ್ಯಾರ್ಥಿಗಳೂ, ಆಶ್ರಮದಲ್ಲಿಯ ಎಲ್ಲ ಅತಿಥಿಗಳೂ ಕೊಡಲಿಯನ್ನು ತಕ್ಕೊಂಡು ಹೊರಟರು. ಎಲ್ಲರೂ ದೂರ ಅರಣ್ಯದಲ್ಲಿ ಹೋಗಿ, ಒಣ ಕಟ್ಟಿಗೆಗಳನ್ನು ಕಡಿದು ಸಣ್ಣ, ಸಣ್ಣ, ಒಜ್ಜೆಗಳನ್ನು ಮಾಡಿಕೊಂಡು ಮಧ್ಯಾಹ್ನದ ಬಿಸಿಲಿನಲ್ಲಿ ಬೆವರು ಸುರಿಸುತ್ತ ಬಂದರು. ಆ ಬೆವರು ಅಲ್ಲಲ್ಲಿ ಭೂಮಿಯ ಮೇಲೆ ಬೀಳುತ್ತಿತ್ತು. ಎಲ್ಲರೂ ಸಂಜೆಗೆ ಆಶ್ರಮಕ್ಕೆ ಬಂದರು. ಅವರೆಲ್ಲರೂ ದಣಿದು ಮಲಗಿದರು. ಬೆಳಗಿನ ಜಾವದಲ್ಲಿ ಮಾತಂಗ ಋಷಿಗಳು ಎದ್ದರು. ವಿದ್ಯಾರ್ಥಿಗಳೆಲ್ಲರೂ ಎದ್ದರು. ಮತ್ತು ಸ್ನಾನಕ್ಕೆ ಹೊರಟರು. ಮುಂಜಾನೆ ಮಂದ ಮಂದ ಗಾಳಿಯೊಡನೆ ಎಲ್ಲ ಕಡೆಯಲ್ಲಿಯೂ ಹರಡಿದ ಪರಿಮಲದ ಸುವಾಸವು ಹಬ್ಬಿತು. ಎಲ್ಲರೂ ಆಶ್ಚರ್ಯದಿಂದ ಎಲ್ಲಿಂದ ಬರುತ್ತದೆ ಈ ಪರಿಮಲವು ಎಂದು ಕೇಳುತ್ತಿದ್ದರು. "ನೋಡಿ ಬರ್ರಿ'' ಎಂದು ಮಾತಂಗ ಋಷಿಗಳು ವಿಜ್ಞಾಪಿಸಿದರು. ಚಿಗರಿಗಳಂತೆ ವಿದ್ಯಾರ್ಥಿಗಳು ಓಡುತ್ತ ಹಾರಾಡುತ್ತ ಹೋಗಿ ನೋಡಿ ಬಂದರು. ನಿನ್ನೆ ನಾವೆಲ್ಲರೂ ಕಾಡಿನಿಂದ ತಿರುಗಿ ಬರುವಾಗ ಬೆವರು ಬಿದ್ದ ಪ್ರತಿಯೊಂದು ಸ್ಥಳದಲ್ಲಿ ಈ ಪರಿಮಲಯುಕ್ತವಾದ ಹೂಗಳು ಅರಳಿವೆ.'' ಎಂದು ಹೇಳಿದರು. ಬೆವರಿ

ನೊಳಗಿಂದ ಹುಟ್ಟಿದ ಹೂವುಗಳು ಇವು ದೊರೆಯೇ'' ಎಂದು ಹೇಳಿದಳು ಆ ಶಬರಿಯು.

“ಘರ್ಮಜಾನಿ ಕುಸುಮಾನಿ.'' ಎಂದು ರಾಮಾಯಣದಲ್ಲಿ ಓದಿದಾಗ ನಾನು ಕುಣಿದಾಡಿದೆನು. ನನ್ನ ಕಂಠ ಸದ್ಗದಿತವಾಯಿತು. ಬೆವರನ್ನು ಸುರಿಸುವ ತನ್ನ ಮಕ್ಕಳನ್ನು ನೂರಾರು ಕಣ್ಣುಗಳಿಂದ ಭೂಮಾತೆಯು ನೋಡುತ್ತಿದ್ದಳು. ಅವು ಹೂವುಗಳಲ್ಲ; ನಲುಮೆಯಿಂದ ತುಂಬಿದ ಭೂಮಾತೆಯ ಪವಿತ್ರ ನೇತ್ರಗಳು. ತನ್ನ ಮಕ್ಕಳು ಹೇಗೆ ದುಡಿಯುತ್ತಾರೆಂಬುವನ್ನು ನೋಡುತ್ತಾಳೆ ಅವಳು; ನಾನು ವಿಚಾರದಲ್ಲಿ ತೊಡಗಿದೆ. ಈ ಜಗತ್ತಿನಲ್ಲಿ ಅತಿಶಯವಾದ ಶ್ರೇಷ್ಠ ನೀರು ಯಾವದು? ಗಂಗಾ, ಯಮುನೆಯರದೆ? ಕೃಷ್ಣಾ, ಗೋದೆಯರದೇ? ಸಪ್ತ ಸಮುದ್ರದ ನೀರೇ? ಸ್ವಾತಿ ನಕ್ಷತ್ರದ ನೀರೇ? ಪಶ್ಚಾತ್ತಾಪದಿಂದ ಬರುವ ಕಣ್ಣೀರೇ? ಎರಡನೆಯವರ ದುಃಖವನ್ನು ನೋಡಿ ತಾಳಲಾರದೆ ಕಣ್ಣಿನಲ್ಲಿ ನಿಲ್ಲುವ ನೀರೇ? ನಮ್ಮನ್ನು ಪ್ರೀತಿಸುವವರ ಸ್ಮರಣದೊಡನೆ ಬರುವ ಅಶ್ರುಧಾರೆಗಳೇ?

ಈ ಎಲ್ಲ ಪ್ರಶ್ನೆಗಳಿಗೆ ನನ್ನಷ್ಟಕ್ಕೆ ನಾನೇ ಉತ್ತರ ಕೊಟ್ಟೆನು. “ದುಡಿಯುವವರ ಮೈಯೊಳಗಿಂದ ಹೊರಬಿದ್ದು ಸುರಿಯುವ ಬೆವರಿನ ನೀರೆ ಈ ಜಗತ್ತಿನಲ್ಲಿ ಸರ್ವಶ್ರೇಷ್ಠವಾದದ್ದು. ಈ ನೀರು ಜಗತ್ತನ್ನೆಲ್ಲ ಪೋಷಿಸುತ್ತದೆ. ದೇವರು ಮಳೆಗರೆಯಬಹುದು. ಆದರೆ ಒಕ್ಕಲಿಗನು ತನ್ನ ಬೆವರಿನಿಂದ ಹೊಲವನ್ನು ಎರೆಯದೆ, ಅಲ್ಲಿ ಬೆಳೆ ಬೆಳೆಯುವದೇ? ಮನುಷ್ಯರಿಗೆ, ಪಕ್ಷಿಗಳಿಗೆ ಧಾನ್ಯವು ಸಿಗುವಂತಿಲ್ಲ. ಅದು ಇಡಿ ಸೃಷ್ಟಿಗೆ ಮರಣಸಮವಾಗುವದು.

ಇಂಗ್ಲಂಡದ ಅತಿ ಶ್ರೇಷ್ಠ ಪ್ರತಿಭೆಯುಳ್ಳ ಕವಿಯಾದ ಶೆಲಿ ಒಂದು ಕಡೆಯಲ್ಲಿ ಹೇಳಿದ್ದಾನೆ— “ಜಗತ್ತಿನಲ್ಲಿ ಎಲ್ಲಕ್ಕೂ ಹಿರಿದಾದ ಕಲಾವಂತನು ಯಾರು? ಖಂಡಿತವಾಗಿ ಒಕ್ಕಲಿಗನು.'' ಎಷ್ಟು ನಿಜವದೆ ಈ ಮಾತು. ಬರಿಯದಾದ ಭೂಮಿ ತಾಯಿಗೆ ಹಸಿರು ಶಲ್ಲೆಯನ್ನು ಉಡಿಸುವನು. ಹಣ್ಣು-ಹಂಪಲಗಳಿಂದ ನಗಿಸುವನು. ಕಂಗೊಳಿಸುವನು. ಆದರೆ ಈ ಹಿರಿ ಕಲಾವಂತನ ಸ್ಥಿತಿ ಏನಾಗಿದೆ ಇಂದು? ಈ ಋಷಿಗಳ ಭೂಮಿಯಲ್ಲಿ ಎಷ್ಟು ದೈನಾಸಪಡಬೇಕಾಗಿದೆ ಇವನಿಗೆ? ಎಲ್ಲರೂ ಅವನನ್ನು ಹೀನನೆಂದು ತಿಳಿಯುತ್ತಾರೆ. ಅವಮಾನಕ್ಕೀಡುಮಾಡುತ್ತಾರೆ. ಅವನನ್ನು ಗಾದಿಯ ಮೇಲೆ ಯಾರೂ ಕೂಡ್ರಿಸುವದಿಲ್ಲ. ಮುಂಬಾಗಲಲ್ಲಿಯೆ ಅವನ

ಸ್ಥಳ. ಒಕ್ಕಲಿಗರಿಗೆ ತಕ್ಕೆಯ ಮಾನವು ದೊರೆತ ದಿವಸವೇ ನಮಗೆ ಭಾರತೀಯ ಸಂಸ್ಕೃತಿ ತಿಳಿಯಿತೆಂದು ನಾನು ಸಾರಿ ಹೇಳುತ್ತೇನೆ. ಆದರೆ ಎಲ್ಲರನ್ನೂ ಪೋಷಿಸುವ ಈ ಜೀವನ ವೃಕ್ಷದ ಮೇಲೆ ಕೂತಿರುವ ಪರಭೃತರಿಗೆ ಮಾತ್ರ ಮಾನವಿದೆ, ಎಂಥ ವಿದ್ರೂಪ ಮತ್ತು ನೀಚ ಮನೋವೃತ್ತಿಯ ದೃಶ್ಯವಿದು.

ಸಮಾಜದಲ್ಲಿ ಇಂದು ರುಂಡ, ಮುಂಡಗಳು ದೂರವಾಗಿ ಬಿದ್ದಿವೆ. ಮುಂಡಕ್ಕೆ ರುಂಡವಿಲ್ಲ, ರುಂಡಕ್ಕೆ ಮುಂಡವಿಲ್ಲ. ಸಮಾಜ ಪುರುಷನು ಹೆಣವಾಗಿ ಬಿದ್ದಿದ್ದಾನೆ. ಜಾಣರಿಗೆ, ಬುದ್ಧಿಜೀವಿಗಳಿಗೆ ದುಡಿಯುವವರ ಪರಿವೆಯೇ ಇಲ್ಲದಂತಾಗಿದೆ. ಆದರೆ ರುಂಡವು ಮುಂಡದ ಸಮೀಪ ಹೋಗದಿದ್ದರೆ ರಾಷ್ಟ್ರವು ಜೀವಂತವಾಗುವದಿಲ್ಲ. ಬುದ್ಧಿವಂತರು, ದುಡಿಯುವವರು ಒಂದೆಡೆಯಲ್ಲಿ ಬರಲಿ. ಬುದ್ಧಿವಾದಿಗಳು ದುಡಿಯಲಿ, ದುಡಿಯುವವರಿಗೆ ವಿಚಾರದ ಆನಂದವು ದೊರೆಯಲಿ. ಇದು ಸಾಧ್ಯವಾದ ದಿನವು ಸುದಿನವು.

ಭಾರತೀಯ ಸಂಸ್ಕೃತಿಯು ಕರ್ಮಮಯವಾಗಿದೆ. ಕರ್ಮವೇ ಪ್ರಧಾನ ವಸ್ತುವು. ಮೈಗಳ್ಳತನವು ಈ ಸಂಸ್ಕೃತಿಗೆ ಸೇರುವದಿಲ್ಲ. ಯಾವ ಸೇವಾಕರ್ಮವನ್ನೂ ಈ ಸಂಸ್ಕೃತಿಯು ತುಚ್ಛೀಸುವದಿದಿಲ್ಲ. ಭಾರತೀಯ ಸಂಸ್ಕೃತಿಯು ಕರ್ಮದ ಮಹಿಮೆಯನ್ನು ಎಷ್ಟು ಬೆಳೆಸಿದೆ ಎಂಬದನ್ನಾದರೂ ನೋಡಿರಿ. ನಮಗೆ ಆ ಆ ಕರ್ಮಸಾಧನೆಗಳು ಸಹ ಪವಿತ್ರ. ಸಾಧನವೇ ಪವಿತ್ರವಿದ್ದ ಮೇಲೆ, ಕರ್ಮವು ಎಷ್ಟು ಪವಿತ್ರವಿರಲಿಕ್ಕಿಲ್ಲ ?

ಹೆಣ್ಣುಮಕ್ಕಳು ಒಲೆಗೆ, ಬೀಸುವ ಕಲ್ಲಿಗೆ, ಕಸಬರಿಗೆಗೆ ಕಾಲು ಹಚ್ಚಿ ಕೊಡುವದಿಲ್ಲ. ಇದರ ಅರ್ಥವೇನು ? ಇವು ಅವರ ಸೇವೆಯ ಸಾಧನಗಳು, ಅಡಿಗೆ ಮಾಡಿ, ಬೀಸಿ, ಕಸತೆಗೆದು ಅವರು ಸೇವೆ ಸಲ್ಲಿಸುತ್ತಾರೆ. ಆ ಸೇವೆಯಿಂದ ಮುಕ್ತಿಹೊಂದುವರು. ಅವರ ಮೋಕ್ಷಪ್ರಾಪ್ತಿಯ ಸಾಧನಗಳೆಂದರೆ ಆ ಒಲೆ, ಮತ್ತು ಕಸಬರಿಗೆ. ಕಸಬರಿಗೆಗೆ ಕಾಲು ಮುಟ್ಟುವದೆಂದರೆ ಪಾಪವು ಎಂದು ಕಲಿಸಿದ ಸಂಸ್ಕೃತಿಯ ಉಪಾಸಕರು ಮತ್ತು ಭಕ್ತರು, ಕಸತೆಗೆಯುವದು ಹೀನ ಕೆಲಸವೆಂದೂ, ಹೊಲೆಯನು ಹೀನನೆಂದೂ ತಿಳಿಯುವದು ಎಂಥ ಖೇದದ ಮಾತು !

ಒಕ್ಕಲಿಗನು ನೇಗಿಲಕ್ಕೆ ಕಾಲನ್ನು ಹಚ್ಚುವದಿಲ್ಲ. ಪಂಡಿತನು ಪುಸ್ತಕಕ್ಕೆ ಕಾಲು ಹಚ್ಚುವದಿಲ್ಲ. ಚಮಗಾರನು ತೊಗಲಿನ ಚೂರಿನ ತೋರಣವನ್ನು ಕಟ್ಟುವನು. ಮಾದರು ಎಲುಬಿನ ತೋರಣವನ್ನು ಕಟ್ಟ

ಬಹುದು. ಇವೆಲ್ಲದರಲ್ಲಿ ಒಂದು ಹಿರಿದಾದ ಅರ್ಥವಿದೆ. ಪ್ರತಿಯೊಂದು ಸೇವಾಕರ್ಮ ಪವಿತ್ರವಾದದ್ದು. ಬ್ರಾಹ್ಮಣನು ಜ್ಞಾನದಾನದಿಂದ ಸೇವೆಯನ್ನು ಮಾಡುವನು. ಆದ್ದರಿಂದ ಅವನು ಪುಸ್ತಕಗಳನ್ನು ಪವಿತ್ರವೆಂದು ಭಾವಿಸುವವನು. ಮತ್ತು ಬೇರೆಯವರಾದರೂ ತಮ್ಮ ಸೇವಾಸಾಧನವನ್ನು ತುಚ್ಛವೆಂದು ತಿಳಿಯುವಂತಿಲ್ಲ. ಹೊಲೆ ಮಾದರು ಸತ್ತ ದನಗಳನ್ನು ಒಯ್ದು, ಕೊಯ್ದು ಸಮಾಜ ಸೇವೆಯನ್ನು ಮಾಡುತ್ತಿದ್ದಾರೆ. ಅವರಿಗೆ ತೊಗಲು, ಎಲಬುಗಳು ಪವಿತ್ರವಾದವುಗಳು. ಅದರಿಂದ ದುಡಿದು ಅವರು ದುಡ್ಡು ಗಳಿಸುತ್ತಾರೆ. ಶಿವನು ಸ್ಮಶಾನದಲ್ಲಿಯೇ ಇರುತ್ತಾನೆ. ಮತ್ತು ರುಂಡಗಳು, ಎಲಬುಗಳು ಅವನ ಅಲಂಕಾರವಾಗಿವೆ. ಹೊಲೆ ಮಾದರೆಂದರೆ ಆ ಶಿವಶಂಕರನ ಮೂರ್ತಿ ಇದ್ದಂತೆ.

ಗಾಂಡೀವಧನುಸ್ಸಿನ ನಿಂದೆಯು ಅರ್ಜುನನಿಗೆ ಸಹನವಾಗುತ್ತಿದ್ದಿಲ್ಲವೆಂಬ ಕಥೆಯು ಮಹಾಭಾರತದಲ್ಲಿ ಅದೆ. ಗಾಂಡೀವ ಧನುಸ್ಸನ್ನು ನಿಂದಿಸಿದ ಧರ್ಮರಾಜನನ್ನು ಅವನು ಕೊಲ್ಲಲು ಹೋದನು. ಗಾಂಡೀವವು ಅರ್ಜುನನಿಗೆ ಇಷ್ಟು ಪ್ರಿಯವಾಗಿದ್ದುದರ ಕಾರಣವೇನು ? ಅದು ಅವನ ಸೇವಾಸಾಧನವಾಗಿತ್ತು. ದುಷ್ಟರನ್ನು ಸಂಹರಿಸಿ ದುರ್ಬಲರನ್ನು ರಕ್ಷಿಸುವ ಸಾಧನವಾಗಿತ್ತು. ಅದರ ನಿಂದೆಯು ಅರ್ಜುನನಿಗೆ ಹೇಗೆ ಸಹನವಾಗುವದು ?

ಸೇವಾಸಾಧನಗಳೆಲ್ಲವು ಪವಿತ್ರ, ಅಂದಮೇಲೆ ಕರ್ಮಗಳು ಪವಿತ್ರವಲ್ಲವೇ ? ಲೆಕ್ಕಣಿಕೆ, ತಕ್ಕಡಿ, ಕತ್ತಿ, ಒಲೆ, ನೇಗಿಲ, ಕಸಬರಿಗೆ, ಏನೇ ಇರಲಿ ಈ ಎಲ್ಲ ಸೇವಾಸಾಧನಗಳು ಪವಿತ್ರವೆಂದು ಭಾರತೀಯ ಸಂಸ್ಕೃತಿಯು ಮನ್ನಣೆಯನ್ನಿತ್ತಿದೆ. ಮತ್ತು ಹೊಸ ಯುಗದಲ್ಲಿ ಹುಟ್ಟುವ ಹೊಸ ಸಾಧನಗಳು ಪವಿತ್ರವೆಂದು ಅನ್ನದೆ ಇರಲಾರದು.

ಸೇವೆಯ ಎಲ್ಲ ಸಾಧನಗಳ ಕಾಳಜಿಯನ್ನು ವಹಿಸಲು ಹೇಳಲಾಗಿದೆ. ಅವುಗಳನ್ನು ಯಾವಾಗಲೂ ನಿರ್ಮಲವಾಗಿ ಇಡಬೇಕು. ಇಲ್ಲದಿದ್ದರೆ ಚನ್ನಾಗಿ ಸೇವೆಮಾಡಲು ಬರುವದಿಲ್ಲ. ಪಂಡಿತನ ಬದಿಯಲ್ಲಿದ್ದ ಪುಸ್ತಕಗಳು ವ್ಯವಸ್ಥಿತವಾಗಿರಬೇಕು. ಯೋಧರ ಶಸ್ತ್ರಗಳು ಹದನವಾಗಿರಬೇಕು. ಒಲೆ ಸಾರಿಸಿದ್ದಿರಬೇಕು. ಕುಡಗೋಲು, ಗುದ್ದಲಿ ಹದನವಾಗಿರಬೇಕು. ಸೇವೆಯ ಸಾಧನಗಳು ನೆಟ್ಟಗೆ ಇಡದಿದ್ದರೆ, ಉಪಯುಕ್ತವಾದ ಸೇವೆ ಮಾಡಲು ಬರುವದಿಲ್ಲ.

ಇಲ್ಲಿ ಒಂದು ಮಾತು ಹೇಳಬೇಕೆಂದು ಅನಿಸುತ್ತದೆ. ಮನುಷ್ಯನು ಸೇವಾಸಾಧನದ ಕಾಳಜಿಯನ್ನು ವಹಿಸುತ್ತಾನೆ. ಆದರೆ ಕೆಲವು ಸಾಧನಗಳನ್ನು ದುರ್ಲಕ್ಷಿಸುತ್ತಾನೆ. ಸೇವೆಯ ಸಾಧನಗಳು ಎರಡು ಬಗೆಯವು.

**ಸೇವಾಸಾಧನಗಳು**




ಸಜೀವ ಉಪಕರಣಗಳಿಗಿಂತ ನಿರ್ಜೀವ ಸಾಧನಗಳ ಕಾಳಜಿ ಹೆಚ್ಚಾಗಿ ಮನುಷ್ಯನು ವಹಿಸುತ್ತಾನೆಂಬ ಮಾತು ನಾವು ನೋಡುತ್ತೇವೆ. ಜಮೀನದಾರನು ತನ್ನ ಚಕ್ಕಡಿಯನ್ನು ಒಳ್ಳೇ ನೆಟ್ಟಗೆ ಇಡುವನು. ಅದರ ಗಾಲಿ, ನಗ, ಅವಕ್ಕೆ ಎಣ್ಣೆ ಇದನ್ನೆಲ್ಲ ಒಳ್ಳೇ ಆಸ್ಥೆಯಿಂದ ನೋಡುವನು. ಎತ್ತುಗಳಿಗೆ ನೀರು, ಮೇವು ಹಾಕಿದೆಯೋ ಇಲ್ಲವೋ ಇತ್ತ ಕಡೆಗೆ ಲಕ್ಷ್ಯವಿರಲಿಕ್ಕಿಲ್ಲ. ಆ ಚಕ್ಕಡಿಯನ್ನು ನಡಿಸುವ ಆಳು-ಅವನಿಗೆ ಹೊಟ್ಟೆಗೇನಾದರೂ ಅದೆಯೊ ಇಲ್ಲವೋ, ಇದನ್ನಂತೂ ಎಂದೂ ನೋಡುವದಿಲ್ಲ.

ದೊಡ್ಡ ದೊಡ್ಡ ಕಾರಖಾನೆಗಳಿಗೆ ನೀವು ಹೋಗಿ ನೋಡಿರಿ. ಅಲ್ಲಿ ಯಂತ್ರಗಳಿಗೆ ಪ್ರತಿಕ್ಷಣಕ್ಕೆ ಎಣ್ಣೆಯು. ಯಂತ್ರಗಳನ್ನು ಚನ್ನಾಗಿ ಒರಸಿ ಇಡುವರು. ಆದರೆ ಆ ನಿರ್ಜೀವ ಯಂತ್ರದ ಇದಿರು ಒಂದು ಸಜೀವ ಯಂತ್ರವೂ ಇರುತ್ತದೆ. ಆದರೆ ಅವನನ್ನು ನೋಡುವವರಾರು ? ಈ ಕೂಲಿಕಾರರ ಶರೀರ ಯಂತ್ರಕ್ಕೆ ಎಣ್ಣೆ ಸಿಗುತ್ತದೆಯೋ ಇಲ್ಲವೋ ಎಂಬುದನ್ನು ನೋಡುವ ಕಾರಖಾನೆಯ ಒಡೆಯನು ಯಾವನೂ ಇಲ್ಲ.

ಕಾರಖಾನೆಯೂ ಒಂದು ಸಮಾಜ ಸೇವೆಯ ಸಾಧನವು. ಸಮಾಜಕ್ಕೆ ಉಪಯೋಗವಾಗುವಂಥ ವಸ್ತುಗಳು ಕಾರಖಾನೆಯಲ್ಲಿ ತಯಾರಾಗುವವು. ಈ ಪವಿತ್ರ ಕಾರ್ಯದ ಎಲ್ಲ ಸಾಧನಗಳೂ ಪವಿತ್ರವಾಗಿವೆ. ಆದ್ದರಿಂದ ಯಂತ್ರಗಳ ಬಗ್ಗೆ ಜಾಗರೂಕತೆಯಿಂದ ಇರುವದು ಮಹಾ ಧರ್ಮವು. ನಾನು ಕೆಲಸ ಮಾಡುವ ಮಗ್ಗವೆಂದರೆ ದೇವರ ಮೂರ್ತಿ

ಲಿದ್ದಂತೆ. ಇದನ್ನು ಒರೆಸಿ ಸ್ವಚ್ಛಮಾಡುವದೆಂದರೆ ದೇವರ ಮೂರ್ತಿಯನ್ನು ನಿರ್ಮಲವಿಟ್ಟ ಹಾಗೆಯೇ. ಆದರೆ ಈ ನಿರ್ಜೀವ ಯಂತ್ರಗಳೊಡನೆ ಸಜೀವ ಯಂತ್ರಗಳನ್ನು ಸಹ ಕಾರಖಾನೆಯೊಡೆಯರು ಪೂಜಿಸಬೇಕು. ಕೂಲಿಕಾರರಿಗೆ ಸಾಕಷ್ಟು ಚನ್ನಾಗಿದ್ದ ಅನ್ನ, ಮೈತುಂಬ ಬಟ್ಟೆ, ಹವೆಯಾಡುವ ಗುಡಿಸಲಗಳು, ಕುಡಿಯಲಿಕ್ಕೆ ಸ್ವಚ್ಛವಾದ ನೀರು; ಅಪಘಾತವಾದರೆ ಆಗಿಂದಾಗ ಅವರಿಗೆ ಸಹಾಯ, ಕೂಲಿಕಾರ ವಿಮೆ, ಪಗಾರ ಕೊಟ್ಟು ಬಿಡುವು, ಮನರಂಜನೆಯ ಕಾರ್ಯಕ್ರಮ ಇವೇ ಮೊದಲಾದ ಸೌಕರ್ಯಗಳನ್ನು ಒದಗಿಸಿಕೊಡುವದೂ ಒಂದು ಮಹತ್ತರವಾದ ಧರ್ಮವು. ಇಂಥ ಧರ್ಮವನ್ನು ಪಾಲಿಸದವನು ನರಕಕ್ಕೆ ಗುರಿಯಾಗುವನು. ಇಡೀ ಸಮಾಜದಲ್ಲಿಯೇ ಬಡತನ ದಾಸ್ಯದ ನರಕವನ್ನುಂಟು ಮಾಡುವನು. ದುರ್ಗುಣಗಳ ನರಕವನ್ನು ನಿರ್ಮಿಸುವನು. ವ್ಯಭಿಚಾರ, ಕಳವು, ಸೆರೆ, ಕೊಲೆ ಇವುಗಳ ಪ್ರಸಾರವಾಗುವದು.

ಸಮಾಜದಲ್ಲಿ ಈ ಭೀಕರವಾದ ನೋಟವನ್ನು ನಾವು ಕಾಣುತ್ತೇವೆ. ಮೋಟಾರವನ್ನು ಚನ್ನಾಗಿ ಇಡುವದಕ್ಕಾಗಿ ಮಾಡುವಷ್ಟು ಖರ್ಚು, ತಮ್ಮ ನೌಕರನಿಗಾಗಿ (ಆಳಿಗಾಗಿ) ಸಿರಿವಂತರು ಮಾಡುವದಿಲ್ಲ. ಮೋಟರಿಗಾಗಿ ಅಂದವಾದ ಮನೆಯನ್ನು ಕಟ್ಟಿಸುವರು. ಆದರೆ ತನ್ನ ಆಳುಗಳಿಗಾಗಿ ಎಂದೂ ಕಟ್ಟಿಸಿಕೊಡುವದಿಲ್ಲ. ಮನುಷ್ಯರಿಗಿಂತ ಮೋಟರವು ಹೆಚ್ಚು ಪೂಜ್ಯವು. ಕೂಲಿಕಾರರಕಿಂತ ಯಂತ್ರಗಳು ಹೆಚ್ಚು ಬೆಲೆಯುಳ್ಳವು! ಆದರೆ ಸಜೀವ ಸಾಧನಗಳನ್ನು ದುರ್ಲಕ್ಷಿಸಿದರೆ ಇಡೀ ಪ್ರಪಂಚವೇ ಭೀಷಣವಾಗುವದು, ಎಂಬ ವಿಚಾರವು ಸಹ ಈ ಸ್ವಾರ್ಥಲೋಲುಪರಾದ ಸಿರಿವಂತರಿಗೆ ಹೊಳೆಯುವದಿಲ್ಲ.

ಗೀತೆಯ ೧೫ನೇ ಅಧ್ಯಾಯದಲ್ಲಿ ಕ್ಷರಪುರುಷ ಮತ್ತು ಅಕ್ಷರಪುರುಷ ಎಂಬ ಎರಡು ಬಗೆಯ ಪುರುಷರೆಂದೂ ಮತ್ತು ಇವೆರಡನ್ನು ವ್ಯಾಪಿಸುವವನು ಪುರುಷೋತ್ತಮನೆಂದೂ ಹೇಳಿದೆ. ಕ್ಷರಸೃಷ್ಟಿ ಮತ್ತು ಅಕ್ಷರಸೃಷ್ಟಿ ಮತ್ತು ಇವೆರಡನ್ನು ಸುತ್ತುಗಟ್ಟುವ ಆ ಪರಮಾತ್ಮನು, ಈ ಮೂವರು ಪವಿತ್ರರು. ಕ್ಷರಸೃಷ್ಟಿಯೆಂದರೆ ನಮ್ಮ ಸುತ್ತು ಮುತ್ತಲಿರುವ ಬದಲಾವಣೆ ಹೊಂದುವ ಸೃಷ್ಟಿಯು. ಈ ಕ್ಷರಸೃಷ್ಟಿಯು ನಮಗೆ ಹೂವು, ಹಣ್ಣು, ಕಾಳು, ಕಟ್ಟಿಗೆ, ಕಲ್ಲು, ಬೇರೆ ಬೇರೆ ಧಾತುಗಳು ಮುಂತಾದ ಸೇವೆಗೆ ಬೇಕಾಗುವ ಸಾಧನಗಳನ್ನು ಒದಗಿಸಿ ಕೊಡುತ್ತದೆ.

ನಿನ್ನೆ ಇದ್ದ ಒಲೆಯು ಒಡೆಯಿತು. ಇವತ್ತು ಹೊಸದೊಂದು ತಯಾರಿಸಲಾಯಿತು. ಮೊದಲು ತಂದ ಮೋಟಾರು ಕೆಟ್ಟಿತು. ಹೊಸದೊಂದು ಕೊಳ್ಳಲಾಯಿತು. ಮೊದಲು ಇದ್ದ ದೀಪ ಕೆಟ್ಟಿತು. ಅದರ ಬದಲು ಇನ್ನೊಂದು ತರಲಾಯಿತು. ಹೀಗಿದೆ ಸಾಧನಗಳ ಬದಲಾವಣೆ. ಆದರೆ ಈ ಕ್ಷರಸಾಧನೆಗಳೂ ಆ ಪುರುಷೋತ್ತಮನ ರೂಪವೇ. ಈ ಕ್ಷರ ಸೃಷ್ಟಿಯೂ ಪೂಜ್ಯವಾದದ್ದು.

ಪ್ರಚಂಡವಾದ ಕಾರಖಾನೆಗಳಲ್ಲಿ ದುಡಿಯುವ ಕೂಲಿಕಾರರು ಒಂದು ಬಗೆಯ ಕ್ಷರಸೃಷ್ಟಿಯೇ. ಕಾರಖಾನೆಯು ನೂರಾರು ವರ್ಷ ನಡೆಯುವದು. ಮೊದಲಿನ ಕೂಲಿಕಾರರ ಬದಲು ಹೊಸಬರು ಬರುವರು. ಕೂಲಿಕಾರರು ಯಾವಾಗಲೂ ಬದಲಾಗುವರೇ. ಆದರೆ ಅವರು ಯಾರೇ ಅಥವಾ ಎಲ್ಲಿಯವರೇ ಇದ್ದರೂ ಪವಿತ್ರರು. ಈ ಬದಲಾಗುವ ಕೂಲಿಕಾರರೆಲ್ಲರೂ ಆ ಪುರುಷೋತ್ತಮನ ರೂಪಗಳೇ ಆಗಿದ್ದಾರೆ. ಅವರನ್ನು ಪೂಜಿಸುವದು ಅವಶ್ಯವಾದದ್ದೊಂದು ಕರ್ತವ್ಯವು.

ಕಾರಖಾನೆದಾರರ ದೃಷ್ಟಿಯಿಂದ ಕೂಲಿಕಾರರು ಕ್ಷರರು. ಆದರೆ ಅವರು ಅಕ್ಷರರೂ ಆಗಿದ್ದಾರೆ. ಅವರಲ್ಲಿ ಅಮರ ಪರಮಾತ್ಮನಿದ್ದಾನೆ. ಅವನು ಎಂದೂ ನಾಶಹೊಂದುವದಿಲ್ಲ. ಕೂಲಿಕಾರನಿಗೆ ಅವನ ಸೇವಾ ಕರ್ಮದಿಂದಲೇ ಆ ಅಮರ ಪರಮಾತ್ಮನ ಗುರುತಾಗುವದು.

ಸೇವಾಕರ್ಮ ಉಚ್ಚತರಗತಿಯದಾಗಬೇಕಾದರೆ, ಸಾಧನಗಳನ್ನು ಪವಿತ್ರವೆಂದು ಅರಿಯಿರಿ. ಸಜೀವ, ನಿರ್ಜೀವ ಎರಡು ಸಾಧನಗಳೂ ಪವಿತ್ರವೆಂದು ತಿಳಿಯಬೇಕು. ಅವರು ಪ್ರಸನ್ನಚಿತ್ತದವರಾಗಬೇಕು. ಇನ್ನೊಬ್ಬ ದೇವರಿಲ್ಲ. ಇನ್ನೊಂದು ಧರ್ಮವಿಲ್ಲ. ಕೂಲಿಕಾರರನ್ನು ದೇವರೆಂದು ಭಾವಿಸಿ, ತನ್ನ ಸೇವೆಯ ಸಾಧನವೆಂದು ತಿಳಿದು, ಅವರನ್ನು ಆನಂದದಲ್ಲಿ ಇಡುವ ಕಾರಖಾನೆಯ ಒಡೆಯನಿಗಿಂತ ಮತ್ತಾರನ್ನು ದೇವರು ಹೆಚ್ಚು ಪ್ರೀತಿಸುವನು ?

ಭಾರತೀಯ ಸಂಸ್ಕೃತಿಯ ಉಪಾಸಕರೇ ! ಯಾವ ಸೇವಾಕರ್ಮವನ್ನೂ ಹೀಯಾಳಿಸಬೇಡಿರಿ. ಸಾಯುವವರೆಗೆ ಸೇವೆಯನ್ನು ಸಲ್ಲಿಸಿರಿ. ನಿಮಗೆ ಸೇರಿದ ಕರ್ಮವನ್ನು ಮಾಡಿರಿ. ನಿಮ್ಮ ವರ್ಣವನ್ನು ಅರಿತು ಅದರಂತೆ ಆಚರಿಸಿರಿ. ಆಯಾ ಕರ್ಮಗಳನ್ನು ಉತ್ತಮ ರೀತಿಯಿಂದ ಮಾಡಿರಿ. ಕರ್ಮದ ಸಾಧನಗಳ ಬಗ್ಗೆ ಜಾಗರೂಕತೆಯನ್ನು ವಹಿಸಿರಿ. ಮತ್ತು

ಸ್ವಕರ್ಮವನ್ನು ಉತ್ತಮ ರೀತಿಯಿಂದ ನೆರವೇರಿಸಿ ಆ ಜನತಾ ಜನಾರ್ದನ ನನ್ನು, ಸಮಾಜ ಪುರುಷನನ್ನು ಪೂಜಿಸಿರಿ. ಇದು ಶ್ರೀ ಗೀತೆಯ ಧರ್ಮವು. ಆದರೆ ಈ ಧರ್ಮವನ್ನು ನಿಜವಾಗಿ ಅರಿತವರು ಎಷ್ಟು ಜನ ಇದ್ದಾರೆ ನಮ್ಮ ಭರತಭೂಮಿಯಲ್ಲಿ ಇಂದು ?

---

# ೭. ಭಕ್ತಿ

ಪ್ರತಿಯೊಬ್ಬನು ತನ್ನ ವರ್ಣವನ್ನನುಸರಿಸಿ, ಅಂದರೆ ತನ್ನ ಗುಣ ಧರ್ಮಕ್ಕೆ ತಕ್ಕಂತೆ ಸಮಾಜ ಸೇವೆಯನ್ನು ಮಾಡಬೇಕೆಂಬ ಮಾತನ್ನು ನಾವು ನೋಡಿದೆವು. ಆದರೆ ಈ ಸೇವೆಯು ಹೇಗೆ ಉತ್ಕೃಷ್ಟವಾಗುವದು ? ಈ ಸೇವೆಯ ಕರ್ಮದಿಂದ ನಾವು ಹೇಗೆ ಮುಕ್ತರಾಗುವೆವು ?

ಮುಕ್ತರಾಗುವದೆಂದರೇನು? ಬಂಧನದಲ್ಲಿ ಇರದೆ ಇರುವದು. ನಾವು ಸ್ವತಂತ್ರರಿದ್ದೇವೆಂದು ಅರಿಯುವದು. ನಮ್ಮ ಮೇಲೆ ಯಾವ ಭಾರವೂ ಇಲ್ಲ ಎಂದು ಅನುಭವ ತಂದುಕೊಳ್ಳುವುದು. ಯಾವ ಬೇಡಿಕೆಗಳ ದಾಸನಲ್ಲ, ಯಾವ ಸತ್ತೆಯ ಗುಲಾಮನಲ್ಲ. ಸಮಾಧಾನದಿಂದ ಆನಂದದಿಂದ, ಉತ್ಸಾಹದಿಂದ ಯಾವಾಗಲೂ ಕರ್ಮವನ್ನು ಮಾಡುತ್ತ ಇರುವದೆಂದರೆ ಮೋಕ್ಷವು.

ನಾವು ದಿನಾಲು ನೂರಾರು ಕೆಲಸಗಳಲ್ಲಿ ತೊಡಗಿರುತ್ತೇವೆ. ಆದರೆ ನಮಗೆ ಆ ಕೆಲಸಗಳು ಭಾರವೆಂದೆನಿಸುತ್ತವೆ. "ಸಾಕು ಇದು" ಎಂಬ ಉದ್ಗಾರವು ಹೊರಬೀಳುತ್ತದೆ. ಜೀವವು ಬೇಸರಿಯುತ್ತದೆ. ಹೀಗಾಗುವ ಕಾರಣವೇನು ? ಇದಕ್ಕೆ ಕಾರಣಗಳು ಎರಡು. ಒಂದು ಅದು ನಮ್ಮ ಸೇರಿಕೆಗೆ ಸರಿಹೋಗುವ ಕೆಲಸವಿರುವದಿಲ್ಲ. ಇನ್ನೊಂದು, ಅದು ನಮ್ಮ ವರ್ಣಕ್ಕೆ ಅನುಸರಿಸಿದ ಕರ್ಮವಲ್ಲ. ಅದು ಪರಧರ್ಮವಾಗಿರುತ್ತದೆ. ಆದರೆ ಅದನ್ನು ನಾವು ಮೋಹದಿಂದ ಸ್ವೀಕರಿಸಿ ಮಾಡುವದರಿಂದ ಹೀಗಾಗುತ್ತದೆ. ಇಂಥ ಪರಧರ್ಮವು ಭಯಾವಹವೆಂದು ಗೀತೆಯು ಗರ್ಜಿಸಿ ಹೇಳುತ್ತದೆ.

ಉದಾಹರಣೆಗಾಗಿ ಒಬ್ಬ ಶಿಕ್ಷಕನ ಜೀವನವನ್ನೇ ವಿಚಾರಿಸುವಾ !

ಯಾವನಿಗೆ ಕಲಿಸುವದರಲ್ಲಿ ಆನಂದವೆನಿಸುವದಿಲ್ಲವೋ, ವಿದ್ಯಾರ್ಥಿಗಳ ಹೃದಯದ ಮತ್ತು ಬೌದ್ಧಿಕ ವಿಕಾಸದಲ್ಲಿ ಆನಂದವೆನಿಸುವದಿಲ್ಲವೋ ಅಂಥ ಶಿಕ್ಷಕನು ಅಧ್ಯಾಪನ ಕರ್ಮದಲ್ಲಿ ಹೇಗೆ ಸಂತೋಷಪಡುವನು ? ವಿದ್ಯಾರ್ಥಿಗಳ ಗೃಹಪಾಠವನ್ನು ಪರೀಕ್ಷಿಸುವಾಗ ರೊಚ್ಚಿಗೇಳುವನು. ಅಲ್ಲಲ್ಲಿ ಏನೋ ಗೆರೆಗಳನ್ನು ಕೊರೆಯುವನು. ಅವರ ಶಂಕೆಗಳನ್ನು ಕೇಳಿ ಕೋಪಿಸುವನು. ಹೊಸ ಗ್ರಂಥಗಳನ್ನು ಓದುವ ಸುದ್ದಿಯೇ ಇಲ್ಲ. ಇಂಥ ಶಿಕ್ಷಕನು ಯಾವಾಗಲೂ ಬೇಸಿಗೆ, ದೀಪಾವಳಿ, ಕ್ರಿಸ್‌ಮಸ್ ಬಿಡುವಿನ ಹಾದಿಯನ್ನೇ ಕಾಯುವನು. ಶಿಕ್ಷಣ ಕರ್ಮವು ಅವನಿಗೆ ಭಾರವೆನಿಸುವದು. ಆದರೆ ಹೊಟ್ಟೆಗಾಗಿ ಹೇಗೋ ಬೇಜಾರದಿಂದ ಸಾಗಿಸುವನು. ಯಾಕಂದರೆ ಅದು ಅವನ ವರ್ಣಕ್ಕೆ ಹೊಂದಿಕೆಯಾದದ್ದಲ್ಲ.

ಸಮಾಜದಲ್ಲಿ ನೋಡಿದತ್ತ ನಾವು ಇದನ್ನೇ ಕಾಣುತ್ತೇವೆ. ವರ್ಣಕ್ಕೆ ಅವಕಾಶವೇ ಇಲ್ಲ. ಬೇಕಾದವರು ಬೇಕಾದಾಗ ಕೆಲಸವನ್ನು ಮಾಡುತ್ತಾರೆ. ಅವರಿಗೆ ಅದು ಸೇರಲಿ ಸೇರದಿರಲಿ. ಅದು ಅವರ ವರ್ಣಕ್ಕೆ ಸರಿಹೋಗಲಿ, ಹೋಗದಿರಲಿ. ಹೊಟ್ಟೆಗೆ ಸಿಕ್ಕರೆ ಸಾಕು; ಬೇಡಾದ ಕೆಲಸವಿದ್ದರೂ ಮಾಡುತ್ತಾರೆ. ಹೀಗೆ ಉದ್ಯೋಗ ಮತ್ತು ಕೆಲಸಗಳು ನಡೆದ ಸಮಾಜವು ಹೇಗೆ ಸುಖಿಯಾಗುವದು, ಸಂಪನ್ನವಾಗುವದು ? ಅದಕ್ಕೆ ಹೇಗೆ ಕಳೆ ಏರುವದು ?

ಸಮಾಜದ ಯಾವ ಕರ್ಮಗಳಲ್ಲಿ ತೇಜಸ್ಸು, ಆನಂದ, ಉತ್ಸಾಹ ಮತ್ತು ಶ್ರದ್ಧೆಗಳಿಲ್ಲವೋ, ಅಂಥ ಕರ್ಮಗಳಿಂದ ಕರ್ಮಮಾಡುವವನಿಗೂ ಅಸಮಾಧಾನ ಮತ್ತು ಸಮಾಜಕ್ಕೂ ಹಾನಿ; ಕರ್ಮಮಾಡುವವನ ಅಧಃಪಾತ ಮತ್ತೂ ಸಮಾಜದ ಅಧಃಪಾತ; ತನ್ನನ್ನೂ ವಂಚಿಸಿ ಸಮಾಜವನ್ನೂ ವಂಚಿಸಿದಂತೆ.

ನಮ್ಮ ಸೇರಿಕೆಗೆ ಸರಿಹೋದ ಕರ್ಮವನ್ನು ಮಾಡಿದರೆ, ನಾವು ಎಂದೂ ಬೇಸರಿಯುವದಿಲ್ಲ. "ನಿನಗೆ ಇಂದು ಬಿಡುವು, ಕೂವು ಕೂವು ಎಂದು ಅನ್ನಬೇಡ." ಎಂದು ನಾವು ಕೋಗಿಲೆಗೆ ಹೇಳಿದರೆ "ಒಂದೊಪ್ಪತ್ತು ನೀರು, ಅನ್ನ ಇಲ್ಲದೆ ಇರಬಹುದು, ಆದರೆ ಕೂವು, ಕೂವು ಅನ್ನದೆ ನಾನು ಜೀವಿಸುವಂತೆ ಇಲ್ಲ. ಅದರಿಂದ ನನಗೆ ಯಾವ ಕಷ್ಟವೂ ಇಲ್ಲ. ಅದೇ ನನ್ನ ಆನಂದ, ನನ್ನ ಜೀವನ." ಎಂದು ಕೋಗಿಲೆಯು ಉತ್ತರ ಕೊಡುವದು. ಸೃಷ್ಟಿಯಲ್ಲಿ ಎಲ್ಲಕಡೆಯಲ್ಲಿಯೂ ನಮಗೆ ಇದೇ ಮಾತು

ಕಂಡುಬರುವದು. ಸೂರ್ಯ-ಚಂದ್ರ, ಚಿಕ್ಕಿ-ಗಾಳಿ ಇವುಗಳಿಗೆ ಆದಿತ್ಯವಾರದ ಬಿಡುವು ಇಲ್ಲ. ಸಾಗರವು ಗರ್ಜನೆ ಮಾಡುತ್ತ ಇದೆ, ನದಿಗಳು ಹರಿಯುತ್ತವೆ; ಜೀವನವಿರುವವರೆಗೆ ಅವುಗಳಿಗೆ ಬಿಡುವು ಇಲ್ಲ. ಬಿಡುವಿನ ಆವಶ್ಯಕತೆಯೇ ಇಲ್ಲ. ಕರ್ಮವೇ ಬಿಡುವು. ಯಾಕಂದರೆ ಕರ್ಮದಲ್ಲಿಯೇ ನಿಜವಾದ ಆನಂದವಿದೆ!

ಹುಡುಗರು ಆಡುತ್ತ ಇರುತ್ತಾರೆ. ಅವರಿಗೆ ಅದರಿಂದ ಶ್ರಮವೂ ಆಗುತ್ತದೆ. ಆದರೆ ಅವರಿಗೆ ಆ ಶ್ರಮದ ಭಾರವು ಅನಿಸುವದಿಲ್ಲ. ಆದರೆ ಅದೇ ಅವರ ಮನಸ್ಸಿನ ವಿರುದ್ಧ ಒಂದು ಮೈಲು ಹೋಗಿ ಏನಾದರೊಂದು ಕೆಲಸಮಾಡಲು ಹೇಳಿರಿ. ಅದು ಅವರ ಮನಸ್ಸಿಗೆ ಭಾರವುಳ್ಳದ್ದಾಗುವದು. ಅವರ ಕಾಲು ನೋಯುವವು. ಯಾವ ಕರ್ಮದಲ್ಲಿ ಆತ್ಮನು ತಲ್ಲೀನನಾಗುವದಿಲ್ಲ, ಹೃದಯವು ಸಾಮರಸ್ಯ ಹೊಂದುವದಿಲ್ಲ ಆ ಕರ್ಮವೆಂದರೆ ಮರಣವೇ. ಆ ಕರ್ಮವೆಂದರೆ ಬಂಧನವು. ನಾವೆಲ್ಲರು ಇಂಥ ವರ್ಣಹೀನ ಕರ್ಮದ ಬಂಧನದಿಂದ ಹಗಲಿರುಳು ಬದ್ಧರಾಗಿದ್ದೇವೆ. ನಾವೆಲ್ಲರು ಬದ್ಧರು. ಯಾರೂ ಮುಕ್ತರಿಲ್ಲ.

ಕರ್ಮವು ಭಾರವೆಂದೆನಿಸಬಾರದಿದ್ದರೆ ಸ್ವಧರ್ಮವನ್ನು ತಿಳಿದು ಸ್ವಕರ್ಮವನ್ನು ಶೋಧಿಸಿರಿ. ಸ್ವಧರ್ಮವೆಂದರೆ ನಿಮ್ಮ ನಿಮ್ಮ ವರ್ಣವನ್ನು ಶೋಧಿಸುವದು. ನಿಮಗೆ ಸೇರಿಕೆ ಇದ್ದ ಕರ್ಮವನ್ನು ಕೈಕೊಳ್ಳಿರಿ. ಅದರಲ್ಲಿ ನೀವು ತಲ್ಲೀನರಾಗುವಿರಿ. ನಾನು ಇಷ್ಟು ತಾಸು ದುಡಿದೆನೆಂಬ ಭಾವನೆಯು ಸಹ ಬರುವದಿಲ್ಲ. ಕಾಲದ ಕಲ್ಪನೆಯು ಬರುವದಿಲ್ಲ. ನೀವು ಕಾಲದಾಚೆಗೆ ಹೋಗುವಿರಿ. ಹೇಗೆ ಹೊತ್ತು ಕಳೆಯಲಿ ಎಂದು ಸಂಕಟ ಪಡುವ ಕಾರಣವಿಲ್ಲ.

ಕರ್ಮವು ಉತ್ತಮವಾಗಬೇಕಾದರೆ ಮತ್ತು ಅದರಿಂದ ಬೇಸರವೆನಿಸಬಾರದಾಗಿದ್ದರೆ, ಅದು ನಮಗೆ ಸೇರುವಂತಹದು ಇರಬೇಕು. ಅದರಂತೆಯೇ ನಾವು ಯಾರಿಗಾಗಿ ದುಡಿಯುತ್ತೇವೆ, ಅವರ ವಿಷಯ ನಮಗೆ ಪ್ರೇಮವೆನಿಸಬೇಕು. ಹೀಗೆ ಕರ್ಮವನ್ನೂ, ಮತ್ತು ನಾವು ಯಾರಿಗಾಗಿ ದುಡಿಯುತ್ತೇವೆ ಅವರನ್ನೂ ಪ್ರೀತಿಸಬೇಕು. ಕಲಿಸುವ ಕರ್ಮದಲ್ಲಿ ಪ್ರೀತಿ ಇರಬೇಕು, ಮತ್ತು ಸಣ್ಣ ಹುಡುಗರನ್ನು ಪ್ರೀತಿಸಬೇಕು ಅಂದರೆ ಮಾತ್ರ ಶಿಕ್ಷಕನು ಶಿಕ್ಷಣ ಕರ್ಮದಲ್ಲಿ ತಲ್ಲೀನನಾಗುವನು. ಆ ಕರ್ಮವು ಅವನನ್ನು ಬಂಧಿಸದೆ ಮುಕ್ತಮಾಡುವದು. ಎಲ್ಲ ವಿದ್ಯಾರ್ಥಿಗಳ ಹೃದಯ,

ಮತ್ತು ಆತ್ಮದೊಡನೆ, ಆ ಕರ್ಮವು ಅವನನ್ನು ಜೋಡಿಸುವದು. ದೇಹದ ಸೆರೆಯಲ್ಲಿದ್ದ ಶಿಕ್ಷಕನ ಆತ್ಮವು, ಹೊರಗಿನ ಅನಂತ ಆತ್ಮದೊಡನೆ ಸಾಮರಸ್ಯ ಹೊಂದುವದು; ಇದೇ ಮೋಕ್ಷವು.

ಕರ್ಮಗಳು ಬೇಡವೆಂದೆನಿಸುವ ಕಾರಣಗಳು ಎರಡು. ಒಂದು ಕರ್ಮದಲ್ಲಿದ್ದ ಅಪ್ರೀತಿ; ಇನ್ನೊಂದು ಯಾರಿಗಾಗಿ ನಾವು ಕರ್ಮವನ್ನು ಮಾಡುತ್ತೇವೆಯೋ ಅವರಲ್ಲಿಯೂ ಅಪ್ರೀತಿ. ಈ ಎರಡು ಕಾರಣಗಳು ದೂರವಾದರೆ ಮೋಕ್ಷವು ಸಮೀಪಿಸುವದು. ಕರ್ಮವನ್ನೂ ಪ್ರೀತಿಸಿರಿ, ಮತ್ತು ಯಾರಿಗಾಗಿ ಅದನ್ನು ಮಾಡುತ್ತೀರೊ ಅವರನ್ನೂ ಪ್ರೀತಿಸಿರಿ.

ಉದಾಹರಣೆಗಾಗಿ ಒಂದು ರುಗ್ಣಾಲಯವನ್ನು ತೆಗೆದುಕೊಳ್ಳುವಾ. ಅಲ್ಲಿ ಯಾರಾದರೊಬ್ಬ ಪರಿಚಾರಿಕೆಯು ಇದ್ದೇ ಇರುವಳು. ಶುಶ್ರೂಷೆ ಮಾಡುವದು ಅವಳ ವರ್ಣಕ್ಕೆ ಹೋಲುವ ಕರ್ಮ. ಆದರೆ ರೋಗಿಗಳ ವಿಷಯವಾಗಿ ಅವಳಿಗೆ ಪ್ರೀತಿಯೆನಿಸದಿದ್ದರೆ ಅವಳು ಮಾಡುವ ಕರ್ಮವು ಅಷ್ಟು ಉತ್ತಮವಾಗುವದಿಲ್ಲ. ಯಾವ ರೋಗಿಗಳಲ್ಲಿ ಅವಳಿಗೆ ತನ್ನತನವೆನಿಸುವದೊ ಪ್ರೇಮವೆನಿಸುವದೊ ಅವರ ಸೇವೆ ಮಾಡುವಾಗ ಅವಳು ಬೇಸರಿಯುವದಿಲ್ಲ. ಯಾರ ಸಲುವಾಗಿ ಅವಳಿಗೆ ಪ್ರೇಮವೆನಿಸುವದಿಲ್ಲವೊ ಅವರ ಶುಶ್ರೂಷೆ ಸಹ ಅವಳು ಮಾಡುವಳು. ಆದರೆ ಆ ಸೇವೆಯು ಅವಳನ್ನು ಮುಕ್ತ ಮಾಡುವದಿಲ್ಲ. ಆ ಸೇವೆಯು ಅವಳಿಗೆ ಭಾರವೆನಿಸುವದು.

ತಾಯಿಯು ತನ್ನ ಮಕ್ಕಳ ಸೇವೆಯನ್ನು ಎಷ್ಟು ಪ್ರೀತಿಯಿಂದ ಮಾಡುತ್ತಾಳೆ. ಆ ಸೇವೆಯಿಂದ ಅವಳಿಗೆ ಎಂದೂ ತೊಂದರೆಯಾಗುವದಿಲ್ಲ. ಮಕ್ಕಳಲ್ಲಿ ಯಾರಾದರೂ ಬೇನೆಯಿಂದ ಬಿದ್ದರೆ, ಅವಳು ಹಗಲಿರುಳು ಸೇವೆ ಶುಶ್ರೂಷೆಯನ್ನು ಮಾಡುವಳು. "ಏನಮ್ಮಾ ನೀವು ಬಹಳೇ ದಣಿದಿರುತ್ತೀರಿ. ನಾನು ಈ ಬಾಲಕನನ್ನು ರುಗ್ಣಾಲಯದಲ್ಲಿಡುವ ವ್ಯವಸ್ಥೆ ಮಾಡುತ್ತೇನೆ''ಂದು ಯಾರಾದರೂ ಅಂದರೆ "ಎಲ್ಲಿ? ನನಗೆಲ್ಲಿ ದಣಿವು? ಏನು ದಣಿವಾಗಿಲ್ಲ. ಎರಡು ಕೈಗಳಿರದೆ ಹತ್ತು ಕೈಗಳಿದ್ದರೆ ಇನ್ನೂ ಎಷ್ಟು ಚೆನ್ನಾಗಿ ಸೇವೆ, ಶುಶ್ರೂಷೆ ಮಾಡುತ್ತಿದ್ದೆನಲ್ಲ? ಈ ಸೇವೆಯಿಂದಲೇ ನನಗೆ ಸಮಾಧಾನವು. ನೀವು ನನ್ನ ಮಗನನ್ನು ದೂರ ಎಲ್ಲಿ ಯಾವರೂ ಒಯ್ದರೆ ಮಾತ್ರ ನನಗೆ ಕಷ್ಟವಾಗುವದು.'' ಎಂದು ಅನ್ನುವಳು ಆ ತಾಯಿಯು.

ಸಂತರೆಲ್ಲರು ತಮ್ಮ ತಮ್ಮ ಕರ್ಮಗಳನ್ನು ಮಾಡಿ ಮುಕ್ತರಾದ

ಕಾರಣವೇ ಇದು. ಕಬೀರನು ಬಟ್ಟೆಗಳನ್ನು ನೇಯುತ್ತಿದ್ದನು. ಆ ಕರ್ಮ ದಲ್ಲಿ ಅವನು ಬೆರೆಯುತ್ತಿದ್ದನು. ಅವನು ಎಂದೂ ಬೇಸರಿಯುತ್ತಿದ್ದಿಲ್ಲ. "ಸಮಾಜ ದೇವರಿಗಾಗಿ ನಾನು ಈ ಬಟ್ಟೆಗಳನ್ನು ನೇಯುತ್ತೇನೆ. ನನ್ನ ಕರ್ಮಕುಸುಮದಿಂದ ಸಮಾಜ ದೇವನನ್ನು ಪೂಜಿಸುವೆನು." ಎಂಬ ಭಾವನೆಯಿಂದ ಅವನು ನೇಯುತ್ತಿದ್ದನು. ಆದ್ದರಿಂದಲೇ ಅವನ ಕರ್ಮವು ಉತ್ಕೃಷ್ಟವಾಗುತ್ತಿತ್ತು. ಭಕ್ತಿವಿಜಯದಲ್ಲಿ ಈ ರೀತಿ ಹೇಳಲಾಗಿದೆ. ಕಬೀರನು ಪೇಟೆಯಲ್ಲಿ ತಾನು ನೇಯ್ದ ಅರಿವೆಗಳನ್ನು ಹರಡಿ ಕೂಡ್ರುತ್ತಿದ್ದನು ಜನರೆಲ್ಲರು ಅವನ್ನು ನೋಡುತ್ತಲೇ ನಿಂತುಬಿಡುತ್ತಿದ್ದರು. ಆದರೆ ಅವುಗಳನ್ನು ಕೊಳ್ಳುವ ಧೈರ್ಯವು, ಸಾಹಸವು ಯಾರಿಗೂ ಆಗುತ್ತಿದ್ದಿಲ್ಲ. ಅವುಗಳ ಬೆಲೆಯು ಅನಂತವಿರಬೇಕೆಂದು ಅವರಿಗನಿಸುತ್ತಿತ್ತು. ನಿಜವಾಗಿಯೂ ಹಾಗೆ ಇತ್ತು. ಅವು ಅಸಾಧಾರಣವಿದ್ದವು. ಈ ಅರಿವೆಗಳು ಅಪೌಲಿಕವೆಂದು ಜನರು ಅನ್ನುವರು. ಒಮ್ಮೆ ನೋಡಿದ ಮೇಲೆ ಅವರ ದೃಷ್ಟಿಯು ಬೇರೆ ಕಡೆಗೆ ಹೋಗುತ್ತಿದ್ದಿಲ್ಲ. ಅವು ಸಾದಾ ಅರಿವೆಗಳು ಇದ್ದಿಲ್ಲ. ಆ ಅರಿವೆಗಳಲ್ಲಿ ಕಬೀರನ ಹೃದಯವು ಸುರಿಯಲ್ಪಟ್ಟಿತ್ತು. ಯಾವ ಕರ್ಮದಲ್ಲಿ ಹೃದಯ ಮತ್ತು ಆತ್ಮವು ಸುರಿದಿವೆಯೊ, ಆ ಕರ್ಮದ ಬೆಲೆಯನ್ನು ನಿರ್ಧರಿಸುವವರಾರು? ಆ ಕರ್ಮವು ಪರಮೇಶ್ವರನತ್ತ ಒಯ್ಯುವ, ಮೋಕ್ಷವನ್ನು ದೊರಕಿಸಿಕೊಡುವ ಕರ್ಮವು.

ಗೋರಾಕುಂಬಾರನು ಗಡಿಗೆಗಳನ್ನು ಮಾಡುತ್ತಿದ್ದನು. ಅದು ಅವನಿಗೆ ಸೇರುವ ಕರ್ಮವು. ಗ್ರಾಹಕರಲ್ಲಿ ಅಪಾರ ಪ್ರೀತಿ ಇವನಿಗೆ. ಜನತೆಯು ಅವನಿಗೆ ದೇವರ ರೂಪವೆಂದು ಅನಿಸುತ್ತಿತ್ತು. ಅವರಿಗೆ ಮೋಸಮಾಡಬೇಕೆಂಬ ಬುದ್ಧಿ ಅವನಲ್ಲಿ ಇದ್ದಿಲ್ಲ. ಇವತ್ತು ಕೊಟ್ಟ ಗಡಿಗೆಯು ನಾಳೆ ಒಡೆಯಬೇಕು, ಮತ್ತೆ ಗ್ರಾಹಕರು ತನ್ನ ಹತ್ತಿರ ಬರಬೇಕು, ಹೀಗೆ ಅವನಿಗೆ ಎಂದೂ ಅನಿಸುತ್ತಿದ್ದಿಲ್ಲ. ತಂದೆಯು ಕೊಂಡ ಗಡಿಗೆಯು ಮಗನ ಜೀವಮಾನದ ವರೆಗೆ ಬರಬೇಕು. ಎಂಬ ವೃತ್ತಿಯಿಂದ ಗೋರಾಕುಂಬಾರನು ಗಡಿಗೆಗಳನ್ನು ತಯಾರಿಸುತ್ತಿದ್ದನು.

ಗಡಿಗೆಗಳಿಗೆ ಬೇಕಾಗುವ ಮಣ್ಣನ್ನು ತುಳಿಯುವಾಗ ಅವನಿಗೆ ಬೇಸರವೆನಿಸುತ್ತಿದ್ದಿಲ್ಲ. ಮಣ್ಣು ತುಳಿಯುವದು ಅವನಿಗೆ ವೇದಗಳನ್ನು ಬರೆದಷ್ಟು, ಗಣಿತದಲ್ಲಿಯ ಸಿದ್ಧಾಂತಗಳಷ್ಟು ಮಹತ್ವಪ್ಪದ್ದೆನಿಸುತ್ತಿತ್ತು. ಮಣ್ಣು ತುಳಿಯುತ್ತಿರುವಾಗ ತನ್ನ ಅಸ್ತಿತ್ವವನ್ನು ಮರೆಯುತ್ತಿದ್ದನು. ಮಣ್ಣು ತುಳಿಯುತ್ತಿ

ರುವಾಗ ಆ ಮಣ್ಣಿನಲ್ಲಿ ಆಡುವ ತನ್ನ ಮಗನನ್ನು ತುಳಿದದ್ದು ಸಹ ಅವನ ಲಕ್ಷ್ಯದಲ್ಲಿ ಬರಲಿಲ್ಲ. ಅವನ ಒಳಗಣ್ಣಿನ ಎದುರು ಜನತಾಜನಾರ್ದನನೇ ಇದ್ದನು. ಗಡಿಗೆಗಳನ್ನು ಕೊಳ್ಳಲು ಬರುವ ಪರಮೇಶ್ವರನೇ ಅವನಿಗೆ ಕಾಣುತ್ತಿದ್ದನು. ಇಂಥ ತಲ್ಲೀನತೆಯು ಮೋಕ್ಷವನ್ನು ಕೊಡುವದು. ಜೀವನದಲ್ಲಿ ಆನಂದದ ಅಖಂಡ ಹೊಳೆಯನ್ನು ಹರಿಸುತ್ತದೆ.

ಹಿರಿಯರು, ಕಿರಿಯರು; ಕೀಳು, ಮೇಲು; ಎಂಬ ಭೇದಗಳು ಕರ್ಮದಲ್ಲಿಲ್ಲ. ಕರ್ಮವನ್ನು ಮಾಡುವಾಗ ನಮ್ಮನ್ನು ನಾವು ಮರೆಯುತ್ತೇವೆಯೋ ಇಲ್ಲವೋ ಎಂಬುದೇ ಮುಖ್ಯವಾದ ಮಾತು. ತನ್ನನ್ನು ಮರೆಯುವದರ ಮೇಲೆ ಇದೆ ಕರ್ಮದ ಬೆಲೆ. ಮ್ಯುನಸಿಪಾಲಿಟಿಯ ಅಧ್ಯಕ್ಷನ ಉದಾಹರಣೆಯನ್ನು ವಿಚಾರಿಸುವಾ. ಅವನು ಲಕ್ಷಾವಧಿ ಜನರ ಸೇವೆಯನ್ನು ಮಾಡುತ್ತಾನೆ. ಅವನ ಅಹಂಕಾರವು ಸೇವೆಯಷ್ಟೆ ದೊಡ್ಡದಿದ್ದರೆ ಆ ಸೇವೆಗೆ ಬೆಲೆ ಇಲ್ಲ. ಇದನ್ನೇ ಸಂಖ್ಯಾರೂಪದಲ್ಲಿ ಬರೆದು ವಿಚಾರಿಸುವ.

$$\frac{\text{ಮೂರು ಲಕ್ಷ ಜನರ ಅಧ್ಯಕ್ಷರು ಸಲ್ಲಿಸುವ ಸೇವೆ}}{\text{ಅಷ್ಟೇ ಅಹಂಕಾರ}} =$$

ಈ ಅಪೂರ್ಣಾಂಕದ ಉತ್ತರವು ೧ (ಒಂದು). ಇನ್ನು ಒಬ್ಬ ತಾಯಿಯ ಉದಾಹರಣೆಯನ್ನು ವಿಚಾರಿಸಿರಿ. ಒಬ್ಬನೇ ಒಬ್ಬ ಮಗನ ಸೇವೆಯನ್ನು ಮಾಡುತ್ತಾಳೆ. ಆದರೆ ಆ ಸೇವೆಯನ್ನು ಮಾಡುವಾಗ ತನ್ನನ್ನು ಮರೆತುಬಿಡುತ್ತಾಳೆ. ಈ ಸೇವೆಯ ನೋಂದ ಅಥವಾ ಟಿಪ್ಪಣೆಗಳು ಇರುವದಿಲ್ಲ. ಹೀಗೆ ಟಿಪ್ಪಣೆ ಬರೆದಿಟ್ಟಿದ್ದರೆ ಅದೊಂದು ಮಹಾಭಾರತವೇ ಆಗುತ್ತಿತ್ತು. ಎಷ್ಟು ಸೇವೆ ಮಾಡಿದಗೂ ಅವಳಿಗೆ ಏನೂ ಅನಿಸುವದಿಲ್ಲ. ಅಹಂಕಾರದ ಸುಳಿವೇ ಇಲ್ಲ. ಇದನ್ನೂ ಸಂಖ್ಯಾರೂಪವಲ್ಲಿ ಇಡುವಾ. ಸೇವೆಯು ಅಂಶಸ್ಥಾನದಲ್ಲಿ ಅಹಂಕಾರವು ಛೇದಸ್ಥಾನದಲ್ಲಿ.

$$\frac{\text{ತಾಯಿಯು ಮಗುವಿಗೆ ಸಲ್ಲಿಸಿದ ಸೇವೆಯು}}{\text{ಪೂರ್ಣ ನಿರಹಂಕಾರ}} =$$

ಈ ಅಪೂರ್ಣಾಂಕದ ಕಿಮ್ಮತ್ತು ಅನಂತವಾಗುವದು. ಒಂದಕ್ಕೆ ಪೂಜಿಯಿಂದ ಭಾಗಿಸಿದರೆ ಅದರ ಉತ್ತರವು ಅನಂತವೆಂದೇ ಇರುವದು. ಮತ್ತು ಅನಂತವೆಂದರೆ ಮೋಕ್ಷವು. ಕರ್ಮದಲ್ಲಿ ಹೃದಯವು ಬೆರೆತರೆ, ಆತ್ಮವು ಇದ್ದರೆ, ಅದು ಕಿರಿ ಕರ್ಮವಿದ್ದರೂ ಮೋಕ್ಷವು ಸಿಕ್ಕುವದು.

ದಕ್ಷಿಣೆಯನ್ನು ಕೊಡುವಾಗ ನೀರಿನಲ್ಲಿ ಎದ್ದಿ ಕೊಡುತ್ತೇವೆ. ಇದರ ಅರ್ಥ ವೇನು? ಅದರಲ್ಲಿ ಅಡಕವಾದ ಹೇತುವು ಯಾವುದು? ದಕ್ಷಿಣೆಯು ಒಂದು ಪೈ ಇರಬಹುದು. ಆದರೆ ಅದರಲ್ಲಿ ಹೃದಯದ ಆರ್ದ್ರತೆ ಇದೆ. ಇಂಥ ಪೈ ದಕ್ಷಿಣೆಯು ಶ್ರೀಮಂತರ ಲಕ್ಷಾವಧಿ ರೂಪಾಯಿಯ ದಾನಕ್ಕಿಂತ ಶ್ರೇಷ್ಠವಾದದ್ದು. ರುಕ್ಮಿಣಿಯ ಭಾವಭಕ್ತಿಯಿಂದ ತುಂಬಿದ ಒಂದು ತುಲಸಿ ಪತ್ರವು, ಸತ್ಯಭಾಮೆಯ ವಜ್ರವೈಡೂರ್ಯ, ಹೊನ್ನುಚಿನ್ನದ ಆಭರಣಕ್ಕಿಂತ ಹೆಚ್ಚು ತೂಕವುಳ್ಳದ್ದಾಯಿತು. ಎಲ್ಲವನ್ನೂ ತ್ಯಜಿಸುವ ಶಿವನ ಜಟೆಯ ಕೂದಲು, ಕುಬೇರನ ಸಂಪತ್ತಿಯಕಿಂತ ಹೆಚ್ಚು ಬೆಲೆಯುಳ್ಳದ್ದು.

ಆದ್ದರಿಂದ ನಿಮ್ಮ ಕರ್ಮವು ಭಕ್ತಿಯಿಂದ ತುಂಬಿದ್ದಿರಲಿ. ಯಾರಿಗಾಗಿ ನೀವು ಕರ್ಮವನ್ನು ಮಾಡಲಿಚ್ಛಿಸುವಿರೋ ಅವನನ್ನು ಪ್ರೀತಿಸಿ, ದೇವರೆಂದು ಭಾವಿಸಿರಿ. ಹೀಗೆ ಮಾಡಿದರೆ ನಿಮ್ಮ ಜಡಕರ್ಮದಲ್ಲಿಯೂ ರಸವು ಹುಟ್ಟುವದು. ಇದರ ಅನುಭವವನ್ನಾದರೂ ಪಡೆಯಿರಿ.

ನನ್ನದೊಂದು ಖಾನಾವಳಿಯೆಂದು ತಿಳಿಯಿರಿ. ನನ್ನ ಮನೆಗೆ ಯಾವನಾದರೂ ಗೆಳೆಯನು ಊಟಕ್ಕೆ ಬರುವವನಿದ್ದರೆ ನಾನು ಕಾಳಜಿಯಿಂದ ಅಡಿಗೆಯನ್ನು ಮಾಡುವೆನು; ಪ್ರೀತಿಯಿಂದ ಮಾಡುವೆನು. ರೊಟ್ಟಿಯನ್ನು ಮಾಡುವಾಗ ತ್ರಾಸವೆನಿಸುವದಿಲ್ಲ. ಚಟ್ಣಿಯನ್ನು ಕುಟ್ಟುವಾಗ ಕೈಗೆ ನೋವಾಗುವದಿಲ್ಲ. ತಾಟು, ತಂಬಿಗೆಗಳನ್ನು ಝುಳಝುಳ ತಿಕ್ಕಿ ಲಕಲಕ ಹೊಳೆಯುವಂತೆ ಮಾಡುವೆನು. ಹೀಗೆಲ್ಲ ನನ್ನ ಗೆಳೆಯನಿಗಾಗಿ ನಾನು ಮಾಡುವೆನು. ಇದೇ ಭಾವನೆಯನ್ನು ಖಾನಾವಳಿಗೆ ಬರುವ ಗ್ರಾಹಕರ ವಿಷಯವಾಗಿ ಇಡಬೇಕು. ಅಂದರೆ ಎಲ್ಲ ಕಡೆಯಲ್ಲಿಯೂ ಸ್ವಚ್ಛತೆ, ಆನಂದ, ಪ್ರೇಮವು, ಆತಿಥ್ಯವು ಕಂಡು ಬರುವದು. ಮತ್ತು ವಾತಾವರಣವೆಲ್ಲವೂ ಪ್ರಸನ್ನವಾಗುವದು. ಪ್ರತ್ಯಕ್ಷ ಮೋಕ್ಷ-ಲಕ್ಷ್ಮಿಯು ಅವತರಿಸುವಳು.

ಸಮಾಜ ಸೇವೆಯ ಯಾವದೇ ಕಾರ್ಯವಿರಲಿ. ಅದು ಸಾಲೆ ಇರಲಿ, ಅಂಗಡಿ ಇರಲಿ, ಅಥವಾ ಖಾನಾವಳಿ ಇರಲಿ; ನೀವು ಮಾಮಲೇದಾರರಾಗಬಹುದು ಅಥವಾ ಮ್ಯುನಸಿಪಾಲಿಟಿಯಲ್ಲಿ ಅಧಿಕಾರಿಗಳಾಗಬಹುದು. ಸಮಾಜ ದೇವರ ಪೂಜೆ ಮಾಡುವದದೆ ಎಂಬುದನ್ನು ಮರೆಯಬಾರದು. ಅಂದರೆ ನಿಮ್ಮ ಕರ್ಮವು ದಿವ್ಯವಾಗದೆ ಹೋಗದು.

ಆದರೆ ಇಂದು ಸಮಾಜದಲ್ಲಿ ನಾವು ಕಾಣುವ ಚಿತ್ರವು ಯಾವುದು?

ಗವ್ಹರ್ನರರು ಬರುತ್ತಾರೆ ಅಂದಕೂಡಲೇ ಮ್ಯುನಸಿಪಾಲಿಟಿಯು ಎಚ್ಚರಿಯುತ್ತದೆ. ರಸ್ತೆ, ಗಟಾರ, ಎಲ್ಲವೂ ಸ್ವಚ್ಛ ಮಾಡಲ್ಪಡುತ್ತವೆ. ಆದರೆ ಮುನಸಿಪಲ್ ಹದ್ದಿಯಲ್ಲಿ ಇರುವ ಲಕ್ಷಾವಧಿ ಜನರು ಹೆಣಗಳೋ? ಅವರಿಗೆ ಸ್ವಚ್ಛತೆಯು ಬೇಡವೋ? ಅವರಿಗೆ ಹೊಲಸಿನಲ್ಲಿ ಇರುವ ಬಯಕೆ ಇದೆಯೋ? ಇವತ್ತು ಸಿರಿವಂತರು, ಅಧಿಕಾರಿಗಳು ನಮಗೆ ದೇವರಾಗಿದ್ದಾರೆ. ಅವರು ಬಂದರೆ ನಾವು ನಮ್ಮ ಕರ್ಮಗಳನ್ನು ನೆಟ್ಟಗೆ ಮಾಡುತ್ತೇವೆ. ಆದರೆ ಲಕ್ಷಾವಧಿ ಜನರು ಪರಬ್ರಹ್ಮನ ರೂಪಗಳೆಂದು ಭಾವಿಸಿ, ತಿಳಿದು ಕರ್ಮಗಳನ್ನು ಮಾಡಿದರೆ ಮಾತ್ರ ಭಾಗ್ಯವೂ ಸಿಕ್ಕುವದು, ಮೋಕ್ಷವೂ ಸಮೀಪಿಸುವದು, ಸ್ವಾತಂತ್ರ್ಯವೂ ದೊರೆಯುವದು. ಅಲ್ಲಿಯ ತನಕ ನಮ್ಮ ಪಾಲಿಗೆ ಕೀಳಾದ ಬಾಳೇ ಸರಿ! ಮತ್ತು ಸಮಾಜದ ಮೇಲೆ ಹೆಣದ ಕಳೆ. ಅಲ್ಲಿಯ ವರೆಗೆ ನಮ್ಮ ಅಂಗಡಿ, ಹಾಟೆಲ್, ಖಾನಾವಳಿ, ಮತ್ತು ಕಚೇರಿಗಳಲ್ಲಿ ಹೊಲಸು, ಅವ್ಯವಸ್ಥೆ, ನಿಷ್ಕಾಳಜಿತನ, ಸ್ವಾರ್ಥ ತುಂಬಿತುಳುಕುವವು. ಮತ್ತು ಭಾರತೀಯ ಸಂಸ್ಕೃತಿಯು ಹೀನವೆಂದು ಜಗತ್ತು ಅನ್ನುವದು; ಇದರಲ್ಲಿ ಏನೂ ಸಂಶಯವಿಲ್ಲ.

ಮೋಕ್ಷವು ಜಪತಪಗಳಲ್ಲಿರದೆ ಧರ್ಮದಲ್ಲಿದೆ; ಸೇವಾಕರ್ಮದಲ್ಲಿದೆ. ಸೇರಿಕೆಯ ಸೇವಾಕರ್ಮವನ್ನು ಅಂತಃಕರಣಪೂರ್ವಕವಾಗಿ ಮಾಡುವದರಲ್ಲಿದೆ. ಸಮಾಜ ದೇವರ ಪೂಜೆಯನ್ನು ಕರ್ಮದಿಂದ ರಸಮಯ ಮತ್ತು ಗಂಧಮಯವಾಗಿ ಮಾಡುವದರಲ್ಲಿದೆ. ಕರ್ಮದ ಜಪವನ್ನೇ ಮಾಡಬೇಕು. ಯಾವಾಗಲೂ ಕರ್ಮವು ಹೇಗೆ ಉತ್ಕೃಷ್ಟವಾದೀತು, ಏಕಾಗ್ರಚಿತ್ತದಿಂದ ಮಾಡಲು ಬರುವದು, ಇದರ ವಿಚಾರವೇ ಇರಬೇಕು. "ಯಜ್ಞಾನಾಂ ಜಪಯಜ್ಞೋಽಸ್ಮಿ" ಎಂದು ಗೀತೆಯು ಹೇಳುತ್ತದೆ. ಜಪವೆಂದರೆ ನಿತ್ಯಧ್ಯಾಸವು. ನಿನ್ನೆನಕಿಂತ ಇವತ್ತು ಕರ್ಮವು ಹೆಚ್ಚು ಸುಂದರವಾಗಬೇಕು, ಇವತ್ತಿಗಿಂತ ನಾಳೆ ಹೆಚ್ಚು ಚನ್ನಾಗಿ ಆಗಬೇಕು, ಹೀಗೆ ಮನಸ್ಸಿನಲ್ಲಿ ಅನಿಸುವದೆಂದರೆ ಜಪವು. ಇದರಿಂದಲೇ ನಾವು ಮೋಕ್ಷಕ್ಕೆ ಪಾತ್ರರಾಗುವೆವು. ಸೇವೆಯು ನಿರ್ದೋಷವಾಗಬೇಕು, ನಿಸ್ವಾರ್ಥಿಯಾಗಬೇಕು, ಎಂಬ ಕಳಕಳಿಯು ಹುಟ್ಟಬೇಕು. ಹಗಲಿರುಳು ಅನಿಸುವ ಈ ಕಳಕಳಿಯೆಂದರೆ ಜಪವು.

ದಿನದ ಕರ್ಮಗಳನ್ನೆಲ್ಲ ರಾತ್ರಿ ಮಲಗುವ ಮೊದಲು ದೇವರಡಿಯಲ್ಲಿ ಅರ್ಪಣಮಾಡುವ ಪರಿಪಾಠವಿದೆ. ಈ ಕರ್ಮದ ನೈವೇದ್ಯವನ್ನು ದೇವರಿಗೆ

ತೋರಿಸಿ ಹೀಗೆ ಪ್ರಾರ್ಥನೆ ಮಾಡುವದು, "ದೇವರೆ! ಕರ್ಮವು ಇನ್ನೂ ನಿರ್ದೋಷವಾಗಲೊಲ್ಲದು. ಇನ್ನೂ ನನ್ನನ್ನು ನಾನು ಮರೆಯುವದಿಲ್ಲ. ಕೀರ್ತಿ, ಮಾನ, ದುಡ್ಡು ಇವುಗಳ ಮೋಹವು ಬಿಡುವದಿಲ್ಲ. ಹೊಗಳಿಕೆ, ತೆಗಳಿಕೆಗೆ ಮನಸ್ಸು ಸೋಲುತ್ತದೆ. ಆದರೂ ನಾಳೆ ಇದಕ್ಕಿಂತ ಹೆಚ್ಚು ಚೆನ್ನಾಗಿ ದುಡಿಯಲು ಯತ್ನಿಸುತ್ತೇನೆ.''

ನಮ್ಮಿಂದ ಆಗಬೇಕಾದಷ್ಟು ಉತ್ತಮ ರೀತಿಯಲ್ಲಿ ಕರ್ಮವು ಆಗುವದಿಲ್ಲವೆಂದು ಅನಿಸುವದರಲ್ಲಿಯೇ ಧರ್ಮದ ತಿರುಳು ಇದೆ. ಈ ಅಪೂರ್ಣತ್ವದ ಭಾವದಿಂದ ಬರುವ ಕಣ್ಣೀರಲ್ಲಿ ಭಕ್ತಿಯ ಮೂಲವಿದೆ. ಜರ್ಮನ್ ಕವಿ ಗಟೆಯು ಹೇಳುತ್ತಾನೆ— "ಯಾರು ಕಣ್ಣೀರು ಸುರಿಸಿಲ್ಲವೊ, ಅವನಿಗೆ ದೇವರು ಕಾಣಿಸುವದು ಸಾಧ್ಯವಿಲ್ಲ." ಅಪೂರ್ಣತ್ವದ ಅರಿವಿನಿಂದ, ಕಣ್ಣಲ್ಲಿ ಬಂದ ನೀರಿನಿಂದ ನಮ್ಮ ದೃಷ್ಟಿಯು ನಿರ್ಮಲವಾಗುತ್ತದೆ. ದೇವರು ನಮಗೆ ಎಲ್ಲ ಕಡೆಯಲ್ಲಿ ಕಾಣುತ್ತಾನೆ. ಮತ್ತು ನಮ್ಮ ಸೇವೆಯಿಂದ ಅವನ ಪೂಜೆಯನ್ನು ಮಾಡಬೇಕಾದರೆ ನಮ್ಮಲ್ಲಿ ಅಪೂರ್ವವಾದ ಉತ್ಸಾಹವೂ, ಆನಂದವೂ ಕಂಡುಬರುವವು.

ಹೀಗೆ ಮನಸಿನಿಂದ ಕೆಲಸ ಮಾಡಿದರೆ ದಣಿವು ಅನಿಸುವದಿಲ್ಲ. ಜನಾಬಾಯಿಗೆ ಎಷ್ಟು ವೇಳೆ ಬೀಸಿದರೂ ದಣಿವೇ ಆಗುತ್ತಿದ್ದಿಲ್ಲ. ನಾಮದೇವನ ಮನೆಗೆ ಯಾವಾಗಲೂ ಸಂತ, ಮಹಂತರು ಬರುತ್ತಿದ್ದರು. ಆದರೆ ಜನಾಬಾಯಿಯು ಆ ಮಹಂತರ ಪ್ರವಚನಗಳಿಗೆ ಹೋಗುತ್ತಿದ್ದಿಲ್ಲ. ತನ್ನ ಬೀಸುವ ಕೆಲಸವನ್ನೇ ಮಾಡುತ್ತಿದ್ದಳು. "ನಮ್ಮ ಮನೆಗೆ ಇಂದು ದೇವರು ಬಂದಿದ್ದಾರೆ. ಅವರಿಗೆ ಚಲೋ ರೊಟ್ಟಿಬೇಕು. ಅದಕ್ಕಾಗಿ ಕಾಳು ಚನ್ನಾಗಿ ಹಸನ ಮಾಡಿ ಬೀಸುವೆನು'' ಎಂಬ ಭಾವನೆಯಿಂದ ಅವಳು ಬೀಸುತ್ತಿದ್ದಳು. ಅವಳ ಕೈ ದಣಿಯುತ್ತಿದ್ದಿಲ್ಲ. ದೇವರ ಶಕ್ತಿಯೇ ಅವಳ ಕೈಯಲ್ಲಿ ಬರುತ್ತಿತ್ತು. ಅವು ದೇವರ ಕೈಗಳಾಗಿದ್ದವು, ಜನಾಬಾಯಿಯವು ಅಲ್ಲ. ಆ ಬೀಸುವಿಕೆಯು ಅಪೌರುಷೇಯವಿತ್ತು. ಅದೊಂದು ಅಪೌರುಷೇಯ ವೇದವೇ ಆಗಿತ್ತು.

ಜವಾಹರಲಾಲರು ವರ್ಷದಲ್ಲಿ ಎಂಟು ತಿಂಗಳು ದೇಶದಲ್ಲಿ ತಿರುಗಾಡುತ್ತಾರೆ. ಒಂದು ನಿಮಿಷ ಸಹ ವಿಶ್ರಮಿಸದೆ ಹತ್ತತ್ತು ಸಭೆಗಳಲ್ಲಿ ಭಾಷಣ ಮಾಡುತ್ತಾರೆ. ಬಂಡಿ, ಉಗಿಬಂಡಿ, ಮೋಟಾರ, ವಾಯುಕಲ್ಲ ಇವುಗಳಲ್ಲಿ ಹಗಲಿರುಳು ಪ್ರವಾಸ ಮಾಡುವರು. ಈ ಉತ್ಸಾಹ ಎಲ್ಲಿಂದ

ಬರುತ್ತದೆ ? ಅವರು ಸೇವೆಯಲ್ಲಿ ತನ್ಮಯರಾಗುತ್ತಾರೆ. ದರಿದ್ರ ನಾರಾಯಣನನ್ನು ಹೇಗೆ ನಗಿಸಲಿ ? ಹೇಗೆ ಉಣ್ಣಿಸಲಿ ಉಡಿಸಲಿ ? ಜ್ಞಾನವನ್ನು ಹೇಗೆ ಹಬ್ಬಿಸಲಿ ? ಇದೇ ಅವರ ವಿಚಾರ. ಅದೊಂದು ಕರ್ಮದಿಂದ ಮಾಡಿದ ಸಮಾಜ ದೇವರ ಪೂಜೆಯು.

ಮಹಾತ್ಮಾಜಿಯವರು ಪ್ರತಿಯೊಂದು ಕ್ಷಣವನ್ನು ಸಮಾಜ ಸೇವೆಯಲ್ಲಿಯೇ ಕಳೆಯುತ್ತಾರೆ. ಗಾಂಧಿ-ಅಯರ್ವಿನ್ ಮಾತುಕತೆ ನಡೆದಾಗ್ಗೆ ಗಾಂಧೀಜಿಯವರು ಅರ್ಧತಾಸು ಸಹ ಮಲಗುತ್ತಿದ್ದಿಲ್ಲ. ಅವರ ಮಾತು ರಾತ್ರಿ ಎರಡರವರೆಗೆ ನಡೆಯುತ್ತಿದ್ದವು. ಆ ಮೇಲೆ ತಿರುಗಿ ತಮ್ಮ ಬಿಡಾರಕ್ಕೆ ಬಂದು ಅರ್ಧತಾಸು ನೂಲುತ್ತಿದ್ದರು. ಈ ಸೇವಾಮೂರ್ತಿಯನ್ನು ಕಣ್ಣೆದುರು ತಂದರೆ ಹೃದಯವು ಉಕ್ಕೇರಿ ಬರುತ್ತದೆ.

ಇಂಥ ಆನಂದವು ಭಕ್ತಿಯುಕ್ತ ಕರ್ಮದಿಂದಲೇ ಸಾಧ್ಯವು. ಆ ಕರ್ಮವು ಭಾರವೆಂದೆನಿಸುವದಿಲ್ಲ. ಕಟ್ಟಿಗೆಗಳ ಮುಂಡಿಗೆಗಳನ್ನು ನೀವು ನೋಡಿರಬಹುದು. ಅವು ಬಹಳ ದೊಡ್ಡವು ಇರುತ್ತವೆ. ಯಾರ ತಲೆಯ ಮೇಲಾದರೂ ಬಿದ್ದರೆ ಅವರಿಗೆ ಅಪ್ಪಣೆಯೇ ಸರಿ. ಆದರೆ ಅದಕ್ಕೆ ಕೊಳ್ಳಿ ಕೊಡಿರಿ. ಇಡೀ ಮುಂಡಿಗೆಯು ಸುಟ್ಟು ಒಂದು ಬುಟ್ಟಿ, ಅರ್ಧಬುಟ್ಟಿ ಬೂದಿಯಾಗುವದು. ಅದನ್ನು ಮೈಗೆ ಒರಿಸಿಕೊಳ್ಳಬಹುದು. ಬಹಳ ಮೆತ್ತಗಿರುತ್ತದೆ. ಇದೇ ರೀತಿಯು ಕರ್ಮದ್ದು. ಭಾರವೆಂದೆನಿಸುವ ಕರ್ಮ, ಭಕ್ತಿಯಿಂದ ಮಾಡಿಬಿಟ್ಟರೆ ಅದು ಸುಲಭವೂ ಆಗುವದು, ಮೆತ್ತಗೂ ಆಗುವದು. ಖಾದಿ ಹೊತ್ತುಕೊಂಡು ಮಾರುವದು ಎಷ್ಟು ಕಷ್ಟ ? ಆದರೆ ಅದನ್ನೇ ಭಕ್ತಿಯಿಂದ ಶ್ರದ್ಧೆಯಿಂದ ಮಾಡಿರಿ. ಅದೇ ಖಾದಿಯ ಗಂಟು ಮೋಕ್ಷದ ಗಂಟಾಗುವದು. ಮತ್ತು ನಾವು ಅದನ್ನು ಎಂದಿಗೂ ಕೆಳಗಿಡಲಿಕ್ಕಿಲ್ಲ. ಪ್ರತ್ಯಕ್ಷ ಪಾಂಡುರಂಗನು ಇದಿರು ಬಂದು ನಿಂತರೂ, ಪುಂಡಲೀಕನು ತಂದೆತಾಯಿಯರ ಕಾಲು ಬಿಡಲಿಲ್ಲ. ತನ್ನ ಸೇವಾಕರ್ಮವನ್ನು ಬಿಟ್ಟು ಹೋದರೆ ದೇವರು ಹೋಗುವನೆಂಬುದು ಅವನಿಗೆ ಗೊತ್ತು. ತಾನು ಸೇವಾಕರ್ಮವನ್ನು ಮಾಡುವ ವರೆಗೆ ಇಪ್ಪತ್ತೆಂಟು ಯುಗಗಳಾದರೂ ಪಾಂಡುರಂಗನು ಅಲ್ಲಾಡುವದಿಲ್ಲವೆಂದೂ, ಮತ್ತು ತನ್ನ ಕೃಪಾದೃಷ್ಟಿಯ ಮಳೆಗರೆಯುವನೆಂದೂ ಅವನು ಬಲ್ಲವನಾಗಿದ್ದನು.

ಇದನ್ನೇ ಕುರಿತು ಸಂತ ತುಕಾರಾಮನು ಪ್ರೇಮದಿಂದ ಅಂದಿದ್ದಾನೆ. "ಏನೋ ಪುಂಡಲೀಕಾ, ಎಷ್ಟು ಸೊಕ್ಕು ನಿನಗೆ ? ಪ್ರತ್ಯಕ್ಷ ಪಾಂಡುರಂಗ

ನನ್ನು ಸಹ ನಿಲ್ಲಿಸಿಬಿಟ್ಟೆಯಲ್ಲ ?''

ಆದರೆ ಮುಂದೆ ತುಕಾರಾಮನು ಸಹ ತಾನು ಭಜನೆ ಮಾಡುವಾಗ, ದೇವರು ಬಂದರೂ ಅದನ್ನು ನಿಲ್ಲಿಸದೆ ಹಾಗೇ ಮುಂದೆ ಸಾಗಿಸಿದನು. ಸೇವಾಕರ್ಮವೇ ಸರ್ವಸ್ವವು. "ವಿಠ್ಠಲನೇ ನನ್ನ ಸರ್ವಸ್ವ'', ಎಂಬ ಅಭಂಗವಲ್ಲಿ ಅವರ ಜೀವನದ ತಿರುಳೇ ಬಂದಿದೆ. ತಮ್ಮ ಕರ್ಮ, ಕರ್ಮದ ಸಾಧನಗಳೆಂದರೆ ಈಶ್ವರನ ರೂಪಗಳೇ. ಚರಖಾ ಅಂದರೆ ದೇವರು. ಪ್ರಯೋಗಶಾಲೆಯಲ್ಲಿಯ ಉಪಕರಣಗಳೆಂದರೆ ದೇವರು. ಖಾದಿ ಅಂದರೆ ದೇವರು. ಹೀಗೆ ನಮ್ಮ ಸೇವಾಸಾಧನಗಳೆಂದರೆ ದೇವರ ರೂಪಗಳೇ; ಎಲ್ಲ ಕಡೆಯಲ್ಲಿಯೂ ದೇವರ ರೂಪಗಳೇ. ಕಾಂಗ್ರೆಸ್ ಸಂಘಟನೆಯಾಗಲೀ, ಕೂಲಿಕಾರರ ಸಂಘಟನೆಯಾಗಲೀ, ಒಕ್ಕಲಿಗರ ಸಂಘವಿರಲಿ, ತರುಣರ ಸಂಘವಿರಲಿ, ಗ್ರಾಮೋದ್ಯೋಗವೇ ಇರಲಿ, ಪ್ರಚಂಡವಾದ ಕಾರಖಾನೆಗಳೇ ಇರಲಿ ಅಥವಾ ವ್ಯಾಯಾಮ ಶಾಲೆಗಳನ್ನು ತೆರೆಯುವದೇ ಇರಲಿ, ಔದ್ಯೋಗಿಕ ಕೇಂದ್ರಗಳನ್ನು ಪ್ರಾರಂಭಿಸುವದೇ ಇರಲಿ, ಇವೆಲ್ಲ ಸೇವಾಕರ್ಮ ಗಳೆಂದರೆ ದೇವರ ಗುಡಿಗಳಿದ್ದಂತೆ. ಎಲ್ಲೆಡೆಯಲ್ಲಿಯೂ ವಿಠ್ಠಲನಿದ್ದಾನೆ.

ಈ ಕರ್ಮಗಳನ್ನು ಮಾಡುವಾಗ ನಮ್ಮ ಪಾಲಿಗೆ ಸುಖವೇ ಬರಲಿ, ದುಃಖವೇ ಬರಲಿ ಅದೂ ಆ ವಿಠ್ಠಲನ ರೂಪವೇ. ಕರ್ಮವನ್ನು ಮಾಡು ವಾಗ ಮೆಚ್ಚುಗೆಯಾಗಲಿ ಪೆಟ್ಟಾಗಲಿ ಎರಡೂ ಒಂದೇ. ಮನಸು ಅಲೆಯ ಬಾರದು. ಭಕುತಿಯ ಬೆಳಕಿನಲ್ಲಿ ಎಲ್ಲವೂ ಸುಂದರವು, ಮಂಗಲವು.

ಒಮ್ಮೆ ಮಹಾತ್ಮಾಜಿಯವರಿಗೆ ಯಾರೊ ಪ್ರಶ್ನೆ ಕೇಳಿದರು. "ನಿಮ್ಮನ್ನು ಜನರು ಟೀಕಿಸುತ್ತಾರೆ. ಅದರಿಂದ ನಿಮಗೇನು ಅನಿಸುತ್ತದೆ ?" ಅದಕ್ಕೆ ಆ ಮಹಾಪುರುಷನು ಉತ್ತರಕೊಟ್ಟನು. "ನನ್ನ ಅಂತರಂಗವು ಸದೈವ ಏಕಾಗ್ರವಾಗಿರುತ್ತದೆ. ನನ್ನ ಅಂತರಂಗದ ವೀಣೆಯು ಸದೈವ ಸರಾಗವಾಗಿಯೇ ಇರುತ್ತದೆ.'' ಮಹಾತ್ಮಾಜಿಯವರ ಹೃದಯದಲ್ಲಿ ಅಖಂಡ ಸಂಗೀತವದೆ. ಅಲ್ಲಿ ಪ್ರಕ್ಷುಬ್ಧತೆ ಇಲ್ಲ. ಸಾಗರದ ಮೇಲೆ ಅನಂತವಾದ ತೆರೆ ಗಳಿರುತ್ತವೆ. ಆದರೆ ಸಮುದ್ರವು ಆಳವಾಗಿದ್ದು ಅದರ ಅಂತರಂಗವು ಗಂಭೀ ರವಾಗಿರುತ್ತದೆ. ಅಲ್ಲಿ ಪ್ರಶಾಂತವಾದ ಶಾಂತಿಯು ನೆಲೆಗೊಂಡಿರುತ್ತದೆ.

ಮಹಾಪುರುಷರಿಗೆ ಇದು ಸಾಧಿಸುವದು ಹೇಗೆ ? ಅವರಲ್ಲಿ ಎಳ್ಳಷ್ಟು ಸ್ವಾರ್ಥವಿರುವದಿಲ್ಲ. ಜನರ ಸೇವೆಯೆ ಅವರ ಧ್ಯೇಯವು. ನಾವು ಸಮುದ್ರ ದೊಳಗೆ ಮುಳುಗಿದಾಗ, ಸಾವಿರಾರು ಘನಫೂಟು ನೀರು ನಮ್ಮ ಮೈಮೇಲೆ

ಇದ್ದರೂ ಅದರ ಭಾರವು ನಮಗೆ ಎಳ್ಳಷ್ಟೂ ಅನಿಸುವದಿಲ್ಲ. ನಾವು ನೀರಿನಲ್ಲಿ ಆಡುತ್ತೇವೆ, ಮುಳುಗುತ್ತೇವೆ, ನೆಲೆ ನೋಡಲೆತ್ನಿಸುತ್ತೇವೆ. ಆದರೆ ಅದೇ ನೀರು ಬಿಟ್ಟು ಹೊರಗೆ ಬಂದು, ಆ ನೀರಿನಲ್ಲಿಯ ಒಂದು ಕೊಡ ನೀರು ತುಂಬಿಕೊಳ್ಳಿರಿ. ಆ ಒಂದು ಕೊಡ ನೀರು ನಿಮಗೆ ತೊಂದರೆ ಮಾಡದೆ ಇರುವದಿಲ್ಲ. ನಿಮ್ಮ ತಲೆಗೆ, ನಡಕ್ಕೆ ಅದರ ಭಾರವೆನಿಸದೆ ಇರಲಾರದು.

ಕೇವಲ ಸ್ವಂತ ತನ್ನ ಸುಖಕ್ಕಾಗಿಯೇ ಮಾಡಿದ ಕರ್ಮವು ಭಾರವೆನಿಸುವದು. ಜೀವಕ್ಕೆ ಒಜ್ಜೆಯಾಗಿ ಬಿಡುತ್ತದೆ. ಅದೇ ಕರ್ಮವನ್ನು ಜನಕ್ಕಾಗಿ ಮಾಡಿಬಿಟ್ಟರೆ ಅದು ಹಗುರಾಗುವದು. ಜನಸಾಗರದಲ್ಲಿ ಮುಳುಗಿಬಿಡಿರಿ. ನಿಮ್ಮ ವ್ಯಕ್ತಿತ್ವದ ಬಿಂದುವನ್ನು ಜನತಾಸಿಂಧುವಿನಲ್ಲಿ ಬೆರಿಸಿಬಿಡಿರಿ. ಅಂದರೆ ಜೀವನದಲ್ಲಿ ಸಂಗೀತವು ಹರಡುವದು. ನಮಗಾಗಿ ಒಂದು ರುಪಾಯಿ ಸಾಲ ಬೇಡುವದು ಸಹ ಭಾರವೆನಿಸುವದು. ಆದರೆ ಅದೇ ಸಾರ್ವಜನಿಕ ಕಾರ್ಯಕ್ಕಾಗಿ ಲಕ್ಷಾವಧಿ ರುಪಾಯಿ ಭಿಕ್ಷೆ ಬೇಡಿದರೂ ಭಾರವೆನಿಸುವದಿಲ್ಲ. ಆನಂದವೆನಿಸುತ್ತದೆ.

"ಶಾಂತಾಕಾರಂ ಭುಜಗಶಯನಂ" ಎಂದು ಪರಮೇಶ್ವರನ ವರ್ಣನೆಯಿದೆ. ಅವನು ಸಾವಿರ ಹೆಡೆಯ ಶೇಷನ ಮೈಮೇಲೆ ಅಡ್ಡಾಗಿದ್ದನೆಂದು ಹೇಳಲಾಗಿದೆ. ಆದರೂ ಅವನು ಶಾಂತನೆಂದು ಹೇಳಿದೆ. ಇದರ ಅರ್ಥವೇನು ? ಪರಮೇಶ್ವರನು ಕೋಟ್ಯಂತರ ಕರ್ಮಗಳಲ್ಲಿ ತೊಡಗಿದ್ದಾನೆ. ನಾವೆಲ್ಲರೂ ಮಲಗಿದರೂ ಅವನು ಜಾಗೃತನಿರುತ್ತಾನೆ. ಮೋಡಗಳನ್ನು ಕಳಿಸುತ್ತಾನೆ. ಚಿಕ್ಕೆಗಳನ್ನು ನಗಿಸುತ್ತಾನೆ. ಮೊಗ್ಗೆಗಳನ್ನು ಅರಳಿಸುತ್ತಾನೆ. ಪರಮೇಶ್ವರನು ಮಲಗಿದರೆ ವಿಶ್ವವು ನಡೆಯುವದು ಹೇಗೆ ?

ವಿಶ್ವದ ವ್ಯಾಪವನ್ನು ಹಬ್ಬಿಸಿದ ಪರಮೇಶ್ವರನಿಗೆ ದಿನಾಲು ಎಷ್ಟು ಶಾಪ, ದುಷ್ಟ ಮಾತಿಗೆ ಈಡಾಗಬೇಕಾಗುತ್ತದೆ ? ಈ ವಿಶ್ವ ಪ್ರಪಂಚದಲ್ಲಿ ಎಲ್ಲರಿಗೂ ಹಿರಿದಾದ ಹುತಾತ್ಮನು ಯಾರಾದರೂ ಇದ್ದರೆ ಅವನು ಪರಮೇಶ್ವರನು. ಅವನು ತೆಗಳಿಕೆಯನ್ನು ಲಕ್ಷಿಸುವದೇ ಇಲ್ಲ. ಕೊನೆಗೆ ಹಿತವಾಗುವ ಮತ್ತು ತನಗೆ ಯೋಗ್ಯವೆಂದೆನಿಸುವದನ್ನೆ ಮಾಡುವನು. ಇದನ್ನು ಎಡೆಬಿಡದೆ ಮಾಡುತ್ತಾನೆ.

ಪರಮೇಶ್ವರನ ಈ ವರ್ಣನೆಯು ಮಹಾಪುರುಷರಿಗೂ ಹೊಂದುತ್ತದೆ. ಅವರು ಶಾಂತರೀತಿಯಿಂದ ಧ್ಯೇಯವನ್ನು ಅನುಲಕ್ಷಿಸಿ ಮುಂದು

ವರಿಯುತ್ತಾರೆ. ಅವರ ನಿತಾಂತ ನಿಃಸ್ವಾರ್ಥತೆಯೇ ಅವರಲ್ಲಿದ್ದ ಧೈರ್ಯದ, ಮತ್ತು ಶಾಂತತೆಯ ಬೀಜವು. ಸ್ವಾರ್ಥಕ್ಕೆ ಅಂಜಿಕೆ; ನಿಃಸ್ವಾರ್ಥಕ್ಕೆ ಯಾರ ಭಯವೂ ಇಲ್ಲ.

ಅದೇ ಕರ್ಮವನ್ನು ಯಾವಾಗಲೂ ಮಾಡಬೇಕೆಂದಿಲ್ಲ. ಕೆಲವು ಸಾರೆ ನಮ್ಮ ವರ್ಣಧರ್ಮವನ್ನು ಬದಿಗಿಟ್ಟು ಎರಡನೇ ಕರ್ಮವನ್ನು ಮಾಡುವ ಆವಶ್ಯಕತೆ ಉಂಟಾಗುತ್ತದೆ. ಬೆಂಕಿ ಹತ್ತಿದಾಗ ಎಲ್ಲರೂ ಧಾವಿಸಬೇಕಾಗುತ್ತದೆ. ಭೂಕಂಪ ಮೊದಲಾದ ಆಪತ್ತಿಗಳಿದ್ದರೆ ಎಲ್ಲರೂ ಸ್ವಯಂಸೇವಕರಾಗಬೇಕಾಗುತ್ತದೆ. ಬಿಹಾರದಲ್ಲಿ ಭೂಕಂಪವಾದದ್ದು ಕೇಳಿ ಜವಾಹರಲಾಲರು ಧಾವಿಸಿದರು. ಅಲ್ಲಿಯ ಸ್ವಯಂಸೇವಕರು ಹೌಹಾರಿ ನಿಂತಿದ್ದರು. ಮಣ್ಣಿನಲ್ಲಿ ಮುಳುಗಿದ ಹೆಣಗಳನ್ನು ತೆಗೆಯಲು ಯಾರಿಗೂ ಧೈರ್ಯವಾಗಲಿಲ್ಲ. ಜವಾಹರಲಾಲರು ಕೈಯಲ್ಲಿ ಗುದ್ದಲಿ, ಸಲಿಕೆ ತೆಗೆದುಕೊಂಡು ಮುಂದಾಗಿ ಮಣ್ಣಿನ ರಾಶಿಯನ್ನು ತೆಗೆಯಲು ಆರಂಭಿಸಿದರು. ಎಲ್ಲ ಸ್ವಯಂಸೇವಕರು ಮುಂದಾಗಿ ಕೆಲಸ ಮಾಡಲಿಕ್ಕೆ ಹತ್ತಿದರು. ಪ್ರಸಂಗದಲ್ಲಿ ಯಾವ ತರದ ಕೆಲಸ ಬಂದರೂ, ಅದನ್ನು ನೆರವೇರಿಸಲು ಧೈರ್ಯದಿಂದ, ಉತ್ಸಾಹದಿಂದ ಮತ್ತು ತನ್ಮಯತೆಯಿಂದ ಮುಂದಾಗಬೇಕು.

ಇಂದು ನಮ್ಮ ಭಾರತ ವರ್ಷವು ದಾಸ್ಯದ ಕೆಸರಿನಲ್ಲಿ ಸಿಕ್ಕು ಬಳಲುತ್ತದೆ. ಈ ಪತಿತ ರಾಷ್ಟ್ರವನ್ನು ಮುಕ್ತಮಾಡುವದೇ ನಮ್ಮ ಧರ್ಮವು. ನಮ್ಮ ನಮ್ಮ ಸೇರಿಕೆ ಬೇಡಿಕೆಗಳನ್ನು ಬದಿಗಿಡಬೇಕು. ಮತ್ತು ಸ್ವಾತಂತ್ರ್ಯವು ಸಿಗುವ ಯಾವದಾದರೊಂದು ಕರ್ಮದಲ್ಲಿಯೇ ತೊಡಗಬೇಕು. ಲೋಕಮಾನ್ಯರು ವೇದಾಂತ, ಗಣಿತ, ಜ್ಯೋತಿಷ್ಯ ಅಭ್ಯಾಸದಿಂದ ಅವರಿಗೆ ಆಗಬಹುದಾದ ಆನಂದವನ್ನು ತ್ಯಜಿಸಿದರು. ಇದು ಅವರು ಮಾಡಿದ ಹಿರಿ ತ್ಯಾಗವು. ನಾಮುದಾರ ಗೋಖಲೆಯವರು ಅರ್ಥಶಾಸ್ತ್ರದ ಮೇಲೆ ಗ್ರಂಥವನ್ನು ಬರೆಯಬೇಕೆನ್ನುತ್ತಿದ್ದರು. ಅದೇ ಪ್ರಕಾರ ರಾನಡೆಯವರ ಚರಿತ್ರವನ್ನು ಬರೆಯುತ್ತಿದ್ದರು. ಆದರೆ ಇದನ್ನೆಲ್ಲ ಅವರು ಬದಿಗಿಡಬೇಕಾಯಿತು. ಪ್ರಫುಲ್ಲಚಂದ್ರರಾಯರಿಗೆ ಶಾಸ್ತ್ರದ ಸೇರಿಕೆ ಇದೆ. ಅವರು ಹಿರಿದಾದ ರಸಾಯನ ಶಾಸ್ತ್ರಜ್ಞರು. ಆದರೆ ತಮ್ಮ ಸೇರಿಕೆಗಳನ್ನೆಲ್ಲ ಬದಿಗಿರಿಸಿ ಈ ಇಳಿವಯವಸ್ಸಿನಲ್ಲಿ ಬಂಗಾಲದ ಹಳ್ಳಿಹಳ್ಳಿಗೆ ಹೋಗಿ ಚರಕಗಳನ್ನು ಹಂಚುತ್ತಿದ್ದಾರೆ, ಖಾದಿಯ ಪ್ರಚಾರವನ್ನು ಮಾಡುತ್ತಿದ್ದಾರೆ.

ರಾಷ್ಟ್ರೋದ್ಧಾರವನ್ನು ಸಾಧಿಸಲು ಅನುವಾಗುವ ಅನೇಕ ಉದ್ಯೋಗ ಗಳಿವೆ. ಇವುಗಳಲ್ಲಿ ನಿಮಗೆ ಸರಿಹೊಂದುವದನ್ನು ಆರಿಸಿರಿ. ಆದರೆ ಯಾವ ಉದ್ಯೋಗವನ್ನು ಕೈಕೊಳ್ಳುತ್ತೀರೋ ಅದನ್ನು ಹೃತ್ಪೂರ್ವಕವಾಗಿ ನೆರವೇರಿಸಿರಿ. ಹಗಲಿರುಳು ಅದನ್ನೇ ಕುರಿತು ವಿಚಾರಿಸಿರಿ. ಅಂದರೆ ಮಾತ್ರ ಆ ಉದ್ಯೋಗವು ನಿಮಗೆ ಮೋಕ್ಷವನ್ನು ದಯಪಾಲಿಸುವದು. ಮತ್ತು ರಾಷ್ಟ್ರವೂ ಮುಕ್ತವಾಗದೆ ಉಳಿಯದು.

ಓರ್ವ ಜಪಾನಿ ಕೂಲಿಕಾರನಿಗೆ "ನೀನು ಚಲೋ ಸ್ಕ್ರೂಗಳನ್ನು ಮಾಡಬಲ್ಲೆಯಾ?" ಎಂದು ಕೇಳಿದಾಗ "ಚಲೋ ಅಷ್ಟೇ ಯಾಕೆ ನಾನು ಉತ್ಕೃಷ್ಟ ಸ್ಕ್ರೂಗಳನ್ನು ಮಾಡಬಲ್ಲೆನು" ಎಂದನು. ನಮ್ಮೆಲ್ಲರಿಗೂ ಈ ರೀತಿ ಉತ್ತರ ಕೊಡಲು ಬರಬೇಕು. ನಾನು ಮಾಡುವದನ್ನೆಲ್ಲ ಉತ್ಕೃಷ್ಟ ರೀತಿಯಲ್ಲಿ ಮಾಡುತ್ತೇನೆಂದು ಅನ್ನಬಲ್ಲವರೇ ಧನ್ಯರು!

ಓರ್ವ ಜಪಾನಿ ಕೂಲಿಕಾರನು ಹಡಗವನ್ನು ಕಟ್ಟುವ ಕೆಲಸದಲ್ಲಿ ತೊಡಗಿದ್ದನು. ಅವನು ಆಗ ಓದುಬರಹ ಕಲಿಯುತ್ತಿದ್ದನು. "ನೀನು ಇಷ್ಟು ವಯಸ್ಸಿನವನಾದಿ. ಈಗ ಯಾಕೆ ಈ ಉದ್ಯೋಗ?" ಎಂದು ಕೇಳಿದಾಗ ಅವನಂದನು. "ನಾಳೆ ರಶಿಯಾ ಜಪಾನ ಯುದ್ಧ ಸುರು ವಾಯಿತೆಂದು ತಿಳಿಯಿರಿ. ಆಗ ನೌಕಾಯುದ್ಧಗಳು ಜರಗುವವು. ಈ ಜರಗಿದ ಯುದ್ಧಗಳಲ್ಲಿ ಜಪಾನೀಯರಿಗೆ ವಿಜಯವು ದೊರೆಯುವದು. ಯಾವ ಹಡಗಗಳ ತಂಡವು ವಿಜಯವನ್ನು ಸಂಪಾದಿಸುವದೋ ಆ ತಂಡ ದಲ್ಲಿ ನಾನು ಕಟ್ಟಿದ ಹಡಗವು ಅದೆ ಎಂದು ತಿಳಿದರೆ ನನಗಾಗುವ ಆನಂದಕ್ಕೆ ಮಿತಿಯೆ ಇಲ್ಲ! ಆ ಹಡಗದ ಹೆಸರನ್ನು ವರ್ತಮಾನ ಪತ್ರದಲ್ಲಿ ಓದಿದರೆ ನಾನು ಕೃತಾರ್ಥನಾಗುವೆನು. ಆಗ ನಾನಂದುಕೊಳ್ಳುವೆನು. ಈ ಹಡಗದ ಲ್ಲಿಯ ನಾಲ್ಕು ಸ್ಕ್ರೂಗಳನ್ನು ನಾನು ತಿರುವಿದ್ದೇನೆ, ಎರಡು ತಗಡು ಗಳನ್ನು ಬಡಿದಿದ್ದೇನೆ. ನನ್ನ ದೇಶದ ಸ್ವಾತಂತ್ರ್ಯ ಯುದ್ಧದಲ್ಲಿ ನನಗೂ ಸ್ವಲ್ಪ ಪಾಲು ಇದೆ ಎಂದೆನಿಸುವದು. ನನಗೆ ಹೆಸರು ಓದಲಿಕ್ಕೆ ಬರಬೇ ಕೆಂದು ನಾನು ಓದುಬರೆಹ ಕಲಿಯುತ್ತಿದ್ದೇನೆ."

ಒಂದು ಚಿಕ್ಕ ಕರ್ಮದಲ್ಲಿ ಸಹ ಎಂಥ ವಿಶಾಲವಾದ ದೃಷ್ಟಿಯು! ನಾನು ಮಾಡುವ ಚಿಕ್ಕ ಕರ್ಮವು ನನ್ನ ದೇಶಕ್ಕೆ, ಸಮಾಜಕ್ಕೆ ಉಪ ಯೋಗವುಳ್ಳದ್ದಾಗುವದು. ಅದಕ್ಕಾಗಿ ನಾನು ಅದನ್ನು ಮಾಡಬೇಕು. ಉತ್ತಮ ರೀತಿಯಿಂದ ಮಾಡಲೇಬೇಕು; ಎಂಬ ಭಾವನೆಯನ್ನು ಮನಸಿ

ನಲ್ಲಿ ನೆಲೆಗೊಳಿಸುವದೆಂದರೆ ಕರ್ಮದ ಗುಟ್ಟನ್ನು ಅರಿತಂತೆ.

ಕರ್ಮವು ಕಿರಿಯದೇ ಆಗಲಿ, ಹಿರಿಯದೇ ಆಗಲಿ, ಅದು ಸಮಾಜಕ್ಕೆ ಮೋಕ್ಷವನ್ನುಂಟು ಮಾಡಬೇಕು. ಸಮಾಜದ ಪೂಜೆಯನ್ನು ಮಾಡುವಂತಹದಾಗಬೇಕು. ಲೇಖನ ಕಾರ್ಯವೇ ಇರಲಿ, ವ್ಯಾಖ್ಯಾನವನ್ನು ಕೊಡುವದೇ ಆಗಲಿ, ನೀವು ಬರೆದ ವಾಕ್ಯಗಳು, ಆಡಿದ ಶಬ್ದಗಳು ಸಮಾಜದ ಕಲ್ಯಾಣವನ್ನು ಬಯಸುವಂತಹವೇ ಆಗಿರಬೇಕು. ನಾನು ಸಮಾಜಕ್ಕೆ ಸಲ್ಲಿಸುವ ವಸ್ತುಗಳೆಲ್ಲ ಸಮಾಜವನ್ನು ಪೋಷಿಸಬೇಕು. ಸಮಾಜದಲ್ಲಿ ಕೊಳೆಯನ್ನೂ ರೋಗಗಳನ್ನೂ ಹುಟ್ಟಿಸುವಂಥವು ಎಂದೂ ಆಗಲಿಕ್ಕಿಲ್ಲ ಎಂಬ ನಿಷ್ಠೆಯು ನಮ್ಮಲ್ಲಿರಬೇಕು. ಸಮಾಜಕ್ಕೆ ನೀಡುವ ಅನ್ನವು, ಬೌದ್ಧಿಕ ಅಥವಾ ಶಾರೀರಿಕ ಯಾವದಿದ್ದರೂ, ಅದು ಸಮಾಜವನ್ನು ಪುಷ್ಟೀಕರಿಸಬೇಕು. ದಯಮಾಡಿ ಸಮಾಜಕ್ಕೆ ವಿಷವನ್ನು ನೀಡಬೇಡಿರಿ.

ಇಂಥ ದಿವ್ಯ ಕರ್ಮಮಯವಾದ ಜೀವನವು ನಮ್ಮದಾಗಲಿ, ಎಂಬ ಹಿರಿಯಾಸೆಯು ನಮ್ಮಲ್ಲಿ ಹುಟ್ಟಿ ಬಾಳಿ ಬೆಳೆಯಲಿ. "ಮೋಕ್ಷವು ನಮಗೆ ಕಠಿಣವಲ್ಲ." ಮೋಕ್ಷವು, ಬಾಗಿಲಲ್ಲಿ, ನೇಗಿಲಲ್ಲಿ, ಕಚೇರಿಯಲ್ಲಿ, ಕಾರಖಾನೆಯಲ್ಲಿ, ಶಾಲೆಯಲ್ಲಿದೆ, ಒಲೆಯ ಹತ್ತಿರವಿದೆ; ಎಲ್ಲ ಕಡೆಯಲ್ಲಿಯೂ ಇದೆ. ಸಮಾಜವು ಕಳೆದುಕೊಂಡ ಹೊಟ್ಟೆಯ ಉಪಜೀವನ ಮಾರ್ಗವನ್ನು ಮತ್ತೆ ಸಮಾಜಕ್ಕೆ ಒದಗಿಸಿಕೊಡುವ ಮಹಾಪುರುಷನು, ನಿಜವಾದ ಸಂತನು. ಸಮಾಜದಲ್ಲಿ ಹಬ್ಬಿದ ಕೊಳೆಯನ್ನು ಹೋಗಲಾಡಿಸಿ, ನಿರ್ಮಲ ಜೀವನವನ್ನು ನಡೆಯಿಸಲು ಕಲಿಸುವನು ಹಿರಿದಾದ ಋಷಿಯು. ಎರಡನೆಯವರಿಂದ ಪುಷ್ಟನಾಗುವ ಕರ್ಮಶೂನ್ಯ ಜೀವನವು ಸಾಕು ಇನ್ನು. ಬಾಯಿಂದ ಹರಿ, ಹರಿ, ಎಂದು ಬಡಬಡಿಸುವ, ದೇಹಭೋಗಗಳನ್ನು ಉಪಭೋಗಿಸಲು ಹಾತೊರೆಯುವ ಜೀವಗಳು, ಹುಳಗಳೆಂದು ತಿಳಿಯಿರಿ. ಹೊಟ್ಟೆಗಾಗಿ ಯಾವದಾದರೊಂದು ಕೆಲಸ, ಆದರೆ ಅದನ್ನು ಮಾಡುವಾಗ ರಾಮನನ್ನು ಮರೆಯಬೇಡಿರಿ. ಶೆರೆ, ಸಿಂದಿ ಮಾರಿ ಹೊಟ್ಟೆಯನ್ನು ರೊಟ್ಟಿಯಿಂದ ತುಂಬಬೇಡಿರಿ. ರಾಮನ ನೆನಹು ಎಂದರೆ ಮಂಗಲವನ್ನು ಸ್ಮರಿಸುವದು. ಸಮಾಜದ ಕಲ್ಯಾಣವನ್ನು ಅರಿಯುವದು. ಕೆಲವರು ಬರೆ ಬಾಯಿಂದ ರಾಮ, ರಾಮ ಎಂದು ಉಚ್ಚರಿಸುತ್ತ ಕೂಡುತ್ತಾರೆ. ಬಾಯಿಂದ ರಾಮ ರಾಮ ಎಂದರೂ ಅಡ್ಡಿ ಇಲ್ಲ; ಆದರೆ ಕೈಯಿಂದ ಕೆಲಸ ಮಾಡಿರಿ, ಸೇವೆ ಸಲ್ಲಿಸಿರಿ. ನಾನು ಬರೀ ನನ್ನ ತಾಯಿಯ ಹೆಸರಿನ

ಜಪ ಮಾಡಿದರ್‍ಕೆ, ಅದು ಅವಳಿಗೆ ಸೇರುವಂತಿಲ್ಲ. ತಾಯಿಗೆ ನೆರವಾಗದೆ, ಬರೀ ಅವಳ ಹೆಸರಿನ ಜಪ ಮಾಡತೊಡಗಿದರೆ ಅದೊಂದು ಡಂಭಾಚಾರವೇ ಆಗುವದಿಲ್ಲವೇ ? ದೇವರ ಹೆಸರಿನ ಜಪ ನಡೆಯಲಿ, ಆದರೆ ಕೈಯಿಂದ ಕೆಲಸ ಮಾಡುವವನ್ನು ಬಿಡಬೇಡಿರಿ. ಸೇವೆಯೆಂದರೆ ದೇವರು. "ನನ್ನ ಚರಕ, ಇದೊಂದು ದೇವರ ಹೆಸರೆ'' ಎಂದು ಮಹಾತ್ಮಾಜಿಯವರು ಒಮ್ಮೆ ಅಂದರು. ಈಶ್ವರನಿಗೆ ಸಾವಿರಾರು ಹೆಸರುಗಳು ಅವೆ. ಪ್ರತಿಯೊಂದು ಮಂಗಲವಸ್ತುವು ಅವನ ಸ್ವರೂಪವೇ, ಅವನ ಹೆಸರೆ.

ಬಾಯಿಂದ ದೇವರ ಹೆಸರು, ಕೈಯಿಂದ ಸೇವೆಯ ಕರ್ಮವು. ಒಮ್ಮೊಮ್ಮೆ ದೇವರಲ್ಲಿ ಅಪರಂಪಾರ ಪ್ರೇಮವು ಉಕ್ಕೇರಿ ಕರ್ಮವು ಕೈಯಿಂದ ಜಾರಿಹೋಗುವದು. ನಿಮ್ಮ ಖಾನಾವಳಿಗೆ ಬರುವವರೆಲ್ಲರು ದೇವರೆಂದು ಭಾವಿಸಿ, ನೀವು ಅವರಿಗೆ ಬಡಿಸುವಾಗ ಭಾವನೆಯು ಉಕ್ಕೇರಿ, ಬಡಿಸುವವನ್ನೇ ಮರೆಯಬಹುದು. ಆ ಗ್ರಾಹಕರೂಪಿಯಾದ ದೇವರನ್ನು ನೋಡುತ್ತ ನಿಲ್ಲುವಿರಿ. ಕಂಬನಿಗಳು ಸುರಿಯುವವು; ಭಾವಗಳೆಲ್ಲವೂ ಉಕ್ಕೇರುವವು. ಈ ರೀತಿ ಕರ್ಮವು ತನ್ನಷ್ಟಕ್ಕೆ ತಾನೇ ಜಾರಿಹೋಗುವ ಅವಸ್ಥೆಯೇ ಕೊನೆಯದು. ಇದು ಕರ್ಮದ ಕೊನೆಯ ಪರಮೋಚ್ಚ ರೂಪವು. ಆ ಕಾಲಕ್ಕೆ ನಿಮ್ಮೆದುರು ಊಟಕ್ಕೆ ಕೂತವರು, ತಿನ್ನದೆ ತೃಪ್ತಿಗೊಳ್ಳುವರು. ಬಡಿಸುವವನ ಕಣ್ಣೊಳಗಿಂದ ಸುರಿಯುವ ಪ್ರೇಮ ಗಂಗೆಯ ಪ್ರವಾಹದಿಂದಲೇ ಪುಷ್ಟಿತುಷ್ಟಿಗೊಳ್ಳುವರು. ಆದ್ದರಿಂದ ರಾಮ ಕೃಷ್ಣ ಪರಮಹಂಸರು ಹೇಳಿದ್ದಾರೆ. "ದೇವರ ಹೆಸರು ಉಚ್ಚಾರವಾದೊಡನೆ ಎಲ್ಲಿಯವರೆಗೆ ಕಂಬನಿಗಳು ಸುರಿಯುವದಿಲ್ಲವೋ ಅಲ್ಲಿಯ ವರೆಗೆ ಕರ್ಮವನ್ನು ಬಿಡಬೇಡ.''

ಆದರೆ ಈ ಮಟ್ಟವನ್ನು ಮುಟ್ಟದೇ ಯಾವ ಪಾಪಾತ್ಮರು ಬಾಯಿಂದ "ನಾರಾಯಣ, ನಾರಾಯಣ'' ಅನ್ನುತ್ತ ಆಹಾರ, ವಿಹಾರಗಳನ್ನು ಉಪಭೋಗಿಸುತ್ತ ಸಮಾಜದಲ್ಲಿ ಸುಳಿದಾಡುತ್ತಾರೊ, ಅವರನ್ನು ಶಗಣಿಯ ಉಂಡಿಯಿಂದ ಹೊಡೆದು ದೂರ ಎಸೆದೊಗೆಯಬೇಕು. ಇದಕ್ಕೆ ಭಾರತೀಯ ಸಂಸ್ಕೃತಿಯು ಒಪ್ಪುತ್ತದೆ.

"ನಿಮಗೆ ಸರಿಹೋಗುವ ಸೇವಾಕರ್ಮವನ್ನು ಕೈಕೊಳ್ಳಿರಿ. ಅದರಲ್ಲಿ ತಲ್ಲೀನರಾಗಿರಿ, ನಿರಹಂಕಾರಿಯಾಗಿರಿ, ನಿಃಸ್ವಾರ್ಥಿಯಾಗಿರಿ. ಈ ಕರ್ಮದಿಂದ ಸಮಾಜ ದೇವರನ್ನು ಪೂಜಿಸಬೇಕಾಗಿದೆ. ಇದನ್ನು ಮರೆಯಬೇಡಿರಿ.

ಮತ್ತು ಕ್ರಮೇಣ ನಿಮ್ಮ ಸೇವಾಕರ್ಮದ ಮಟ್ಟನ್ನು ಬೆಳೆಸಿರಿ. ಒಂದು ದಿವಸ ಈ ದೇಹವನ್ನು ತೆರವು ಮಾಡಿರಿ. ಮತ್ತು ಆ ದೇಹ ಬಂಗಾರವಾಗಲಿ" ಎಂದು ಭಾರತೀಯ ಸಂಸ್ಕೃತಿಯು ನಿಮಗೆ ಹೇಳುತ್ತಿದೆ. ಭಾರತೀಯ ಸಂಸ್ಕೃತಿಯೆಂದರೆ ಸೇವೆಯ, ಕರ್ಮದ ಮಹಿಮೆ.

ಆದರೆ ಇಂದು ಈ ಸಂಸ್ಕೃತಿಯ ಕೊಲೆಯಾಗಿದೆ. ಕರ್ಮಶೂನ್ಯರಾಗಿ ಬೀದಿಯಲ್ಲಿ ನಾರಾಯಣನ ನಾಮೋಚ್ಚಾರವನ್ನು ಮಾಡುವವನ ಇದಿರು ಹಣರಾಶಿ. ಆದರೆ ಬೀದಿಗಳನ್ನು ಉಡುಗಿ, ಹೊಲಸನ್ನು ಹೊರ ಚೆಲ್ಲಿ ಅವುಗಳನ್ನು ನಿರ್ಮಲ ಮಾಡುವವರಿಗೆ ಕುಡಿಯಲು ನೀರು ಇಲ್ಲ. ಹೊಟ್ಟೆ ತುಂಬ ಅನ್ನ ಸಿಗುವದಂತೂ ದೂರ ಉಳಿಯಿತು. ಕರ್ಮಹೀನರಿಗೆ ಪಾದ ಪೂಜೆ ಮತ್ತು ದುಡಿಯುವವರಿಗೆ ಅಪಹಾಸ್ಯ ಮತ್ತು ಲತ್ತಾ ಪ್ರಹಾರ! ಭಾರತೀಯ ಸಂಸ್ಕೃತಿಯ ಆತ್ಮವು ಪುಡಿಪುಡಿಯಾಗಿದೆ. ಭಾರತೀಯ ಸಂಸ್ಕೃತಿಯ ಅಭಿಮಾನಿಗಳೆಲ್ಲರೂ ಕರ್ಮವನ್ನಾಚರಿಸುವವರನ್ನು ಪೂಜಿಸಲು ಏಳಬೇಕು.

ಮೋಕ್ಷ ಮತ್ತು ಆನಂದದಿಂದ ತುಂಬಿದ ಪರಂಧಾಮವು ಬೇಕಾಗಿದ್ದರೆ, ವ್ಯಂಗ, ದುಃಖ, ವೈಷಮ್ಯ, ಬರಗಾಲ, ಬಡತನ, ಹೊಲಸು, ರೋಗ, ಬಡಿದಾಟಗಳಿಲ್ಲದ ಪರಮ ಮಂಗಲವಾದ ಸ್ವಾತಂತ್ರ್ಯ ಸೂರ್ಯನು ಬೆಳಗುವ ಧಾಮವು ಬೇಕಾಗಿದ್ದರೆ, ಒಣ ಅಭಿಮಾನ, ಕೀಳು ಮೇಲೆಂಬ ಭಾವನೆ, ಆಲಸ್ಯ, ಹುಚ್ಚು ಕಲ್ಪನೆಗಳನ್ನು ಎಸೆದೊಗೆಯಿರಿ, ಮತ್ತು ಸೇವೆಯಿಂದ ಕರ್ಮದಿಂದ ವರ್ಣಧರ್ಮದಿಂದ ತುಂಬಿತುಳುಕುವ ಭಕ್ತಿಯನ್ನು ಹಿಂಬಾಲಿಸಿರಿ.

"ಒಂದು ಮೊಳ ರಂಟೆಯನ್ನು ಹೊಡೆಯುವದು ನೂರು ವ್ಯಾಖ್ಯಾನಗಳನ್ನು ಕೊಡುವದಕ್ಕಿಂತ ಹಿರಿದಾದದ್ದು; ಒಂದು ಮೊಳ ಖಾದಿ ನೇಯುವದು ಜಪತಪಕ್ಕಿಂತ ಶ್ರೇಷ್ಠ; ಒಂದು ಅರಿವೆಗೆ ಬಣ್ಣಕೊಡುವದು ಪಾಂಡಿತ್ಯವನ್ನೆಲ್ಲ ಮೀರಿದ್ದು. ಒಕ್ಕಲಿಗರಾಗಿರಿ, ನೇಕಾರರಾಗಿರಿ, ಬಣಗಾರರಾಗಿರಿ, ಯಾರೂ ಸೋಮಾರಿಗಳಾಗಬೇಡಿರಿ. ಒಂದು ಗಡಿಗೆಯನ್ನು ತಯಾರಿಸುವದು, ನಿಮ್ಮ ವ್ಯಾಖ್ಯಾನಕ್ಕಿಂತ ಹೆಚ್ಚಿನದು. ಒಂದು ಕೆರವನ್ನು ನೆಟ್ಟಗೆ ಹೊಲಿಯುವದು ನಿನ್ನ ಸಿರಿಗಿಂತ ಹೆಚ್ಚಾದದ್ದು. ಗಾಲಿಗೆ ಹಳಿ ಕೂಡಿಸುವದು ವಿದ್ವತ್ತೆಯನ್ನು ಮೀರಿದ್ದು. ಕುಂಬಾರರಾಗಿರಿ, ಕಮ್ಮಾರರಾಗಿರಿ, ಚಮಗಾರರಾಗಿರಿ, ಸೋಮಾರಿಗಳಾಗಬೇಡಿರಿ." ಇದು ಇನ್ನು

ಮೇಲೆ ನಮ್ಮ ಮಂತ್ರವು. ಇದೇ ಭಾರತೀಯ ಸಂಸ್ಕೃತಿಯು.

ಅಮೇರಿಕಾ ದೇಶದಲ್ಲಿಯ ಸುಪ್ರಸಿದ್ಧ ನಾಗರಿಕನಾದ ಬೆಂಜಾಮಿನ್ ಫ್ರ್ಯಾಂಕಲಿನ್ನನು ಇಂಗ್ಲಂಡಕ್ಕೆ ಹೋಗಿ ಮರಳಿ ತನ್ನ ದೇಶಕ್ಕೆ ಬಂದಾಗ ಅವನಿಗೆ "ಇಂಗ್ಲಂಡದಲ್ಲಿ ಏನು ನೋಡಿದಿರಿ?'' ಎಂದು ಕೇಳಿದರು. "ಇಂಗ್ಲಂಡದಲ್ಲಿ ಎಲ್ಲ ಜನರು ಉದ್ಯೋಗಪ್ರಿಯರು. ಅಲ್ಲಿ ಪ್ರತಿಯೊಬ್ಬನು ಏನಾದರೂ ಮಾಡುವದರಲ್ಲಿ ತೊಡಗಿರುತ್ತಾನೆ. ಗಾಳಿ, ಉಗಿಗಳು ಸಹ ಕೆಲಸ ಮಾಡುತ್ತವೆ. ಗಾಳಿಯಿಂದ ದೊಡ್ಡ ಚಕ್ರಗಳು ತಿರುಗುತ್ತವೆ. ಉಗಿಯಿಂದ ಯಂತ್ರವನ್ನು ನಡೆಸುತ್ತಾರೆ. ಇಂಗ್ಲಂಡದಲ್ಲಿ ಎಲ್ಲರೂ ದುಡಿಯುತ್ತಾರೆ. ಅಲ್ಲಿ ನನಗೆ ಒಬ್ಬನೇ ಒಬ್ಬ ಸಭ್ಯಗೃಹಸ್ಥನು ಭೆಟ್ಟಿಯಾದನು" ಎಂದು ಫ್ರ್ಯಾಂಕಲಿನ್ನನು ಹೇಳಿದನು. "ಯಾರು ಅವನು?'' ಎಂದು ಎಲ್ಲರಿಂದ ಕೂಗು ಕೇಳಿಬಂದಿತು. "ಪಿಗ್-ಹಂದಿ ಏನೂ ಕೆಲಸ ಮಾಡದೆ ಹೊಲಸನ್ನು ತಿನ್ನುತ್ತ ಅತ್ತಿತ್ತ ಓಡಾಡುತ್ತಿತ್ತು.'' ಎಂದು ಬೆಂಜಾಮಿನ್ನನು ಹೇಳಿದನು.

ದುಡಿಯದವರಿಗೆ ಬೆಂಜಾಮಿನ್ನನು ಕೊಟ್ಟ ಪದವಿ ಇದು-ಪಿಗ್, ಎಂದು. ಶ್ರಮಹೀನರೆಂದರೆ ಹಂದಿಗಳಿದ್ದ ಹಾಗೆ. ಆದರೆ ನಮ್ಮ ದೇಶದಲ್ಲಿ ಶ್ರಮಹೀನರೇ ದೇವರಾಗಿದ್ದಾರೆ. ಅಮೇರಿಕೆಯು ವೈಭವದ ಶಿಖರದ ಮೇಲೆ ಯಾಕೆ? ಮತ್ತು ನಾವು ಬಡತನದ ಆಳವಾದ ಕಂದರದಲ್ಲಿ ಯಾಕೆ? ಅನ್ನುವದು ಇದರ ಮೇಲಿಂದ ಸ್ಪಷ್ಟವಾಗಿ ಕಾಣುತ್ತದೆ.

ಪೂಜೆಗೆ ಯೋಗ್ಯನಾದ ಒಕ್ಕಲಿಗನನ್ನು ನಾವು ಧಿಕ್ಕರಿಸುತ್ತೇವೆ. ಹರಿಜನರನ್ನು ಊರಹೊರಗೆ ಇಡುತ್ತೇವೆ. ಹೆಂಗಸರ ಪಾತಿವ್ರತ್ಯವನ್ನು ಭಂಗಮಾಡುವವರನ್ನು, ಕರ್ಮಹೀನ ಸಿರಿವಂತರನ್ನು, ಧರ್ಮದ ಹೆಸರು ಹೇಳಿ ಜನರನ್ನು ಮೋಸಗೊಳಿಸುವವರನ್ನು, ಭ್ರಷ್ಟತೆಯನ್ನು ಹಬ್ಬಿಸುವವರನ್ನು ನಾವು ಪೂಜಿಸುತ್ತೇವೆ. ಭಾರತೀಯ ಸಂಸ್ಕೃತಿಯ ಉಪಾಸಕರು ಈ ಮಬ್ಬುತನವನ್ನು, ಮೂರ್ಖತನವನ್ನು, ಕೀಳಮನೋವೃತ್ತಿಯನ್ನು ಎಸೆದೊಗೆಯಬೇಕು. ಭೂಮಿತಾಯಿಯ ಧೂಳಿಯಲ್ಲಿ ಮುಣುಗಿದವನೇ ನಿಜವಾದ ಮಂಗಲನು, ಪವಿತ್ರನೆಂದು ಭಾವಿಸಬೇಕು. ಮಣ್ಣಿನಿಂದ ಮುಣುಗಿದವನು ಅಪವಿತ್ರನೆಂದು ನಾವು ಭಾವಿಸುತ್ತೇವೆ. ಆದರೆ ಅವನು ಅಂತಃಶುದ್ಧನು. ಇವನು ಬಿಚ್ಚು ಮನಸ್ಸಿನವನು. ಆದರೆ ಅಗಸನಿಂದ ಸ್ವಚ್ಛಮಾಡಿಸಿದ ಅರಿವೆಗಳನ್ನು ತೊಡುವವರು, ದಿನಾಲು ಸಾಬೂನನ್ನು

ಹಚ್ಚಿ ಮೈತೊಳೆದುಕೊಳ್ಳುವವರು, ಮತ್ತು ಬಾಚಣಿಕೆಯಿಂದ ಬೈತಲೆ ತಕ್ಕೊಳ್ಳುವವರು ಹೊರಗೆ ಕಾಣಲಿಕ್ಕೆ ಚಂದ, ಆದರೆ ಹೊಟ್ಟೆಯಲ್ಲಿ ಹೊಲಸು. ಯಾವಾಗಲೂ ಅಪಚನದ ತಕರಾರು ಇದ್ದವರು. ದುಡಿತವಿಲ್ಲ ಎಂದ ಮೇಲೆ ಪಚನವೆಲ್ಲಿ ?

ವಿಚಾರಮಾಡಿರಿ. ಭಾರತೀಯ ಸಂಸ್ಕೃತಿಯ ಜೀವಾಳವನ್ನು ಅರಿಯಿರಿ. ಗೀತೆಯ ಅಂತರಂಗವನ್ನು ಕಾಣಿರಿ. ತನ್ನ ಪೀತಾಂಬರದಲ್ಲಿ ಕಡಲೆ ಹಾಕಿ ಅರ್ಜುನನ ಕುದುರೆಗೆ ಅವನ್ನು ತಿನಿಸುವ, ಅವುಗಳ ಚಾಕರಿಯನ್ನು ಮಾಡುವ ಗೋಪಾಲಕೃಷ್ಣನನ್ನು ನೆನಸಿ ಜೀವನಕ್ಕೆ ಶುದ್ಧ ಮಾರ್ಗವನ್ನು ತೋರಿಸಿರಿ. ಇಂದಿನ ಅಳುಮುಖವಾದ ಸಂಸಾರವು ಸುಖಮಯವಾಗಿ, ಸಮೃದ್ಧಿಯುಳ್ಳದ್ದಾಗಿ, ಆನಂದಮಯವಾಗಿ ಆಗುವಂತೆ ನಡೆಯಿರಿ. ಭಾರತೀಯ ಸಂಸ್ಕೃತಿಯ ಉಪಾಸನೆಯನ್ನು ಮಾಡುವ ರಾಷ್ಟ್ರವು ಬಡತನದ ದಾಸ್ಯದ ಕೊಳೆಯಲ್ಲಿರುವದು ಸಾಧ್ಯವಿಲ್ಲ. ಸದ್ಧರ್ಮವಿದ್ದಲ್ಲಿ ಸಿರಿಯು, ವೈಭವವು, ಮತ್ತು ಜಯವು ಇದ್ದೇ ಇರುವವು.

---

## ೮. ಜ್ಞಾನ

ನಮ್ಮ ವರ್ಣಕ್ಕೆ ಸರಿಹೋಗುವ ಕರ್ಮವನ್ನು ಆರಿಸಿ, ಅದರಲ್ಲಿ ಹೃದಯದ ಭಕ್ತಿಯನ್ನು ಸುರಿಸಿದೆವು. ಆದರೆ ಇಷ್ಟರಿಂದಲೇ ಮುಗಿಯುವಂತಿಲ್ಲ. ಆ ಕರ್ಮದಲ್ಲಿ ಜ್ಞಾನವು ಬೆರೆಯದಿದ್ದರೆ ಅದು ಪೂರ್ಣತ್ವವನ್ನು ಹೊಂದುವಂತಿಲ್ಲ. ಕರ್ಮದಲ್ಲಿ ಜ್ಞಾನ, ಭಕ್ತಿಗಳ ಸಮನ್ವಯ ಬೇಕು.

ಜ್ಞಾನವು ಎರಡು ವಿಧವಾದದ್ದು. ಆಧ್ಯಾತ್ಮಿಕ ಮತ್ತು ವಿಜ್ಞಾನ. ಕರ್ಮವು ಸೊಗಸಾಗಬೇಕಾದರೆ ಜ್ಞಾನವೂ ಬೇಕು, ವಿಜ್ಞಾನವೂ ಬೇಕು. ಆಧ್ಯಾತ್ಮಿಕ ಜ್ಞಾನವೆಂದರೆ ಅದ್ವೈತ. ಮಾನವ ಜಾತಿಯೆಲ್ಲ ನನ್ನದು. ಅವರೆಲ್ಲರು ನನ್ನ ಅಣ್ಣ ತಮ್ಮಂದಿರು. ಮತ್ತು ಅವರ ಸೇವೆಯನ್ನು ಮಾಡಲು ವಿಜ್ಞಾನವು ಬೇಕು.—ಎಂಬ ದೃಷ್ಟಿಯೇ ಜ್ಞಾನ ವಿಜ್ಞಾನಾತ್ಮಕ ದೃಷ್ಟಿಯು. ಈ ದೃಷ್ಟಿಯು ಬಾರದಿದ್ದರೆ ವಿಜ್ಞಾನವು ವಿಘಾತಕವಾಗುವದು. ಅದ್ವೈತದ ತತ್ವಜ್ಞಾನ, ಒಂದಾಗುವ ತತ್ವಜ್ಞಾನ, ಪ್ರೇಮದ ತತ್ವಜ್ಞಾನ,

ಇವೆಲ್ಲವೂ ವಿಜ್ಞಾನದ ಹಿನ್ನೆಲೆಯಾಗಬೇಕು. ಇಲ್ಲದಿದ್ದರೆ ವಿಜ್ಞಾನವು ಜಗತ್ತನ್ನೆಲ್ಲ ಸುಟ್ಟು ಬೂದಿ ಮಾಡುವದು. ವಿಜ್ಞಾನದಿಂದ ಸಂಸಾರವು ಸೊಗಸಾಗದೆ, ಭೀಷಣವಾದ ನೋಟವಾಗುವದು.

ಇದಕ್ಕಾಗಿಯೇ ಟಾಲಸ್ಟಾಯನು ಅಂದಿದ್ದಾನೆ. "ಎಲ್ಲ ಶಾಸ್ತ್ರಗಳ ಅಭ್ಯಾಸವನ್ನು ನಿಲ್ಲಿಸಿರಿ. ಮೊದಲು ಮನುಷ್ಯರು ಒಬ್ಬರೊಡನೆ ಇನ್ನೊಬ್ಬರು ಹೇಗೆ ನಡೆದುಕೊಳ್ಳಬೇಕೆಂಬ ಶಾಸ್ತ್ರವನ್ನು ಸಿದ್ಧಗೊಳಿಸಿರಿ.'' ಎಲ್ಲ ಶಾಸ್ತ್ರಗಳಲ್ಲಿ ಸಮಾಜ ಶಾಸ್ತ್ರವೇ ಪ್ರಧಾನ ಶಾಸ್ತ್ರವು. ಅದಕ್ಕಾಗಿಯೇ ಭಾರತೀಯ ಸಂಸ್ಕೃತಿಯು ಅದ್ವೈತ ಶಾಸ್ತ್ರವನ್ನು ಮುಂದಕ್ಕೊಯ್ಯಲು ಹಾತೊರೆಯುತ್ತಿದೆ. ಸಮಾಜದಲ್ಲಿ ಎಲ್ಲರಿಗೂ ಸುಖ ದೊರೆಯಬೇಕು. ಹೊಟ್ಟೆತುಂಬ ಅನ್ನ, ಮೈತುಂಬ ಬಟ್ಟೆ ಸಿಗಬೇಕು, ಮತ್ತು ಜ್ಞಾನವು ದೊರೆಯಬೇಕು. ಯಾರು ಯಾರನ್ನೂ ದಾಸ್ಯದಲ್ಲಿಡಬಾರದು. ಯಾರು ಯಾರನ್ನೂ ಹೀನರೆಂದು ತಿಳಿಯಬಾರದು. ಎಲ್ಲರ ವಿಕಾಸಕ್ಕಾಗಿ ಅನುವು ದೊರೆಯಬೇಕು. ಪ್ರಬಲರು ದುರ್ಬಲರನ್ನು ಸುಲಿಯಬಾರದು. ನಮಗೆ ಅಂತಸ್ತಿನ ಮನೆ ಬೇಕೆಂದು ನೆರೆಹೊರೆಯರ ಮನೆಗಳನ್ನು ನೆಲಸಮಮಾಡಬಾರದು. ಇಟಲಿಯನ್ನರು ಉಳಿಯಬೇಕೆಂದು ಅಬಸೀನಿಯನ್ನರು ಅಳಿಯಬಾರದು. ಇವೇ ಮೊದಲಾದ ತತ್ವಗಳು ಪ್ರಸ್ಥಾಪಿತವಾಗಬೇಕು. ದೇಶದೇಶಗಳಲ್ಲಿ, ಜಾತಿ ಜಾತಿಗಳಲ್ಲಿ ಎಲ್ಲಿಯವರೆಗೆ ಪ್ರೇಮಸಂಬಂಧಗಳು ಮನ್ನಿಸಲ್ಪಡುವದಿಲ್ಲವೊ, ಅಲ್ಲಿಯ ವರೆಗೆ ಜಗತ್ತಿನಲ್ಲಿ ನಿಜವಾದ ಶಾಂತಿ ಸಮಾಧಾನಗಳು ನೆಲೆಗೊಳ್ಳುವದಿಲ್ಲ.

ಇವತ್ತು ಜಗತ್ತಿನಲ್ಲಿ ಯಾರಾದರೂ ಸ್ವತಂತ್ರರಿದ್ದಾರೆಯೋ? ಯಾರೂ ಸ್ವತಂತ್ರರಿಲ್ಲ. ಜರ್ಮನಿ, ಇಟಲಿ, ಜಪಾನ ಇವು ಸ್ವತಂತ್ರ ಅವೆ ಎಂದು ನಾವು ತಿಳಿದಿದ್ದೇವೆ. ಆದರೆ ಅದು ಭ್ರಮೆ. ಒಂದು ರಾಷ್ಟ್ರವು ಗುಲಾಮಗಿರಿಯಲ್ಲಿ ಬಳಲುವಾಗ ಇನ್ನೊಂದು ಜನಾಂಗವು ಸ್ವತಂತ್ರವಿರುವದು ಸಾಧ್ಯವಿಲ್ಲ.

ಸಿಂಹವು ತಾನು ಪಶುಗಳ ಅರಸನೆಂದು ಭಾವಿಸುತ್ತದೆ. ಆದರೆ ಸಿಂಹವು ಯಾವಾಗಲೂ ಹಿಂದೆ ನೋಡುತ್ತಿರುತ್ತದೆ, ನನ್ನನ್ನು ಯಾರಾದರೂ ತಿನ್ನಲು ಬರುತ್ತಾರೆಯೋ ಏನೋ ಎಂಬ ಅಂಜಿಕೆಯಿಂದ. ಅದು ಆನೆಯ ರಕ್ತವನ್ನು ಕುಡಿದಿರುತ್ತದೆ. ಅದರ ಮನಸ್ಸು ಅದನ್ನು ತಿನ್ನುತ್ತದೆ. ಮತ್ತು ಅನ್ನುತ್ತದೆ. "ನಿನ್ನನ್ನು ಕೊಲ್ಲಲು, ನಿನ್ನ ರಕ್ತ ಕುಡಿಯಲು

ಯಾರಾದರೂ ಬರಬಹುದು.''

ಜಗತ್ತಿನಲ್ಲಿ ಎಲ್ಲ ಸ್ವತಂತ್ರ ರಾಷ್ಟ್ರಗಳ ಭೂಮಿಕೆಯು ಇದೇ ತರ ಹದ್ದು. ರಶಿಯವು ಪ್ರಬಲವಾಗುತ್ತ ನಡೆದದೆಯೆಂದು ಜಪಾನಕ್ಕೆ ಅನಿಸುತ್ತದೆ. ಜರ್ಮನಿಯು ತನ್ನ ಮೈಮೇಲೆ ಬರುವದೆಂದು ರಶಿಯಾಕ್ಕೆ ಅಂಜಿಕೆ. ಇಟಲಿಯು ದಿನದಿನಕ್ಕೆ ಪ್ರಬಲವಾಗುತ್ತ ನಡೆದದೆಯೆಂಬ ಬೇನೆಯು ಇಂಗ್ಲಂಡಕ್ಕೆ. ಫ್ರಾನ್ಸಕ್ಕೆ ಜರ್ಮನಿಯ ಅಂಜಿಕೆ ಇದ್ದದ್ದೆ. ಹೀಗೆ ಎಲ್ಲ ಕಡೆಯಲ್ಲಿ ಅಂಜಿಕೆಯ ಸಾಮ್ರಾಜ್ಯವು ಹಬ್ಬಿದೆ. ಬಂದೂಕದ ಮೇಲೆ ಕೈಯಿಟ್ಟು, ಸುಖದಿಂದ ರೊಟ್ಟಿ ತಿನ್ನಲು ಇಚ್ಛಿಸುತ್ತಾರೆ ಇವರೆಲ್ಲರು.

ಹತ್ತಿರ ಬಾಂಬು ಇಟ್ಟುಕೊಂಡು ಚಹಾ ಪಾನವನ್ನು ನಡಿಸಿದ್ದಾರೆ. ತಲೆಗಿಂಬಿನ ಹತ್ತಿರ ಕತ್ತಿಯನ್ನಿಟ್ಟುಕೊಂಡು ಮಲಗುತ್ತಾರೆ. ಯಾರಾದರೂ ಎಲ್ಲಿಯಾದರೂ ಗುಪ್ತ ಒಪ್ಪಂದ ಮಾಡಿಕೊಳ್ಳುತ್ತಾರೆಯೋ, ಹೊಸ ಶಸ್ತ್ರಾಸ್ತ್ರಗಳನ್ನು ಹುಡುಕಿದ್ದಾರೋ ಎಂಬ ಅಂಜಿಕೆಯು ಹಗಲಿರುಳು. ಎಲ್ಲಿ ನೋಡಿದತ್ತ ಗುಪ್ತ ಪೋಲೀಸರ ಓಡಾಟ, ಕಾರಸ್ಥಾನಗಳು, ಗುಪ್ತ ಸಂಧಾನಗಳು. ಜಗತ್ತು ನರಕ ಸ್ವರೂಪವಾಗಿದೆ. ಎಲ್ಲಿ ನೋಡಿದಲ್ಲಿ ಅಂಜಿಕೆ, ಸಂಕಟ; ಒಂದು ಕ್ಷಣ ಸಹ ಸುರಕ್ಷಿತತೆ ಇಲ್ಲ. ಯಾವ ಕ್ಷಣಕ್ಕೆ ಬೆಂಕಿಯ ದೊಂಬಿ ಏಳುವದೋ ಹೇಳಲು ಬರುವಂತಿಲ್ಲ.

ಜಗತ್ತಿನಲ್ಲಿ ಸ್ವಾರ್ಥವು, ಹಿಂಸೆಯು, ಇರುವ ವರೆಗೆ ಈ ಸ್ವರೂಪವು ಬದಲಾಗುವಂತಿಲ್ಲ. ನನ್ನ ಹೋಳಿಗೆಯ ಮೇಲೆ ತುಪ್ಪವು ಬೇಕು. ನನಗೆ ಅಂತಸ್ತಿನ ಮನೆ ಬೇಕು. ಎರಡನೆಯವರು ಹಾಳುಭಾವಿ ಬಿದ್ದರೂ ಅಡ್ಡಿ ಇಲ್ಲ- ಎಂಬ ಮನೋವೃತ್ತಿಯು ಇರುವ ವರೆಗೆ ನಾವೆಲ್ಲರೂ ಭಯಭೀತರಾಗಿರುವದು ಸಹಜ. ಹಿಂಸೆಗೆ ಅಂಜಿಕೆ. ತನ್ನನ್ನು ಯಾರಾದರೂ ನಾಶಗೊಳಿಸುವರೆಂಬ ಅಂಜಿಕೆಯು ಹಿಂಸೆಗೆ ಯಾವಾಗಲೂ ಇದ್ದದ್ದೆ. ಜಗತ್ತಿನಲ್ಲಿ ಪ್ರೇಮವೊಂದು ನಿರ್ಭಯ ವಸ್ತುವು.

"ಆನಂದಂ ಬ್ರಹ್ಮಣೋ ನ ಭಿಭೇತಿ ಕದಾಚನ" ಬ್ರಹ್ಮಜ್ಞಾನಿಯು ನಿರ್ಭಯ ವೃತ್ತಿಯವನಿರುತ್ತಾನೆ. ಎಲ್ಲರ ಕಲ್ಯಾಣಕ್ಕಾಗಿ ಹೆಣಗುತ್ತಾನೆ.

ವಿಮಾನಗಳೊಳಗಿಂದ ಬಾಂಬುಗಳನ್ನು ಚೆಲ್ಲಿದಾಗ ಜೀವಗಳು ಮಣ್ಣುಪಾಲಾಗುತ್ತದೆ. ವಿಷವಾಯುವನ್ನು ಬಿಟ್ಟು ಜನರು ಕೊಲ್ಲಲ್ಪಡುತ್ತಾರೆ. ಪ್ರಚಂಡವಾದ ಯಂತ್ರಗಳನ್ನು ಹುಡುಕಿ, ಕೂಲಿಕಾರರನ್ನು ಹಿಂಡಿಹಿಪ್ಪಿ ಮಾಡುತ್ತಾರೆ. ಹೀಗೆ ವಿಜ್ಞಾನದ ದುರುಪಯೋಗ ನಡೆದದೆ. ಬೆಂಕಿ

ಹೆಚ್ಚುವದಕ್ಕಾಗಿಯೇ ಬುದ್ಧಿಯ ಉಪಯೋಗವು ನಡೆದದೆ.

"ತನ್ನಂತೆಯೆ ಪರರೆಂಬ" ಅದ್ವೈತ ದೃಷ್ಟಿಯು ಭಾರದಿದ್ದರೆ ವಿಜ್ಞಾನವು ವ್ಯರ್ಥವಾದದ್ದು. ಜ್ಞಾನಹೀನ ವಿಜ್ಞಾನದ ಕೈಯಲ್ಲಿ ಸಮಾಜದ ಕಾರಭಾರವನ್ನು ಕೊಡುವದೆಂದರೆ, ಮಂಗನ ಕೈಯಲ್ಲಿ ಕೊಳ್ಳಿ ಕೊಟ್ಟ ಹಾಗೆ. ಆದ್ದರಿಂದಲೇ ನಾವು ಮೊದಲು ಬಾಂಧವ್ಯವನ್ನು ಬೆಳೆಸಬೇಕು. ಎಲ್ಲರೂ ಒಂದೇ ದೇವರ ಮಕ್ಕಳಾಗಬೇಕು. ಯಾರೂ ಆರ್ಯರಲ್ಲ, ಅನಾರ್ಯರಲ್ಲ, ಹಿಂದುಗಳಲ್ಲ, ಮುಸಲ್ಮಾನರಲ್ಲ. ನಾವೆಲ್ಲರೂ ಮನುಷ್ಯರಿದ್ದೇವೆ. ಯಾರನ್ನೂ ಪರರೆಂದು ಭಾವಿಸದೆ ಎಲ್ಲರ ಪೂಜೆಯನ್ನು ವಿಜ್ಞಾನಮಯ ಕರ್ಮದಿಂದ ಮಾಡಬೇಕಾಗಿದೆ.

ಆರ್ಯ-ಜ್ಯೂಜನರ ಸಂಬಂಧ ಬೆಳೆಯಬಾರದೆಂದೂ, ಆರ್ಯರೇ ಶ್ರೇಷ್ಠರೆಂಗೂ ಹಿಟ್ಲರನು ಜ್ಯೂ ಜನರನ್ನು ಜರ್ಮನಿಯಿಂದ ತಳ್ಳಿಹಾಕಿದ್ದಾನೆ. ಇದು ಶುದ್ಧ ಹುಚ್ಚು. ಮತ್ತು ಪಾಶವೀ ವೃತ್ತಿಯು. ಇದನ್ನೇ ನೋಡಿ ಕೆಲ ಹಿಂದು ಸಂಘಟನಾವಾದಿಗಳು "ನೋಡಿರಿ! ಹಿಟ್ಲರನು ಹೇಗೆ ಜ್ಯೂಜನರನ್ನು ಜರ್ಮನಿಯಿಂದ ತಳ್ಳಿಹಾಕಿದ್ದಾನೆ ಹಾಗೆ ಮುಸಲ್ಮಾನ ಜನರನ್ನು ಹಿಂದುಸ್ತಾನದಿಂದ ತಳ್ಳಿಹಾಕಿರಿ" ಎಂದು ಹೇಳುತ್ತಾರೆ. ಇದು ಸಂಸ್ಕಾರಹೀನ, ಕಾಡುಜನರ ತತ್ವಜ್ಞಾನ. ಇದು ಭಾರತೀಯ ಸಂಸ್ಕೃತಿಯಲ್ಲ. ಭಾರತೀಯ ಸಂಸ್ಕೃತಿಯು ಇಡೀ ಮಾನವ ಜಾತಿಯನ್ನೇ ಸ್ವಾಗತಿಸುತ್ತದೆ. "ಶೃಣ್ವಂತು ಅಮೃತಸ್ಯ ಪುತ್ರಾಃ" "ದೇವರ ಅಮೃತ ಸ್ವರೂಪಿಗಳಾದ ಮಕ್ಕಳೇ ಕೇಳಿರಿ" ಎಂದು ನಮ್ಮ ಋಷಿಗಳು ಗರ್ಜಿಸುತ್ತಾರೆ. ಇದು ಭಾರತೀಯ ಸಂಸ್ಕೃತಿಯ ಸಂದೇಶವು. ಇನ್ನು ಮುಂದಾದರೂ ನಾವು ಬೀರುವ ಸಂದೇಶವು ಇದೇ. ಆರ್ಯರಿರಲಿ, ಅನಾರ್ಯರಿರಲಿ, ಕೆಂಪು ಮುಖದವರಿರಲಿ, ಕಪ್ಪು ವರ್ಣದವರಿರಲಿ, ಹಳದಿ ಮೋರೆಯವರಾಗಲಿ, ಮೊಂಡ ಮೂಗಿನವರಾಗಲಿ, ದಪ್ಪ ತುಟಿಯವರಿರಲಿ, ಎತ್ತರವಿರಲಿ, ಗಿಡ್ಡರಿರಲಿ ಎಲ್ಲ ಮಾನವರನ್ನು ತನ್ನ ಬಾವುಟದ ಅಡಿಯಲ್ಲಿ ಬರಮಾಡಿಕೊಳ್ಳಲು ನಮ್ಮ ಸಂಸ್ಕೃತಿಯು ಸಜ್ಜಾಗಿ ನಿಂತಿದೆ.

ತಾತ್ಪೂರ್ತಿಕ ವಿಜಯದಿಂದ ಮರುಳಾಗಿ ಹಿಟ್ಲರನನ್ನು ಅನುಕರಿಸಿ ಪಶುಗಳಾಗುವದು ಬೇಡ. ನಾವು ಹಿರಿದಾದ ಸಂಸ್ಕೃತಿಯ ವಾರಸದಾರರು. ದಿವ್ಯಮಾನವತೆಗಾಗಿ ಬಾಳುವಾ, ಅಳಿಯುವಾ. ಪ್ರಪಂಚದಲ್ಲಿ ಪ್ರತಿಯೊಂದು ಜಾತಿಯಲ್ಲಿ, ದೇಶದಲ್ಲಿ ಹಿರಿದಾದ ವ್ಯಕ್ತಿಗಳು ಹುಟ್ಟಿದ್ದಾರೆ.

ಮಾನವ ಜಾತಿಗೆ ಭೂಷಣವೆನಿಸುವಂಥ ವ್ಯಕ್ತಿಗಳು, ನರನಾರೀ ರತ್ನಗಳು, ಮಾನವ ಜಾತಿಯಲ್ಲಿ ಹುಟ್ಟಿವೆ. ಯಾರು ಯಾರನ್ನೂ ಕಂಡು ನಗುವ ಕಾರಣವಿಲ್ಲ.

ಮಾನವೀ ಐಕ್ಯದ ಕಲ್ಪನೆಯೇ ಭಾರತೀಯ ಸಂಸ್ಕೃತಿಯ ಜೀವಾಳವು. ಯಾವ ಕೆಲಸವನ್ನು ಕೈಕೊಂಡರೂ ಇದೇ ದೃಷ್ಟಿಯನ್ನಿಡಬೇಕು. ಭಕ್ತಿಯೆಂದರೆ ಅದ್ವೈತ ಜ್ಞಾನವೇ. ನನ್ನಂತೆ ಪರರು, ನನ್ನಲ್ಲಿದ್ದ ಆತ್ಮ ಶಕ್ತಿಯೇ ಎಲ್ಲರಲ್ಲಿ ಇದೆ ಎಂಬ ಭಾವನೆಯು ಬಂದೊಡನೆ, ನಮಗೆ ಎಲ್ಲರಲ್ಲಿಯೂ ಭಕ್ತಿ ಮತ್ತು ಪ್ರೀತಿಯು ಕಂಡು ಬರುವದು. ಅವನೆಂದರೆ ನಾನು; ಆದ್ದರಿಂದಲೇ ನಾನು ಅವನನ್ನು ಪ್ರೀತಿಸಬೇಕು. ಎರಡನೆಯವರನ್ನು ಪ್ರೀತಿಸುವದೆಂದರೆ ತನ್ನನ್ನು ಪ್ರೀತಿಸಿದಂತೆಯೇ.

ಎಲ್ಲ ಕೆಲಸದಲ್ಲಿ ಈ ಆತ್ಮೀಯತೆಯು ಇದ್ದರೆ ಕರ್ಮವು ಮನಃಪೂರ್ವಕವಾಗಿ ಮಾಡಲ್ಪಡುವದು. ಕರ್ಮವು ಹಿತಕರವಾಗಬೇಕಾದರೆ ವಿಜ್ಞಾನವು ಅವಶ್ಯ. ವಿಜ್ಞಾನವೆಂದರೆ ಕರ್ಮವನ್ನು ಮಾಡುವ ಬಗೆಯನ್ನು ತಿಳಿಸುವ ಶಾಸ್ತ್ರ. ಬರಿಯ ಪ್ರೇಮವನ್ನು ಮಾಡಿದರೆ ಮಾತ್ರ ನಡೆಯದು. ಉದಾಹರಣೆಗಾಗಿ ನಾನೊಂದು ರೋಗಿಯ ಶುಶ್ರೂಷೆಯನ್ನು ಮಾಡುತ್ತೇನೆಂದು ತಿಳಿಯಿರಿ. ರೋಗಿಯನ್ನು ಪ್ರೀತಿಸಿದರೆ ಅವನು ಸುಧಾರಿಸಲಾರನು. ಅವನ ಆರೈಕೆಯನ್ನು ಮಾಡುವ ಜ್ಞಾನವು ನನಗೆ ಬೇಕು. ವಿಜ್ಞಾನವು ಇದನ್ನು ಕಲಿಸುತ್ತದೆ. ಬರೀ ಪ್ರೇಮವಿದ್ದರೆ ನಾನು ಮೋಹಕ್ಕೆ ಒಳಪಟ್ಟು ಕೊಡಬಾರದ್ದನ್ನು ಕೊಡುವೆನು. ಹೀಗೆ ನನ್ನ ಪ್ರೇಮವು–ವಿಜ್ಞಾನವಿಲ್ಲದ ಪ್ರೇಮವು–ತಾರಕವಾಗದೆ ಮಾರಕವಾಗುವದು.

ಪ್ರೇಮವು ಕಣ್ಣುಳ್ಳದ್ದಾಗಿರಬೇಕು. ಅಂದರೆ ಮಾತ್ರ ಕರ್ಮವು ಹಿತವನ್ನು ಮಾಡುವದು. ವಿಜ್ಞಾನದ ಬೆಳವಣಿಗೆ ಎಷ್ಟು ಆಗಿದೆ ಇಂದು? ನಿತ್ಯದ ಪ್ರತಿಯೊಂದು ಕರ್ಮದಲ್ಲಿ ವಿಜ್ಞಾನದ ಅರಿವು ಅವಶ್ಯವಿದೆ. ಸ್ಟೋವ್ಹ ಹೊತ್ತಿಸುವದು ಹೇಗೆ? ನೀರು ನಿರ್ಮಲ ಮತ್ತು ಶುದ್ಧ ಮಾಡುವ ರೀತಿ ಯಾವದು? ವಿದ್ಯುತ್ ಶಕ್ತಿಯನ್ನು ಉಪಯೋಗಿಸುವದು ಯಾವ ರೀತಿಯಿಂದ? ಟೆಲಿಫೋನಿನಿಂದ ಹೇಗೆ ಮಾತಾಡಬೇಕು? ಯಾವ ಯಾವ ಕಾಯಿಪಲ್ಲೆಗಳಲ್ಲಿ, ಧಾನ್ಯಗಳಲ್ಲಿ ವ್ಹಿಟಾಮಿನ್ಸ ಅವೆ? ಯಾವ ವ್ಯಾಯಾಮ, ಅಥವಾ ಶಿಕ್ಷಣ ಪದ್ಧತಿಯನ್ನು ಅನುಸರಿಸಬೇಕು? ಸದೀಪ ವ್ಯಾಖ್ಯಾನಗಳನ್ನು ಹೇಗೆ ಏರ್ಪಡಿಸಬೇಕು? ಹಳ್ಳಿಗಳನ್ನು ಸುಧಾ

ರಿಸುವ ಬಗೆಗಳು ಯಾವವು? ಶಾಸ್ತ್ರೀಯ ರೀತಿಯಿಂದ ಗೊಬ್ಬರವನ್ನು ಹೇಗೆ ತಯಾರಿಸಬೇಕು? ಬೀಜಗಳನ್ನು ಹೇಗೆ ಬೆಳೆಯಬೇಕು? ಇವೇ ಮೊದಲಾದ ಸಾವಿರಾರು ವಿಧದ ಜ್ಞಾನವು ನಮಗೆ ನಿತ್ಯ ಅವಶ್ಯವಿದೆ. ನಾವು ಮಾಡುವ ದಿನದ ಕರ್ಮಗಳು ಅಂದವಾಗಿಯೂ ಉಪಯುಕ್ತ ವಾಗಿಯೂ ಮತ್ತು ಬೇಗನೆ ಆಗಬೇಕಾದರೆ ಈ ಎಲ್ಲ ಬಗೆಯ ಶಾಸ್ತ್ರೀಯ ಜ್ಞಾನವನ್ನು ನಮ್ಮದನ್ನಾಗಿ ಮಾಡಿಕೊಳ್ಳಬೇಕು.

ನಮ್ಮಲ್ಲಿ ಪ್ರೀತಿಮಾಡುವ ಗುಣವಿದ್ದರೆ ನಾವು ಈ ಎಲ್ಲ ಜ್ಞಾನವನ್ನು ಪಡೆಯಲು ಯತ್ನಿಸುವೆವು. ನನ್ನ ಅಣ್ಣ ತಮ್ಮಂದಿರನ್ನು ಪ್ರೀತಿಸುತ್ತಿದ್ದರೆ ಮಾತ್ರ ನಾನು ನನ್ನ ಕರ್ಮಗಳನ್ನೆಲ್ಲ ವಿಜ್ಞಾನದ ಸಹಾಯದಿಂದ ಅರಿವಿ ನಿಂದ ಮಾಡುವೆನು. ಸಾಲೆಯಲ್ಲಿದ್ದ ವಿದ್ಯಾರ್ಥಿಗಳನ್ನು ಪ್ರೀತಿಸುತ್ತಿದ್ದರೆ ಮಾತ್ರ ನಾನು ಶಿಕ್ಷಣ ಶಾಸ್ತ್ರದ ಅಭ್ಯಾಸವನ್ನು ಕೈಕೊಳ್ಳುವೆನು. ಹುಡುಗರ ಮಾನಸ ಶಾಸ್ತ್ರವನ್ನು ಅರಿಯಲೆತ್ನಿಸುವೆನು. ಈ ಜ್ಞಾನವನ್ನು ಪಡೆಯಲು ನಾನು ಎಂದೂ ಬೇಸರಿಯುವದಿಲ್ಲ. ಪ್ರೇಮವಿದ್ದಲ್ಲಿ ಆಲಸ್ಯವು ಇರುವದೇ ಇಲ್ಲ.

ಇಂದು ನಮ್ಮ ಸಂಸ್ಕೃತಿಯಲ್ಲಿದ್ದ ವಿಜ್ಞಾನವು ಮಾಯವಾಗಿದೆ. ವಿಜ್ಞಾನದ ದೀಪವು ನೊಂದಿದೆ. ವಿಜ್ಞಾನ ಪೂಜೆಯು ಅಳಿದಿದೆ. ವಿಜ್ಞಾನದ ನಂದಾದೀಪವನ್ನು ಪುನಃ ಬೆಳಗಬೇಕಾಗಿದೆ. ಯಾರೋ ಓರ್ವ ಮಹಾಪುರುಷನು ಯಾವದಾದರೊಂದು ವಿಶಿಷ್ಟ ಕ್ಷೇತ್ರದಲ್ಲಿ ಶೋಧವನ್ನು ಮಾಡುತ್ತಾನೆ. ಆ ಶೋಧವು ಕೆಲಕಾಲದ ತರುವಾಯ ಸಾಮಾನ್ಯ ಜನರ ನಿತ್ಯದ ವ್ಯವಹಾರದಲ್ಲಿ ಬಳಕೆಯಲ್ಲಿ ಬರುತ್ತದೆ. ಇಂಥ ಸಂಶೋಧಕರು ನಮ್ಮ ಭರತ ಭೂಮಿಯಲ್ಲಿ ಹುಟ್ಟಬೇಕು. ವಿಜ್ಞಾನದಿಂದ ಪ್ರಪಂಚಕ್ಕೆ ಕಳೆ ಏರುತ್ತದೆ. ಅದಕ್ಕೆ ಅಂಜುವ ಕಾರಣವಿಲ್ಲ. ಪಾಶ್ಚಿಮಾತ್ಯರು ಭೌತಿಕ ವಾದಿಗಳೆಂದು ನಮ್ಮಲ್ಲಿ ಹಲವರು ಅವರನ್ನು ಹೀಯಾಳಿಸುತ್ತಾರೆ. ತಾವು ಆಧ್ಯಾತ್ಮಿಕರೆಂದು ಹೆಮ್ಮೆಪಡುತ್ತಾರೆ. ಆದರೆ ನಾವು ಇತ್ತ ಆಧ್ಯಾತ್ಮಿಕರೂ ಅಲ್ಲ, ಭೌತಿಕರೂ ಅಲ್ಲ. ನಾವು ಹೆಣಗಳಾಗಿದ್ದೇವೆ.

ಪಾಶ್ಚಿಮಾತ್ಯರು ಭೌತಿಕ ಜ್ಞಾನವನ್ನೆ ಹಿಂಬಾಲಿಸಿ, ಅಧ್ಯಾತ್ಮದ ಹಿನ್ನೆಲೆಯ ಅಭಾವದಿಂದ ಜಗತ್ತಿನಲ್ಲೆಲ್ಲ ಆಸುರೀ ಕರ್ಮಗಳನ್ನೇ ಆಚರಿಸುತ್ತಾರೆ. ಅವರ ಭೌತಿಕತೆಗೆ ಆಧ್ಯಾತ್ಮಿಕತೆಯ ಜೋಡು ಇತ್ತರೆ ಎಲ್ಲವೂ ಅಂದವಾಗುವದು. ಭಾರತದಲ್ಲಿ ಒಡಕಿನ ಕೊಳಚೆ, ಶ್ರೇಷ್ಠ-ಕನಿಷ್ಠ ಭಾವ

ನೆಯ ತಾಂಡವ, ಬಾಯಿಯಿಂದ ಅದ್ವೈತದ ಮಾತು; ಆದರೆ ಕೃತಿಯಲ್ಲಿ ಶೂನ್ಯತೆ! ನಮ್ಮ ಅಧ್ಯಾತ್ಮವು ಪುಸ್ತಕದಲ್ಲಿದೆ. ಭಾರತೀಯ ಸಂಸ್ಕೃತಿ ಯಲ್ಲಿದ್ದ ಅಧ್ಯಾತ್ಮವು ಪುಸ್ತಕದಲ್ಲಿದೆ. ಭಾರತೀಯ ಸಂಸ್ಕೃತಿಯಲ್ಲಿದ್ದ ಅಧ್ಯಾತ್ಮವು ಮಾಯವಾಗಿದೆ. ಅದನ್ನು ನಾವು ಮತ್ತೆ ಕೃತಿಯಲ್ಲಿ ತರುವಾ. ಎಲ್ಲರೂ ಸುಖಿಗಳಾಗುವಂತೆ ಮಾಡಿಯುವಾ. ಮತ್ತು ಈ ನಮ್ಮ ಬಯಕೆ ಯನ್ನು ಪೂರೈಸುವದಕ್ಕಾಗಿ ವಿಜ್ಞಾನಕ್ಕೆ ಮರೆ ಹೋಗುವಾ.

ಪಾಶ್ಚಿಮಾತ್ಯರಿಗೆ ಅಧ್ಯಾತ್ಮದ ಕೊರತೆ ಮಾತ್ರ ಇದೆ. ಆದರೆ ನಾವು ಎರಡೂ ದೃಷ್ಟಿಯಿಂದ ದರಿದ್ರರಾಗಿದ್ದೇವೆ. ಜ್ಞಾನ, ವಿಜ್ಞಾನ ಇವೆರಡು ನಮ್ಮ ಪಾಲಿಗೆ ಸತ್ತು ಹೋಗಿವೆ. ಆರ್ಯ ಭಟ್ಟನ—ಭಗವಾನ್ ಬುದ್ಧನ ಈ ಭೂಮಿಯಲ್ಲಿ ಪುನಃ ಜ್ಞಾನ-ವಿಜ್ಞಾನಗಳೆರಡು ಉದಯವಾಗಲಿಕ್ಕಿ ಲ್ಲವೇ ? ಅಧ್ಯಾತ್ಮ ಭೌತಿಕತೆಗಳ ಸಂಗಮವಾಗುವದು ಅಸಾಧ್ಯವೇ ?

ಈ ಮಾತನ್ನೆ ಈಶೋಪನಿಷತ್ತಿನಲ್ಲಿ ವಿಶೇಷವಾಗಿ ಎತ್ತಲಾಗಿದೆ. ವಿದ್ಯೆ ಮತ್ತು ಅವಿದ್ಯೆ, ಸಂಭೂತಿ ಮತ್ತು ಅಸಂಭೂತಿ ಇವುಗಳ ಸಮನ್ವ ಯವನ್ನು ಮಾಡಲು ಋಷಿಗಳು ಹೇಳಿದ್ದಾರೆ.

"ವಿದ್ಯಾ ಅವಿದ್ಯಾಂ ಚ ಯಸ್ತದ್ವೇದ ಉಭಯಂ ಸಹ । ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾsಮೃತಮಶ್ನುತೆ ॥" ಅವಿದ್ಯಾ ಎಂದರೆ ಭೌತಿಕ ಜ್ಞಾನ. ಈ ಭೌತಿಕ ಜ್ಞಾನದಿಂದ ನಾವು ಸಾವನ್ನು ದಾಟುತ್ತೇವೆ. ಅಂದರೆ ಈ ಮೃತ್ಯುಲೋಕದಲ್ಲಿದ್ದ ರೋಗ, ಸಂಕಟ ಮತ್ತು ದುಃಖಗಳಿಂದ ಪಾರಾಗುತ್ತೇವೆ. ಸಂಸಾರ ಯಾತ್ರೆಯು ಸುಲಭವಾಗುತ್ತದೆ. ಮತ್ತು ವಿದ್ಯೆಯಿಂದ ಅಮೃತತ್ವವನ್ನು ಪಡೆಯುತ್ತೇವೆ.

ಕೇವಲ ವಿದ್ಯೆಯನ್ನೆ ಆಗಲಿ ಅಥವಾ ಅವಿದ್ಯೆಯನ್ನೇ ಆಗಲಿ ಅಭ್ಯ ಸಿಸುವವರು ಪತಿತರಾಗುವರು. ಒಂದು ವೇಳೆ ಆಧ್ಯಾತ್ಮ ವಿದ್ಯೆಯನ್ನು ಬಿಟ್ಟರೂ ಅಡ್ಡಿಯಿಲ್ಲ, ಆದರೆ ಯಾವ ಕಾಲಕ್ಕೂ ಅವಿದ್ಯೆಯನ್ನು ಉಪೇ ಕ್ಷಿಸತಕ್ಕದಲ್ಲೆಂದು ಉಪನಿಷತ್ತು ಹೇಳುತ್ತದೆ. ಕೇವಲ ಅಧ್ಯಾತ್ಮದಲ್ಲಿಯೆ ತಲ್ಲೀನನಾಗುವವನು ಘೋರ ನರಕಕ್ಕೆ ಈಡಾಗುವನು. ಯಾಕಂದರೆ ವಿಜ್ಞಾನದ ಉಪಾಸಕರು ತಮ್ಮ ಮತ್ತು ರಾಷ್ಟ್ರದ ಸಂಸಾರವನ್ನಾದರೂ ಸುಂದರವಾಗಿ ಮಾಡುತ್ತಾರೆ. ಆದರೆ ಕರ್ಮಶೂನ್ಯ ವೇದಾಂತಿಯು ಇಡೀ ಸಮಾಜವನ್ನೇ ಮಣ್ಣುಪಾಲಾಗಿ ಮಾಡುತ್ತಾನೆ. ಅಧ್ಯಾತ್ಮ ಅಥವಾ ಭೌತಿಕಶಾಸ್ತ್ರ ಇವೆರಡರಲ್ಲಿ ಯಾವದಾದರೊಂದೇ ಶಾಸ್ತ್ರವನ್ನು ಮೊರೆ

ಹೋಗುವದಿದ್ದರೆ, ಅದರಂತೆ ನಡೆಯುವದಿದ್ದರೆ ಭೌತಿಕ ಶಾಸ್ತ್ರವನ್ನೆ ಮೊರೆಹೋಗು ಎಂದು ಈಶೋಪನಿಷತ್ತು ಹೇಳುತ್ತದೆ. ಇದರಿಂದ ಪತಿತರಾಗುವಿರಿ, ಆದರೆ ಕೇವಲ ಅಧ್ಯಾತ್ಮದಿಂದಾದಷ್ಟು ಆಗುವದಿಲ್ಲ. "ಅಂಧತಮಃ ಪ್ರವಿಶಂತಿ ಯೇ ಉ ಅವಿದ್ಯಯಾಂ ರತಾಃ। ತತೋ ಭೂಯ ಏವ ತಮಃ ಪ್ರವಿಶಂತಿ ಯೇ ಉ ವಿದ್ಯಯಾಂ ರತಾಃ।" ನೂರು ವರ್ಷ ಕರ್ಮ ಮಾಡುತ್ತ ಬಾಳು ಎಂದು ಹೇಳುವ ಈಶೋಪನಿಷತ್ತು ಇದನ್ನು ಹೇಳುತ್ತದೆ. ವಿಜ್ಞಾನವು ಹೇಯವೆಂದು ತಿಳಿಯುವದು, ಅದನ್ನು ಹೀಯಾಳಿಸುವದು ಭಾರತೀಯ ಸಂಸ್ಕೃತಿಯನ್ನು ಜೋಪಾಸನ ಮಾಡುವವರಿಗೆ ಒಪ್ಪುವದಿಲ್ಲ. ವಿಜ್ಞಾನವು ಕ್ಷುಲ್ಲಕವಲ್ಲ. ಅದೊಂದು ಮಹಾ ವಸ್ತುವು. ಇವನ್ನು ನಾವು ಈಗಲಾದರೂ ಅರಿಯುವಾ.

ಗೀತೆಯಲ್ಲಿ ಜ್ಞಾನ, ವಿಜ್ಞಾನ ಇವೆರಡು ಶಬ್ದಗಳು ಜೊತೆಯಲ್ಲಿ ಅವೆ. ವಿಜ್ಞಾನವಿಲ್ಲದ ಜ್ಞಾನವು ವ್ಯರ್ಥ. ಜ್ಞಾನವಿಲ್ಲದ-ಅದ್ವೈತ ರಹಿತವಾದ ವಿಜ್ಞಾನವು ಭೀಕರವಾದದ್ದು. ಜ್ಞಾನದ ತಳಪದಿಯ ಮೇಲೆ ವಿಜ್ಞಾನದ ಮಂದಿರವನ್ನು ಕಟ್ಟಿದರೆ ಅದು ಹಿತದಾಯಕವಾಗುವದು. ಪಾಶ್ಚಿಮಾತ್ಯರು ವಿಜ್ಞಾನದ ಮಂದಿರವನ್ನು ಉಸುಕಿನ ಪಾಯದ ಮೇಲೆ ಕಟ್ಟಹತ್ತಿದ್ದಾರೆ. ಆದ್ದರಿಂದಲೇ ಈ ಕಟ್ಟಡವು ಕುಪ್ಪರಿಸಿ ಕೊಂಡು ಬೀಳುವದು. ಮತ್ತು ಪಾಶ್ಚಾತ್ಯ ಸಂಸ್ಕೃತಿಯು ಮಣ್ಣಿನಲ್ಲಿ ಹುಗಿಯಲ್ಪಡುವದು ಖಂಡಿತ. ಅಧ್ಯಾತ್ಮದ ತಳಹದಿಯ ಮೇಲೆ ವಿಜ್ಞಾನದ ಮಂದಿರವನ್ನು ಕಟ್ಟುವದು ಭಾರತೀಯ ಸಂಸ್ಕೃತಿಯ ಭವ್ಯ ದಿವ್ಯ ಕರ್ಮವಾಗಿದೆ. ಈ ಮಹಾ ಕರ್ಮವು ಭಾರತದ ಹಾದಿ ಕಾಯುತ್ತಿದೆ. ಭಾರತವು ಇದನ್ನು ಕೈಕೊಳ್ಳುವದಿಲ್ಲವೇ ?

ಪ್ರಪಂಚ ಮತ್ತು ಪರಮಾರ್ಥಗಳ ರಮಣೀಯವಾದ ಕೂಡುವಿಕೆಯು ಇದು. ಜ್ಞಾನ, ವಿಜ್ಞಾನಗಳ ಸಲ್ಲಗ್ನದಿಂದ ಮಾಂಗಲ್ಯ ರೂಪವಾದ ಹಸು ಕೂಸುಗಳು ಪೃಥ್ವಿಯ ಮೇಲೆ ಹುಟ್ಟುವವು. ಮತ್ತು ಸ್ವರ್ಗವೇ ಇಲ್ಲಿ ಅವತರಿಸುವದು.

ಮಹಾತ್ಮರು ಈ ಕೆಲಸವನ್ನು ಇಂದು ಕೈಕೊಂಡಿದ್ದಾರೆ. ಭೇದಗಳ ಗುರುತೇ ಅವರಿಗಿಲ್ಲ. ಅವರ ರೋಮರೋಮದಲ್ಲಿ ಅದ್ವೈತವು ಮನೆ ಮಾಡಿದೆ. ಅವರಿಗೆ ಎಲ್ಲ ಕಡೆಯಲ್ಲಿಯೂ ನಾರಾಯಣನೇ ಕಾಣುತ್ತಾನೆ. ನಾರಾಯಣನ ಸೇವೆಯನ್ನು ಶಾಸ್ತ್ರೀಯ ದೃಷ್ಟಿಯಿಂದಲೇ ಮಾಡಬಯ

ಸುತ್ತಾರೆ. ಗಾಂಧೀಜಿಯವರಿಗೆ ವಿಜ್ಞಾನವು ಬೇಕು. ಹೊಸ ಮಾದರಿಯ ಚರಕವನ್ನು ಶೋಧಿಸುವವನಿಗೆ ಒಂದು ಲಕ್ಷ ರುಪಾಯಿ ಕಾಣಿಕೆಯಾಗಿ ಕೊಡಲು ಒಪ್ಪಿದ್ದರು. ಅರ್ಥಶಾಸ್ತ್ರವನ್ನು ಕುರಿತು, ಉತ್ತಮವಾದ ನಿಬಂಧವನ್ನು ಬರೆದವನಿಗೆ ಒಂದು ಸಾವಿರ ರುಪಾಯಿ ಇನಾಮುನ್ನು ಜಾಹೀರಪಡಿಸಿದ್ದರು. ಅವರಿಗೆ ಸಂಶೋಧನವು ಬೇಕು. ಆದರೆ ಅದು ಕಲ್ಯಾಣದಾಯಕವಿರಬೇಕು, ಎಂದು ಅವರ ಆಗ್ರಹ. ತಿನ್ನುವ ಮತ್ತು ಕುಡಿಯುವ ಪದಾರ್ಥಗಳ ಪ್ರಯೋಗಗಳನ್ನು ಅವರು ಮಾಡುತ್ತಾರೆ. ಬೆಲ್ಲವು ಹಿತಕರವಾದದ್ದೋ ಸಕ್ಕರೆಯೋ ? ಥಳಿಸಿದ ಅಕ್ಕಿ ಅಥವಾ ಥಳಿಸದ ಅಕ್ಕಿಗಳಲ್ಲಿ ಯಾವದು ಹಿತಕರವು ? ಯಂತ್ರದಿಂದ ಥಳಿಸಬೇಕೋ ಥಳಿಸಬಾರದೋ ? ಯಾವ ಕಾಯಿಪಲ್ಲೆ ತಿನ್ನಬೇಕು ? ಇವೇ ಮೊದಲಾದ ಸಮಸ್ಯೆಗಳನ್ನು ಪರೀಕ್ಷಿಸಿ ಮಹಾತ್ಮಾಜಿಯವರು ವಿಜ್ಞಾನವನ್ನು ಸಂವರ್ಧಿಸುತ್ತಾರೆ. ಬೇನೆ ಬಿದ್ದಾಗ ನೈಸರ್ಗಿಕ ಉಪಾಯಗಳನ್ನು ಕೈಕೊಳ್ಳುತ್ತಾರೆ. ತಮ್ಮ ಬಾಂಧವರ ಸಂಸಾರವು ಸುಖಮಯವಾಗಲಿ, ಸುಲಭವಾಗಲಿ, ಸೋವಿಯಾಗಲಿ ಎಂದು ಅವರು ಹಗಲಿರುಳು ಪ್ರಯೋಗ ಮಾಡುತ್ತಾರೆ ಮತ್ತು ಹೆಣಗಾಡುತ್ತಾರೆ.

ಜೀವನದ ವಿಧವಿಧವಾದ ಕ್ಷೇತ್ರಗಳಲ್ಲಿ ಬುದ್ಧಿಯ ದೀಪದ ಸಹಾಯದಿಂದಲೇ ಮಹಾತ್ಮಾಜಿಯವರು ಸಾಗುತ್ತಾರೆ. ವಿಜ್ಞಾನ ಅವರ ಜೊತೆಗೆ ಇದೆ. ಇಡೀ ಪ್ರಪಂಚವನ್ನೇ ಸುಂದರ ಮತ್ತು ಸಮೃದ್ಧ ಮಾಡುವ ವಿಜ್ಞಾನವನ್ನು ಅವರು ಅಪೇಕ್ಷಿಸುತ್ತಾರೆ. ಅಂತಃಕರಣದ ಭಕ್ತಿರಸವನ್ನು ಸುರಿಸಿ, ಜ್ಞಾನ, ವಿಜ್ಞಾನಗಳನ್ನು ಪೂಜಿಸುವ ಮಹಾತ್ಮಾಜಿಯವರು ಭಾರತೀಯ ಸಂಸ್ಕೃತಿಯ ಮೂರ್ತಿಯಾಗಿದ್ದಾರೆ. ಜ್ಞಾನ, ವಿಜ್ಞಾನ, ಭಕ್ತಿಗಳಿಂದ ಮಾಡಿದ ಕರ್ಮವೆಂದರೆ ಭಾರತೀಯ ಸಂಸ್ಕೃತಿಯು ! ಈ ರೀತಿ ಕರ್ಮ ಮಾಡುವದನ್ನು ಮಹಾತ್ಮಾಜಿಯವರಿಂದಲೇ ಕಲಿಯಬೇಕು. ಮಹಾತ್ಮಾಜಿಯವರ ರೂಪದಿಂದ ಭಾರತೀಯ ಸಂಸ್ಕೃತಿಯ ಜೀವಾಳವೆ ಅವತರಿಸಿದೆಯೆಂದು ನನಗೆ ಅನಿಸುತ್ತದೆ. ಭಾರತೀಯ ಸಂಸ್ಕೃತಿಯು ಸಂಪೂರ್ಣವಿದೆ. ಅದು ಒಂದೇ ಮಾತಿಗೆ ಹೆಚ್ಚು ಮಹತ್ವವನ್ನು ಕೊಡುವದಿಲ್ಲ. ಅದು ಜತೆಗೂಡಿಸುವ ಸಂಸ್ಕೃತಿಯು. ದೇಹವನ್ನೂ ಆತ್ಮವನ್ನೂ ಅರಿತಿದೆ. ದೇಹಕ್ಕಾಗಿ ವಿಜ್ಞಾನ ಮತ್ತು ಆತ್ಮಕ್ಕೆ ಜ್ಞಾನ! ದೇಹದಿಂದ ಕಂಗೊಳಿಸುವ ಆತ್ಮಕ್ಕೆ ವಿಜ್ಞಾನಾಲಂಕೃತವಾದ ಜ್ಞಾನವು ಮತ್ತು ಅಧ್ಯಾತ್ಮದಿಂದ ಶೋಭಿ

ಸುವ ವಿಜ್ಞಾನವು ಅವಶ್ಯವಾದದ್ದು. ಈ ದಿವ್ಯ ಸೂತ್ರವನ್ನು ತಿಳಿದ ದಿನವೇ ಭಾರತೀಯ ಜನತೆಯ ಸುದಿನವು!

---

## ೯. ಸಂಯಮ

ಅನಾಸಕ್ತಿಯಿಂದ ಜ್ಞಾನ ವಿಜ್ಞಾನ ಯುಕ್ತರಾಗಿ, ಹೃದಯದ ಭಾವವನ್ನು ಸುರಿಸಿ ಕರ್ಮವನ್ನು ಮಾಡಬೇಕು. ಇದು ನಿಜ. ಹೀಗೆ ಆಡುವದು ಸುಲಭ. ಸತತವಾಗಿ ಹೀಗೆ ಕರ್ಮವಾಗಬೇಕಾದರೆ ಸಾಧನೆಯು ಅವಶ್ಯವಾದದ್ದು. ಜೀವನದಲ್ಲಿ ಸಂಯಮವು ಬೇಕು. ಸಂಯಮವಿಲ್ಲದೆ ಉಚ್ಚಪ್ರತಿಯ ಕರ್ಮವು ನಮ್ಮ ಕೈಯಿಂದ ಆಗುವದಿಲ್ಲ.

ಒಂದು ದೃಷ್ಟಿಯಿಂದ ಸಂಯಮವು ಭಾರತೀಯ ಸಂಸ್ಕೃತಿಯ ಆತ್ಮವು ಎಂದೆನ್ನಲು ಅಡ್ಡಿಯಿಲ್ಲ. ಸಂಯಮದ ತಳಹದಿಯ ಮೇಲೆಯೆ ಭಾರತೀಯ ಸಂಸ್ಕೃತಿಯು ನಿಂತಿದೆ. ನಾವು ಈಶ್ವರನ ಗುಡಿಗೆ ಹೋಗುತ್ತೇವೆ. ಅಲ್ಲಿ ಹೊರಗೆ ಆವೆಯ ಮೂರ್ತಿ ಇರುತ್ತದೆ. ಆವೆಯ ದರ್ಶನವಿಲ್ಲದೆ ಶಿವನ, ಮೃತ್ಯುಂಜಯನ ದರ್ಶನವಿಲ್ಲ. ಆವೆಯೆಂದರೇನು? ಆವೆಯು ಸಂಯಮದ ಮೂರುತಿಯು. ಆವೆಯು ತನ್ನ ಅವಯವಗಳನ್ನೆಲ್ಲ ಕ್ಷಣದಲ್ಲಿ ಒಳಗೆ ಜಗ್ಗಿಕೊಳ್ಳುತ್ತದೆ, ಇನ್ನೊಂದು ಕ್ಷಣದಲ್ಲಿ ಹೊರಗೆ ತೆಗೆಯುತ್ತದೆ. ತನ್ನ ವಿಕಾಸಕ್ಕೆ ಅನುವು ಇದೆ ಎಂದು ತೋರಿದರೆ ಅದು ಅವಯವಗಳನ್ನು ಹೊರಗೆ ಚೆಲ್ಲುವದು. ಮತ್ತು ತನಗೆ ಸಂಕಟವಿದೆ ಎಂದು ತೋರಿದರೆ ಅವುಗಳನ್ನೆಲ್ಲ ಒಳಗೆ ಜಗ್ಗುವದು. ಆವೆಗೆ ಭಾರತೀಯ ಸಂಸ್ಕೃತಿಯು ಗುರುಸ್ಥಾನವನ್ನಿತ್ತಿದೆ. ದೇವರಡಿಯಲ್ಲಿ ಹೋಗುವದಿದ್ದರೆ ಆವೆಯಾಗಿ ಹೋಗಿರಿ. ಆವೆಯಂತೆ ನಿಮ್ಮ ಇಂದ್ರಿಯಗಳ ಸ್ವಾಮಿಯಾಗಿರಿ. ನಮ್ಮ ಅವಯವಗಳೆಲ್ಲ ನಮ್ಮ ಆಧೀನವಿರಬೇಕು. ಜಗತ್ತಿನ ಒಡೆಯನಾಗಲಿಚ್ಛಿಸುವವನು ಮೊದಲು ಇಂದ್ರಿಯಗಳ ಸ್ವಾಮಿಯಾಗಬೇಕು. ದೇವರು ನಮ್ಮವನಾಗಬೇಕಾದರೆ ನಾವು ನಮ್ಮ ಮನಸ್ಸನ್ನು ನಮ್ಮ ಆಧೀನದಲ್ಲಿಟ್ಟುಕೊಳ್ಳಬೇಕು.

ಶಂಕರನ ಮೂರ್ತಿಯನ್ನು ನೆನೆಯಿರಿ. ಶಂಕರನಿಗೆ ಮೂರನೆಯ

ದೊಂದು ಕಣ್ಣಿದೆ. ಆ ಕಣ್ಣು ಎರಡು ಕಣ್ಣುಗಳ ನಡುವೆ ಇದೆ. ಈ ಕಣ್ಣಿನ ಪ್ರಯೋಜನವೇನು? ಅದು ಕಾವಲುಗಾರನಂತೆ ಅದೆ. ಕಣ್ಣು, ಕಿವಿ, ಮೂಗು ನಾಲಿಗೆ ಮೊದಲಾದ ಎಲ್ಲ ಅವಯವಗಳನ್ನು ಇದು ನೋಡುತ್ತದೆ. ಈ ಮೂರನೇ ಕಣ್ಣಿನಲ್ಲಿ ಅಗ್ನಿಯು ನೆಲೆಗೊಂಡಿದ್ದಾನೆ. ನನ್ನ ಜೀವನ ವಿಕಾಸಕ್ಕೆ ಅಡ್ಡಿ ಆತಂಕ ಮಾಡುವವನ್ನೆಲ್ಲವನ್ನು ಸುಟ್ಟು ಬಿಡಲು ಅದರಲ್ಲಿದ್ದ ಅಗ್ನಿಯು ಸದೈವ ಸಿದ್ಧವಿದೆ. ಈ ಕಣ್ಣನ್ನು ತೆರೆದು ಇಡದೆ ಜೀವನದ ವಿಕಾಸವು ಆಗುವದು ಸಾಧ್ಯವೇ ಇಲ್ಲ.

ನನ್ನ ಕಣ್ಣುಗಳು ಅತ್ತಿತ್ತ ನೋಡಬಾರದು. ಕಿವಿಗಳು ಬೇಕಾದ್ದನ್ನು ಕೇಳಬಾರದು. ನಾಲಿಗೆಯು ಬೇಕಾದ್ದನ್ನು ಆಡತಕ್ಕದ್ದಲ್ಲ. ಕೈಗಳು ಸಿಕ್ಕಸಿಕ್ಕದ್ದನ್ನು ಮಾಡತಕ್ಕದ್ದಲ್ಲ, ಕಾಲುಗಳು ಸಿಕ್ಕಸಿಕ್ಕಲ್ಲಿ ಹೋಗತಕ್ಕದ್ದಲ್ಲ. ನನ್ನ ಧ್ಯೇಯಕ್ಕೆ ಅನುಕೂಲವಿದ್ದದ್ದನ್ನಷ್ಟೇ ನನ್ನ ಇಂದ್ರಿಯಗಳು ಮಾಡುತ್ತಿರಬೇಕು. ಈ ಇಂದ್ರಿಯ ರೂಪಿಯಾದ ಕುದುರೆಗಳು ನನ್ನ ಜೀವನ ರಥವನ್ನು ತೆಗ್ಗಿನಲ್ಲಿ ಕೆಡವದೆ ನನ್ನ ಧ್ಯೇಯಪಥದ ಮೇಲೆ ನಡೆಸಬೇಕು.

ಜ್ಞಾನೇಶ್ವರರು ಯೋಗದ ವರ್ಣನೆಯನ್ನು ಮಾಡಿದಲ್ಲಿ ಬಹಳ ಸುಂದರವಾದ ಓವಿಗಳನ್ನು ಬರೆದಿದ್ದಾರೆ. ಗೀತೆಯಲ್ಲಿಯ "ಯುಕ್ತಾಹಾರ ವಿಹಾರಸ್ಯ ಯುಕ್ತ ಚೇಷ್ಟಸ್ಯ ಕರ್ಮಸು । ಯುಕ್ತ ಸ್ವಪ್ನಾವ ಬೋಧಸ್ಯ ಯೋಗೋಭವತಿ ದುಃಖಹಾ ॥" ಎಂಬ ಶ್ಲೋಕದ ಮೇಲೆ ಬರೆದ ಟೀಕೆಯಲ್ಲಿ ಆ ಶ್ಲೋಕಗಳು ಅವೆ. ಕರ್ಮಯೋಗವನ್ನು ಸಾಧಿಸಬೇಕೆನ್ನುವವನು ಸಂಯಮ ಯೋಗವನ್ನು ತನ್ನಲ್ಲಿ ಬೆಳಿಸಬೇಕು. ಯೋಗಿ ಅಂದರೆ ಕರ್ಮಯೋಗಿ. ಯಾವಾಗಲೂ ಸೇವೆಯನ್ನೆ ಸಲ್ಲಿಸುವದು, ಮತ್ತು ಅದರಲ್ಲಿಯೇ ತಲ್ಲೀನರಾಗುವದು. ಇದಕ್ಕಾಗಿ ಏನೇನು ಮಾಡಬೇಕು? ಎಲ್ಲವನ್ನು ಅಳತೆಯಲ್ಲಿಯೇ ಇಡಬೇಕು. ನಿಯಮಿತವಾಗಿ ಪ್ರಮಾಣದಲ್ಲಿಯೇ ತಿನ್ನುವದು, ಕುಡಿಯುವದು, ಮಾತನಾಡುವದು, ಮಲಗುವದು; ಇಂದ್ರಿಯಗಳಿಗೆ ಅವಶ್ಯವಿದ್ದದ್ದನ್ನೆಲ್ಲ ಕೊಡುವದು. ಆದರೆ ಅದೆಲ್ಲ ಪ್ರಮಾಣದಲ್ಲಿ. ಇದರಿಂದ ಜೀವನದಲ್ಲಿ ಪ್ರಸನ್ನತೆಯು ನೆಲೆಗೊಳ್ಳುವದು. ಇದು ಕೇವಲ ಕಲ್ಪನೆಯ ಮಾತಲ್ಲ. ಅನುಭವ ಸಿದ್ಧವಾದ ಮಾತು.

ನಾವು ಹೆಚ್ಚು ಊಟ ಮಾಡಿದೆವೆಂದು ತಿಳಿಯಿರಿ. ಮನಬಂದಂತೆ ಭಜಿ ತಿಂದೆವು. ಅಳತೆ ಇಲ್ಲದಷ್ಟು ಬಾಸುಂದಿಯನ್ನು ತಿಂದೆವು. ಇದರ ಪರಿಣಾಮವೇನಾಗುವದು? ಆಲಸ್ಯ, ಮೈಗಳ್ಳತನ; ಹೆಚ್ಚು ತಿಂದರೆ

ಹೆಚ್ಚು ನಿದ್ರೆ. ಇಷ್ಟರಿಂದಲೇ ಮುಗಿಯುವದಿಲ್ಲ. ಅಜೀರ್ಣವಾಗುವದು, ಹೊಟ್ಟೆ ನೋಯುವದು; ಬೇನೆಯಿಂದ ಬೀಳುವ ಸಂಭವವೂ ಇದೆ. ಒಂದು ಕ್ಷಣ ನಾಲಿಗೆಗೆ ಸುಖವಾಗುವದು. ಆದರೆ ಅದರಿಂದ ಹತ್ತೆಂಟು ದಿನ ಅರುಚಿ; ಯಾವ ಕೆಲಸವೂ ನೆಟ್ಟಗೆ ಆಗುವಂತಿಲ್ಲ. ಕರ್ಮವಂತೂ ದೂರವೇ ಉಳಿಯಿತು. ಅದರಂತೆಯೆ ಹಾಡು ಕೇಳುವದು. ರಾತ್ರಿ ಎರಡು ಮೂರು ಗಂಟೆಯವರೆಗೆ ಜಾಗರಣೆ. ನಿದ್ದೆ ಪೂರಾ ಆಗುವಂತಿಲ್ಲ. ಹೀಗಾಗಿ ಮರುದಿವಸ ಚೆನ್ನಾಗಿ ಪಚನವಾಗುವದಿಲ್ಲ. ಕೆಲಸ ಮಾಡಲಿಕ್ಕೆ ಬರುವದಿಲ್ಲ. ಕೆಲಸ ಮಾಡುವಾಗ ನಿದ್ದೆ ಬರುವದು. ಹೀಗಾಗಿ ಕರ್ಮಸಿದ್ಧಿ ಆಗುವದಿಲ್ಲ. ಹೀಗೆ ಕ್ಷಣಿಕ ಸುಖದ ಬೆನ್ನು ಹತ್ತಿ ಅನರ್ಥ ಪರಂಪರೆಯ ಪ್ರಾರಂಭವೇ ಆಗುತ್ತದೆ.

ಯಾವನ ಜೀವನವು ಯಾವದಾದರೊಂದು ಧ್ಯೇಯಕ್ಕಾಗಿ ಇದೆಯೋ, ಸೇವೆಗಾಗಿ ಇದೆಯೋ ಅವನು ಎಲ್ಲವನ್ನೂ ಪ್ರಮಾಣದಲ್ಲಿಯೇ, ಅಳತೆ ಯಲ್ಲಿಯೇ ಮಾಡತಕ್ಕದ್ದು. ಪ್ರಮಾಣದಲ್ಲಿ ಶೋಭೆ, ಸೌಂದರ್ಯಗಳು ಅವೆ. ಸಂಯಮದಲ್ಲಿ ಸೌಂದರ್ಯವು. ಅವಿವೇಕಿಗಳು ಸಂಯಮವನ್ನು ನಗೆಯಾಡುತ್ತಾರೆ. "ಬೇಡ, ನಮಗೆ ಈ ಬಂಧನಗಳು ಬೇಡ'' ಎಂದೆ ನ್ನುತ್ತಾರೆ. ನಮ್ಮ ಮೇಲೆ ನಾವೇ ಹಾಕಿಕೊಂಡ ಬಂಧನಗಳು ಬಂಧನ ಗಳೇ ಅಲ್ಲ; ನಮ್ಮ ನಮ್ಮ ಲಹರಿಗಳ ದಾಸರಾಗುವದೆಂದರೆ ಸ್ವಾತಂತ್ರ್ಯ ವಲ್ಲ. ಸ್ವಾತಂತ್ರ್ಯವೆಂದರೆ ಸ್ವೈರಾಚಾರವಲ್ಲ. ಸ್ವಾತಂತ್ರ್ಯವೆಂದರೆ ಅರಳು ವಿಕೆಯು. ಮತ್ತು ಸಂಯಮವಿಲ್ಲದೆ ಅರಳುವಿಕೆ ಸಾಧ್ಯವಿಲ್ಲ.

ಸೃಷ್ಟಿಯತ್ತ ದೃಷ್ಟಿಯನ್ನು ಹೊರಳಿಸಿರಿ. ಎಲ್ಲ ಕಡೆಯಲ್ಲಿ ಸಂಯಮ ವನ್ನೇ ಕಾಣುವಿರಿ. ಆ ಮರವನ್ನು ನೋಡಿರಿ. "ನಾನೇಕೆ ಭೂಮಿಗೆ ಅಂಟಿಕೊಂಡಿರಲಿ. ಕಡಿಯಿರಿ ನನ್ನ ಬೇರುಗಳನ್ನು, ನಾನು ಮುಗಿಲಿಗೆ ಹಾರುವೆನು." ಎಂದು ಮರವು ಅಂದರೆ, ಅದರಂತೆ ಯಾರಾದರೂ ಬೇರು ಕಡಿದರೆ, ಆ ಮರವು ಸತ್ತುಹೋಗುವದು. ಬೇರಿನಿಂದ ಭೂಮಿತಾಯಿಗೆ ಬದ್ಧವಿದ್ದುದರಿಂದಲೇ ಆ ಮರಕ್ಕೆ ಮರಣವಿಲ್ಲ. ಬೆಳವಣಿಗೆ ಅದೆ. ಹಣ್ಣು ಹಂಪಲಗಳಿಂದ ಸಮೃದ್ಧವಾಗುತ್ತದೆ. ಅದರ ಈ ಸಿರಿಯ ಗುಟ್ಟು ಸಂಯಮದಲ್ಲಿದೆ.

ಇದರಂತೆಯೇ ವೀಣೆ. ವೀಣೆಗೆ ತಂತಿಗಳಿರುತ್ತವೆ. ಆ ತಂತಿಗಳನ್ನು ನೆಲದ ಮೇಲೆ ಇಟ್ಟರೆ ಸಂಗೀತವು ಹೊರಡುವದಿಲ್ಲ. ಅವೇ ತಂತಿಗಳನ್ನು

ವೀಣೆಯ ಗೂಟಗಳಿಗೆ ಸುತ್ತಿರಿ. ಆ ಬಂಧಿತವಾದ ತಂತಿಗಳೊಳಗಿಂದ ಮಧುರವಾದ ಸಂಗೀತ ಪ್ರವಾಹವು ಹರಿಯುತ್ತದೆ. ಆ ಜಡವಾದ ತಂತಿಗಳಲ್ಲಿ ಜೀವಕಳೆಯು ತುಂಬುತ್ತದೆ. ಸಂಯಮದಿಂದ ಸಂಗೀತವು ಪ್ರಕಟವಾಗುತ್ತದೆ.

ಅದರಂತೆ ನದಿಯು. ಗುಡ್ಡದ ಮೇಲಿನ ನೀರು ಅತ್ತಿತ್ತ ಹರಿದು ಹೋದರೆ ಪ್ರವಾಹವಾಗುವದಿಲ್ಲ. ಆದರೆ ಅದೇ ನೀರು ಒಂದು ವಿಶಿಷ್ಟ ಮಾರ್ಗದಿಂದ ಹರಿದರೆ ಅದರದೊಂದು ಪ್ರವಾಹವು ಆಗುವದು. ಪ್ರವಾಹಕ್ಕೆ ದಂಡೆಗಳ ಬಂಧನವಿದೆ. ನದಿಗೆ ಎರಡು ದಂಡೆಗಳ ಬಂಧನವಿದೆ. ತನಗೆ ಈ ಬಂಧನವು ಬೇಡ ಎಂದು ನದಿಯು ಅಂದರೆ ಅದರ ಪರಿಣಾಮವೇನಾಗುವದು ? ನೀರು ಎಲ್ಲ ಕಡೆಯಲ್ಲಿಯೂ ಹಬ್ಬಿ ಹರಿದು ಹೋಗುವದು, ಮತ್ತು ಕೆಲವು ದಿನಗಳ ನಂತರ ಒಣಗಿ ಹೋಗುವದು. ನದಿಗೆ ಬಂಧನವಿದ್ದದ್ದರಿಂದ ಅದಕ್ಕೆ ಗತಿ ಇದೆ; ಗಂಭೀರವಾಗಿ ಹರಿಯುತ್ತದೆ; ಬಂಧನವಿದೆಯೆಂದು ಅದು ಮುಂದುವರಿಯುತ್ತಿದೆ, ಮತ್ತು ತನ್ನ ಪತಿಯಾದ ಮಹಾಸಾಗರವನ್ನು ಅಪ್ಪಿಕೊಳ್ಳುತ್ತದೆ. ಬಂಧನವಿದೆಯೆಂದು ಸಾವಿರಾರು ಕೂರಿಗೆ ಭೂಮಿ ಬೆಳೆಯುತ್ತದೆ. ಬಂಧನದಿಂದ ನದಿಗೆ ಅಮರತೆಯು; ಸಂಯಮದಿಂದಲೇ ಸಾಗರದ ಭೆಟ್ಟಿಯು.

ಉಗಿ, ಸ್ವೈರ ವೃತ್ತಿಯಿಂದ ಅತ್ತಿಂದ ಇತ್ತ ಹರಿದಾಡುವ ಉಗಿಯಲ್ಲಿ ಶಕ್ತಿ ಇರುವದಿಲ್ಲ. ಆದರೆ ಅದೇ ಉಗಿಯನ್ನು ಒಂದು ನಲ್ಲಿಯಲ್ಲಿ ಬಂಧಿಸಿ ಬಿಟ್ಟರೆ ಪ್ರಚಂಡವಾದ ಯಂತ್ರಗಳು ನಡೆಯುತ್ತವೆ.

ಸಂಯಮವನ್ನು ಹೀಯಾಳಿಸಬೇಡಿರಿ. ಅದು ನಮ್ಮ ವಿಕಾಸಕ್ಕಾಗಿಯೇ ಅದೆ. ಸಮಾಜದ ಹಿತಕ್ಕಾಗಿ ಅದೆ. ಸಂಯಮವಿಲ್ಲದೆ ಕೆಲಸಗಳು ಸುಸೂತ್ರ ನಡೆಯುವದಿಲ್ಲ. ಕೆಲಸವು ನೆಟ್ಟಗಾಗದಿದ್ದರೆ ಸಮಾಜಕ್ಕೆ ಹಾನಿ ತಟ್ಟುವದು. ನಾವು ನಮಗಾಗಿಯೇ ಬಾಳುವದಿಲ್ಲ, ಸಮಾಜಕ್ಕಾಗಿ ಬಾಳುತ್ತೇವೆಂಬ ಅರಿವು ನಮಗಿರಬೇಕು. ನಮ್ಮ ದೇಹವೂ ಜೀವನವೂ ಸಮಾಜಕ್ಕಾಗಿ ಅವೆ. ಸೃಷ್ಟಿಯಿಂದಲೇ ನಾವು ಪೋಷಣೆ ಹೊಂದುತ್ತೇವೆ. ಸೂರ್ಯನು ಪ್ರಕಾಶವನ್ನೂ, ಮೋಡಗಳು ನೀರನ್ನೂ, ಮರಗಳು ಹಣ್ಣುಹಂಪಲಗಳನ್ನೂ, ನಮಗೆ ಕೊಡುತ್ತವೆ. ಒಕ್ಕಲಿಗರು ಕಾಳುಕಡಿಗಳನ್ನೂ, ನೇಕಾರರು ಅರಿವೆಗಳನ್ನೂ, ಶಿಕ್ಷಕರು ಅರಿವನ್ನೂ ಕೊಡುತ್ತಾರೆ. ಈ ರೀತಿ ನಾವು ಎಲ್ಲ ಜಡಚೇತನ ಸೃಷ್ಟಿಗೆ ಋಣಿಯಾಗಿದ್ದೇವೆ.

ಇದಕ್ಕಾಗಿಯೇ ನಾವು ನಮ್ಮ ಜೀವನ ಸರ್ವಸ್ವವನ್ನು ಸಮಾಜಕ್ಕೆ ಸೇವಾರೂಪದಿಂದ ಅರ್ಪಿಸಬೇಕಾಗುವುದು.

ಈ ಜೀವನಕ್ಕೆ ನಾವು ಹುಳ ಹತ್ತಗೊಡಬಾರದು. ದೇವರ ಪೂಜೆಗೆ ಉಪಯೋಗಿಸುವ ಹೂಗಳು ವಾಸನೆ ತಕ್ಕೊಳ್ಳದಂಥವು ಮತ್ತು ಬಾಡವೆ ಇದ್ದಂಥವು ಇರಬೇಕು. ರಸಮಯವಾದ, ಪರಿಮಲ ಯುಕ್ತವಾದ, ಮತ್ತು ತಾಜಾ ಹೂವುಗಳನ್ನು ಪೂಜೆಗೆ ಉಪಯೋಗಿಸ ಬೇಕು. ನಮ್ಮ ಜೀವನ ಕುಸುಮವನ್ನು ಸಮಾಜ ದೇವರಿಗೆ ಅರ್ಪಿಸ ಬೇಕಾಗಿದೆ. ಈ ನಮ್ಮ ಜೀವನವು ರಸವುಳ್ಳದ್ದು, ಪರಿಮಲವುಳ್ಳದ್ದು ಆಗಬೇಕಾದರೆ ಸಂಯಮವು ಅಗತ್ಯ.

ಹೀಗೆ ಇಂದ್ರಿಯಗಳಿಗೆ ಉತ್ತಮವಾದ, ಉಚ್ಚವಾದ ಆನಂದ ವನ್ನು ಸೇವಿಸುವ ಅಭ್ಯಾಸವಿರಬೇಕು. ತಿನ್ನುವವರಿಂದ, ಕುಡಿಯುವವ ರಿಂದ ಆಗುವ ಆನಂದವನ್ನು ಪಶುಪಕ್ಷಿಗಳು ಸಹ ಪಡೆಯುತ್ತವೆ ಆದರೆ ಮನುಷ್ಯನ ಜೀವನವು ಇದಕ್ಕಾಗಿಯೇ ಇಲ್ಲ. ಮನುಷ್ಯನಿಗೆ ತಿನ್ನುವದು ಅವಶ್ಯವಾದದ್ದು, ಆದರೆ ತಿನ್ನುವದು, ಕುಡಿಯುವದು, ಮಲಗುವದು ಇವೆಲ್ಲವೂ ಧ್ಯೇಯಪೂರ್ತಿಗಾಗಿ ಬೇಕು.

ನ್ಯಾಯಮೂರ್ತಿ ರಾನಡೆಯವರನ್ನು ಕುರಿತು ಒಂದು ಕಥೆ ಹೇಳು ತ್ತಾರೆ. ಕಲಮಿ ಮಾವಿನ ಹಣ್ಣು ಅವರಿಗೆ ವಿಶೇಷ ಸೇರುತ್ತಿದ್ದವಂತೆ. ಒಂದು ದಿನ ಅವರ ಮನೆಗೆ ಯಾರೋ ಒಂದು ಬುಟ್ಟಿ ಕಲಮಿ ಹಣ್ಣು ಗಳನ್ನು ಕಳುಹಿಸಿದ್ದರು. ರಾನಡೆಯವರ ಹೆಂಡತಿಯಾದ ರಮಾಬಾಯಿ ಯವರು ಒಂದು ತಾಟಿನ ತುಂಬ ಹೋಳುಗಳನ್ನು ಮಾಡಿ ಅವನ್ನು ಒಯ್ದು ಅವರೆದುರು ಇಟ್ಟರು. ನ್ಯಾಯಮೂರ್ತಿಗಳು ಅವುಗಳ ಲ್ಲಿಯ ಎರಡೇ ಹೋಳು ತಿಂದರು. ಕೆಲಹೊತ್ತಿನ ನಂತರ ರಮಾಬಾಯಿ ಯವರು ಬಂದು "ಏನಿದು ? ನಿಮಗೆ ಸೇರುತ್ತವೆಯೆಂದು ಇಷ್ಟು ಕಷ್ಟ ಪಟ್ಟು ನಿಮಗಾಗಿ ಹೋಳು ಮಾಡಿಟ್ಟೆ. ನೀವು ಇನ್ನೂ ತಿಂದೇ ಇಲ್ಲವಲ್ಲ ?" ಅಂದರು. ಆಗ ನ್ಯಾಯಮೂರ್ತಿಗಳು ಉತ್ತರಕೊಟ್ಟರು. "ಮಾವಿನಹಣ್ಣು ಸೇರುತ್ತದೆಂದು ಅವನ್ನೇ ತಿನ್ನುತ್ತ ಕೂಡ್ರಬೇಕೆ ನಾನು ? ಜೀವನದಲ್ಲಿ ಎಷ್ಟೋ ಬೇರೆ ಆನಂದಗಳಿವೆ." ಬರೀ ತಿನ್ನುವ ಪದಾರ್ಥಗಳನ್ನೇ ಕುರಿತು ಚರ್ಚೆ ಮಾಡುವವರಲ್ಲಿ ಎಷ್ಟು ವೇಳೆ ಕಳೆಯು

ಆಯಾ ವಸ್ತುವಿನಲ್ಲಿ ಇರುವದಿಲ್ಲ, ನಮ್ಮಲ್ಲಿ ಇರುತ್ತದೆಂಬವನ್ನು ನಾವು ಅರಿತುಕೊಳ್ಳಬೇಕು. ನಮ್ಮಲ್ಲಿದ್ದ ಮಧುರತೆಯನ್ನು ಆ ಆ ವಸ್ತುಗಳಲ್ಲಿ ಸುರುವಿ, ಆ ಆ ವಸ್ತುಗಳು ಮಧುರವೆಂದು ತಿಳಿದು ನಾವು ತಿನ್ನುತ್ತೇವೆ. ಮಾಧುರ್ಯವೆಲ್ಲವೂ ನಮ್ಮ ಅಂತರಂಗದಲ್ಲಿದೆ. ಅಂತರಂಗದಲ್ಲಿಯ ಸವಿಯನ್ನು ಸಾಧಿಸಿದವನಿಗೆ ಎಲ್ಲವೂ ಸವಿಯಾದದ್ದು.

ಜಗತ್ತಿನಲ್ಲಿಯ ಎಲ್ಲ ದೊಡ್ಡ ಜನರು ಸಂಯಮಿಗಳು. ಅವರ ತಿನಸು ಸಾದಾ ಇರುವದು. ಮಹಮ್ಮದ ಪೈಗಂಬರರು ರೊಟ್ಟಿಯನ್ನು ತಿನ್ನುತ್ತಿದ್ದರು, ಮತ್ತು ನೀರು ಕುಡಿಯುತ್ತಿದ್ದರು. ಲೆನಿನ್ನನ ಆಹಾರವು ತೀರ ಸಾದಾ ಇತ್ತು. ಮಹಾತ್ಮಾಜಿಯವರು ಯಾವಾಗಲೂ ಐದು ಪದಾರ್ಥಗಳಿಗಿಂತ ಹೆಚ್ಚು ಪದಾರ್ಥಗಳನ್ನು ಮುಟ್ಟುವದಿಲ್ಲ. ಆಹಾರ ವಿಹಾರಗಳು ಇಷ್ಟು ಅಳತೆಯಲ್ಲಿಲ್ಲದಿದ್ದರೆ, ಅವರಿಂದ ಇಷ್ಟು ಅಪರಂಪಾರ ಕೆಲಸವಾಗುತ್ತಿರಲಿಲ್ಲ. ಚಿತ್ತರಂಜನದಾಸರ ಹೆಂಡತಿಯಾದ ವಾಸಂತಿ ದೇವಿಯವರು, ಅವರ ಆಹಾರ ವಿಹಾರ ವಿಷಯದಲ್ಲಿ ಒಳ್ಳೇ ಆಸ್ಥೆಯುಳ್ಳವರಾಗಿದ್ದರು. "ಸಾಕು, ಇನ್ನು ಏಳಿರಿ." ಎಂದು ಅವರು ಹೇಳುತ್ತಿದ್ದರು.

ಆದರೆ ಈ ಆಹಾರ ವಿಹಾರದ ಸಂಯಮಕ್ಕಿಂತ ಇನ್ನೊಂದು ಸಂಯಮವು ಬಹಳ ಮಹತ್ವದ್ದದೆ. ಸಮಾಜದಲ್ಲಿ ಆನಂದವು ನೆಲೆಗೊಳ್ಳಬೇಕೆಂದು ಈ ಉದಾತ್ತವಾದ ಸಂಯಮವನ್ನು ಎಷ್ಟು ಹೊಗಳಿದರೂ ಕಡಿಮೆಯೇ. ಪ್ರಾಚೀನ ಕಾಲದಿಂದ ನಮ್ಮ ದೇಶದಲ್ಲಿ ಏಕತ್ರ ಕುಟುಂಬ ಪದ್ಧತಿಯು ನೆಲೆಗೊಂಡಿದೆ. ಸಂಯಮವಿಲ್ಲದೆ ಏಕತ್ರ ಕುಟುಂಬ ಪದ್ಧತಿಯು ಇರುವದು ಸಾಧ್ಯವಿಲ್ಲ. ಸಂಯಮವಿಲ್ಲದಿದ್ದರೆ ಒಬ್ಬರ ಮೋರೆ ಒಬ್ಬರ ಕಡೆಗೆ ಇರುತ್ತಿದ್ದಿಲ್ಲ. ಹತ್ತು ದಿಕ್ಕಿಗೆ ಹತ್ತು ಜನರ ಮೋರೆಗಳಾಗುತ್ತಿದ್ದವು. ಮನೆತನದಲ್ಲಿರುವ ಪ್ರತಿಯೊಬ್ಬನು ತನ್ನಂತೆ ಪ್ರತಿಯೊಬ್ಬರು ನಡೆಯಬೇಕು ಎಂದರೆ ಒಬ್ಬರ ಕೂಡ ಮತ್ತೊಬ್ಬರು ನಡೆದುಕೊಳ್ಳುವದು ಅಸಾಧ್ಯವು. ಮನೆಯಲ್ಲಿ ಗದ್ದಲ, ಗೊಂದಲ, ಕೂಗಾಟ ಉಂಟಾಗುವುದು.

ಇಂತಹ ಕುಟುಂಬ ಪದ್ಧತಿಯಲ್ಲಿ ಆ ಕುಟುಂಬದ ಹಿರಿಯನ ಮೇಲೆ ಹೆಚ್ಚಾಗಿ ಹೊಣೆ ಇರುತ್ತದೆ. ಅವನು ಎಲ್ಲರನ್ನು ಸಂಬಾಳಿಸಿಕೊಳ್ಳುವದಿರುತ್ತದೆ. ಅದಕ್ಕಾಗಿ ಅವನು ತ್ಯಾಗ ಮಾಡಬೇಕಾಗುವದು. ಅವನು ತನ್ನ ಮಡದಿ ಮಕ್ಕಳಿಗೆ ವಸ್ತ್ರಗಳನ್ನಾಗಲೀ ಒಡವೆಗಳನ್ನಾಗಲೀ ಕೊಡುವದಿಲ್ಲ. ಮೊದಲು ತನ್ನ ಅಕ್ಕತಂಗಿ, ತಮ್ಮಂದಿರು, ಅವರ ಹೆಂಡಂದಿರು ಮಕ್ಕಳು

ಇವರಿಗಾಗಿ ಎಲ್ಲವನ್ನು ಏರ್ಪಡಿಸುವನು. ಹೀಗೆ ಮಾಡಿದರೆ ಮಾತ್ರ ಅವನ ಮಾತಿಗೆ ಬೆಲೆ ಮತ್ತು ಅವನಿಗಾಗಿ ಆದರವು ಮತ್ತು ತನ್ನತನವು ಅನಿಸುವದು. ತ್ಯಾಗದಿಂದಲೇ ವೈಭವವು ದೊರೆಯುತ್ತದೆ.

ಸಂಧ್ಯಾವಂದನದ ಕಾಲಕ್ಕೆ ನಾವು ಒಂದು ಮಂತ್ರವನ್ನು ಅನ್ನುತ್ತೇವೆ. ಅದರಲ್ಲಿ "ಸರ್ವೇಷಾಮವಿರೋಧೇನ ಬ್ರಹ್ಮಕರ್ಮ ಸಮಾರಭೇ" ಎಂಬ ಚರಣವಿದೆ. "ಇನ್ನು ಯಾರ ವಿರೋಧವಿಲ್ಲ, ನನ್ನ ಬ್ರಹ್ಮಕರ್ಮವನ್ನು ಆರಂಭಿಸುವೆನು." ಎಲ್ಲರ ಅವಿರೋಧ; ಇವು ಬಹಳ ಮಹತ್ವವುಳ್ಳ ಶಬ್ದಗಳು ಇವೆ. ಎಲ್ಲಿಯ ಸಂಧ್ಯಾವಂದನೆ, ಬ್ರಹ್ಮಕರ್ಮ, ದೇವತಾರ್ಚನೆ, ಜಪ ತಪ? ಮೊದಲು ಸಮಾಜದಲ್ಲಿ ಗೆಳೆತನವನ್ನು ಹುಟ್ಟಿಸಿರಿ, ಸ್ನೇಹವನ್ನು ಬೆಳೆಸಿರಿ. ಮಾನವ ಜಾತಿಯಲ್ಲಿರುವ ವಿರೋಧವನ್ನು ದೂರಮಾಡಿರಿ. ಕಲಹಗಳನ್ನು ದೂರಮಾಡಿರಿ. ದ್ವೇಷ ಮತ್ಸರಗಳನ್ನು ಹೋಗಲಾಡಿಸಿರಿ. ಆ ಮೇಲೆ ನಿಮ್ಮ ಬ್ರಹ್ಮಕರ್ಮವನ್ನು ಆರಂಭಿಸಿರಿ.

ಆದರೆ ಈ ಅವಿರೋಧವು ಹುಟ್ಟುವ ಬಗೆ ಹೇಗೆ? ಪ್ರತಿಯೊಬ್ಬನು ತನ್ನ ಇಚ್ಛೆ ವಾಸನೆಗಳಿಗೆ ಸಂಯಮದ ಕಡಿವಾಣವನ್ನು ಹಾಕಿದರೆ ಇಂಥ ಅವಿರೋಧವನ್ನು ಹುಟ್ಟಿಸುವದು ಸುಲಭವಾಗುವದು. ಹಾರ್ಮೋನಿಯಮ್ಮಿದ ಪ್ರತಿಯೊಂದು ಸ್ವರವನ್ನು ಸಿಕ್ಕಸಿಕ್ಕ ಹಾಗೆ ಒದರಿಸಿದರೆ ಸಂಗೀತ ನಿರ್ಮಿತಿ ಹೇಗಾಗುವದು? ಆ ಸ್ವರಗಳು ಸಂಯಮಿತವಾದರೆ ಮಾತ್ರ ಸಂಗೀತವು ಹುಟ್ಟುವದು. ಅದರಂತೆ ಜೀವನದಲ್ಲಿ ಸಂಗೀತವು ನಿಜವಾಗಿ ಬೇಕೆಂದು ಅನಿಸಿದರೆ, ಮಾನವರೆಲ್ಲರೂ ತಮ್ಮ ಆಶೆ, ಆಕಾಂಕ್ಷೆಗಳನ್ನು ಅಳತೆಯಲ್ಲಿಡಬೇಕು. ಇಟಲಿಯು ಬೊಬ್ಬೆ ಕುಟ್ಟುತ್ತ ಎದ್ದರೆ, ಜರ್ಮನಿಯು ತನ್ನ ತಾರಸ್ವರವನ್ನು ಹೆಚ್ಚಿಸಿದರೆ, ಜಪಾನವು ಕೂಗಾಡ ಹತ್ತಿದರೆ ಜಗತ್ತಿನಲ್ಲಿ ಸಂಗೀತವು ಹೇಗೆ ಹುಟ್ಟಬೇಕು?

ಇಂದು ಭಾರತೀಯರ ಜೀವನದಲ್ಲಿ ನೋಡಿದತ್ತ ಸಂಗೀತದ ಅಭಾವವೇ ಇದೆ. ಪ್ರಾಂತಪ್ರಾಂತಗಳಲ್ಲಿ ಬಡಿದಾಟಗಳಿವೆ. ಮತಭೇದಗಳಿರುವದು ಸಹಜವಾದದ್ದು. ಆದರೆ ಈ ಮತಭೇದಗಳೊಳಗೆ ಮತ್ಸರದ ದೆವ್ವಗಳ ತಾಂಡವ ಪ್ರಾರಂಭವಾದರೆ ಅಂಜಿಕೆಯುಂಟಾಗುತ್ತದೆ. ಭಾರತ ದೇಶ ಏಕತ್ರ ಕುಟುಂಬ ಪದ್ಧತಿಯ ಒಂದು ಹಿರಿದಾದ, ವಿಶಾಲವಾದ ಪ್ರಯೋಗ ಶಾಲೆಯಾಗಿದೆ. ಭಾರತವು ಯಾವ ಕಾಲಕ್ಕಾದರೂ ಒಂದೇ ರಾಷ್ಟ್ರವು. ನಮ್ಮ ಪೂರ್ವಜರಂತೂ ಖಂಡಭಾರತದ ಕಲ್ಪನೆಯನ್ನು ಎಂದೂ ಮಾಡಿಲ್ಲ.

ಅವರು ನಮ್ಮೆದುರಿಗೆ ಯಾವಾಗಲೂ ಅಖಂಡ ಭಾರತದ ಚಿತ್ರವನ್ನೇ ಇಟ್ಟಿದ್ದಾರೆ. ಸ್ನಾನವನ್ನು ಮಾಡುವಾಗ ನಾವು ನಮ್ಮ ಪ್ರಾಂತದಲ್ಲಿಯ ನದಿಗಳನ್ನು ಸ್ಮರಿಸುವದಿಲ್ಲ. ಇಡೀ ಭಾರತದಲ್ಲಿಯ ಎಲ್ಲ ನದಿಗಳ ಹೆಸರುಗಳನ್ನು ಸ್ಮರಿಸುತ್ತೇವೆ. "ಹರ ಗಂಗೆ, ಯಮುನೆ, ನರ್ಮದೆ, ತಾಪಿ, ಕೃಷ್ಣೆ, ಗೋದಾವರಿ, ಕಾವೇರಿ." ಹೀಗೆ ಸ್ನಾನವನ್ನು ಮಾಡುವಾಗ ಅನ್ನುತ್ತೇವೆ. ಕಲಶ ಪೂಜೆಯನ್ನು ಮಾಡುವಾಗ ಆ ಕಲಶದಲ್ಲಿ ನಾವು ಅಖಂಡ ಹಿಂದುಸ್ತಾನವೇ ಇದ್ದಂತೆ ಕಲ್ಪಿಸುತ್ತೇವೆ. ಮತ್ತು "ಗಂಗೇಚ ಯಮುನೇಚೈವ ಗೋದಾವರೀ ಸರಸ್ವತಿ। ನರ್ಮದಾ ಸಿಂಧು ಕಾವೇರಿ ಜಲೇऽಸ್ಮಿನ್ ಸನ್ನಿಧಿಂ ಕುರು॥" ಹೀಗೆಂದು ಪೂಜೆ ಮಾಡುತ್ತೇವೆ. ಅದರಂತೆಯೆ ಪ್ರಾತಃಸ್ಮರಣೆಯಲ್ಲಿ "ಅಯೋಧ್ಯಾ, ಮಥುರಾ, ಮಾಯಾ, ಕಾಂಚಿ, ಅವಂತಿಕಾ। ಪುರಿ, ದ್ವಾರಾವತೀ ಚೈವ" ಎಂದು ಭಾರತದ ನಾಲ್ಕು ದಿಕ್ಕುಗಳಲ್ಲಿರುವ ಪಟ್ಟಣಗಳ ನೆನವು ಮಾಡಿಕೊಳ್ಳುತ್ತೇವೆ. "ದುರ್ಲಭಂ ಭಾರತೆ ಜನ್ಮ" ಎಂದು ಋಷಿಗಳು ಒಳ್ಳೇ ಗೌರವದಿಂದ ಅಂದಿದ್ದಾರೆ. ನಮ್ಮ ಪೂರ್ವಜರ ದೃಷ್ಟಿಯ ಎದುರು ಅಂಗ, ವಂಗ, ಕಲಿಂಗ, ಗುರ್ಜರ, ಕರ್ನಾಟಕ, ಮಹಾರಾಷ್ಟ್ರ ಹೀಗೆ ತುಂಡುತುಂಡುಗಳು ಇರುತ್ತಿದ್ದಿಲ್ಲ. ಅವರ ಕಣ್ಣೆದುರು ಇಡೀ ಭಾರತವೇ ಇರುತ್ತಿತ್ತು.

ದೊಡ್ಡ ಕುಟುಂಬದಲ್ಲಿ ಅನೇಕ ಘಟಕಗಳಿದ್ದಂತೆ, ಈ ವಿಶಾಲವಾದ ದೇಶದಲ್ಲಿ ಅನೇಕ ಪ್ರಾಂತಗಳಿವೆ. ಈ ಅಣ್ಣತಮ್ಮಂದಿರು ಪರಸ್ಪರರೊಡನೆ ಸಂಯಮದಿಂದ ನಡೆದುಕೊಳ್ಳಬೇಕು. ಒಂದೇ ಮನೆತನವಾಗಿ ಬಾಳಬೇಕಾದರೆ, ನಮ್ಮ ನಮ್ಮ ಓಲಗಗಳನ್ನೇ ಬಾರಿಸತಕ್ಕದ್ದಲ್ಲ. ನಮ್ಮ ಸ್ವರವನ್ನೇ ಹೆಚ್ಚಿಸತಕ್ಕದ್ದಲ್ಲ. ಯುರೋಪಖಂಡದಲ್ಲಿ ಸಣ್ಣ ಸಣ್ಣ ರಾಷ್ಟ್ರಗಳು ಅಲ್ಲಲ್ಲಿ ಹಬ್ಬಿವೆ. ಮತ್ತು ಅವು ಪರಸ್ಪರರನ್ನು ಹರಿದು ತಿನ್ನುತ್ತವೆ. ಇಂಥ ಪರಿಸ್ಥಿತಿಯು ನಮ್ಮಲ್ಲಿ ಬರಬಾರದೆಂದು ಅನಿಸಿದರೆ ನಾವು ಜಾಗರೂಕರಾಗಬೇಕು. ಸಂಯಮಿಗಳಾಗಬೇಕು. ಮತ್ತು ಏಕತ್ರ ಮನೆತನದಲ್ಲಿ ಮೊದಲು ತನ್ನನ್ನು ಬಿಟ್ಟು ಇತರರ ಸುಖವನ್ನು ನೋಡ ಬೇಕಾಗುವಂತೆ, ನಾವು ನಮ್ಮ ಭಾರತದ ಏಕತ್ರ ಕುಟುಂಬದ ಪ್ರಪಂಚದಲ್ಲಿಯೂ ಕೂಡ "ಮೊದಲು ನನಗೆ ಬೇಡ, ನೀನು ತಗೋ" ಎಂಬ ಭಾವನೆಯನ್ನು ಬೆಳೆಯಿಸಬೇಕು. ಭಾರತೀಯ ಪ್ರಪಂಚವನ್ನು ಬೆಳೆಯಿಸಬೇಕಾಗಿದೆಯೆಂಬ ಭಾವನೆಯು ಯಾವಾಗಲೂ ನಮ್ಮ ಹೃದಯದಲ್ಲಿ ಇರಬೇಕು.

"ವಿದ್ಯಾರಣ್ಯ, ಬಸವಾದಿಗಳನ್ನು ಹೆತ್ತ ಕನ್ನಡನಾಡು ಧನ್ಯ"ವೆಂದು ಮಹಾರಾಷ್ಟ್ರವು ಅನ್ನಲಿ. "ಶಿವಾಜಿ, ಲೋಕಮಾನ್ಯರನ್ನು ಹಡೆದ ಮಹಾರಾಷ್ಟ್ರವು ಎಷ್ಟು ಪುಣ್ಯಶಾಲಿಯೆಂದು ಗುಜರಾಥವು ಘೋಷಿಸಲಿ." "ಧನ್ಯ ಗುಜರಾತ, ಗಾಂಧೀಜಿಯವರ ಹುಟ್ಟುನಾಡು" ಎಂದು ಬಂಗಾಲವು ಗುಜರಾತಕ್ಕೆ ಧನ್ಯವಾದಗಳನ್ನು ಅರ್ಪಿಸಲಿ. "ವಂಗಾ! ನೀನು ಕೃತಾರ್ಥನು, ಧನ್ಯನು. ಜಗದೀಶಚಂದ್ರ, ಪ್ರಫುಲ್ಲಚಂದ್ರ, ರವೀಂದ್ರನಾಥ ಇವರಿಗೆ ಜನ್ಮವಿತ್ತ, ದೇಶಬಂಧು, ಸುಭಾಸರನ್ನು ಹಡೆದ, ಶ್ರೀರಾಮಕೃಷ್ಣ, ವಿವೇಕಾನಂದರನ್ನು ಪ್ರಸವಿಸಿದ, ಇಡೀ ಭಾರತಕ್ಕಾಗಿ ಬಲಿದಾನ ಮಾಡಿದ ಸಾವಿರಾರು ಅಜ್ಞಾತ ಪುತ್ರರನ್ನು ಹೆತ್ತ ವಂಗಾ ನಿನಗೆ ಶತಶಃ ಧನ್ಯವಾದಗಳು" ಎಂದು ಪಂಜಾಬವು ವಂಗವನ್ನು ಹೊಗಳಲಿ. "ದಯಾನಂದರ ಕರ್ಮಭೂಮಿ, ಸ್ವಾಮಿ ರಾಮತೀರ್ಥರ ಹುಟ್ಟುಭೂಮಿ, ಶ್ರದ್ಧಾನಂದ, ಲಾಲಾಜಿ, ಭಗತಸಿಂಗರ ತಾಯಿ ! ಎಷ್ಟು ದೊಡ್ಡವಳು ನೀನು." ಎಂದು ಎಲ್ಲ ಪ್ರಾಂತಗಳು ಪಂಜಾಬಕ್ಕೆ ಧನ್ಯವಾದಗಳನ್ನು ಅರ್ಪಿಸಲಿ. ಕೇವಲ ಇಪ್ಪತ್ತೈದು ಲಕ್ಷ ಜನಸಂಖ್ಯೆಯೊಳಗಿಂದ ಹದಿನಾರು ಸಾವಿರ ಸತ್ಯಾಗ್ರಹಿ ವೀರರನ್ನು ಅರ್ಪಿಸಿದ್ದಕ್ಕೆ, ದೇವರ ಸೈನಿಕರನ್ನು ಕೊಟ್ಟದ್ದಕ್ಕೆ ಸರಹದ್ದ ಪ್ರಾಂತಕ್ಕೆ "ನೀನು ಭಾರತದ ಶೋಭೆ ಮತ್ತು ಆಶೆ," ಎಂದು ಇಡೀ ಭಾರತವು ಗೌರವಿಸಲಿ. ಈ ರೀತಿ ಎಲ್ಲ ನಾಡುಗಳು ಬೇರೆ ಬೇರೆ ನಾಡುಗಳನ್ನು ಅವರಲ್ಲಿದ್ದ ಉತ್ತಮವಾದ ಗುಣಕ್ಕಾಗಿ ಹೊಗಳಲಿ. ಯಾರೂ ಯಾರನ್ನೂ ತೆಗಳುವದು ಬೇಡ. ಎಲ್ಲ ನಾಡುಗಳು ಪರಸ್ಪರರಿಂದ ಸ್ಫೂರ್ತಿಯನ್ನು ಪ್ರಕಾಶವನ್ನು ಪಡೆಯಲು ಹಾತೊರೆಯುತ್ತವೆ ಎಂಬ ಭವ್ಯವಾದ ದಿವ್ಯವಾದ ದೃಶ್ಯವನ್ನು ಭಾರತದಲ್ಲಿ ನಾವು ಕಾಣಬೇಕು. ಇದಕ್ಕೆ ಉದಾರ ಮನಸ್ಸು ಬೇಕು. ಅಹಂಕಾರವು ತಗ್ಗಬೇಕು.

ಎರಡನೆಯವರ ಸುಖ-ದುಃಖಗಳ ವಿಚಾರವನ್ನು ಮಾಡಹತ್ತಿದರೆ, ಸಂಯಮವು ಸುಲಭವಾಗುತ್ತದೆ. ನಾನು ಈ ರೀತಿ ಮಾತನಾಡಿದರೆ, ನಡೆದುಕೊಂಡರೆ ಎರಡನೆಯವರಿಗೆ ಏನನಿಸಬಹುದು ? ನಾನು ಈ ರೀತಿ ಬರೆದರೆ ಎರಡನೆಯವರ ಭಾವನೆಗಳು ನೋಯಬಹುದೋ ? ಬೀದಿಗಳಲ್ಲಿ ಮಾತನಾಡುತ್ತ ನಿಂತರೆ ಎರಡನೆಯವರಿಗೆ ತೊಂದರೆಯಾಗಬಹುದೊ ? ಬೀದಿಗಳಲ್ಲಿ ಕೂಗಾಡುತ್ತ ಹಾಡುತ್ತ ಅಡ್ಡಾಡಿದರೆ ಎರಡನೆಯವರ ನಿದ್ದೆ ಕೆಡುವದೊ ? ಸಭೆಯಲ್ಲಿ ಕೂತಾಗ ತಮ್ಮ ತಮ್ಮೊಳಗೆ ಮಾತನಾಡಿದರೆ

ಅದರಿಂದ ಎಲ್ಲರಿಗೂ ತೊಂದರೆಯಾಗುವದೋ ? ಹೀಗೆ ನೂರಾರು ಸಣ್ಣ ಸಣ್ಣ ಮಾತುಗಳ ವಿಚಾರವನ್ನು ನಾವು ಮನಸ್ಸಿನಲ್ಲಿ ಯೋಚಿಸಿದರೆ ಸಂಯಮವು ಸುಲಭವಾಗುವದು. ದುರ್ದೈವದಿಂದ ನಮ್ಮ ದೇಶದಲ್ಲಿ ಈ ತರದ ಮನೋವೃತ್ತಿಯೆ ಇಲ್ಲ. ಎರಡನೆಯವರನ್ನು ಕುರಿತು ಸಹಾನುಭೂತಿಯಿಲ್ಲದೆ ಸಂಯಮವು ಸಾಧ್ಯವಿಲ್ಲ. ಸಣ್ಣ ಮಾತಿನಲ್ಲಿ ದೊಡ್ಡ ಅರ್ಥವಿರುತ್ತದೆ. Trifles make a perfection but perfection is no trifle. ಸಣ್ಣ ಮಾತುಗಳಿಂದ ಪೂರ್ಣತೆಯು ಸಾಧ್ಯವಾಗುತ್ತದೆ, ಆದರೆ ಪೂರ್ಣತ್ವವು ಸಣ್ಣಮಾತಲ್ಲ, ಎಂದು ಪ್ರಸಿದ್ಧ ಚಿತ್ರಕಾರನಾದ ಮಾಯಕೇಲ ಎಂಜಿಲೊ ಹೇಳಿದ್ದಾನೆ.

ನಮ್ಮ ಕೃತಿಗಳಿಂದ ಎರಡನೆಯವರಿಗೆ ನೋವಾಗುವ ಸಂಭವವಿದೆ, ಎಂಬ ಮಾತಿನ ಅರಿವೇ ನಮಗಿಲ್ಲ. ನಾನೊಬ್ಬನೇ ಜೀವಂತನಿದ್ದೇನೆ, ಸುತ್ತುಮುತ್ತಲು ಯಾರೂ ಇಲ್ಲ ಎಂಬ ಭಾವನೆಯಿಂದ ನಾವು ನಡೆದುಕೊಳ್ಳುತ್ತೇವೆ. ಆದರೆ ಪಾಶ್ಚಿಮಾತ್ಯ ದೇಶದಲ್ಲಿ ಹೀಗೆ ಯಾರೂ ನಡೆಯುವದಿಲ್ಲ. ಅವರ ಸಾರ್ವಜನಿಕ ಜೀವನದಲ್ಲಿ ಸಂಯಮವು ತುಂಬಾ ಕಂಡು ಬರುತ್ತದೆ. ಬೀದಿಗಳಲ್ಲಿ ಗೊಂದಲವಿರುವದಿಲ್ಲ. ಎರಡನೆಯವರಿಗೆ ತೊಂದರೆಯಾಗುವಂತೆ ಯಾರೂ ವರ್ತಿಸುವದಿಲ್ಲ; ಎಲ್ಲಿಡೆಯಲ್ಲಿಯೂ ಅಚ್ಚುಕಟ್ಟುತನವೇ ಗೋಚರವಾಗುವದು. ಸಂಯಮವಿಲ್ಲದೆ ಅಚ್ಚುಕಟ್ಟುತನವು ಸಾಧ್ಯವಿಲ್ಲ. ಸಂಯಮವಿಲ್ಲದಲ್ಲಿ ಗೊಂದಲವೇ ಗೊಂದಲ; ನಮ್ಮಲ್ಲಿಯ ಸಭೆಗಳನ್ನು ನೋಡಿರಿ; ಮೆರವಣಿಗೆಗಳನ್ನು ನಿರೀಕ್ಷಿಸಿರಿ; ಸ್ಟೇಶನದಲ್ಲಿ ಟಿಕೀಟು ಪಡೆಯುವದನ್ನು ಕಾಣಿರಿ. ಸಂಯಮವಿಲ್ಲದ ಜೀವನಗಳ ದೃಶ್ಯವನ್ನೇ ಕಾಣುವಿರಿ. ಯಾರಾದರೂ ಸರಿಯಾಗಿ ನಡೆದುಕೊಳ್ಳಿರಿ ಎಂದು ಹೇಳಿದರೆ ಅವರು ಅಪಹಾಸ್ಯಕ್ಕೆ ಗುರಿಯಾಗುತ್ತಾರೆ. "ಸ್ವಲ್ಪ ಮಾತನಾಡ ಬೇಡಿರಿ, ಸಭೆ ನಡೆದದೆ" ಎಂದು ಯಾರಾದರೂ ಸಭೆಯಲ್ಲಿ ಹೇಳಹೋದರೆ ಅವರು ಹೇಳಹೆಸರಿಲ್ಲದೆ ಹೋಗುವರು.

ಒಮ್ಮೊಮ್ಮೆ ಒಂದೇ ಶಬ್ದ, ಒಂದೇ ವಾಕ್ಯ, ತಪ್ಪಿ ನಮ್ಮ ಬಾಯಿಂದ ಹೊರಬೀಳುತ್ತದೆ. ಅದರಿಂದ ಒಮ್ಮೆ ಕೆಟ್ಟ ಮನಸು ಪುನಃ ಕೂಡದಂತೆ ಆಗುತ್ತದೆ. ಅಜಾಗರೂಕತೆಯಿಂದ ಯಾವದಾದರೊಂದು ಮತಪ್ರದರ್ಶನವನ್ನು ಮಾಡುತ್ತೇವೆ. ಮತ್ತು ಎಂದಿಗೂ ಕೊನೆಗಾಣದಂಥ ದ್ವೇಷಭಾವವು ಹುಟ್ಟುತ್ತದೆ. ಒಮ್ಮೆ ಕೆಟ್ಟ ಮನಸ್ಸು, ನೆಟ್ಟಗಾಗುವಂತೆ ಇಲ್ಲ. ಮನಸು

ಮುತ್ತು ಇದ್ದ ಹಾಗೆ. ಒಮ್ಮೆ ಒಡೆದರೆ ಪುನಃ ಕೂಡಿಸುವದು ಬ್ರಹ್ಮದೇವರಿಗೂ ಸಹ ಸಾಧ್ಯವಿಲ್ಲದ ಮಾತು. ಜಗತ್ತಿನಲ್ಲಿ ಕೂಡಿಸುವದು ಕಠಿಣ; ಕೆಡಿಸುವದು ಸುಲಭ; ಗಿಡ ಬೆಳಿಸುವದು ಕಷ್ಟ, ಕಡಿಯುವದು ಒಂದು ಕ್ಷಣ; ಮನೆ ಕಟ್ಟುವದು ಕಠಿಣ; ಕೆಡುವುವದು ಸುಲಭ. ನಮಗೆ ಜೀವನಗಳನ್ನು ಕೂಡಿಸಬೇಕಾಗಿದೆ. ಅದು ಸಂಯಮದಿಂದಲೇ ಸಾಧ್ಯವಾದದ್ದು.

ಕೋಣಕ್ಕೆ ನಮ್ಮ ದೃಷ್ಟಿಯಿಂದ ಬೆಲೆ ಇಲ್ಲ. ಅದು ಸಂಯಮವುಳ್ಳದ್ದಿಲ್ಲ. ಸುಮ್ಮಸುಮ್ಮನೆ ಅದು ಮಂದಿಯ ಮೈಮೇಲೆ ಹೋಗುವದು; ಹಾಯುವದು. ಯಾವ ಪಶುಗಳು ಮೂಗುದಾಣ, ಕಡಿವಾಣವನ್ನು ಹಾಕಿಕೊಳ್ಳುತ್ತವೆಯೋ ಮತ್ತು ಕೆಲಸವನ್ನು ಸಿಧಾನವಾಗಿ ಸಾಗಿಸುತ್ತವೆಯೋ, ಆ ಪಶುಗಳಿಗೆ ನಾವು ಹೆಚ್ಚು ಬೆಲೆಯನ್ನು ಕೊಡುತ್ತೇವೆ. ಕುದುರೆಯು ಕಡಿವಾಣವನ್ನು ಹಾಕಿಕೊಳ್ಳದಿದ್ದರೆ ಅದಕ್ಕೆ ಯಾರು ಬೆಲೆಯನ್ನು ಕೊಡುವರು? ಪಶುಗಳಿಗೆ ಕಡಿವಾಣ, ಮೂಗುದಾರವನ್ನು ಹಾಕಿ ಅವನ್ನು ಅಳತೆಯಲ್ಲಿಡುವದು ಸಾಧ್ಯವದೆ. ಆದರೆ ಮನುಷ್ಯನಿಗೆ ಹೀಗೆ ಕಡಿವಾಣವನ್ನು ಹಾಕುವದು ಸಾಧ್ಯವಿಲ್ಲ. ಬುದ್ಧಿಯೇ ಮನುಷ್ಯನ ಮೂಗುದಾರವು. ಮನುಷ್ಯನು ವಿಚಾರದಂತೆ ನಡೆಯುತ್ತಾನೆ. ವಿಚಾರದಂತೆ ನಡೆಯದವನು ಮನುಷ್ಯನೇ ಅಲ್ಲ. ಸಂಯಮದಿಂದ ಇರುವದೇ ಮನುಷ್ಯತ್ವದ ಲಕ್ಷಣವು. ಆದರೆ ಈ ಲಕ್ಷಣವನ್ನು ನಾವು ಎಷ್ಟು ಜನರಲ್ಲಿ ಕಾಣುತ್ತೇವೆ? ಇಂದು ಜಗತ್ತಿನಲ್ಲಿ ಮನುಷ್ಯರು ತೋಳ, ಹುಲಿಗಳಂತೆ ನಡೆಯಹತ್ತಿದ್ದಾರೆ. ಒಬ್ಬರನ್ನೊಬ್ಬರು ಕಚ್ಚಾಡಹತ್ತಿದ್ದಾರೆ. ತಾವು ಶ್ರೇಷ್ಠರೆಂದು ಭಾವಿಸಿ ಉಳಿದವರನ್ನು ಕನಿಷ್ಠರೆಂದು ಹೀಯಾಳಿಸುತ್ತಾರೆ. ಸಂಯಮವು ಅಭಾವದಿಂದಲೇ ಎಲ್ಲೆಡೆಯಲ್ಲಿಯೂ ಎದ್ದು ಕಾಣುತ್ತದೆ.

ಎರಡು ಕಲ್ಲು ಕೂಡಿಸಬೇಕಾದರೆ ಸಿಮೆಂಟು ಬೇಕು. ಸಂಯಮದ ಸಿಮೆಂಟನಿಂದಲೇ ಜೀವನದ ಕಲ್ಲು ಕೂಡುವವು. ನಾಡು ನಾಡಿಗೆ, ರಾಷ್ಟ್ರವು ರಾಷ್ಟ್ರಕ್ಕೆ, ಕೂಡಿಕೊಳ್ಳುವವು. ಅಹಂಕಾರವಿದ್ದರೆ ಮಾತ್ರ ಇದು ಎಂದಿಗೂ ಸಾಧ್ಯವಿಲ್ಲ. ಕೆಲವೊಂದು ನಾಡುಗಳಿಗೆ ಉಜ್ವಲವಾದ ಇತಿಹಾಸವಿರಬಹುದು. ಆದರೆ ಅದರಿಂದಲೇ ಆ ನಾಡು ಉಳಿದ ನಾಡುಗಳನ್ನು ಹೀಯಾಳಿಸಿದರೆ ಆ ಉಜ್ವಲ ಇತಿಹಾಸದ ಪ್ರಯೋಜನವೇನು? ಇದಕ್ಕಿಂತ ಇಂಥ ನಾಡಿಗೆ ಉಜ್ವಲ ಇತಿಹಾಸವಿಲ್ಲದಿದ್ದರೆ ನೆಟ್ಟಗಾಗುತ್ತಿತ್ತೆಂದು ಅನಿಸುತ್ತದೆ. ಯಾವ ಇತಿಹಾಸವು ನಮ್ಮನ್ನು ಅಹಂಕಾರಿಯಾಗಿ ಮಾಡು

ತ್ತದೆಯೋ, ಅಂಥ ಇತಿಹಾಸ ಇಲ್ಲದಿದ್ದರೆ ನೆಟ್ಟಗೆ, ಇತಿಹಾಸವು ನಮ್ಮನ್ನು ಸ್ಫೂರ್ತಿಗೊಳಿಸಬೇಕು. ಆದರೆ ಉಳಿದ ನಾಡುಗಳನ್ನು ಹೀಯಾಳಿಸಲಿಕ್ಕಲ್ಲ. ಮಹಾರಾಷ್ಟ್ರವು ಇವನ್ನು ನೆನಪಿನಲ್ಲಿಡಲಿ.

ಸಂಯಮವೆಂದರೆ ಶರಣು ಹೋಗುವದಲ್ಲ. ದುರ್ಬಲತೆಯೂ ಅಲ್ಲ. ಸಂಯಮವೆಂದರೆ ಸಾಮರ್ಥ್ಯವು. ಅದು ಜೀವನದ ಅರಳುವಿಕೆಗಾಗಿ ಅದೆ. ಕರ್ಮವು ಉತ್ತಮವಾಗುವದಕ್ಕಾಗಿ ಅದೆ. ಅಖಂಡ ಸೇವೆಯನ್ನು ಸಲ್ಲಿಸಲಿಕ್ಕಾಗಿ ಅದೆ. ಸಮಾಜದಲ್ಲಿ ಸಂಗೀತದ, ಆನಂದದ ಹೆಚ್ಚಳಕ್ಕಾಗಿ ಅದೆ. ಸಂಯಮವು ಸಾರ್ವಭೌಮ ವಸ್ತುವು.

---

# ೧೦. ಕರ್ಮಫಲತ್ಯಾಗ

ಶ್ರೀ ಗೀತೆಯು ನಮಗೆ ಮುಖ್ಯವಾಗಿ ಕರ್ಮಫಲತ್ಯಾಗವನ್ನು ಕಲಿಸಿದೆ. ಜ್ಞಾನ ವಿಜ್ಞಾನಪೂರ್ವಕವಾಗಿ ನಿಷ್ಠೆಯಿಂದ ಮತ್ತು ಪ್ರೀತಿಯಿಂದ ನಮ್ಮ ವರ್ಣಕ್ಕನುಗುಣವಾಗಿ ಸೇವಾಕರ್ಮವನ್ನು ಮಾಡುವದು. ಆ ಕರ್ಮವು ಉತ್ಕೃಷ್ಟ ರೀತಿಯಿಂದ ಮಾಡಲು ಸಾಧ್ಯವಾಗಬೇಕೆಂದು ಜೀವನವನ್ನು ಸಂಯಮದಿಂದ ಸಾಗಿಸುವದು. ಆಹಾರ ವಿಹಾರಗಳನ್ನು ನಿಯಮಿತವಾಗಿ ತಕ್ಕೊಳ್ಳುವದು. ಹೀಗೆ ನಮ್ಮ ಜೀವನವನ್ನು ಸಾರ್ಥಕ ಮಾಡುವದು. ಕರ್ಮದಿಂದ ಸೇವೆಯನ್ನು ಸಲ್ಲಿಸುತ್ತ, ಕ್ರಮೇಣ ಅದನ್ನೆ ತಲ್ಲೀನರಾಗಿ ಮಾಡುತ್ತ, ಒಂದು ದಿನ ಸೃಷ್ಟಿಯೊಡನೆ ಗೆಳೆತನವನ್ನು ಬೆಳೆಯಿಸಿ, ಮನಸ್ಸನ್ನು ಭೇದಗಳಾಚೆಗೆ ಒಯ್ದು, ಅದನ್ನು ಕೇವಲ ಚಿನ್ಮಯ ಸಾಮ್ರಾಜ್ಯದಲ್ಲಿಯೇ ತೇಲಾಡಿಸುವದು. ಇದನ್ನು ಶ್ರೀ ಗೀತೆ ಕಲಿಸಿದೆ.

ಇದೆಲ್ಲ ಸಾಧಿಸಬೇಕಾದರೆ ಇನ್ನೊಂದು ವಸ್ತುವು ಅತ್ಯವಶ್ಯವಾದದ್ದು. ಇನ್ನೊಂದು ದೃಷ್ಟಿಯೂ ಬೇಕಾದದ್ದು. ಆ ದೃಷ್ಟಿಯೆಂದರೆ ಫಲದ ಆಶೆಯನ್ನು ಬಿಟ್ಟುಕೊಡುವದು. ಕರ್ಮದಲ್ಲಿಯೇ ಇಷ್ಟು ತಲ್ಲೀನರಾಗಬೇಕಲ್ಲ, ಆದರಿಂದ ಫಲದ ವಿಚಾರ ಮಾಡಲು ಸಹ ಅವಸರ ದೊರೆಯಬಾರದು. ಜೀವನವು ಕರ್ಮದಿಂದ ತುಂಬಿತುಳುಕಬೇಕು. "ದೇವರನ್ನೆ ತಿನ್ನಬೇಕು, ದೇವರನ್ನೆ ಕುಡಿಯಬೇಕು." ಎಂದು ಸಂತ ಜನಾಬಾ

ಯಿಯು ಹೇಳುತ್ತಿದ್ದಳು. ದೇವರೆಂದರೆ ನಮ್ಮ ಧ್ಯೇಯವು, ನಮ್ಮ ಸೇವಾ ಕರ್ಮವು. ಅದನ್ನೆ ಉಣ್ಣುವದು, ಕುಡಿಯುವದು. ಯಾವಾಗಲೂ ಕರ್ಮದ ವಿಚಾರವೇ ಇರಬೇಕೆಂಬುದೇ ಇದರ ಅರ್ಥ. ನಿದ್ರೆ ಮಾಡುವಾಗ ಸಹ ಸೇವಾಕರ್ಮದ ಅರಿವು ಇರಬೇಕು. "ನನಗೆ ಹರಿಜನ ಸೇವೆಯ ಸ್ವಪ್ನಗಳೇ ಬೀಳುತ್ತವೆ. ದೇವಮಂದಿರಗಳು ತೆರೆಯಲ್ಪಡುತ್ತವೆಂಬುದನ್ನೇ ನಾನು ಕಾಣುತ್ತೇನೆ"ಂದು ಮಹಾತ್ಮಾಜಿಯವರು ಒಂದೆಡೆಯಲ್ಲಿ ಹೇಳಿದ್ದಾರೆ. ರಾಮ ತೀರ್ಥರು ನಿದ್ದೆಯಲ್ಲಿ ಗಣಿತದ ಸಮಸ್ಯೆಗಳನ್ನು ಬಿಡಿಸುತ್ತಿದ್ದರು. ಅರ್ಜುನನ ವಿಷಯವಾಗಿ ಇಂತಹದೇ ಒಂದು ಕಥೆ ಹೇಳುತ್ತಾರೆ. ಅರ್ಜುನನನ್ನು ಕೃಷ್ಣನು ಹೆಚ್ಚಾಗಿ ಪ್ರೀತಿಸುತ್ತಿದ್ದನೆಂದು ಉದ್ಧವನಿಗೆ ಅಸೂಯೆ. ಇದನ್ನರಿತು ಕೃಷ್ಣನು ಒಂದು ದಿವಸ ಅಂದನು— "ಉದ್ಧವಾ ! ಅರ್ಜುನನು ಈಗ ಏನು ಮಾಡುತ್ತಾನೋ ನೋಡಿ ಬಾ." ಉದ್ಧವನು ಅರ್ಜುನನ ಮಂದಿರಕ್ಕೆ ಹೋದನು. ಅರ್ಜುನನು ತನ್ನ ಕೋಣೆಯಲ್ಲಿ ಗಾಢವಾಗಿ ನಿದ್ರೆ ಮಾಡುತ್ತಿದ್ದನು. ಆದರೆ ಆ ಕೋಣೆಯಲ್ಲಿ "ಕೃಷ್ಣ ಕೃಷ್ಣ''ಎಂಬ ಮಂಜುಳ ಧ್ವನಿಯು ಕೇಳಬರುತ್ತಿತ್ತು. "ಎಲ್ಲಿಂದ ಬರುತ್ತದೆ ಈ ಧ್ವನಿಯು ?'' ಎಂದು ಉದ್ಧವನು ಅತ್ತಿತ್ತ .ನೋಡಿದನು. ಮತ್ತು ಅವನು ಅರ್ಜುನನ ಹತ್ತಿರ ಹೋದನು. ಅವನಿಗೆ ಅಲ್ಲಿ ಏನು ಕಂಡಿತು ? ಅರ್ಜುನನ ರೋಮರೋಮದೊಳಗಿಂದ "ಕೃಷ್ಣ ಕೃಷ್ಣ" ಎಂಬ ಮಂಜುಳ ಧ್ವನಿಯ ನಿನಾದವು ಹೊರಬೀಳುತ್ತಿತ್ತು. ಅರ್ಜುನನ ಜೀವನದಲ್ಲಿ ಕೃಷ್ಣನ ಮೇಲೆ ಇರುವ ಅವನ ಪ್ರೇಮವು ತುಂಬಿತುಳುಕುತ್ತಿತ್ತು. "ದೇವರೇ ! ನಿನ್ನ ನೆನವೇ ನನ್ನ ಉಸಿರಾಗಲಿ'' ಎಂದು ಗುರುನಾನಕನು ಬೇಡಿಕೊಂಡನು. ದೇವರ ನೆನಪು ಆಗದಿದ್ದರೆ ಜೀವನವು ಅಸಹ್ಯವೆನಿಸುವದು. ಅವನ ಸ್ಮರಣೆಯೇ ಜೀವನ; ವಿಸ್ಮರಣೆಯೇ ಮರಣ. ಸ್ಮರಣವು ಸುಖವು, ವಿಸ್ಮರಣವು ಪರಮ ದುಃಖವು. ದೇವರ ಅರಿವೆಂದರೆ ಧ್ಯೇಯದ ಅರಿವು. ಸ್ವಕರ್ಮದ, ಸ್ವಧರ್ಮದ ಅರಿವು. ಯಾತಕ್ಕಾಗಿ ನಾವು ಉಳಿಯಬೇಕು, ಇಲ್ಲದಿದ್ದರೆ ಅಳಿಯಬೇಕು ಎಂದೆನಿಸುತ್ತದೆಯೋ ಆ "ಇದು'' ನಮ್ಮ ದೇವರು. ಅದರ ಚಿಂತನೆಯಲ್ಲಿಯೇ ರಮಮಾಣವಾಗುವದೆಂದರೆ ಪರಮಸಿದ್ಧಿಯು.

ಹೀಗೆ ಮನುಷ್ಯನು ಯಾವಾಗ ಸ್ವಕರ್ಮದಲ್ಲಿಯೇ ತಲ್ಲೀನನಾಗುವನು ? ತಾನು ಮಾಡುವ ಕರ್ಮದ ಫಲವನ್ನು ಮರೆತಾಗ ಮಾತ್ರ ಇದು ಸಾಧ್ಯವಾಗುವದು. ಓರ್ವ ಬಾಲಕನು ಮಾವಿನ ಗೊರಟವನ್ನು ಭೂಮಿ

ಯಲ್ಲಿ ಹುಗಿಯುವನು. ಮರುದಿನ ಮುಂಜಾನೆ ಎದ್ದ ಕೂಡಲೇ ಅದನ್ನು ಹೊರಗೆ ತೆಗೆಯುವನು. ಅದು ಅಂಕುರಿಸಿದೆಯೋ ಇಲ್ಲವೋ ನೋಡುವನು. ಹೀಗೆ ಗಳಿಗ್ಗೆ ಒಮ್ಮೆ ಗೊರಟವನ್ನು ತೆಗೆದು ನೋಡಿದರೆ, ಅದು ಅಂಕುರಿಸುವದು ಎಂದಿಗೂ ಸಾಧ್ಯವಿಲ್ಲ. ಹೂ ಬಿಟ್ಟು ಸವಿಯಾದ ಹಣ್ಣುಗಳಾಗುವದಂತೂ ದೂರವೇ ಉಳಿಯಿತು. ಹೀಗೆ ಮಾಡದೆ ಆ ಗೊರಟವನ್ನು ಹುಗಿದ ಮೇಲೆ, ಅದಕ್ಕೆ ವೇಳೆವೇಳೆಗೆ ನೀರು ಹಾಕಿ, ಗೊಬ್ಬರ ಹಾಕಿ, ಅದನ್ನು ದನಕರುಗಳಿಂದ ಜೋಪಾನ ಮಾಡಿ, ಆ ಆಮ್ರವೃಕ್ಷದ ಸಂವರ್ಧನದಲ್ಲಿಯೇ ತೊಡಗಿದರೆ, ಒಂದಿಲ್ಲ ಒಂದು ದಿವಸ ಮಾವಿನ ಹಣ್ಣುಗಳು ಗಿಡದಲ್ಲಿ ದೃಗ್ಗೋಚರವಾಗುವದು ಖಂಡಿತ.

ಆಳವಾಗಿ ವಿಚಾರ ಮಾಡಿ ನೋಡಿದರೆ ಮನುಷ್ಯನ ನಿಜವಾದ ಆನಂದವು ಫಲದಲ್ಲಿರದೆ ಕರ್ಮದಲ್ಲಿಯೇ ಇರುತ್ತದೆಂದು ಕಂಡುಬರುವದು. ನಮ್ಮ ಕೈಕಾಲು, ಹೃದಯ, ಬುದ್ಧಿ ಇವೆಲ್ಲವುಗಳು ಯಾವಾಗಲೂ ಸೇವಾಕರ್ಮದಲ್ಲಿಯೇ ತೊಡಗಿರುವದರಲ್ಲಿ ನಿಜವಾದ ಆನಂದವಿದೆ. ಇಂಗ್ಲಂಡದ ಪ್ರಸಿದ್ಧ ಇತಿಹಾಸಕಾರನಾದ ಗಿಬನ್‌ನು ಪ್ರಚಂಡ ಇತಿಹಾಸವನ್ನು ಬರೆದು ಮುಗಿಸಿದ ಮಧ್ಯರಾತ್ರಿ ಅತ್ತನು. ರಾತ್ರಿ ಹನ್ನೆರಡನು ಹೊಡೆದು ಹೋಗಿತ್ತು. ಈ ಇತಿಹಾಸವನ್ನು ಬರೆಯುವ ಕೆಲಸವನ್ನು ಅವನು ಇಪ್ಪತ್ತೈದು ವರುಷ ನಡೆಯಿಸಿದ್ದನು. ಅದನ್ನು ಬರೆಯುವ ಪ್ರತಿಯೊಂದು ಕ್ಷಣವೂ ಆನಂದವನ್ನು ಅನುಭವಿಸುತ್ತಿದ್ದ. ಆದರೆ ಇತಿಹಾಸವು ಮುಗಿದೊಡನೆ ಅವನಿಗೆ ಬಹಳ ವ್ಯಸನವೆನಿಸಿತು. "ನಾಳೆ ನಾನೇನು ಮಾಡಲಿ? ಇನ್ನೆಲ್ಲಿಂದ ನನಗೆ ಆನಂದ? ಏನು ಬರೆಯಲಿ? ಏನು ಓದಲಿ?" ಎಂದನು ಅವನು. ಕರ್ಮಮಾಡುವದರಲ್ಲಿಯೇ ಅವನಿಗೆ ಆನಂದವಿತ್ತು.

ಹುಡುಗರು ಆಡುತ್ತಾರೆ. ಆಡುವಾಗ ವ್ಯಾಯಾಮವಾಗುತ್ತದೆ, ಶರೀರವು ಸುಧಾರಿಸುತ್ತದೆ, ಮುಂತಾದ ವಿಚಾರಗಳು ಅವರ ಮನಸ್ಸಿನಲ್ಲಿ ಇರುವದಿಲ್ಲ. ಇವೇ ವಿಚಾರಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಆಡಿದರೆ, ಆಟದ ಆನಂದವನ್ನು ಆ ಬಾಲಕರು ಕಳೆದುಕೊಳ್ಳುವರು. ತಿಳ್ಳಿಆಟ ಆಡುವಾಗ ತನ್ನ ತೊಡೆಗಳಿಗೆ ವ್ಯಾಯಾಮವಾಗುವದೆಂದು ವಿಚಾರ ಮಾಡಿ ಆಟಗಾರರು ಆಟ ಆಡುವರೆ? ಹೀಗೆ ವಿಚಾರ ಮಾಡಿದರೆ ಅವರಿಗೆ ಉಪ್ಪು, ತಿರುಗುಪ್ಪು ಒಯ್ಯುವದು ಶಕ್ಯವಿಲ್ಲ. ಹುಡುಗರು ಆಟಕ್ಕಾಗಿ ಆಟವಾಡುತ್ತಾರೆ. ಆದರೆ ಆಡುವಾಗ ವ್ಯಾಯಾಮದ ಕಡೆಗೆ ಲಕ್ಷ್ಯವಿರುವದಿಲ್ಲ. ಮತ್ತು

ವ್ಯಾಯಾಮದ ಫಲದ ಕಡೆಗಂತೂ ಅವರ ಲಕ್ಷ್ಯ ಇರುವದೇ ಇಲ್ಲ. ಆಟಗಾರರಿಗೆ ವ್ಯಾಯಾಮದ ಫಲ ಸಿಕ್ಕುವದಿಲ್ಲವೆಂಬ ಅರ್ಥವಲ್ಲ. ಅವರ ದೇಹಾರೋಗ್ಯವು ಚನ್ನಾಗಿ ಉಳಿಯುತ್ತದೆ. ಅವರಿಗೆ ಆನಂದವು ಸಿಕ್ಕುತ್ತದೆ. ಅವರು ಬಿಚ್ಚುಮನಸ್ಸಿನವರಿರುತ್ತಾರೆ. ಆಟವಾಡುವ ಪೂರ್ವದಲ್ಲಿ ವ್ಯಾಯಾಮದ ವಿಚಾರವನ್ನು ಮಾಡುವರು. ತಾನು ದಿನಾಲು ಆಡಿದರೆ ತನ್ನ ಪ್ರಕೃತಿಯು ನಿರೋಗಿಯಾಗುವದೆಂಬ ತಿಳುವಳಿಕೆಯು ಆಟಗಾರನಿಗೆ ಇರುವದು. ಫಲದ ವಿಚಾರವು ಮೊದಲು ಅವನ ಮನಸ್ಸಿನಲ್ಲಿ ಬರುವದು. ಆದರೆ ಒಮ್ಮೆ ಕರ್ಮ ಸುರುವಾದ ಮೇಲೆ ಅದನ್ನು ಮರೆಯಬೇಕು. ಕರ್ಮವೇ ಧರ್ಮವಾಗಬೇಕು. ಆ ಸಾಧನವೇ ಸಾಧ್ಯವಾಗಬೇಕು. ಮಾಡಿದ ಪ್ರತಿಯೊಂದು ಪ್ರಯತ್ನವು ಕರ್ಮಸಿದ್ಧಿಯು, ಸುತ್ತಿಗೆಯ ಏಟು ವಿಜಯವು, ಹಾಕಿದ ಹೆಜ್ಜೆಯು ಧ್ಯೇಯದ ಪ್ರಾಪ್ತಿಯೆಂದೆನಿಸಬೇಕು. ಪ್ರಯತ್ನವೇ ಸಿದ್ಧಿಯು- ಸಿದ್ಧಿಯನ್ನು ಪಡೆಯುವಿಕೆಯು.

ಒಡ್ಡರು ಕೈಯಲ್ಲಿಯ ಸುತ್ತಿಗೆಯಿಂದ ಕಲ್ಲನ್ನು ಒಡೆಯುತ್ತಾರೆ; ಹತ್ತು ಏಟುಗಳಿಂದ ಕಲ್ಲು ಒಡೆಯಲಿಲ್ಲ; ಹನ್ನೊಂದನೆಯ ಏಟಿಗೆ ಒಡೆಯಿತೆಂದು ತಿಳಿಯಿರಿ. ಮೊದಲಿನ ಹತ್ತು ಏಟುಗಳು ವ್ಯರ್ಥವೆಂದು ತಿಳಿಯಬಹುದೇ ? ಪ್ರತಿಯೊಂದು ಏಟು ಆ ಕಲ್ಲಿನ ಅಣುರೇಣುಗಳ ಮೇಲೆ ತನ್ನ ಕೆಲಸ ಮಾಡುತ್ತಿತ್ತು. ಆ ಅಣುಗಳು ಬೇರ್ಪಡಿಸಲ್ಪಡುತ್ತಿದ್ದವು. ಪ್ರತಿಯೊಂದು ಏಟೂ ಕಲ್ಲು ಒಡೆಯುವ ಧ್ಯೇಯದ ಕಡೆಗೆ ಒಯ್ಯುವ ಒಂದೊಂದು ಹೆಜ್ಜೆಯಂತೆ ಇದ್ದವು.

ಕರ್ಮವು ಶ್ರೇಷ್ಠವಾಗಬೇಕಾದರೆ, ಕರ್ಮಫಲ ತ್ಯಾಗವು ಅವಶ್ಯವಾದದ್ದು. ಸದೈವ ಫಲದ ಚಿಂತನವನ್ನು ಮಾಡುವದರಲ್ಲಿ ತೊಡಗಿದವನಿಗಿಂತ, ಕರ್ಮದಲ್ಲಿ ಮೈಮರೆತವನಿಗೆ ಹೆಚ್ಚಿನ ತರಗತಿಯ ಫಲವು ದೊರೆಯುತ್ತದೆ. ಫಲದ ಚಿಂತನವನ್ನು ಮಾಡುವವನ ಕಾಲವು ಹೆಚ್ಚಾಗಿ ಚಿಂತನವಲ್ಲಿಯೇ ಕಳೆದುಹೋಗುತ್ತದೆ. ಮಳೆ ಬಾರದಿದ್ದರೆ, ಧಾರಣಿ ಬರದಿದ್ದರೆ, ಇಲಿಗಳು ಬೆಳೆಯನ್ನು ನಾಶಮಾಡಿದರೆ,—ಹೀಗೆ ಫಲವನ್ನೇ ಕುರಿತು ವಿವಂಚನೆಯನ್ನು ಮಾಡುವ ಒಕ್ಕಲಿಗನು ನಿರುತ್ಸಾಹಿಯಾಗುವನು; ನಿರಾಶನೂ ಆಗುವನು. ಮತ್ತು ಅವನಿಂದ ಹೊಲದಲ್ಲಿ ಕೆಲಸವನ್ನೂ ಚನ್ನಾಗಿ ಮಾಡುವದು ಆಗುವದಿಲ್ಲ. ಆದರೆ ಇದರ ವಿರುದ್ಧ ಯಾವ ಒಕ್ಕಲಿಗನು ಗೊಬ್ಬರ ಹಾಕುವದು, ಹರಗುವದು, ಬಿತ್ತುವದು, ಹೊಲದಲ್ಲಿ

ನೀರು ಆಡುವಂತೆ ಮಾಡುವದು, ಇತ್ಯಾದಿ ಕೇವಲ ಕೃಷಿ ಕರ್ಮಗಳಲ್ಲಿಯೇ ತೊಡಗುವನೋ, ಅಂಥವನಿಗೆ ಉತ್ತಮವಾದ ಫಲವು ದೊರೆಯುವದರಲ್ಲಿ ಸಂದೇಹವಿಲ್ಲ.

ರಾಮಕೃಷ್ಣ ಪರಮಹಂಸರು ತಾವರೆಯ ಕಥೆಯನ್ನು ಹೇಳುತ್ತಿದ್ದರು. ಅರಳುವುದು ತಾವರೆಯ ಧ್ಯೇಯವು. ಹಗಲಿರುಳು ಅದು ಕೆಸರಿನಲ್ಲಿ ಸಿಕ್ಕು ಒದ್ದಾಡುತ್ತದೆ. ಸೂರ್ಯನ ಕಡೆಗೆ ಮುಖಮಾಡಿ ಅರಳಲೆತ್ನಿಸುತ್ತದೆ. ತಾವರೆಯು ಅಖಂಡವಾದ ಸಾಧನೆಯನ್ನು ನಡೆಸಿರುತ್ತದೆ. ತನ್ನ ಅರಳುವಿಕೆಯ ಅರಿವನ್ನು ಸಹ ಮರೆತುಬಿಡುತ್ತದೆ. ಫಲವನ್ನು ಸಹ ಮರೆತುಬಿಡುತ್ತದೆ. ಚಳಿ, ಗಾಳಿ, ಮಳೆ, ಬಿಸಿಲು, ಕೆಸರುಗಳಲ್ಲಿ ಅದು ಸಾಹಸಪಡುತ್ತದೆ. ಅದು ಅರಳುವ ದಿವಸ ಬರುವದು. ಒಂದು ದಿನ ತಾವರೆಯು ಅರಳುವದು. ಅದರ ಕಂಪು ಹಬ್ಬುವದು. ಸೂರ್ಯ ಕಿರಣಗಳು ಅದಕ್ಕೆ ಮುದ್ದಿಡುತ್ತವೆ. ಮಾರುತನು ಅದನ್ನು ಆಲ್ಹಾದಿಸುವನು. ತಾನು ಅರಳಿದ ಅರಿವು ಆ ತಾವರೆಗೆ ಇರುವದಿಲ್ಲ. ಸುಗಂಧ, ಪಾವಿತ್ರ್ಯ, ಮಕರಂದಗಳಿಂದ ತುಂಬಿದ ಅರಿವು ಅದಕ್ಕೆ ಇರುವುದಿಲ್ಲ. ಕೊನೆಗೊಂದು ತುಂಬಿಯು ಗೂಂ ಗೂಂ ಎನ್ನುತ್ತ ತಾವರೆಯ ಸಮೀಪ ಬರುವದು. ಅದರ ಸುತ್ತಲೂ ಪ್ರದಕ್ಷಿಣೆ ಹಾಕುವದು. ಅದರ ಅಂತರಂಗವನ್ನು ಸೇರಿ ಹೇಳುವದು. "ಪವಿತ್ರ ತಾವರೆಯೇ, ನೀನು ಅರಳಿದ್ದೀ! ಎಷ್ಟು ಸೊಗಸಾದ ಬಣ್ಣ! ಎಂತಹ ಮಧುರವಾದ ರಸವು! ಎಷ್ಟು ಮಧುರವಾದ ರಸವು."

ಇದರಂತೆಯೇ ಮನುಷ್ಯನ ಸ್ಥಿತಿಯಾಗಬೇಕು. ಫಲದ ಮರೆವು ಆಗಬೇಕು. ಫಲವು ನಮ್ಮ ಕಾಲಡಿಯಲ್ಲಿ ಬಂದು ಬಿದ್ದರೂ, ಅತ್ತ ನಮ್ಮ ಲಕ್ಷ್ಯ ಹೋಗಬಾರದು. ಧ್ರುವನೆದುರು ಪ್ರತ್ಯಕ್ಷ ನಾರಾಯಣನು ಬಂದು ನಿಂತರೂ ಅವನು ಕಣ್ಣು ತೆರೆಯಲಿಲ್ಲ. ನಾರಾಯಣನ ಚಿಂತನೆಯಲ್ಲಿಯೇ ತಲ್ಲೀನನಾಗಿದ್ದನು. ಸಾಧನದಲ್ಲಿ ಹೊಂದಿದ ಸಾಮರಸ್ಯವೇ ಮಹತ್ವದ ವಸ್ತುವು.

ಭಾರತೀಯ ಸಂಸ್ಕೃತಿಯು ಸಾಧನೆಯನ್ನು ಕಲಿಸಿರುತ್ತದೆ. ಫಲವನ್ನು ದೊರಕಿಸುವದಕ್ಕಾಗಿ ಉತಾವಳಿಯಾಗಬೇಡಿರಿ, ಅಧೀರರಾಗಬೇಡಿರಿ. ಮಹಾ ಫಲಗಳು ಒಂದೆರಡು ದಿನಗಳಲ್ಲಿ ದೊರಕುವ ವಸ್ತುಗಳಲ್ಲ. ಅಖಂಡವಾದ ಅವಿರತವಾದ ದುಡಿತವು ಬೇಕು. ಅನಂತವಾದ ಸಾಧನೆಯೂ ಬೇಕು. ಪ್ರಚಂಡವಾದ ಆಲದ ಮರಗಳು ಒಂದೆರಡು ದಿನಗಳಲ್ಲಿ ಬೆಳೆಯು

ವದಿಲ್ಲ. ಮೆಂಥೆಪಲ್ಲೆ ನಾಲ್ಕಾರು ದಿನಗಳಲ್ಲಿ ಹುಟ್ಟುತ್ತದೆ. ಮತ್ತು ಒಂದೆರಡು ದಿನಗಳಲ್ಲಿ ಬಾಡಿಹೋಗುತ್ತದೆ. ಆದರೆ ಆಲದ ಮರವು ಒಮ್ಮೆ ಬೆಳೆದ ಮೇಲೆ ಸಾವಿರಾರು ಜನರಿಗೆ ನೆರಳನ್ನು ಕೊಡುತ್ತದೆ. ಅದರ ಟೊಂಗೆಗಳು ಮುಗಿಲನ್ನು ಅಪ್ಪಿಕೊಳ್ಳಲು ಯತ್ನಿಸುತ್ತವೆ. ಅದರ ತುದಿಯು ಗಗನವನ್ನು ಮುಟ್ಟುತ್ತದೆ. ಅದರ ಬೇರುಗಳು ಪಾತಾಳ ಗಂಗೆಯ ಭೆಟ್ಟಿಗೆ ಹೋಗುತ್ತವೆ. ಇದೊಂದು ವಿಶಾಲವಾದ ಬೆಳವಣಿಗೆ, ಹಿರಿದಾದ ವೈಭವ. ಇಂತಹ ವೈಭವವು ದೊರೆಯಬೇಕಾದರೆ, ಆ ವಟ ವೃಕ್ಷಕ್ಕೆ ಕಲ್ಲು, ಮಣ್ಣು, ಕೆಸರಿನಲ್ಲಿ ಬೇರುಗಳನ್ನು ಬಿಡುತ್ತ ಬಿಡುತ್ತ ಸಾಹಸಪಡಬೇಕಾಯಿತು.

ಕದ್ರು ಮತ್ತು ವಿನತೆಯರ ಕಥೆಯು ಪ್ರಸಿದ್ಧವಿದೆ. ಕದ್ರುವು ಒಂದು ಸಾವಿರ ಹಾವುಗಳನ್ನು ಹೆತ್ತಳು. ಅವುಗಳನ್ನು ನೋಡಿ ವಿನತೆಯು ಅಧೀರಳಾದಳು. ಮತ್ತು ಒಂದು ತತ್ತಿಯನ್ನು ಒಡೆದಳು. ಅದು ಪಕ್ವವಾಗಿದ್ದಿಲ್ಲ. ಆ ತತ್ತಿಯೊಳಗಿಂದ ಕೈಕಾಲು ಇಲ್ಲದ ಅರುಣನು ಜನಿಸಿದನು. ವಿನತೆಗೆ ಬಹಳ ವ್ಯಸನವೆನಿಸಿತು. ಅದು ಅವಳ ಉತಾವಳಿತನಕ್ಕೆ ತಕ್ಕ ಕಾಣಿಕೆಯಾಗಿತ್ತು. ಆದರೆ ಅವಳು ಈ ಅನುಭವದಿಂದ ಜಾಣಳಾದಳು. ಇನ್ನೊಂದು ತತ್ತಿಯನ್ನು ಒಡೆಯಲಿಲ್ಲ. ಒಂದು ಸಾವಿರ ವರ್ಷ ತಡೆದಳು. ನಂತರ ಆ ತತ್ತಿಯೊಳಗಿಂದ ಪಕ್ಷಿರಾಜನಾದ ಗರುಡನು ಹೊರಬಿದ್ದನು. ಮತ್ತು ಭಗವಾನ್ ವಿಷ್ಣುವಿನ ವಾಹನವಾದನು.

ನಮ್ಮ ಕರ್ಮದ ಫಲಗಳು ಬಲಹೀನವಿರಬಾರದಿದ್ದರೆ ಮತ್ತು ದಿವ್ಯ, ಭವ್ಯವಿರಬೇಕಾದರೆ ನೂರಾರು ವರ್ಷ ದುಡಿಯಬೇಕಾಗುವದು. ಸಾಧನೆಯನ್ನು ಕೈಕೊಳ್ಳಬೇಕಾಗುವದು. ಇಂದು ಭಾರತೀಯ ಸಂಸ್ಕೃತಿಯ ಉಪಾಸಕರು, ಸಾಧನೆಯನ್ನು ಮರೆತಿದ್ದಾರೆ, ನಮಗೆ ಕಣ್ಣುಮುಚ್ಚಿ ಕಣ್ಣು ತೆರೆಯುವದರೊಳಗಾಗಿ ಫಲಗಳು ಬೇಕಾಗಿವೆ. ಚುಟುಕಿನಲ್ಲಿಯೇ ಸ್ವಾತಂತ್ರ್ಯವು ಬೇಕು. ಆದರೆ ಲಕ್ಷಾವಧಿ ಹಳ್ಳಿ, ಪಳ್ಳಿಗಳಲ್ಲಿ ಹೋಗಿ ನೆಲೆಗೊಂಡು ಕೆಲಸ ಮಾಡಿ ಸಾಧನೆ ಮಾಡುವದು ಬೇಡ. ಕ್ರಾಂತಿಯು ಕ್ಷಣದಲ್ಲಿ ಆಗುವದಿಲ್ಲ. ರಾಷ್ಟ್ರೀಯ ಶಿಕ್ಷಣದ ಮಹಾನ್ ಆಚಾರ್ಯರಾದ ವಿಜಾಪೂರಕರ ಇವರು ಒಮ್ಮೆ ಹೀಗೆ ಅಂದಿದ್ದಾರೆ "ಇಂಗ್ಲೀಷರಿಗೆ ನಮ್ಮ ದೇಶದಲ್ಲಿ ಸಾಮ್ರಾಜ್ಯವನ್ನು ಕಟ್ಟಲಿಕ್ಕೆ ನೂರಾಐವತ್ತು ವರ್ಷಗಳು ಹಿಡಿದವು. ಅವರನ್ನು ಹೊರಗಟ್ಟಲು ನಮಗೆ ಮೂರುನೂರು ವರ್ಷಗಳಾದರೂ ಬೇಕಾಗಬಹುದು. ಎಂಬ ಆಶೆಯಿಂದ ನಾವು ಸಾಹಸ ಪಡಬೇಕು."

ಕರ್ಮದ ಫಲಗಳನ್ನು ತ್ಯಜಿಸುವವನು ಎಂದಿಗೂ ನಿರಾಶೆಗೆ ಈಡಾಗುವದಿಲ್ಲ. ಏಕಂದರೆ ಅವನು ಫಲದ ಕಡೆಗೆ ಕಣ್ಣೆತ್ತಿ ಸಹ ನೋಡುವದಿಲ್ಲ. ಹಗಲಿರುಳು ಫಲಗಳ ಬಗ್ಗೆ ಚಿಂತನ ಮಾಡುವವನೇ ಕಷ್ಟ ನಷ್ಟಗಳಿಗೆ ಗುರಿಯಾಗುವನು. ಒಂದೊಂದು ಗುಣವನ್ನು ಗಳಿಸಲು ಭಗವಾನ್ ಬುದ್ಧನು ಒಂದೊಂದು ಜನ್ಮವೆತ್ತಿದ್ದನು. ಜೀವನದ ಪರಿಪೂರ್ಣತೆಯ ಮಟ್ಟನ್ನು ಮುಟ್ಟಲು ಅವನಿಗೆ ನೂರು ಜನ್ಮವೆತ್ತಬೇಕಾಯಿತು.

ದೇವರ ಸಾಕ್ಷಾತ್ಕಾರ ತಮಗಾಗಬೇಕೆಂದು ಈರ್ವ ಸಾಧಕರು ತಪಶ್ಚರ್ಯವನ್ನಾರಂಭಿಸಿದರು. ದೇವದೂತನೊಬ್ಬನು ಒಬ್ಬನ ಕಡೆಗೆ ಹೋಗಿ ಅವನಿಗೆ ಕೇಳಿದನು. "ನಿನಗೆ ದೇವರು ಭೆಟ್ಟಿಯಾಗಬೇಕೆಂಬ ಇಚ್ಛೆ ಇದೆ; ಅವನು ಯಾವಾಗ ಭೆಟ್ಟಿಯಾಗಬೇಕೆಂದು ಅನಿಸುತ್ತದೆ?'' "ಈ ಕ್ಷಣವೇ ನನಗೆ ಅವನ ಭೆಟ್ಟಿಯಾಗಬೇಕೆಂದು ಆಸೆ ಇದೆ" ಎಂದನು ಅವನು. "ನಿನಗೆ ಇನ್ನೂ ಸಾವಿರ ವರುಷಗಳವರೆಗೆ ಅವನ ಭೆಟ್ಟಿ ಸಾಧ್ಯವಿಲ್ಲೆಂದು" ಹೇಳಿ ಆ ದೇವದೂತನು ಇನ್ನೊಬ್ಬ ಸಾಧಕನ ಕಡೆಗೆ ಹೋಗಿ ಅವನಿಗೂ ಇದೇ ಪ್ರಶ್ನವನ್ನು ಕೇಳಿದನು. "ಎಷ್ಟು ವರ್ಷಗಳಲ್ಲಿ ಭೆಟ್ಟಿಯಾಗಬಹುದು ದೇವರು ?'' ಎಂದು ಆ ಸಾಧಕನು ಕೇಳಿದನು. "ಹತ್ತುಸಾವಿರ ವರ್ಷಗಳಲ್ಲಿ" ಎಂದು ದೇವದೂತನು ಉತ್ತರಿಸಿದನು. "ಏನು ? ಇಷ್ಟು ಅಲ್ಪ ಕಾಲದಲ್ಲಿ ದೇವರ ಭೆಟ್ಟಿ ನನಗೆ ಆಗಬಹುದೋ? ನಾನು ಕೋಟ್ಯವಧಿ ವರ್ಷಗಳು ಬೇಕಾಗಬಹುದೆಂದು ತಿಳಿದು ಕೊಂಡಿದ್ದೆ. ಇಷ್ಟು ತೀವ್ರ ನಾನು ಆ ಪರಮಾತ್ಮನನ್ನು ಕಾಣಬಹುದೋ ?'' ಎಂದನು ಆ ಸಾಧಕನು. ಕೂಡಲೇ ತತ್‌ಕ್ಷಣವೇ ಅವನಿಗೆ ಪರಮೇಶ್ವರನ ದರ್ಶನವಾಯಿತು. "ನಾನು ಈಗಲೇ ನಿನಗೆ ಭೆಟ್ಟಿಯಾಗಿದ್ದೇನೆ, ನೋಡು!" ಎಂದೆಂದು ಪರಮೇಶ್ವರನು ಅವನನ್ನಪ್ಪಿಕೊಂಡು "ನಾನು ಇನ್ನು ನಿನ್ನ ಹೃದಯಮಂದಿರದಲ್ಲಿ ವಾಸಿಸುವೆನು'' ಎಂದು ಹೇಳಿದನು.

ದೇವರನ್ನು ದೊರಕಿಸುವದಕ್ಕಾಗಿ ಎಷ್ಟು ಸಾಧನೆ ಮಾಡಿದರೂ ಕಡಿಮೆಯೇ. ಧ್ಯೇಯಪ್ರಾಪ್ತಿಗಾಗಿ ನಮ್ಮಲ್ಲಿ ಅಪಾರ ಆಸೆ ಇರಬೇಕು, ಪ್ರಯತ್ನ ಮಾಡುವದಕ್ಕೆ, ಕಷ್ಟ ಸಹಿಸುವದಕ್ಕೆ, ಮತ್ತು ಉದ್ಯೋಗ ಮಾಡುವಕ್ಕೆ ನಾವೆಂದೂ ಬೇಸರಿಯಬಾರದು. ಉತ್ತರೋತ್ತರ ಕರ್ಮವು ಉತ್ಕಟವಾಗಬೇಕು. ಸಾವಿರ ವರ್ಷ ದುಡಿಯಲು ಸಿದ್ಧನಾಗುವವನಿಗೆ ಫಲವು ಈ ಕ್ಷಣ ಸಿಗುತ್ತದೆ.

ಆದರೆ ನಮ್ಮ ಮನಸ್ಸಿನ ಸಮಾಧಾನವೆಂಬ ಫಲವು ನಮಗೆ ಸತತವಾಗಿ ಸಿಕ್ಕೇ ಸಿಗುತ್ತದೆ. ನಾನು ನನ್ನ ಶಕ್ತಿಮೀರಿ ಕೆಲಸ ಮಾಡುತ್ತೇನೆ. ಪ್ರಯತ್ನದ ಪರಾಕಾಷ್ಠೆಯನ್ನು ಮಾಡುತ್ತೇನೆಂಬ ಆಂತರಿಕ ಸಮಾಧಾನ ವನ್ನು ಯಾರು ಕಸಿದುಕೊಳ್ಳಬಲ್ಲರು? ನಮಗೆ ಈ ದೇಹ, ಬುದ್ಧಿ, ಹೃದಯ ಇವುಗಳ ಜೋಡು ಸಿಕ್ಕಿದೆ. ಈ ಬಂಡವಾಳವನ್ನು ದೇವರು ನಮಗೆ ಮೊದಲೇ ದಯಪಾಲಿಸಿದ್ದಾನೆ. ಇದಕ್ಕಾಗಿ ನಾವು ಅವನಿಗೆ ಕೃತಜ್ಞರಾಗಿ ಸೇವಾಕರ್ಮವನ್ನು ಅರ್ಪಿಸಬೇಕು. ಸಮಾಜವೂ ನಮಗೆ ಹೇರಳವಾಗಿ ಕೊಡುತ್ತದೆ. ಸೃಷ್ಟಿಯು ನಮ್ಮನ್ನು ಪೋಷಿಸುತ್ತದೆ. ಅವರೆಲ್ಲರ ಋಣವನ್ನು ತೀರಿಸಲು ನಾವು ಸದೈವ ಸೇವೆ ಮಾಡಿ ಸವೆಯಬೇಕು

ನಮ್ಮ ಕರ್ಮದ ಫಲವು ನಮಗೆ ಸಿಗದಿದ್ದರೂ ಶಾಶ್ವತವಾದ ಸಮಾಜಕ್ಕೆ ಸಿಗುವುದು. ವ್ಯಕ್ತಿ ಅಳಿದರೂ ಸಮಾಜವು ಉಳಿಯುವದು. ಕಾರ್ಯಕರ್ತರು ಮಡಿಯುವರು; ಆದರೆ ಅವರ ಕಾರ್ಯವು ಉಳಿಯುವದು. ಆ ಕಾರ್ಯವನ್ನು ಮುಗಿಸುವದು, ಮುಂದುವರಿಸುವದು ಸಮಾಜದ ಕರ್ತವ್ಯವು. ನಾನು ಮಾಡಿಬಿಟ್ಟ ಕಾರ್ಯವನ್ನು ಮತ್ತಾರಾದರೂ ಕೈಕೊಳ್ಳುವರು. ನಾನು ಹಚ್ಚಿ ಬೆಳಿಸಿದ ಗಿಡಕ್ಕೆ ಯಾರಾದರೂ ನೀರು ಹಾಕುವರು. ನನ್ನ ಕರ್ಮದ ಫಲವು ಯಾರಿಗಾದರೂ ಸಿಕ್ಕೇ ತೀರುವದು. ಮತ್ತು ಯಾರಿಗೆ ಅದು ದೊರೆಯುವದೋ ಅವನೂ ನನ್ನವನೇ. ಅವನಲ್ಲಿ ಮತ್ತು ನನ್ನಲ್ಲಿ ಭೇದವೆಲ್ಲಿದೆ ?

ನಮ್ಮ ಸಂಸ್ಕೃತಿಯಲ್ಲಿ ಅದೃಷ್ಟಫಲದ ಒಂದು ಮಧುರವಾದ ಕಲ್ಪನೆ ಇದೆ. ಮಂದಮತಿಗಳು ಈ ಕಲ್ಪನೆಯನ್ನು ಕುರಿತು ಹಾಸ್ಯಕ್ರೀಡು ಮಾಡುತ್ತಾರೆ. ಆದರೆ ಈ ಕಲ್ಪನೆಯನ್ನು ಕುರಿತು ವಿಚಾರ ಮಾಡಿದಷ್ಟೂ ಆನಂದ ವೆನಿಸುತ್ತದೆ. ನಿನ್ನ ಪ್ರಯತ್ನಗಳಿಗೆ ಫಲವು ಸಿಕ್ಕೇ ಸಿಗುವದು. ಆದರೆ ಅದು ನಿನಗೆ ಪ್ರತ್ಯಕ್ಷ ಕಾಣುವಂತಿಲ್ಲ. ಅದು ನಿನ್ನ ದಿವ್ಯದೃಷ್ಟಿಗೆ ಗೋಚರ ವಾಗುವದು. ಆದರೆ ಆ ಕಾಣದಿರುವ ಫಲವು ನಿನಗೆ ಸಿಕ್ಕುವದು. ಭಾರತದ ಸ್ವಾತಂತ್ರ್ಯಕ್ಕಾಗಿ ಸಾಯುವ ವರೆಗೆ ಪ್ರಯತ್ನ ಮಾಡಿ ಎಷ್ಟೋ ಹಿರಿಯರು ಮಡಿದುಹೋದರು. ಅವರ ದುಡಿಮೆಯ ಫಲವು ಅವರಿಗೆ ದೊರೆಯಲಿಲ್ಲ. ಆದರೆ ಅಗೋಚರವಾದ ಫಲವು ಅವರಿಗೆ ದೊರೆತಿದೆ. ನ್ಯಾಯಮೂರ್ತಿ ರಾನಡೆಯವರು ಅಂದರು "ಸುಖದಿಂದ ಬಾಳುವ, ಸಮೃದ್ಧವಾದ ಭಾರತ ವನ್ನು ನಾನು ಕಾಣುತ್ತೇನೆ. ದೇವರಿಗೆ ಪ್ರಿಯವಾದ ಈ ಭೂಮಿಯು

ಸ್ವತಂತ್ರ ಮತ್ತು ಮುಕ್ತವಾದದ್ದು ನನಗೆ ತೋರುತ್ತದೆ. ಬೇನೆ-ಬೇಸರಿಕೆಗಳಿಲ್ಲ, ಬರಗಾಲವಿಲ್ಲ, ಅಜ್ಞಾನವು ಲೋಪವಾಗಿದೆ, ರೂಢಿಗಳು ಅಳಿದಿವೆ, ತಾಕಲಾಟಗಳಿಲ್ಲ, ತೊಂದರೆಗಳಿಲ್ಲ, ದ್ವೇಷ-ಮತ್ಸರಗಳಿಲ್ಲ. ಎಲ್ಲ ಜಾತಿ, ಧರ್ಮ ಪಕ್ಷ, ಪಂಗಡಗಳು ಸಹಕಾರದಿಂದ ಪರಸ್ಪರರೊಡನೆ ಆನಂದದಿಂದ ನಡೆದುಕೊಳ್ಳುತ್ತವೆ. ಎಲ್ಲರಿಗೂ ಅನ್ನ ವಸ್ತ್ರವಿದೆ; ಇರಲಿಕ್ಕೆ ಮನೆಗಳು ಅವೆ. ಇಂಥ ನೋಟವನ್ನು ನಾನು ನನ್ನ ಕಣ್ಣೆದುರಿಗೆ ನೋಡುತ್ತೇನೆ.'' ನ್ಯಾಯಮೂರ್ತಿಯವರ ವಿಶಾಲವಾದ, ಶಾಸ್ತ್ರಪೂತವಾದ ದೃಷ್ಟಿಗೆ ಗೋಚರವಾದ ಅದೃಷ್ಟ ಫಲವಿದು. ಮನುಷ್ಯನಿಗೆ ಅವನ ದುಡಿತದ ಅದೃಷ್ಟ ಫಲವು ದೊರೆಯುತ್ತದೆ. ಅವನ ದುಡಿತವು ಎಂದಿಗೂ ವ್ಯರ್ಥವಾಗುವದಿಲ್ಲ. ಈ ಜಗತ್ತಿನಲ್ಲಿ ಯಾವದೂ ವ್ಯರ್ಥವಾಗುವದಿಲ್ಲ.

ಅದೃಷ್ಟ ಫಲವೆಂಬದಕ್ಕೆ ಇನ್ನೊಂದು ಅರ್ಥವಿರಬಹುದು. ಹೊಳೆಯು ಹರಿಯುತ್ತಿರುತ್ತದೆ. ಎಷ್ಟೋ ಗಿಡ-ಬಳ್ಳಿಗಳಿಗೆ ಅದರ ಹಸಿ ಮುಟ್ಟುತ್ತದೆ. ಆದರೆ ಅದರ ಅರಿವು ಹೊಳೆಗೆ ಇರುವದಿಲ್ಲ. ಅಸಂಖ್ಯಾತ ಜಲಚರಗಳು ಇದರಲ್ಲಿ ಹುಟ್ಟಿ ಬೆಳೆಯುತ್ತವೆ. ಆದರೆ ಅದರ ಸುಳಿವೆ ಅದಕ್ಕೆ ಇರುವದಿಲ್ಲ. ತನ್ನಿಂದ ಎಷ್ಟು ಕೂರಿಗೆ ಭೂಮಿ ಬೆಳೆಯಿತು, ಎಷ್ಟು ಭಾವಿಗಳಿಗೆ ನೀರು ದೊರೆತವು ಎಂಬ ಅರಿವು ಆ ಹರಿಯುವ ಹೊಳೆಗೆ ಇರುವದಿಲ್ಲ. ಹಸಿ ಮುಟ್ಟಿಸುವ ತನ್ನ ಕರ್ಮವನ್ನು ಹರಿಯುತ್ತಿರುವ ಆ ಹೊಳೆಯು ಮಾಡುತ್ತಿರುತ್ತದೆ. ಎಲ್ಲೆಲ್ಲಿ, ಎಷ್ಟು ಹಸಿ ಮುಟ್ಟಿತೆಂಬದರ ವಿಚಾರವು ಆ ಹೊಳೆಗೆ ಇರುವದಿಲ್ಲ. ಈ ಫಲದ ಅರಿವು ಅದಕ್ಕಿಲ್ಲ. ಆದರೆ ಈ ಫಲವೆಲ್ಲ ನದಿಗೆ ಸಲ್ಲಿದ್ದು. ಅದರ ಕರ್ಮದ ಅನಂತ ಫಲಗಳು ಇವು.

ಎಲ್ಲೆಲ್ಲಿಯ ಕತ್ತಲೆಯು, ಎಷ್ಟರಮಟ್ಟಿಗೆ ದೂರವಾಯಿತೆಂಬದರ ಕಲ್ಪನೆಯು ಆ ಸೂರ್ಯನಿಗೆ ಇರುವದಿಲ್ಲ. "ಸೂರ್ಯನಾರಾಯಣನೇ! ಎಷ್ಟು ನಿನ್ನ ಉಪಕಾರಗಳು ನಮ್ಮ ಮೇಲೆ? ಕತ್ತಲೆಯನ್ನೆಲ್ಲ ದೂರ ಮಾಡಿಬಿಟ್ಟೆಯಲ್ಲ'' ಎಂದು ಸೂರ್ಯನಿಗೆ ಅಂದರೆ ಅವನು ಹೀಗೆ ಉತ್ತರವನ್ನು ಕೊಡುವನು. "ನಾನೇನು ಮಾಡಿದ್ದೇನೆ? ಕತ್ತಲೆಯನ್ನು ದೂರ ಮಾಡಿದ್ದೇನೆಯೋ! ಎಲ್ಲಿದೆ ಆ ಕತ್ತಲೆಯು? ನನಗೆ ಸ್ವಲ್ಪ ತೋರಿಸಿರಿ. ಹಗಲಿರುಳು ಪ್ರಕಾಶಿಸುವದೊಂದೇ ನನಗೆ ಗೊತ್ತು.''

ಸೂರ್ಯನು ತನ್ನ ಜೀವನದ ಯಜ್ಞಕುಂಡವನ್ನು ಅಖಂಡವಾಗಿ

ಪ್ರಜ್ವಲಿಸುತ್ತಿದ್ದಾನೆ. ಆದರೆ ಆ ಕರ್ಮದ ಫಲವು ದೊರೆಯುವದಿಲ್ಲವೋ ? ಸೂರ್ಯನ ಉಷ್ಣತೆಯಿಂದ ಪ್ರಾಣಿಗಳೆಲ್ಲರೂ ಜೀವಿಸುತ್ತಿದ್ದಾರೆ. ಹಣ್ಣು ಹಂಪಲಗಳು ಬೆಳೆಯುತ್ತಿವೆ. ಗಿಡಗಂಟಿಗಳು ಹುಟ್ಟಿ ಬೆಳೆಯುತ್ತವೆ. ಇಡೀ ವಿಶ್ವದ ಚಟುವಟಿಕೆಗಳು ನಡೆದಿವೆ. ಸೂರ್ಯನು ಜಗತ್ತಿನ ಆತ್ಮನು. "ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ." ಜಡ-ಚೇತನ ಸೃಷ್ಟಿಯ ಪ್ರಾಣ ದಾತನವನು. ಆದರೆ ಈ ಫಲಗಳ ಸುದ್ದಿ ಆತನಿಗೆ ಇಲ್ಲ. ಆದರೆ ಈ ಅದೃಷ್ಟ ಫಲವು ದೊರೆತೇ ದೊರೆಯುತ್ತದೆ.

ತೋಟದಲ್ಲಿ ಅಂದವಾದ ಪರಿಮಲದಿಂದ ತುಂಬಿದ ಹೂ ಅರಳಿದೆ. ಆ ಹೂವನ್ನು ನೋಡಿ ಎಷ್ಟು ಜನರು ನಲಿಯುವರು ? ಆದರೆ ಅದರ ಅರಿವು ಆ ಹೂವಿಗೆ ಎಲ್ಲಿದೆ ? ಗಾಳಿಯೊಡನೆ ಅದರ ಪರಿಮಲವು ಅಲ್ಲಲ್ಲಿ ಸುಳಿದಾಡಿ, ಜನರಿಗೆ ಸುಖವಾಗುವದು; ಬೇನೆ ಬಿದ್ದವರಿಗೆ ಪ್ರಸನ್ನವೆನಿಸುತ್ತದೆ; ಜೇನು, ತುಂಬಿಗಳು ಅದರ ಸುತ್ತುಮುತ್ತಲು ಸುಳಿದಾಡಿ ಅದರಲ್ಲಿಯ ಮಕರಂದವನ್ನು ಸವಿದು ಅದರೊಡನೆ ಕಿವಿಮಾತು ನಡೆಸುತ್ತವೆ. ಆದರೆ ಇವರ ಸದ್ದೇ ಇಲ್ಲ ಆ ಕುಸುಮಕ್ಕೆ. ಅದು ತಾನು ಅರಳಿ ನಿಂತು ಬಿಟ್ಟದೆ. ಸಾವಿರಾರು ಜನರಿಗೆ ಮತ್ತು ಜೀವಿಗಳಿಗೆ, ತನ್ನಿಂದ ಆದ ಆನಂದದ ಫಲದ ಅರಿವು ಅದಕ್ಕಿಲ್ಲ. ಇದು ಅದಕ್ಕೆ ಸಿಕ್ಕುವ ಅದೃಶ್ಯ ಫಲವು.

ಹಸುಕೂಸು ಅಳುತ್ತದೆ, ಅರಳುತ್ತದೆ, ನಗುತ್ತದೆ ಮತ್ತೆ ಆಡುತ್ತದೆ. ಈಗೋ, ಇನ್ನೊಂದು ಗಳಿಗೆಗೋ ಸಾಯುತ್ತೇನೆಂಬ ಪರಿಸ್ಥಿತಿಯಲ್ಲಿದ್ದ ಟೆನಿಸನ್‌ನಿಗೆ ಕೂಸುಗಳನ್ನು ನೋಡಿ, ತಾನು ಉಳಿಯುವೆನೆಂಬ ಆಸೆಯು ಹುಟ್ಟುತ್ತದೆ. ನಿರಾಶೆ ಮತ್ತು ನಿರಾನಂದಮಯವಾದ ಜೀವನದಲ್ಲಿ ತಾನು ಅಮೃತ ಸಿಂಧುವನ್ನು ಸುರುವಿದ್ದರ ಅರಿವು ಆ ಕೂಸಿಗೆ ಎಲ್ಲಿರುತ್ತದೆ ? ಅದರಂತೆಯೆ ತಾಯಿತಂದೆ, ಅಣ್ಣ ತಮ್ಮ, ಅಕ್ಕ ತಂಗಿಯರಿಗೆ, ನೆರೆಹೊರೆಯವರಿಗೆ, ತನ್ನಿಂದಾಗುವ ಸಂತೋಷದ, ಆನಂದದ ಅರಿವು ಆ ಕೂಸಿಗೆ ಇರುವದಿಲ್ಲ. ಆದರೆ ಈ ಅದೃಶ್ಯ ಫಲವು ಸಿಕ್ಕೇ ಸಿಗುತ್ತದೆ.

ಅದರಂತೆಯೆ ನಾವು ಖಾದಿಯನ್ನು ಕೊಳ್ಳುತ್ತೇವೆ. ಆಗ ಯಾವುದೊ ಒಂದು ಹಳ್ಳಿಯಲ್ಲಿ ನೆಲೆಗೊಂಡ ಯಾವುದೋ ಒಂದು ಕುಟುಂಬಕ್ಕೆ ಎರಡು ತುತ್ತು ಅನ್ನ ಸಿಕ್ಕಿತು, ಎಂಬದರ ಅರಿವು ನಮಗೆ ಇರುವದಿಲ್ಲ. ನಮಗೆ ಗೊತ್ತಾಗದಿದ್ದರೂ ಯಾವುವೋ ಎರಡು ಜೀವಿಗಳಿಗೆ ಸುಖ ದೊರೆ

ತಪ್ಪು ನಿಜ. ಹುಣಸೆ ತೊಪ್ಪಲು ಕುದಿಸಿ ತಿನ್ನುವದರ ಬದಲು ಎರಡು ತುಣುಕು ರೊಟ್ಟಿಯನ್ನು ಅವರು ತಿಂದದ್ದು ನಿಜ. ಇದು ಗೊತ್ತಾಗಲೀ ಗೊತ್ತಾಗದೇ ಇರಲಿ, ನಮಗೆ ಅದೃಶ್ಯ ಫಲವು ದೊರೆಯುವದು ಖಂಡಿತ.

ಮನುಷ್ಯನು ಸೇವೆಯಲ್ಲಿ ಮಗ್ನನಾಗಿರಬೇಕು. ಸತ್ಕರ್ಮವನ್ನು ಮಾಡಬೇಕು. ಅದರಿಂದ ಹೆಜ್ಜೆಹೆಜ್ಜೆಗೆ ಸಿಗುವ ಸಮಾಧಾನವೇ ದೃಶ್ಯ ಫಲವು. ಆದರೆ ನಮ್ಮ ಸತ್ಕರ್ಮದ ಮೂಲಕ ಸಮಾಜಕ್ಕಾಗುವ ಆನಂದದ ಅದೃಶ್ಯ ಫಲವೊಂದು ದೊರೆತೇ ದೊರೆಯುತ್ತದೆ. ಜಗತ್ತಿನಲ್ಲಿ ಯಾವದೂ ವ್ಯರ್ಥವಾದದ್ದಿಲ್ಲ. ಅಂದಮೇಲೆ ಸತ್ಕರ್ಮವು ಹೇಗೆ ವ್ಯರ್ಥವಾಗುವದು ? ಮನೆಯ ಸುತ್ತುಮುತ್ತಲು ಹೊಲಸು ಆದರೆ ಚಿಕ್ಕಾಡುಗಳು ಬೆಳೆಯುವವು. ಅದೇ ಸ್ವಚ್ಛತೆಯನ್ನು ಇಟ್ಟರೆ ನಮಗೂ ಆನಂದ, ಉಳಿದವರಿಗೂ ಸಂತೋಷ. ನಮ್ಮ ಕರ್ಮಗಳು ಕೆಟ್ಟವೇ ಆಗಲಿ, ನೆಟ್ಟಗೇ ಆಗಲಿ ಎರಡಕ್ಕೂ ಫಲಗಳು ಬಂದೇ ತೀರುತ್ತವೆ. ಮುಳ್ಳು ಬಿತ್ತಿದರೆ ಮುಳ್ಳು ಬೆಳೆಯುವಿರಿ. ಹೂವು ಬಿತ್ತಿದರೆ ಹೂವು ಬೆಳೆಯುವಿರಿ. ಪ್ರತಿಯೊಂದು ವಸ್ತುವಿನ ಪರಿಣಾಮವು ಸುತ್ತುಮುತ್ತಲು ಮತ್ತು ನಮ್ಮ ಮೇಲೆ ಆಗೇ ತೀರುತ್ತದೆ. ಮುಗಿಲಿನಲ್ಲಿ ದೂರ ಚಿಕ್ಕೆಯೊಂದು ಹೊಳೆಯುವದು. ಮತ್ತು ನನ್ನ ಜೀವನದಲ್ಲಿ ಪಾವಿತ್ರ್ಯವು ಕಂಗೊಳಿಸುವದು. ಧ್ರುವ ತಾರೆಯಿಂದ ನನ್ನ ನೌಕೆಯು ಸುರಕ್ಷಿತವಾಗಿ ಸಾಗುತ್ತದೆ. ಮನಸ್ಸಿನಲ್ಲಿ ಸುಳಿದಾಡುವ ಭಾವನೆಗಳ, ಕುಣಿದಾಡುವ ವಿಚಾರಗಳ, ಪರಿಣಾಮವಾಗುತ್ತದೆ. ಅಂದ ಮೇಲೆ ಮಾಡಿದ ಕೃತಿಗಳ ಪರಿಣಾಮವಾಗದೆ ಇರುವದೋ? ಪರಿಣಾಮವು ಅದೃಶ್ಯವಿರಬಹುದು ಆದರೆ ಆಗುವದು ನಿಜ.

ಒಮ್ಮೆಲೆ ಕರ್ಮದಲ್ಲಿ ತಲ್ಲೀನನಾಗುವದು ಸಾಧ್ಯವಿಲ್ಲ. ಮೊದಲು ಮನುಷ್ಯನು ಲೋಭದಿಂದ ಕರ್ಮಪ್ರವೃತ್ತನಾಗುತ್ತಾನೆ. "ನೀನು ಅ ಆ ಇ ಈ ಕ ಕಲಿತರೆ ನಾನು ನಿನಗೆ ಉತ್ತತ್ತಿ ಕೊಡುತ್ತೇನೆ," ಎಂದು ತಾಯಿಯು ಹೇಳಿದರೆ ಉತ್ತತ್ತಿಯ ಆಸೆಗೆ ಮೊದಲು ಹುಡುಗನು ಪಾಟಿಯನ್ನು ಕೈಯಲ್ಲಿ ಹಿಡಿಯುತ್ತಾನೆ. ಉಂಡಿ ಸಿಗುವದೆಂಬ ಆಸೆಯಿಂದ ಸಾಲೆಗೆ ಹೋಗುವನು. ಆ ಮೇಲೆ ಅವನಿಗೆ ವಿದ್ಯೆಯ ಆನಂದವು ಸಾವಕಾಶವಾಗಿ ತಿಳಿಯುವದು. ಆ ಮೇಲೆ ವಿದ್ಯೆಗಾಗಿ ವಿದ್ಯೆಯನ್ನು ಗಳಿಸಲು ಸಾಹಸ ಮಾಡುವನು. ಆಗ್ಗೆ ಅವನಿಗೆ ಫಲವು ದೊರೆಯುವದಿಲ್ಲವೆಂತಲ್ಲ. ಸಣ್ಣವನಿದ್ದಾಗ ಉತ್ತತ್ತಿ ಸಿಕ್ಕುವದು. ಆದರೆ ಫಲದ ಆಸೆಯನ್ನು ಬಿಟ್ಟು ವಿದ್ಯೆಯ

ಉಪಾಸಕನಾದ ಮೇಲೆ ಸಹ ಅವನಿಗೆ ಕೀರ್ತಿ ಪದವಿಗಳು ದೊರೆಯುವವು. ಅವನನ್ನು ಜನರು ಬರಮಾಡಿಕೊಳ್ಳುವರು, ಸ್ವಾಗತಿಸುವರು, ಅನಂತ ಫಲಗಳು ಅವನೆದುರು ನಿಲ್ಲುವವು. ಆದರೆ ವಿದ್ಯೆಯಲ್ಲಿಯೇ ಆನಂದಪಡುವ ಇಂಥ ಪುರುಷರಿಗೆ ಇದೆಲ್ಲ ವಿಷ-ಸಮಾನವೆನಿಸುತ್ತದೆ. ಮಾನಸನ್ಮಾನದಿಂದ ಅವನ ಮನಸ್ಸು ಗೊಂದಲದಲ್ಲಿ ಬೀಳುತ್ತದೆ.

ತುಕಾರಾಮ ಮಹಾರಾಜರ ಕೀರ್ತಿಯನ್ನು ಕೇಳಿ ಶಿವಾಜಿ ಮಹಾರಾಜರು ಅವರ ಕಡೆಗೆ ಪಲ್ಲಕ್ಕಿ ಕೊಟ್ಟು ಕುದುರೆ ಸವಾರರನ್ನು ಕಳುಹಿದರು. ಪಲ್ಲಕ್ಕಿಯಲ್ಲಿ ಮೆರೆಸುತ್ತ ಬರಮಾಡಿಕೊಳ್ಳಬೇಕೆಂದು ರಾಜರ ಇಚ್ಛೆ. ಆದರೆ ತುಕಾರಾಮ ಮಹಾರಾಜರು ವ್ಯಸನಪಟ್ಟರು. ತಮ್ಮ ಸತ್ಕರ್ಮಕ್ಕೆ ವೈಭವದ ಫಲಗಳು ಹತ್ತಿದ್ದನ್ನು ನೋಡಿ ಅವರಿಗೆ ಬಹಳ ಕೆಡಕು ಅನಿಸಿತು. "ದೇವರೇ! ಈ ಕುದುರೆ, ಈ ಪಲ್ಲಕ್ಕಿ, ಈ ಹಿಲಾಲು, ಈ ಛತ್ರಚಾಮರಗಳು ಇವೆಲ್ಲ ಯಾಕೆ ನನಗೆ? ನನಗೇನು ಇವುಗಳ ಸೇರಿಕೆ ಅದೆಯೋ?" ಎಂದರು ಅವರು. ಸೇವೆಗಾಗಿ ಸೇವೆ ಮಾಡುವದು ಬೇಕಾಗಿತ್ತು ತುಕಾರಾಮರಿಗೆ. ಮೋಕ್ಷದ ಫಲವು ಕೂಡ ಅವರಿಗೆ ಬೇಡವಾಗಿತ್ತು. ಮೋಕ್ಷವನ್ನು ಕೂಡ ಅವರು ಎಸೆದೊಗೆದಿದ್ದರು. "ಡಂಭಾಚಾರ, ಕೀರ್ತಿ, ಮಾನ, ಸುಖ ಇವನ್ನೆಲ್ಲ ಉಗುಳಿ ಒಗೆಯುತ್ತೇನೆ ನಾನು. ನಮಗೇನು ಪ್ರಯೋಜನ ಅವುಗಳಿಂದ?" ಎಂದು ಅವರು ಒಂದು ಅಭಂಗದಲ್ಲಿ ಅಂದಿರುವರು.

ಕೊನೆಗೆ ಮಾನವರೆಲ್ಲರೂ ಗಳಿಸತಕ್ಕ ದೃಷ್ಟಿ ಇದು. ಕರ್ಮವೇ ಮೋಕ್ಷವು. ಮೋಕ್ಷವೆಂದರೆ ಸಂತೋಷ. ಕರ್ಮವೇ ಎಲ್ಲವೂ ಆಗಬೇಕು. ಸತ್ಕರ್ಮವನ್ನೇ ಮಾಡಬಯಸಬೇಕು. ಸೂರ್ಯನಿಗೆ ಬೆಳಗುವದೇ ಗೊತ್ತು. ಮೋಡಗಳಿಗೆ ಮಳೆಗರಿಯುವದೇ ಗೊತ್ತು. ಅಭ್ಯಾಸದಿಂದಲೇ ಅಹಂಕಾರವು ಲೋಪವಾಗುವದು. ಗಾಳಿಗೆ ಬೀಸುವದೇ ಗೊತ್ತು. ಸಾಧು ಸಂತರಿಗೆ ಸಂತ್ರಸ್ತರ ಕಣ್ಣೀರು ಒರೆಸುವದೇ ಗೊತ್ತು. ಕೆಲಕಾಲದ ಅಭ್ಯಾಸದಿಂದ ಫಲೇಚ್ಛೆಯು ಅಳಿಯುವದು. ಮೂಗು ಹಗಲಿರುಳು ಉಸಿರಾಡಿಸುತ್ತದೆಂದು, ನಾವು ಮೂಗಿನ ಆಭಾರವನ್ನು ಮನ್ನಿಸುವದಿಲ್ಲ. ಮೂಗಿಗೂ ತಾನೇನು ವಿಶೇಷ ಮಾಡುತ್ತೇನೆಂದು ಅನಿಸುವದಿಲ್ಲ. ಇದರಂತೆ ನಮ್ಮ ಮನಸ್ಸಿನ ಒಲವು ಆಗಬೇಕು. ತನ್ನ ಮಕ್ಕಳ ಸುಂಬಳ ಒರೆಸುವಾಗ ಇರುವ ಸಹಜತೆಯ ಭಾವವು ಎರಡನೆಯವರ ಮಕ್ಕಳ ಸುಂಬಳವನ್ನು

ಕಳೆಯುವಾಗ ಬರಬೇಕು. ಮೊದಲು ಎರಡನೆಯವರ ಮಕ್ಕಳ ಸಂಬಳ ವನ್ನು ಒರೆಸುವಾಗ ಯಾರಾದರೂ ತನ್ನನ್ನು ನೋಡುತ್ತಾರೆಯೋ "ಅಯ್ಯೋ ಏನಿದು ? ನನ್ನ ಹುಡುಗನ ಸಂಬಳ ಒರೆಸಿದರಲ್ಲ." ಎಂದು ತನ್ನ ಆಭಾರ ಮನ್ನಿಸುತ್ತಾರೆಯೋ ಎಂಬುದರ ಕಡೆಗೆ ಲಕ್ಷ್ಯವಿರಬಹುದು. ಆದರೆ ಉತ್ತರೋತ್ತರ ಈ ವೃತ್ತಿಯು ತಗ್ಗಬೇಕು; ಅದೊಂದು ನಮ್ಮ ಕೈಯ ಧರ್ಮವಾಗಬೇಕು.

"ಮಾಮನುಸ್ಮರ ಯುಧ್ಯಚ" ಎಂಬುದು ಭಗವಂತನು ಕಲಿಸಿದ ಪಾಠವಿದೆ. ಫಲವು ಸಿಗಲಿ, ಸಿಗದಿರಲಿ, ಸತ್ಯವನ್ನು ಸ್ಮರಿಸಿ ಕರ್ಮವನ್ನಾ ಚರಿಸಿರಿ. ದೇವರನ್ನು ಸ್ಮರಿಸಿ ಕರ್ಮವನ್ನು ಸಾಗಿಸಿರಿ. ಆದರೆ ದೇವರ ನೆನಪೆಂದರೇನು ? ಸಚ್ಚಿದಾನಂದದ ನೆನಪು. ನನ್ನ ಕರ್ಮವು ಸಚ್ಚಿದಾ ನಂದ ರೂಪಿಯಾದ ಪರಮಾತ್ಮನ ಪೂಜೆ ಮಾಡುವಂತಹದಾಗಬೇಕು. ಮಾಂಗಲ್ಯದ ಪೂಜೆಯನ್ನು ಮಾಡುವಂತಹದು ನನ್ನ ಕರ್ಮವು ಅದೆಯೋ ಇಲ್ಲವೋ ಎಂಬುದನ್ನು ನೋಡುವದೆಂದರೆ ಸತ್‌ಸ್ವರೂಪವನ್ನು ಪೂಜಿಸು ವದು, ಸತ್‌ಸ್ವರೂಪವನ್ನು ಸ್ಮರಿಸುವದು; ಅದರಂತೆ ನನ್ನ ಕರ್ಮವು ಜ್ಞಾನ-ವಿಜ್ಞಾನಯುಕ್ತವಾದದ್ದು ಅದೆಯೋ ಇಲ್ಲವೋ ಎಂಬುವನ್ನು ನೋಡುವದೆಂದರೆ ಚಿತ್‌ಸ್ವರೂಪಿ ಪರಮೇಶ್ವರನ ಸ್ಮರಣ. ಇದರಂತೆ ಕರ್ಮವನ್ನು ನೆರವೇರಿಸುವಾಗ ನನ್ನ ಹೃದಯವು ಉಕ್ಕೇರುತ್ತದೆಯೋ ಇಲ್ಲವೋ, ನನಗೆ ಅಪಾರವಾದ ಆನಂದವು ಆಗುತ್ತದೆಯೋ ಇಲ್ಲವೋ, ಎಂಬುದನ್ನು ನೋಡುವದೆಂದರೆ ಆನಂದರೂಪಿಯಾದ ಪರಮೇಶ್ವರನ ನೆನಹು. ಕರ್ಮದಲ್ಲಿ ಸಮಾಜದ ಮಂಗಲವು ಅಡಕವಾಗಿರಬೇಕು; ಜ್ಞಾನವೂ ಇರಬೇಕು. ಕರ್ಮದಿಂದ ನಮಗೆ ಭಾರವೆಂದೆನಿಸದೆ ಆನಂದ ವೆನಿಸಬೇಕು. ಇದಕ್ಕೆ ಸಚ್ಚಿದಾನಂದದ ಪೂಜೆಯೆನ್ನುತ್ತಾರೆ.

ಭಾರತೀಯ ಸಂಸ್ಕೃತಿಯು ಸೋಲು-ಗೆಲವು, ಸಿದ್ಧಿ-ಅಸಿದ್ಧಿ, ಯಶಸ್ಸು-ಅಪಯಶಸ್ಸು ಇವುಗಳ ಕಡೆಗೆ ಲಕ್ಷ್ಯವನ್ನು ಕೊಡುವದಿಲ್ಲ. ಸಾಗರದಲ್ಲಿ ತೆರೆಗಳು ಮೇಲಕ್ಕೇಳುತ್ತವೆ, ದಂಡೆಗೆ ಅಪ್ಪಳಿಸುತ್ತವೆ; ಸಮು ದ್ರಕ್ಕೆ ಉಬ್ಬರ-ಇಳಿತಗಳಿವೆ. ಆದರೆ ಅದರ ಧೀರ, ಗಂಭೀರವಾದ ಗರ್ಜ ನೆಯು ಅಖಂಡವಾಗಿ ಸಾಗಿರುತ್ತದೆ. ಈ ಕರ್ಮವು ಎಡೆಬಿಡದೆ ನಡೆದದೆ. ಉಳಿಯುವದು-ಅಳಿಯುವದು, ದುಡ್ಡು-ದಾರಿದ್ರ್ಯ, ದಾಸ್ಯ-ಸ್ವಾತಂತ್ರ್ಯ, ಸೋಲು-ಗೆಲವು, ಇತ್ತಕಡೆಗೆ ನೋಡದೆ ಧ್ಯೇಯದ ಮೇಲೆ ದೃಷ್ಟಿಯು

ನ್ನಿಟ್ಟು ಮುಂದುವರಿಯಬೇಕು. ಚಾರಿತ್ರ್ಯವು, ಶೀಲವು, ನಡಾವಳಿಯು ಮುಖ್ಯವಾದ ವಸ್ತುವು. ನಮ್ಮೆಲ್ಲರ ವಿಕಾಸವು ಮುಖ್ಯವಾದದ್ದು. ಸತ್ಕರ್ಮವು ಮುಖ್ಯವಾದದ್ದು. ಇದಕ್ಕಾಗಿಯೇ ನಮ್ಮ ಜೀವನ. ಸೋಲು-ಗೆಲವುಗಳೊಡನೆ ಬಡಿದಾಡುತ್ತ ನಾನು ಮುಂದುವರಿಯುವೆನು. ಗೆಲುವಿನಿಂದ ಸೊಕ್ಕಿನವನಾಗುವದಿಲ್ಲ. ಸೋಲಿನಿಂದ ಧೈರ್ಯಗುಂದುವದಿಲ್ಲ. ದುಡ್ಡಿನಿಂದ ಮದಾಂಧನಾಗುವದಿಲ್ಲ. ದುಃಖದಿಂದ ಎದೆಗುಂದುವದಿಲ್ಲ. ನನ್ನ ಕರ್ಮವನ್ನು ಕೈಯಲ್ಲಿ ಇಟ್ಟುಕೊಂಡು ಮುನ್ನುಗ್ಗುವೆನು. ಭಾರತೀಯ ಸಂಸ್ಕೃತಿಯು ಕೇವಲ ಗೆಲುವಿನ ತತ್ವವನ್ನೇ ಹೇಳುವದಿಲ್ಲ. ಕೇವಲ ಗೆಲುವಿನ ತಳಹದಿಯ ಮೇಲೆ ನಿಂತ ಸಂಸ್ಕೃತಿಯಾಗಿದ್ದರೆ, ಜಗತ್ತಿನ ಅರ್ಧ ಅನುಭವಗಳ ಮೇಲೆ ನಿಂತಂಥ ಸಂಸ್ಕೃತಿಯಾಗುತ್ತಿತ್ತು. ನೀನು ಯಾವಾಗಲೂ ಸುಖದಲ್ಲಿಯೇ ಉರುಳಾಡುವಿಯೆಂದು ಭಾರತೀಯ ಸಂಸ್ಕೃತಿಯು ಸುಳ್ಳು ಆಶೆಯನ್ನು ಯಾರಿಗೂ ತೋರಿಸಿಲ್ಲ. ಗೆಲುವಿನಿಂದ ಸೊಕ್ಕಬೇಡ, ಸೋಲಿನಿಂದ ಸವೆಯಬೇಡ, ಎಂಬುದು ನಮ್ಮ ಸಂಸ್ಕೃತಿಯ ಮಹಾಧ್ಯೇಯವು; ಸಂದೇಶವು. ಸೋಲು-ಗೆಲವುಗಳನ್ನು ದಾಟಿ ಮುಂದುವರಿಯಬೇಕಾಗಿದೆ. ನಾವು ಕೇವಲ ಸೋಲು-ಗೆಲವುಗಳ ಸಾಕ್ಷಿಗಳಾಗಬೇಕಾಗಿದೆ. ಕ್ರಾಸಿನ ಮೇಲೆ ಏರುವ ಸಮಯ ಬಂದರೂ "ಪ್ರಭು ನಿನ್ನ ಇಚ್ಛೆ" ಎಂದನು ಕ್ರಿಸ್ತನು. ಕರ್ಮವನ್ನು ಆಚರಿಸುವಾಗ ಫಾಶಿಯಾಗಲೀ-ಗದ್ದುಗೆಯಾಗಲೀ, ಮಲ್ಲಿಗೆಯಾಗಲಿ-ಮುಳ್ಳಾಗಲಿ, ಗೆಲುವಾಗಲೀ-ಸೋಲಾಗಲೀ, ಯಾವದರಿಂದಲೂ ನನ್ನ ಆತ್ಮವು ಮಲಿನವಾಗಲಾರದೆಂಬ ಅಚಲ ಶ್ರದ್ಧೆಯು ನಿಜವಾದ ಕರ್ಮವೀರರಲ್ಲಿರುತ್ತದೆ. ಅದೃಷ್ಟ ಫಲವು ಅವನ ಕಣ್ಣಿಗೆ ಕಾಣುತ್ತದೆ. ಸತ್ಯಕ್ಕೆ ಸಾವಿಲ್ಲವೆಂಬ ಮಾತನ್ನು ಅವರು ಮನಗಂಡಿರುತ್ತಾರೆ. ಗೆಲುವಿನ ಓಲಗವು ಬೇಡ, ಸೋಲಿನ ರೋದನವೂ ಬೇಡ, ಇವೆರಡನ್ನೂ ಮೀರಿ, ಇವೆರಡರ ಮೇಲೆ ಸವಾರರಾಗಿ ನಿರ್ದ್ವಂದ್ವರಾಗಿ, ಸದೈವ ಕರ್ಮವನ್ನೇ ಮಾಡುತ್ತಿರಬೇಕು. ಅದರಲ್ಲಿಯೇ ತಲ್ಲೀನರಾಗಬೇಕು. ಅದೇ ನಿನ್ನ ಮೋಕ್ಷ, ಪೂಜೆ, ಮಹಾಧರ್ಮ. ಹೀಗೆ ಭಾರತೀಯ ಸಂಸ್ಕೃತಿಯು ಸಾರಿ ಹೇಳುತ್ತದೆ. ಆದರೆ ಇದನ್ನು ಕಿವಿಗೊಟ್ಟು ಕೇಳುವರಾರು?

# ೧೧. ಗುರು—ಶಿಷ್ಯರು

ಭಾರತೀಯ ಸಂಸ್ಕೃತಿಯಲ್ಲಿ ಗುರುಭಕ್ತಿಯದೊಂದು ಅತ್ಯಂತ ಮಧುರವಾದ, ಸವಿಯಾದ, ಕಾವ್ಯಮಯ ಕಲ್ಪನೆ ಇದೆ. ಜ್ಞಾನೇಶ್ವರಿಯ ಹದಿಮೂರನೇ ಅಧ್ಯಾಯದಲ್ಲಿ ಮತ್ತು ಅಲ್ಲಲ್ಲಿ ವಚನಕಾರರ ವಚನಗಳಲ್ಲಿ, ಗುರುಭಕ್ತಿಯ ಅಪಾರ ಮಹಿಮೆಯು ಬಣ್ಣಿಸಲಾಗಿದೆ. ಗುರುಭಕ್ತಿಯಲ್ಲಿ ಅಡಕವಾದ ಅರ್ಥವು, ಬಹಳ ಜನರಿಗೆ ಹೊಳೆಯುವದಿಲ್ಲ. ಎಲ್ಲಿಡೆಯಲ್ಲಿಯೂ ಡಂಭವೇ ಪಸರಿಸಿದ್ದರಿಂದ ಮತ್ತು ಬಾಹ್ಯಾಡಂಬರವೇ ಹಬ್ಬಿದ್ದರಿಂದ ಹಿರಿದಾದ ಗುರುಃಭಕ್ತಿಯು ಧೂಳಿಯಲ್ಲಿ ಮುಳುಗಿದೆ.

ಗುರುವೆಂದರೆ ಕೇವಲ ಶಿಕ್ಷಕನೂ ಅಲ್ಲ, ಆಚಾರ್ಯನೂ ಅಲ್ಲ. ಶಿಕ್ಷಕರಾಗಲೀ, ಆಚಾರ್ಯರಾಗಲೀ ಯಾವದಾದರೊಂದು ವಿಶಿಷ್ಟವಾದ ಜ್ಞಾನವನ್ನು ಮಾಡಿಕೊಡುವರು. ಅವರ ಕೈಹಿಡಿದು ನಾವು ಜ್ಞಾನದ ಅಂಗಳವನ್ನು ಸೇರುವೆವು. ಆದರೆ ಗುರುವು ನಮ್ಮನ್ನು ಜ್ಞಾನದ ಗರ್ಭಗುಡಿಯಲ್ಲಿಯೇ ಕರೆದುಕೊಂಡು ಹೋಗುವನು. ಆಯಾ ಧ್ಯೇಯಭೂತ ಜ್ಞಾನದೊಡನೆ ಗುರು ನಮ್ಮನ್ನು ಬೆಸೆಯುವನು. ಜ್ಞಾನದೊಡನೆ ಒಂದಾದ ಗುರುವು ಶಿಷ್ಯನನ್ನು ಸಮಾಧಿ ಸ್ಥಿತಿಯಲ್ಲಿ ಇರಿಸುವನು. ಸಾಲೆಗಳಲ್ಲಿ ಕೇಳುವದು, ಹೇಳುವದು ನಡೆಯುತ್ತದೆ. ಆದರೆ ಗುರುಗಳ ಬಳಿಯಲ್ಲಿ ಪ್ರಶ್ನೋತ್ತರ ವಿಶೇಷವಾಗಿ ನಡೆಯುವದಿಲ್ಲ. ಇಲ್ಲಿ ಮಾತನಾಡದೆ ಶಂಕೆಯ ನಿರಸನವಾಗುತ್ತದೆ; ಉತ್ತರಗಳು ದೊರೆಯುತ್ತವೆ. ಗುರುಗಳ ಬಳಿಯಲ್ಲಿ ಬರೇ ಕೇಳುವದು, ನೋಡುವದು; ಮಾತನಾಡದೆ ಗುರುಗಳು ಕಲಿಸುತ್ತಾರೆ. ಏನೂ ಕೇಳದೆ ಶಿಷ್ಯನು ಅರಿತುಕೊಳ್ಳುತ್ತಾನೆ. ಗುರುವೆಂದರೆ ಉಕ್ಕೇರುವ ಜ್ಞಾನಸಾಗರ! ಸಚ್ಛಿಷ್ಯನ ಮುಖಚಂದ್ರವನ್ನು ನೋಡಿ ಗುರುವೆಂಬ ಜ್ಞಾನಸಾಗರವು ಉಕ್ಕೇರುತ್ತದೆ.

ಜ್ಞಾನವನ್ನು ದೊರಕಿಸುವ ಬಗೆಗಳನ್ನು ಗೀತೆಯು ಬಣ್ಣಿಸಿದೆ. "ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ'' ಜ್ಞಾನವನ್ನು ಪ್ರಣಾಮದಿಂದ, ಮತ್ತೆ ಮತ್ತೆ ಪ್ರಶ್ನೆಗಳನ್ನು ಕೇಳುವದರಿಂದ, ಮತ್ತು ಸೇವೆಯಿಂದ ದೊರಕಿಸಬೇಕಾಗುತ್ತದೆ. ಶಿಕ್ಷಕನಿಂದ ದೊರೆಯುವ ಜ್ಞಾನವು ಪರಿಶ್ರಮದಿಂದಲೇ ಸಾಧ್ಯವಾದದ್ದು. ಆದರೆ ಗುರುಗಳಿಂದ ಜ್ಞಾನ ದೊರಕಿಸುವ ಮಾರ್ಗಗಳು ಎರಡು ಬಗೆಯವು. ಒಂದು ಪ್ರಣಾಮ, ಇನ್ನೊಂದು

ಸೇವೆ. ಜ್ಞಾನದ ನಿಜವಾದ ಆರಂಭವು ನಯದಲ್ಲಿ. ಶಿಷ್ಯನು ಬರಿಯ ಮನಸಿನಿಂದ ಗುರುವಿನ ಬಳಿಯಲ್ಲಿ ಹೋಗುವನು. ಬಾವಿಯಲ್ಲಿ ಬೇಕಾದಷ್ಟು ನೀರಿದೆ. ಆದರೆ ಕೊಡವು ಬಾಗದಿದ್ದರೆ ಆ ಅನಂತ ನೀರಿನೊಳಗಿನ ಒಂದು ಹನಿಯು ಸಹ ಆ ಕೊಡದಲ್ಲಿ ಸೇರುವದಿಲ್ಲ. ಇದರಂತೆಯೇ ಜ್ಞಾನಸಾಗರದ ಬಳಿ ಎಲ್ಲಿಯ ವರೆಗೆ ಬಾಗುವದಿಲ್ಲವೋ ನಮ್ರರಾಗುವದಿಲ್ಲವೋ, ಗುರುಗಳ ಅಡಿಯಲ್ಲಿ ಕೂಡ್ರುವದಿಲ್ಲವೊ, ಅಲ್ಲಿಯ ವರೆಗೆ ನಮಗೆ ನಿಜವಾದ ಜ್ಞಾನವು ದೊರೆಯುವದಿಲ್ಲ. ತುಂಬಬೇಕಾದರೆ ಬಾಗಬೇಕಾಗುತ್ತದೆ. ಬೆಳೆಯಬೇಕಾದರೆ ನಮಸ್ಕರಿಸಬೇಕಾಗುತ್ತದೆ.

ಸಂಗೀತವನ್ನು ಕಲಿಯಬೇಕೆನ್ನುವ ಹುಡುಗನು ಸಂಗೀತ ಶಾಲೆಗೆ ಹೋಗುವನು. ಅಲ್ಲಿ ಕೆಲವು ವರುಷ ಕಲಿಯುವನು. ಆದರೆ ಅವನಿಗೆ ನಿಜವಾದ ಸಂಗೀತ ಜ್ಞಾನವು ಆಗುವದಿಲ್ಲ. ಅಲ್ಲಿ ಅವನಿಗೆ ಸಂಗೀತದ ಪರಿಚಯ ಮಾತ್ರ ಆಗುತ್ತದೆ. ಆದರೆ ಸಂಗೀತದ ಆತ್ಮ ಕಾಣುವದೆಲ್ಲಿ, ಅರಿಯುವದೆಲ್ಲಿ? ಯಾವನಾದರೊಬ್ಬ ಹೆಸರಾದ ಗಾಯಕನ ಬಳಿಯಲ್ಲಿ ಸಾಧಕನಾಗಿ, ಕೆಲವು ವರ್ಷ ಇದ್ದು, ಆ ಗುರುವಿನ ಸೇವೆಯನ್ನು ನಯ, ಭಕ್ತಿ, ನಲುಮೆಯಿಂದ ಮಾಡಿ, ಯಾವ ಯಾವ ಸಮಯಕ್ಕೆ ಗುರುವು ಬೇರೆ ಬೇರೆ ರಾಗಗಳನ್ನು ತಲ್ಲೀನನಾಗಿ ಹಾಡುವನೋ ಆ ಸಮಯಗಳಲ್ಲಿ ಎಲ್ಲ ಇಂದ್ರಿಯಗಳನ್ನು ಕಿವಿಯನ್ನಾಗಿ ಮಾಡಿಕೊಂಡು ಕೇಳುವನೋ, ಆಗ ಮಾತ್ರ ಅವನಿಗೆ ನಿಜವಾದ ಸಂಗೀತದ ತಿರುಳು ತಿಳಿಯುವದು, ಹೊಳೆಯುವದು. ಅವನು ಕಲಿತ ಸಂಗೀತಕ್ಕೆ ಕಳೆಯೇರುವದು.

ನಯಭಕ್ತಿಗಳಿಂದ ಜ್ಞಾನವನ್ನು ಗಳಿಸಲು ಬರುವ ಶಿಷ್ಯರ ಕುಲ ಜಾತಿಗಳನ್ನು ಗುರು ಎಂದಿಗೂ ವಿಚಾರಿಸುವದಿಲ್ಲ. ಕಳಕಳಿಯೆಂಬ ವಸ್ತುವೊಂದೆ ಗುರುವಿಗೆ ಗೊತ್ತು. ಶತ್ರುಪಕ್ಷದ ಕಚನು ಪ್ರೇಮದಿಂದ ಕಾಲಡಿಯಲ್ಲಿ ಬಂದಕೂಡಲೇ ಶುಕ್ರಾಚಾರ್ಯರು ಸಂಜೀವಿನೀ ವಿದ್ಯೆಯನ್ನು ಕಲಿಸಿದರು. ಬರಿಯ ಕೊಡವನ್ನು ತಕ್ಕೊಂಡು ಬಂದು ನಮ್ರರಾಗಿ ಬಾಗಿದರೆ, ಯಾರೇ ಇದ್ದರೂ ಅವರವರ ಕೊಡವನ್ನು ಗುರುವು ಖಂಡಿತವಾಗಿಯೂ ತುಂಬಿಕೊಡುವನು.

ಗುರುಗಳು ನಮಗೆ ಪೂರ್ಣಜ್ಞಾನದ ಭೆಟ್ಟಿಯನ್ನು ಮಾಡಿಸಿ ಕೊಡುತ್ತಾರೆ. ಆಯಾ ಜ್ಞಾನಕ್ಷೇತ್ರಗಳಲ್ಲಿದ್ದ ಇಂದಿನವರೆಗಿದ್ದ ಜ್ಞಾನದ ಅರಿವನ್ನು ನಮಗೆ ಮಾಡಿಕೊಡುವರು. ಭೂತಕಾಲವನ್ನು ಸಂಪೂರ್ಣವಾಗಿ

ನಮ್ಮೆದುರು ಇಡುವರು, ವರ್ತಮಾನಕಾಲವ ಪರಿಚಯವನ್ನು ಮಾಡಿ ಕೊಡುವರು, ಭವಿಷ್ಯಕಾಲದ ದಿಕ್ಕನ್ನು-ಮಾರ್ಗವನ್ನು ತೋರಿಸುವರು. ಗುರುವೆಂದರೆ ಈ ಹೊತ್ತಿನ ವರೆಗೆ ಇರುವ ಜ್ಞಾನದ ಮೂರುತಿಯು.

ಗುರುಗಳೆಂದರೆ ಒಂದು ದೃಷ್ಟಿಯಿಂದ ನಮ್ಮ ಗುರಿ. ನಮಗಿದ್ದ ಜ್ಞಾನದ ಹಸಿವು ಯಾರಿಂದ ಪೂರ್ಣತೆ ಹೊಂದುವದೋ ಅವರೇ ನಮ್ಮ ಗುರುಗಳು. ಗುರುಭಕ್ತಿಯೆಂದರೆ ನಮ್ಮ ಗುರಿಯಲ್ಲಿದ್ದ ಭಕ್ತಿ. ಗುರು ಶಬ್ದ ವಿದ್ದಲ್ಲಿ ಗುರಿ ಎಂಬ ಶಬ್ದವನ್ನು ಉಪಯೋಗಿಸಿರಿ. ಅಂದರೆ ಗುರುಭಕ್ತಿ ಎಂಬುದು ಉಪಹಾಸದ ಮಾತೆಂದು ಅನಿಸಲಿಕ್ಕಿಲ್ಲ. ಅರಳಿದ ತಾವರೆಯ ಬಳಿ ಗುಂಜಗಾನವನ್ನು ಮಾಡುತ್ತ ತುಂಬಿಯು ಬಂದು ಸದ್ದಿಲ್ಲದೆ ಆ ತಾವರೆಯೊಳಗಿನ ಮಕರಂದವನ್ನು ಕುಡಿದು ಕುಡಿದು ಹೇಗೆ ತಲ್ಲೀನ ವಾಗುತ್ತದೆಯೋ ಅದರಂತೆ ಸಚ್ಛಿಷ್ಯನು ಗುರುಗಳ ಬಳಿಯಲ್ಲಿ ಬಂದು, ಗುರುಗಳನ್ನು ಒಲಿಸುವನು. ಅವರ ಜ್ಞಾನ ಭಾಂಡಾರವನ್ನು ಬರಿದು ಮಾಡಲು ಯತ್ನಿಸುವನು. ತಾನು ಪಾತ್ರತೆಯುಳ್ಳ ಪಾತ್ರೆಯನ್ನು ತಂದರೆ ಮಾತ್ರ ಆ ಪಾತ್ರೆಯಿಂದ ಗುರುವಿನ ಜ್ಞಾನ ಭಾಂಡಾರವನ್ನು ತುಂಬಿ ಕೊಂಡು ಬರಿದು ಮಾಡಬಲ್ಲನು. ತನ್ನ ಜೀವನದ ಪಾತ್ರೆಯು ಎಷ್ಟು ಆಳ ವಾದದ್ದೋ ಮತ್ತು ದೊಡ್ಡದೋ ಅಷ್ಟರ ಮಟ್ಟಿಗೆ ಶಿಷ್ಯನು ಗುರುಗಳಿಂದ ಜ್ಞಾನವನ್ನು ದೊರಕಿಸಬಲ್ಲನು.

"ಪಾತ್ರತೆ ಬಿಡಬೇಡಿರಿ'' ಎಂದು ಸಮರ್ಥರಾಮದಾಸರು ಹೇಳಿ ದ್ದಾರೆ. ನಾವು ಕಲಿತದ್ದು ಏನೂ ಅಲ್ಲ. ಇನ್ನೂ ನಾವು ತುಂಬಿಕೊಂಡವ ರಾಗಿಲ್ಲ. ಇನ್ನೂ ನಮಗೆ ಬಹಳ ಕಲಿಯುವದದೆ, ಹೀಗೆ ನಮಗೆ ಯಾವಾ ಗಲೂ ಅನಿಸುತ್ತಿರಬೇಕು. ಮುಂದೆ, ಇನ್ನೂ ಮುಂದೆ ಎಂದು ಅನ್ನಬೇಕು. ಇದೇ ವಿಕಾಸದ ಮಾರ್ಗವು. ನಾನೆಲ್ಲವನ್ನೂ ಕಲಿತೆನು, ಅರಿತೆನು ಎಂಬು ವವನ ಬೆಳವಣಿಗೆಯು ಮುಗಿಯಿತೆಂದೇ ತಿಳಿಯಬೇಕು.

ಧ್ಯೇಯವು ಸದೈವ ಬೆಳೆಯುತ್ತಲಿದೆ. ಧ್ಯೇಯರೂಪಿ ಗುರುಗಳು ಅನಂತರಿದ್ದಾರೆ. ಅವರ ಸೇವೆ ಎಷ್ಟು ಮಾಡಿದರೂ ಕಡಿಮೆಯೇ. ಜನ್ಮ ಜನ್ಮಾಂತರದಲ್ಲಿ ಅವರನ್ನು ಭಕ್ತಿಯಿಂದ ಪೂಜಿಸಿದರೆ ಮಾತ್ರ ಪರಿಪೂರ್ಣತೆ ಯನ್ನು ಹೊಂದಬಹುದು. "ನನ್ನ ಜ್ಞಾನವು ಸಿಂಧುವಿನಲ್ಲಿ ಬಿಂದುವಿನಷ್ಟು ಅದೆ"ಯೆಂದು ನ್ಯೂಟನ್ನನು ಹೇಳಿದ್ದಾನೆ. "ನನಗೆ ಏನೂ ತಿಳಿಯುವದಿಲ್ಲ; ಇದಿಷ್ಟೇ ನನಗೆ ತಿಳಿದದೆ''ಯೆಂದು ಸಾಕ್ರೆಟಿಸನು ಅಂದಿದ್ದಾನೆ.

ಆಯಾ ಶಾಸ್ತ್ರಗಳ ಅನಂತ ಜ್ಞಾನವನ್ನು ಪಡೆಯುವದಕ್ಕಾಗಿ ಹೇಗೆ ದುಡಿಯಬೇಕು? ಆ ಶಾಸ್ತ್ರಗಳ ಹುಚ್ಚು ಹೇಗೆ ಹಿಡಿಯಬೇಕು? ಇದನ್ನು ಗುರುಗಳು ಕಲಿಸುತ್ತಾರೆ. ಗುರುವೆಂದರೆ ಅನಂತ ಜ್ಞಾನದ ಮೂರ್ತಿ. ಶಿಷ್ಯನಿಗೆ ಗುರುವೆಂದರೆ ಕುರುಹು. ಗುರುವೆಂದರೆ ಮೂರ್ತಿಮಂತ ಜ್ಞಾನದ ಹಸಿವು; ಅನಂತಜ್ಞಾನದ ಕಳಕಳಿಯು; ಸತ್ಯದ ಪ್ರಯೋಗಗಳನ್ನು ಏರ್ಪಡಿಸುವ ಉತ್ಕಟತೆ; ನನ್ನ ಗುರುವಿಗೆ ಆದಿ ಇಲ್ಲ; ಕೊನೆ ಇಲ್ಲ; ಪೂರ್ವವಿಲ್ಲ; ಪಶ್ಚಿಮವಿಲ್ಲ; ನನ್ನ ಗುರುವೆಂದರೆ ಪರಿಪೂರ್ಣತೆಯು. ಅವನು ಪೂರ್ಣ ಪ್ರಜ್ಞನು.

ಇಂಥ ಗುರುಗಳಿಗೆ ನಾವು ಕೊಡುವದೇನೂ ಇರುವದಿಲ್ಲ. ಅವರಿಗೆ ಎಷ್ಟು ಕೊಟ್ಟರೂ ಕಡಿಮೆಯೆ. ಎಷ್ಟು ಸ್ವಲ್ಪ ಕೊಟ್ಟರೂ ಅದು ಬಹಳೇ. ಮನುಸ್ಮೃತಿಯಲ್ಲಿ ಹೇಳಿದೆ. "ನಿಮ್ಮ ಬಳಿಯಲ್ಲಿ ಕೊಡಲು ಏನೂ ಇಲ್ಲ ದಿದ್ದರೆ, ಒಂದು ಆವಿಗೆಯ ಜೋಡನ್ನಾದರೂ ಗುರುವಿಗೆ ಅರ್ಪಿಸಿರಿ. ಒಂದು ಮಣ್ಣಿನ ಕೊಡವನ್ನಾದರೂ ನೀರು ತುಂಬಿಕೊಡಿರಿ. ಅದಾಗದಿದ್ದರೆ ಒಂದು ಹೂವನ್ನಾದರೂ ಅರ್ಪಿಸಿರಿ.'' ಶಿಷ್ಯನೇನು ಕೊಟ್ಟಿದ್ದಾನೆಂಬುದರ ಕಡೆಗೆ ಗುರುವು ನೋಡತಕ್ಕದ್ದಲ್ಲ. ಕೊಟ್ಟದ್ದರಲ್ಲಿ ಕೃತಜ್ಞತೆಯ ಸಾಗರವೇ ತುಂಬಿರುತ್ತದೆ. ಅವನ ಹೃದಯವೇ ಅದರಲ್ಲಿ ಸುರಿಸಲ್ಪಟ್ಟಿರುತ್ತದೆ.

ನಾನು ಇಂಥ ಗುರುಗಳ ಶಿಷ್ಯನು, ನಾನು ಇಂಥವರಡಿಯಲ್ಲಿ ಕುಳಿತು ಕಲಿಯುತ್ತೇನೆಂದು ಒಳ್ಳೇ ಹೆಮ್ಮೆಯಿಂದ ಯುರೋಪ ಖಂಡ ದಲ್ಲಿ ಹೇಳುವ ಪರಿಪಾಠವುಂಟು. ಸಾಕ್ರೆಟೀಸನ ಶಿಷ್ಯನೆಂದು ಅನಿಸಿ ಕೊಳ್ಳುವದರಲ್ಲಿ ಪ್ಲೇಟೋನಿಗೆ ಒಳ್ಳೇ ಅಭಿಮಾನವೆನಿಸುತ್ತಿತ್ತು. ತಾನು ಪ್ಲೇಟೋನ ಶಿಷ್ಯನೆಂದು ಹೇಳಿಕೊಳ್ಳುವದರಲ್ಲಿ ಅರಿಸ್ಟಾಟಲನಿಗೆ ಕೃತಾರ್ಥತೆ ಎನಿಸುತ್ತಿತ್ತು. ತಾನು ಇಬ್ಸನ್‌ನ ಅನುಯಾಯಿಯೆಂದು ಬರ್ನಾರ್ಡಶಾ ಹೆಮ್ಮೆ ಪಡುತ್ತಾನೆ. ಮತ್ತು ಮಾರ್ಕ್ಸನ ಶಿಷ್ಯನೆಂದು ಯಾರಾದರೂ ಅಂದರೆ ಲೆನಿನ್‌ಗೆ ಗೌರವವೆನಿಸುತ್ತಿರಬೇಕು.

ನಾನು ಇಂಥವರಿಗೆ ಹೊಂದಿದವನೆಂಬ ಭಾವನೆಯೇ ಹಿರಿದಾದದ್ದು. ಆ ಭಾವನೆಯಲ್ಲಿ ಕೃತಜ್ಞತೆಯು ತೋರುತ್ತದೆ. ನಾನು ಈ ಇಡೀ ಜಗತ್ತಿ ನಲ್ಲಿ ಒಬ್ಬೊಂಟಿಗನೇ ಅಲ್ಲ. ಜಗತ್ತಿನಲ್ಲಿ ಸಹಕಾರ್ಯವಿದೆ. ಅವೇ ನನ್ನ ಮತ್ತು ಮುಂದಿನ ಪೀಳಿಗೆಯವರ ಆಧಾರ. ಜಗತ್ತಿನಲ್ಲಿ ಕೇವಲ ತನ್ನಷ್ಟಕ್ಕೆ ತಾನೇ ಸ್ವತಂತ್ರನಾಗಿ ಯಾರೂ ಎಲ್ಲಿಯೂ ಜ್ಞಾನವನ್ನು ಹುಡಿಕಿ ತೆಗೆದಿಲ್ಲ.

ಪ್ರತಿಯೊಬ್ಬನು ಹಿಂದಿನವರು ಶೋಧಿಸಿದ ಜ್ಞಾನದ ಅಡಿಗಲ್ಲಿನ ಮೇಲೆಯೇ ನಿಂತು ಮುಂದೆ ನೋಡುತ್ತಾನೆ. ಜ್ಞಾನದ ಇತಿಹಾಸವೆಂದರೆ ಸಹಕಾರ್ಯದ ಇತಿಹಾಸ, ಅಖಂಡ ಪರಂಪರೆಯ ಇತಿಹಾಸ.

ಮುಂಮುವರಿಯುವ ಶಿಷ್ಯನನ್ನು ನೋಡಿ ಗುರುವಿಗೆ ಕೌತುಕವೇ ಅನಿಸುತ್ತದೆ. ಶಿಷ್ಯನಿಂದ ಪರಾಜಯ ಹೊಂದುವದರಲ್ಲಿ ಇದೆ ಗುರುವಿಗೆ ನಿಜವಾದ ಆನಂದ. ಯಾಕೆಂದರೆ ಶಿಷ್ಯನ ವಿಜಯವು ಗುರುವಿನ ವಿಜಯವೇ ಅಲ್ಲವೇ ? ಅದು ಗುರು ಬಿತ್ತಿದ ಬೀಜದ ವಿಕಾಸವು. ಗುರು ತಾನು ಉಪಾಸನೆ ಮಾಡುವ ಜ್ಞಾನದ ಪೂಜೆಯೇ ಅದು. ಆ ಜ್ಞಾನದ ಬೆಳೆಯುವ ಸಿರಿ ಅದು. ಅಣ್ಣಾಸಾಹೇಬ ಪಟವರ್ಧನರು ಲೋಕಮಾನ್ಯರಿಗೆ ಆಶೀರ್ವಾದವನ್ನು ಕೊಡುತ್ತಿದ್ದರು. ಮತ್ತು ಗಾಂಧೀಜಿಯವರನ್ನು ಗೋಖಲೆಯವರು ಹೊಗಳುತ್ತಿದ್ದರು.

ಗುರು ತನ್ನಲ್ಲಿದ್ದ ಎಲ್ಲ ಜ್ಞಾನವನ್ನು ಶಿಷ್ಯನಿಗೆ ಕೊಟ್ಟುಬಿಡುವನು. ಅವನಿಂದ ಎಳ್ಳಷ್ಟು ಬಚ್ಚಿಡುವದಿಲ್ಲ. ತಮ್ಮ ದೊಡ್ಡಸ್ತಿಕೆಯು ಕಡಿಮೆಯಾಗಬಹುದೆಂಬ ಭೀತಿಯಿಂದ ತಮ್ಮಲ್ಲಿದ್ದ ಜ್ಞಾನದ ಬಂಡವಾಳವನ್ನೆಲ್ಲ ಕೊಡದ ಅಹಂಕಾರಿ ಗುರುಗಳು ಕೆಲವರಿದ್ದಾರೆ. ಆದರೆ ಅವರು ಗುರುಗಳೆಂಬ ಹೆಸರಿಗೆ ಪಾತ್ರರಲ್ಲ. ಅವರ ಜ್ಞಾನವು ಅವರೊಡನೆ ಅಳಿಯುವದು. ಯಾವ ಜ್ಞಾನದ ಉಪಾಸನೆಯನ್ನು ನಾವು ಮಾಡುತ್ತೇವೆಯೋ ಆ ಜ್ಞಾನವು ಅಳಿಯಬೇಕೆಂದು ಯಾರಿಗನಿಸುವದು ? ನಿಜವಾದ ಗುರುವಿಗೆ ಜ್ಞಾನವೃಕ್ಷವು ಬೆಳೆಯಬೇಕೆಂದು ಅನಿಸುತ್ತದೆ. ಜ್ಞಾನರೂಪದಿಂದಲೇ ಅವರು ಅಮರರಾಗುತ್ತಾರೆ. ತಾವು ಗಳಿಸಿದ್ದನ್ನೆಲ್ಲ ಕೊಟ್ಟುಬಿಡುವರು. ಒಂದು ದಿನ ಶ್ರೀರಾಮಕೃಷ್ಣರು ವಿವೇಕಾನಂದರಿಗೆ ಹೇಳಿದರು. "ನನ್ನ ಬಳಿಯಲ್ಲಿದ್ದದ್ದನ್ನೆಲ್ಲ ನಿನಗೆ ಕೊಟ್ಟುಬಿಡುತ್ತೇನೆ. ನನ್ನ ಸಾಧನೆಯನ್ನೆಲ್ಲ ನಿನ್ನಲ್ಲಿ ಸುರುವಿ ಬಿಡುತ್ತೇನೆ." ಎಂಥ ದಿವ್ಯವಾದ ಕ್ಷಣವಿರಬೇಕದು ! ಶಿಷ್ಯನಿಗೆ ತನ್ನ ಜೀವನದ ಸರ್ವಸ್ವವನ್ನೆಲ್ಲ ಅರ್ಪಣ ಮಾಡುವ ಕ್ಷಣ !

ಕುರುಡು ಭಕ್ತಿಯು ಗುರುವಿಗೆ ಸೇರುವದಿಲ್ಲ. ಗುರುವಿನ ಸಿದ್ಧಾಂತವನ್ನು ಮುಂದುವರಿಸುವದು, ಅವರ ಪ್ರಯೋಗಗಳನ್ನು ನಡೆಸುವದು, ಇದೇ ನಿಜವಾದ ಗುರುಸೇವೆಯು. ನಿರ್ಭಯತೆಯಿಂದ ಆದರೂ ನಮ್ರತೆಯಿಂದ ಜ್ಞಾನದ ಸೇವೆಯನ್ನು ಮಾಡುವದೇ ನಿಜವಾದ ಗುರುಭಕ್ತಿ. ಒಂದು ರೀತಿ ನೋಡಿದರೆ ಭೂತಕಾಲವು ನಮ್ಮ ಗುರು ಇದ್ದಂತೆ. ನಮ್ಮ

ಪೂರ್ವಜರೆಲ್ಲರೂ ನಮ್ಮ ಗುರುಗಳೇ. ಆದರೆ ಇಂದಿನ ದೃಷ್ಟಿಯಿಂದ ಭೂತಕಾಲದೊಳಗಿನ ಕೆಲವು ಮಾತು ತಪ್ಪೆಂದೆನಿಸಿದರೆ, ಅವನ್ನು ದೂರ ಮಾಡದೆ ಇರುವದೆಂದರೆ ಭೂತಕಾಲದ ಅಪಮಾನ ಮಾಡಿದಂತೆ. ಭೂತ ಕಾಲದಲ್ಲಿಯ ತಪ್ಪುಗಳನ್ನು ಹಾಗೆಯೆ ನಡಿಸಿದರೆ ಅದು ಉಚಿತವಲ್ಲ. ಅದು ಭೂತಕಾಲದ ಗೌರವವೂ ಅಲ್ಲ; ನಮ್ಮ ಪೂರ್ವಜರ ಗೌರವವೂ ಅಲ್ಲ. ಅದು ಒಂದು ದೃಷ್ಟಿಯಿಂದ ಅವಮಾನವೇ ಸರಿ.

ಮನೆತನದಲ್ಲಿಯ ಹಿರಿಯರು ಯಾರಾದರೂ ಸತ್ತರೆ ನಮಗೆ ದುಃಖ ವಾಗುತ್ತದೆ. ಆದರೆ ಮೋಹದಿಂದ ನಾವೇನು ಅವರ ಹೆಣವನ್ನು ಅಪ್ಪಿ ಕೊಂಡು ಕೂಡ್ರುವೆವೋ ? ಕೊನೆಗೆ ಆ ಮೃತದೇಹವನ್ನು ನಾವು ಅಗ್ನಿಗೆ ಅರ್ಪಿಸಲೇಬೇಕಾಗುತ್ತದೆ. ಹೆಣವನ್ನು ಮನೆಯಲ್ಲಿಡುವದೆಂದರೆ ಮನೆ ಯಲ್ಲಿ ಕೊಳಚೆಯನ್ನು ಹಬ್ಬಿಸಿದಂತೆ. ಅದು ಆ ಹೆಣದ ಅಪ್ರತಿಷ್ಠೆ, ಅವ ಮಾನವಾಗುವದು. ಅದರಂತೆಯೇ ನಮ್ಮ ಪೂರ್ವಜರ ಹೆಣಗಳಂತಾದ ರೀತಿ, ರಿವಾಜು, ನಡಾವಳಿ, ದೋಷಯುಕ್ತವಾದ ವಿಚಾರ ಪ್ರಣಾಲಿ ಇವುಗಳಿಗೆ ನಮ್ರತೆಯಿಂದ, ಮತ್ತು ಭಕ್ತಿಪೂರ್ವಕವಾಗಿ ಮಣ್ಣು ಕೊಡ ಬೇಕು.

ಗುರುಭಕ್ತಿಯೆಂದರೆ ಜ್ಞಾನ-ಭಕ್ತಿಯೆಂಬುದನ್ನು ಮರೆಯಬಾರದು. ಪೂರ್ವಜರನ್ನು ಕುರಿತು ಆದರವೆಂದರೆ ಪೂರ್ವಜರ ಸದನುಭವದ ಬಗ್ಗೆ ಆದರ, ಅವರ ಪ್ರಯತ್ನಗಳ ಬಗ್ಗೆ ಆದರ, ಅವರ ಸಾಹಸ, ಜ್ಞಾನ, ನಿಷ್ಠೆ ಗಳ ಬಗ್ಗೆ ಆದರ. ಗುರುಪೂಜೆಯೆಂದರೆ ಸತ್ಯದ ಪೂಜೆ; ಜ್ಞಾನದ ಪೂಜೆ; ಅನುಭವದ ಪೂಜೆ; ವಿಚಾರದ ಪೂಜೆ. ಮನುಷ್ಯನಿಗೆ ಎಲ್ಲಿಯ ವರೆಗೆ ಜ್ಞಾನದ ಹಸಿವು ಇರುವದೋ, ಅಲ್ಲಿಯ ವರೆಗೆ ಗುರುಭಕ್ತಿಯು ಜಗತ್ತಿನಲ್ಲಿ ಬಾಳಿ ಉಳಿದು ಬೆಳೆಯುವುದು.

ಭಾರತದಲ್ಲಿ ಗುರು ಶಬ್ದಕ್ಕಿಂತ ಸದ್ಗುರು ಶಬ್ದಕ್ಕೆ ಹೆಚ್ಚು ಮಹತ್ವ ವದೆ. ಸದ್ಗುರುವೆಂದರೇನು ? ಗುರುಗಳೆಂಬುವವರು ಆಯಾ ಜ್ಞಾನ ಕ್ಷೇತ್ರಗಳಲ್ಲಿ ನಮ್ಮನ್ನು ತರಬೇತಿ ಮಾಡುತ್ತಾರೆ. ಆದರೆ ಸದ್ಗುರು ಜೀವ ನದ ಕಲೆಯನ್ನು ಕಲಿಸುತ್ತಾನೆ. ಸಂಗೀತದ ಆತ್ಮದ ಅರಿವು ಪಡೆವುದು ತಾನಸೇನನಿಂದಲೇ ಸಾಧ್ಯವು. ಚಿತ್ರಕಲೆಯ ಆತ್ಮವನ್ನು ಅವನೀಂದ್ರರು ತೋರುವರು. ನೃತ್ಯಕಲೆಯಲ್ಲಿದ್ದ ದಿವ್ಯತೆಯನ್ನು ಉದಯಶಂಕರನೇ ತೋರಿಸಬಲ್ಲನು. ಸೃಷ್ಟಿಯಲ್ಲಿಯ ಅನಂತತೆಯನ್ನು ಶ್ರೀ ರಾಮನ್ನರೇ

ತೋರಿಸಬಲ್ಲರು. ಆದರೆ ಜೀವನದಲ್ಲಿಯ ಅನಂತತೆಯನ್ನು ತೋರಿಸುವವರಾರು ? ಜೀವನದಲ್ಲಿಯ ಸಂಗೀತವನ್ನು ಕಲಿಸುವವರಾರು ? ಜೀವನದಲ್ಲಿಯ ಸವಿಯಾದ ಕುಣಿತವನ್ನು ಕಲಿಸುವವರಾರು ?

"ಅಧ್ಯಾತ್ಮವಿದ್ಯಾ ವಿದ್ಯಾನಾಮ್'' ಎಂದು ಗೀತೆಯು ಹೇಳುತ್ತದೆ. ಜೀವನವನ್ನು ಅಂದಮಾಡುವದು, ತಮ್ಮ ತಮ್ಮ ಜೀವನವನ್ನು ದೋಷರಹಿತ, ನಿಷ್ಕಾಮ ಮತ್ತು ಎರಡನೆಯವರಿಗೆ ತೊಂದರೆ ಇಲ್ಲದಂತೆ ಮಾಡಿ ಇರುವದು, ಎಲ್ಲಕ್ಕೂ ದೊಡ್ಡ ವಿದ್ಯೆ. ಇದನ್ನು ಕಲಿಸುವವನೇ ಸದ್ಗುರು. ಯುದ್ಧಶಾಸ್ತ್ರವನ್ನು ಕಲಿಯಬೇಕೆಂಬುವವರಿಗೆ ನೆಪೋಲಿಯನ್‌ನೇ ಗುರುವು. ಆದರೆ ನಮ್ಮ ಜೀವನದಲ್ಲಿ ನೆಲೆಗೊಂಡ ಕಾಮ ಕ್ರೋಧಗಳ ವೇಗದೊಡನೆ ಬಡಿದಾಡಲು ಕಲಿಸುವವನೇ ಸದ್ಗುರುವು.

ಒಳ್ಳೇ ಚೆನ್ನಾಗಿ ವಾದ್ಯವನ್ನು ಬಾರಿಸಲು ಬರುವವನು ತನ್ನ ಮಕ್ಕಳ ಮೈಮೇಲೆ ಹಾಯ್ದು ಹೋಗುವನು. ಡಾಂಬರದಿಂದ ಉತ್ತಮ ಬಣ್ಣಗಳನ್ನು ಮಾಡಬಲ್ಲ ಶಾಸ್ತ್ರಜ್ಞನು ಇರುವಿಕೆಗೆ ಡಾಂಬರವನ್ನು ಬಡಿಯುವನು. ಪ್ರಕಾಶದ ಉಪಾಸನೆಯನ್ನು ಮಾಡುವ ಚಂದ್ರಶೇಖರ ರಾಮನ್‌ರವರು ಪ್ರತ್ಯಕ್ಷ ಪ್ರಪಂಚದಲ್ಲಿ ಪ್ರಾಂತೀಯ ಭೇದಭಾವವನ್ನುಂಟುಮಾಡಬಹುದು ! ಸುಂದರವಾದ ವಿಚಾರಗಳನ್ನು ಜಗತ್ತಿಗೆ ಕೊಡಬೇಕೆನ್ನುವ ಪಂಡಿತ ಬೇಕನ್ನನು ಲಂಚ ತಿನ್ನುವನು !

ಜೀವನ ಕಲೆಯ ಪದವು ಮನುಷ್ಯನಿಗೆ ಸಿಗುವ ವರೆಗೆ ಉಳಿದ ಶಾಸ್ತ್ರಗಳಲ್ಲಿ ಬೇಕಾದಷ್ಟು ವಿಕಾಸವಾದರೂ ಅದು ವ್ಯರ್ಥವಾದದ್ದು. ಒಬ್ಬರ ಕೂಡೊಬ್ಬರು ನಡೆಯುವದನ್ನು ಮೊದಲು ಅರಿತುಕೊಳ್ಳಿರೆಂದು ಮಹರ್ಷಿ ಟಾಲಸ್ಟಾಯ ಇವರು ಹೇಳಿದ್ದಾರೆ. ಸಂತರು ಜೀವನವನ್ನು ಸವಿಯಾಗಿಸುವ ಬಗೆಯನ್ನು ಹೇಳುತ್ತಾರೆ. ರೇಡಿಯೊ ಕೇಳಿದರೆ ಸಂಸಾರದಲ್ಲಿ ಸಂಗೀತವು ಹರಡುವದಿಲ್ಲ. ಬಾಹ್ಯಾಡಂಬರದಿಂದ ಮತ್ತು ಅಚ್ಚುಕಟ್ಟುತನದಿಂದ ಸಂಸಾರವು ಸವಿಯಾಗುವದಿಲ್ಲ. ಸಂಗೀತವು ಒಳಗೆ, ಅಂತರಂಗದಲ್ಲಿ ಹುಟ್ಟಬೇಕು. ಇರುವಿಕೆಯಲ್ಲಿಯ ಈ ಸಾಗರ-ಸಂಗೀತವನ್ನು ಸದ್ಗುರುವು ಕಲಿಸುವನು. ಅವನು ಹೃದಯದಲ್ಲಿ ಬೆಳಕನ್ನು ಹುಟ್ಟಿಸುವನು. ಬುದ್ಧಿಯಲ್ಲಿ ಸಮತೆಯನ್ನು ಹುಟ್ಟಿಸುವನು. ಪ್ರೀತಿಗೆ ಕಣ್ಣು ಕೊಡುವನು. ಕಾಮ-ಕ್ರೋಧಾದಿ ಸರ್ಪಗಳ ಹಲ್ಲು ಮುರಿಯುವನು. ದ್ವೇಷ, ಮತ್ಸರಾದಿ ಹುಲಿಗಳನ್ನು ಸಾದುಮಾಡುವನು. ಸದ್ಗುರುವೆಂದರೆ

ಮಣ್ಣನ್ನು ಹೊನ್ನು ಮಾಡುವವನು.

ಅದಕ್ಕಾಗಿಯೇ ಭಾರತದಲ್ಲಿ ಸತ್ಸಂಗಕ್ಕೆ, ಶರಣರ ಸಂಗಕ್ಕೆ ವಿಶೇಷ ಮಹತ್ವವನ್ನು ಕೊಡಲಾಗಿದೆ. "ಸಜ್ಜನ ಸಂಗತಿರೇಕಾ! ಭವತಿ ಭವಾರ್ಣವ ತಾರಕ ನೌಕಾ." ರವೀಂದ್ರನಾಥರ ಸೃಷ್ಟಿಯನ್ನು ನೋಡುವ ದೃಷ್ಟಿ, ಮಹಾತ್ಮಾಜಿಯವರ ಶಾಂತಚಿತ್ತದಿಂದ ಅಖಂಡವಾಗಿ ದುಡಿಯುವ ರೀತಿ ತಿಳಿದುಕೊಳ್ಳಬೇಕಾದರೆ, ಅವರ ಜೊತೆಗೆ ಇದ್ದರೆ ಮಾತ್ರ ಸಾಧ್ಯ.

ಸಜ್ಜನರ ಸಂಗದಲ್ಲಿ ಒಂದು ಗಳಿಗೆ ಹೊತ್ತು ಇದ್ದರೂ ನಮ್ಮ ಮೇಲೆ ಅದರ ಸಂಸ್ಕಾರವಾಗದೇ ಹೋಗದು. ಭಗವಾನ್ ಬುದ್ಧರ ಚರಿತ್ರೆಯಲ್ಲಿ ಒಂದು ಕಥೆ ಇದೆ. ಭಗವಾನ್ ಬುದ್ಧರು ಒಂದು ನಗರದ ಹೊರಗೆ ಒಂದು ಉದ್ಯಾನದಲ್ಲಿ ಇಳಿದುಕೊಂಡಿದ್ದರು. ಊರೊಳಗಿನ ಬಾಲಕರು, ಹೆಣ್ಣುಮಕ್ಕಳು, ತರುಣರು, ಮುದುಕರು ಎಲ್ಲರೂ ಅವರ ದರ್ಶನಕ್ಕಾಗಿ ಬರುತ್ತಿದ್ದರು. ಒಂದು ದಿನ ಬೆಳಗಿನ ಜಾವದಲ್ಲಿ ಆ ಊರ ಅರಸನು ಬುದ್ಧದೇವರ ದರ್ಶನಕ್ಕಾಗಿ ಹೊರಟನು. ಅತ್ತ ಕಡೆಯಿಂದ ಆ ಊರ ಸಿರಿವಂತನೊಬ್ಬನು ದರ್ಶನಕ್ಕಾಗಿ ನಡೆದಿದ್ದನು.

ಹಾದಿಯಲ್ಲಿ ಅವರಿಗೊಬ್ಬ ಹೂಗಾರನು ಭೆಟ್ಟಿಯಾದನು. ಅವನ ಕೈಯಲ್ಲಿ ಒಂದು ಸುಂದರವಾದ ತಾವರೆ ಇತ್ತು. ಶರದೃತುವು ಅದೇ ಮುಗಿದು ಶಿಶಿರ ಋತುವಿನ ಆರಂಭವಾಗಿತ್ತು. ತಾವರೆಗಳು ದುರ್ಲಭವಾಗಿದ್ದವು. ದುರ್ಲಭವಾದ ತಾವರೆಯನ್ನು ಅವನಿಂದ ಕೊಂಡು ಬುದ್ಧ ದೇವರಿಗೆ ಅರ್ಪಿಸಬೇಕೆಂದು ಅರಸನಿಗೂ, ಸಿರಿವಂತನಿಗೂ ಅನಿಸಿತು. ಅವರಿಬ್ಬರೂ ತಮ್ಮ ತಮ್ಮಲ್ಲಿ ತಾವರೆಯ ಬೆಲೆಯನ್ನು ಏರಿಸಲಾರಂಭಿಸಿದರು. ಇವರು ಯಾರಿಗಾಗಿ ಈ ತಾವರೆಯನ್ನು ಕೊಳ್ಳಬೇಕೆನ್ನುತ್ತಾರೋ ಅವನೇ ತನಗೆ ಹೆಚ್ಚು ಬೆಲೆ ಕೊಡುವನೆಂದು ತಿಳಿದು, ಹೂಗಾರನು ಇಬ್ಬರಿಗೂ ಅದನ್ನು ಮಾರಲು ಒಪ್ಪಲಿಲ್ಲ. ಮತ್ತು ಅವನು ಅವರ ಬೆನ್ನು ಹತ್ತಿ ಹೋದನು.

ಭಗವಾನ್ ಬುದ್ಧದೇವರು ಎತ್ತರವಾದ ಶಿಲಾಸನದ ಮೇಲೆ ಕುಳಿತಿದ್ದರು. ಸಾವಿರಾರು ಜನರು ಅವರ ಉಪದೇಶವನ್ನು ಲಾಲಿಸುತ್ತ ಅಲ್ಲಿ ಕೂತಿದ್ದರು. ಅರಸನು ಬುದ್ಧದೇವರಿಗೆ ನಮಸ್ಕರಿಸಿ ದೂರ ಹೋಗಿ ಕುಳಿತನು. ಅದರಂತೆಯೇ ಸಾಹುಕಾರನೂ ಬುದ್ಧದೇವರಿಗೆ ಪ್ರಣಾಮವನ್ನು ಮಾಡಿ ಕುಳಿತನು. ಅವರ ಬೆನ್ನ ಹಿಂದೆ ಇದ್ದ ಹೂಗಾರನು ತಾವರೆಯನ್ನು ಬುದ್ಧದೇವರ ಚರಣಕ್ಕೆ ಅರ್ಪಿಸಿ ದೂರ ಹೋಗಿ ನಮ್ರನಾಗಿ ಕುಳಿತುಕೊಂಡನು.

ಬುದ್ಧದೇವರನ್ನು ನೋಡಿದೊಡನೆ ದುಡ್ಡಿನ ವಿಚಾರಗಳೆಲ್ಲವೂ ಹೂಗಾರನ ತಲೆಯೊಳಗಿಂದ ಓಡಿಹೋದವು. ಪವಿತ್ರ ಮೂರ್ತಿಯು ಎದುರು ಪವಿತ್ರ ವಿಚಾರಗಳಿಂದಲೇ ಹೃದಯವು ಉಕ್ಕೇರುತ್ತದೆ. ಅಂಥ ವಾತಾವರಣದಲ್ಲಿ ಸ್ವಾರ್ಥದ ವಿಚಾರಗಳು ಒಂದು ಕ್ಷಣ ಸಹ ಬರುವದಿಲ್ಲ.

ಇದು ಒಂದು ನಿಮಿಷದ ಭೆಟ್ಟಿಯು ಪರಿಣಾಮ. ಸಂತರ ಸಾನ್ನಿಧ್ಯದಲ್ಲಿ ತಪಗಳಷ್ಟು ವರುಷಗಳನ್ನು ಕಳೆದರೆ ನಮ್ಮ ಮಣ್ಣಿನ ಬಾಳುವೆ ಹೊನ್ನಿನದಾದರೆ ಆಶ್ಚರ್ಯವೇನು? ಸಂತರು ಮಾತನಾಡುವದು, ನಡೆಯುವದು, ಬೇರೆ ಬೇರೆ ಪರಿಸ್ಥಿತಿಯಲ್ಲಿ ಹೇಗೆ ನಡೆದುಕೊಳ್ಳುವರು, ಅವರ ನಿರ್ಭಯ ನಿಸ್ಪೃಹವೃತ್ತಿ, ಅವರು ಎಷ್ಟು ನಿರಿಚ್ಛರು, ಸಂಯಮಿಗಳು ಇರುತ್ತಾರೆ, ಮೃದುವಾದರೂ ನಿಶ್ಚಯವೃತ್ತಿಯವರು, ನಿರಹಂಕಾರಿಗಳು, ಸೇವೆಯ ಸಾಗರರು, ನಿರಾಲಸರು, ತಾಳ್ಮೆಯುಳ್ಳವರು, ವಿರಾಗಿಗಳು, ನಿರ್ಮಲ ದೃಷ್ಟಿಯವರು, ವಿವೇಕಿಗಳು, ಎಲ್ಲ ವ್ಯವಹಾರವನ್ನು ಅನಾಸಕ್ತಿಯಿಂದ ಮಾಡುವರು. ಇದನ್ನೆಲ್ಲ ಅರಿಯಬೇಕಾದರೆ, ತಿಳಿಯಬೇಕಾದರೆ ಹೊಳೆಯಬೇಕಾದರೆ ಅವರ ನಿತ್ಯ ಸಹವಾಸದಿಂದಲೇ ಸಾಧ್ಯ.

ನಮ್ಮ ಮಲಿನವಾದ ಇರುವಿಕೆಯು ಸದ್ಗುರು ಸಹವಾಸದಿಂದಲೇ ನಿರ್ಮಲವಾಗುವದು. ಅವರ ವಿಚಾರಗಳು ನಮಗೆ ಹೊಳೆಯುವವು. ಆ ಮೇಲೆ ನಮ್ಮ ಜೀವನದಲ್ಲಿ ಪ್ರಕಾಶವು ಹಬ್ಬುವದು. ಅವರ ಸಾನ್ನಿಧ್ಯದಲ್ಲಿ ಶಿಕ್ಷಣವು ಕ್ಷಣಕ್ಷಣಕ್ಕೆ ದೊರೆಯುತ್ತದೆ. ಅವರ ಉಸಿರಿನಿಂದಲೇ ನಮ್ಮ ಜೀವನದಲ್ಲಿ ಪಾವಿತ್ರ್ಯವು ಬರುವದು. ತಾಯಿತಂದೆಯರು ನಮಗೆ ದೇಹವನ್ನು ಕೊಡುವರು. ಜನ್ಮವೀಯುವರು. ಆದರೆ ಈ ಮಣ್ಣಿನ ಕಾಯವನ್ನು ಹೊನ್ನಾಗಿ ಮಾಡುವ ಕಲೆಯನ್ನು ಸದ್ಗುರು ಒಬ್ಬನೇ ಕಲಿಸಬಲ್ಲನು. ಭೌತಿಕ ಶಾಸ್ತ್ರವನ್ನರಿತ ಗುರುವು ಮಣ್ಣಿನಿಂದ ಮಾಣಿಕವನ್ನು ಮಾಡಬಹುದು. ಆದರೆ ಸದ್ಗುರುವು ನಮ್ಮ ಇರುವಿಕೆಯ ಮಣ್ಣಿನ ಮುತ್ತು ಮಾಣಿಕಗಳನ್ನು ಮಾಡುವನು. ಪಶುವನ್ನು ಮನುಷ್ಯನನ್ನಾಗಿ ಮಾಡಬಲ್ಲನು. ವೈಚಾರಿಕ ಜನ್ಮವನ್ನೆ ಕೊಡಬಲ್ಲನು. ಸತ್ಯದ ಅರಿವನ್ನೆ ಕೊಡಬಲ್ಲನು. ಇಂಥ ಸದ್ಗುರುಗಳ ಉಪಕಾರವನ್ನು ನಾವು ತೀರಿಸುವದಾದರೂ ಹೇಗೆ ? ಯಾವನು ಮಂಗನಿದ್ದವನನ್ನು ಮನುಷ್ಯನನ್ನಾಗಿ ಮಾಡಿದನೋ, ಪಶು ಇದ್ದವನನ್ನು ಪಶುಪತಿಯನ್ನಾಗಿ ಮಾಡಿದನೋ ಅಂಥ ಸದ್ಗುರುವಿನ ಋಣವನ್ನು ತೀರಿಸುವದಾದರೂ ಹೇಗೆ ? ಯಾವ ಶಬ್ದದಿಂದ ಅವನನ್ನು

ಬಣ್ಣಿಸಲಿ, ಮನ್ನಿಸಲಿ, ಸ್ತುವಿಸಲಿ ?

ಗುರುರ್ಬ್ರಹ್ಮಾ ಗುರುರ್ವಿಷ್ಣುಃ ಗುರುರ್ದೇವೋ ಮಹೇಶ್ವರಃ । ಗುರುಃ ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀಗುರವೇ ನಮಃ ॥ ಸದ್ಗುರುವನ್ನು ಬಣ್ಣಿಸುವದು ಶಬ್ದಗಳಿಂದ ಸಾಧ್ಯವಿಲ್ಲ. ಗುರುವೆಂದರೆ ದೇವರು. ಮಹಾದೇವರು, ಗುರುವೆಂದರೆ ಸರ್ವಸ್ವವು.

ಸದ್ಗುರುಗಳ ಪರಂಪರೆಯನ್ನು ಹೇಳುವ ಪ್ರಘಾತವೊಂದು ನಮ್ಮಲ್ಲಿದೆ. ಎಲ್ಲರ ಆದಿಗುರುವೆಂದರೆ ಕೈಲಾಸದ ಅರಸನಾದ ಚಂದ್ರಮೌಳೀಶ್ವರನು. ನಿರ್ಮಲ, ಧವಲ ಮತ್ತು ಎತ್ತರವಾದ ಕೈಲಾಸದಲ್ಲಿರುವ ಶೀಲದ ಚಂದ್ರದಿಂದ ಮೆರೆಯುವ, ಜ್ಞಾನ ಗಂಗೆಯನ್ನೇ ಶಿರದ ಮೇಲೆ ಧರಿಸುವ, ಹಾವಿನಲ್ಲಿಯ ವಿಷವನ್ನು ಹೀರಿ ಹೂವಿನ ಹಾರದಂತೆ ಮೈಮೇಲೆ ಆಡಿಸುತ್ತಿರುವ, ಸರ್ವಸ್ವವನ್ನು ತ್ಯಜಿಸಿ ವಿಭೂತಿಯೇ ವೈಭವವೆಂದು ಅರಿಯುವ, ಭೂತ ಪ್ರೇತ ಪಿಶಾಚಿ ಮುಂತಾದ ಹೀನಯೋನಿಗಳಲ್ಲಿ ಬಳಲುವವರನ್ನು ಪ್ರೇಮದಿಂದ ಸಾನ್ನಿಧ್ಯದಲ್ಲಿಟ್ಟುಕೊಂಡು ಅವರಿಗೆಲ್ಲ ಮಂಗಲಪಥವನ್ನು ತೋರುವ, ವೈರಾಗ್ಯವೆಂಬ ಮೂರನೇ ಕಣ್ಣನ್ನು ತೆರೆದು ಕಾಮನೆಗಳ ಬೂದಿ ಮಾಡಿದಂಥ ಈ ಪಶುಪತಿಯಾದ ಮೃತ್ಯುಂಜಯನು, ಶಿವನು ಎಲ್ಲರ ಆದಿಗುರುವು.

ಜನಕನ ಗುರುಗಳು ಯಾಜ್ಞವಲ್ಕ್ಯರು. ಜನಕನು ಶುಕ್ರಾಚಾರ್ಯರ ಗುರುವು. ನಿವೃತ್ತಿಯ ಶಿಷ್ಯ ಜ್ಞಾನೇಶ್ವರರು. ರಮಾನಂದರ ಶಿಷ್ಯ ಕಬೀರನು. ಸಿದ್ಧರಾಮಯ್ಯನ ಗುರುವು ಅಲ್ಲಮಪ್ರಭುವು. ಹೀಗೆ ಈ ಸಂಬಂಧಗಳನ್ನು ಶಬ್ದಗಳಿಂದ ಬಣ್ಣಿಸುವದು ಅಸಾಧ್ಯವು. ಜೀವನವು ನಿರ್ಮಲವೂ, ಶಾಂತವೂ, ಶುದ್ಧವೂ ಇರಬೇಕೆಂಬ ಕಳಕಳಿಯು ಎಲ್ಲಿಯವರೆಗೆ ಮನುಷ್ಯನಲ್ಲಿ ಅದೆಯೋ ಅಲ್ಲಿಯವರೆಗೆ ಇಂಥ ಸಂಬಂಧಗಳು ಜಗತ್ತಿನಲ್ಲಿ ಉಳಿಯುವವು. ಭಾರತದಲ್ಲಿಯಷ್ಟೇ ಅಲ್ಲ, ಜಗತ್ತಿನಲ್ಲಿಯೂ ಈ ತೆರದ ಸಂಬಂಧಗಳು ಬಾಳಿ ಬೆಳೆಯುವವು. ಇವುಗಳ ಇರುವಿಕೆಯಲ್ಲಿಯೇ ಜಗತ್ತಿನ ಕಲ್ಯಾಣವದೆ.

## ೧೨. ನಾಲ್ಕು ಪುರುಷಾರ್ಥಗಳು

ಧರ್ಮ, ಅರ್ಥ, ಕಾಮ ಮತ್ತು ಮೋಕ್ಷ ಇವು ನಾಲ್ಕು ಪುರುಷಾರ್ಥಗಳು. ಪ್ರಪಂಚದಲ್ಲಿ ಹೆಣಗಾಡಿ ಗಳಿಸತಕ್ಕಂಥ ನಾಲ್ಕು ವಸ್ತುಗಳು. ಪುರುಷಾರ್ಥವೆಂದರೆ ಪುರುಷನು ಗಳಿಸತಕ್ಕ ವಸ್ತು. ಮನುಷ್ಯನು ಸಂಪಾದಿಸತಕ್ಕಂಥ ವಸ್ತು. ವಾಡಿಕೆಯಲ್ಲಿ ಪುರುಷಾರ್ಥ ಶಬ್ದಕ್ಕೆ ಪರಾಕ್ರಮ, ಕೃತಾರ್ಥತೆ, ದೊಡ್ಡಿಸ್ತನ ಮುಂತಾದ ಅರ್ಥಗಳಿವೆ. "ಹೀಗೆ ಮಾಡುವದೆಂದರೆ ದೊಡ್ಡ ಪುರುಷಾರ್ಥವಲ್ಲ" ಎಂದು ನಾವು ಅನ್ನುವೆವು. ಅಂದರೆ ಹೀಗೆ ಮಾಡುವದು ಶೋಭಿಸುವದಿಲ್ಲ. ಉಚಿತವಲ್ಲ, ಇದರಲ್ಲಿ ಪರಾಕ್ರಮವೇನೂ ಇಲ್ಲ, ಅಂಥ ಕೌತುಕಾಸ್ಪದವಾದದ್ದು ಯಾವುದೂ ಅಲ್ಲ, ಹೀಗೆ ಅರ್ಥವಾಗುತ್ತದೆ.

ಈ ಜಗತ್ತಿನಲ್ಲಿ ಬಾಳುವ ವರೆಗೆ ಈ ನಾಲ್ಕು ವಸ್ತುಗಳನ್ನು ಗಳಿಸಲಿಕ್ಕೆ ಭಾರತೀಯ ಸಂಸ್ಕೃತಿಯು ಹೇಳುತ್ತದೆ. ಈ ನಾಲ್ಕು ವಸ್ತುಗಳ ಜೋಡನ್ನು ಸಂಪಾದಿಸಲು ಹೇಳುತ್ತದೆ. ಒಂದೇ ವಸ್ತುವಿನ ಗಳಿಕೆಯನ್ನು ಒತ್ತಿಹೇಳುವದಿಲ್ಲ. ಅದು ವ್ಯಾಪಕವಿದೆ. ಒಂದೇ ಮಾತನ್ನು ಹಿಡಿದು ವಿಚಾರ ಮಾಡುವದಿಲ್ಲ. ಅದು ದೈನ್ಯ, ನೈರಾಶ್ಯಗಳನ್ನು ಕುರಿತು ಹಾಡುವ ಸಂಸ್ಕೃತಿಯಲ್ಲ. ದುಡ್ಡು ಬೇಡಾದ, ಒಕ್ಕೊಡುವ ವಸ್ತುವೆಂದು ತಿಳಿಯುವದಿಲ್ಲ. ಅರ್ಥವೂ ಗಳಿಸತಕ್ಕ ಪುರುಷಾರ್ಥಗಳೊಳಗಿನ ಒಂದು ವಸ್ತುವು. ದುಡ್ಡು-ಸಿರಿ ಅದಕ್ಕೆ ತ್ಯಾಜ್ಯವಾದವುಗಳಲ್ಲ. ಸಿರಿಯು ಅದಕ್ಕೆ ಬೇಡಾದ ವಸ್ತುವಲ್ಲ. ಸಿರಿಯನ್ನು ದಕ್ಕಿಸುವ ಸಂಸ್ಕೃತಿ ಇದು. ಸಿರಿಯಂತೆಯೆ ಕಾಮೋಪಭೋಗಗಳು. ಕಾಮಕ್ಕೆ ನಮ್ಮ ಸಂಸ್ಕೃತಿಯು ಸನ್ಮಾನ್ಯ ಸ್ಥಾನವನ್ನು ಒದಗಿಸಿದೆ. ಅದೂ ಒಂದು ಪುರುಷಾರ್ಥದ ಮಾತು. ಸಿರಿ, ಕಾಮಗಳೆರಡು ಪವಿತ್ರವಾದವು. ಇವು ಎರಡನ್ನು ಮನುಷ್ಯನು ದೊರಕಿಸಲೇಬೇಕು. ದುಡ್ಡು ಗಳಿಸಬೇಕು, ಮತ್ತು ಗಳಿಸಿದ ಸಿರಿಯನ್ನು ಯೋಗ್ಯ ರೀತಿಯಿಂದ ಉಪಭೋಗಿಸಬೇಕು. ಕಾಮವೆಂದರೆ ಕೇವಲ ವಿಷಯ ಸುಖವಲ್ಲ. ಪಂಚೇಂದ್ರಿಯಗಳ ಸುಖವು. ಐದು ವಿಷಯಗಳ ಸೇವನವು. ಈ ವ್ಯಾಪಕವಾದ ಅರ್ಥವು ಕಾಮಶಬ್ದಕ್ಕೆ ಇದೆ.

"ವಿಧಿಯಿಂದ ಸೇವನ ಮಾಡುವದೆಂದರೆ ಧರ್ಮದ ಪಾಲನೆಯು" ಎಂದು ತುಕಾರಾಮ ಮಹಾರಾಜರ ಉಕ್ತಿ ಇದೆ. ವಿಷಯಗಳ ಸೇವನೆ

ಯನ್ನು ವಿಧಿಯುಕ್ತ ಮಾಡಿದರೆ, ಅದು ಅಧರ್ಮವಲ್ಲ. ಅಳತೆಯಲ್ಲಿದ್ದು ವಿಷಯ ಭೋಗಗಳನ್ನು ಭೋಗಿಸುವದೆಂದರೆ ಧರ್ಮಚ್ಯುತಿಯಲ್ಲ. ಧರ್ಮ ವೆಂದರೆ ವಿಧಿಪೂರ್ವಕ ಆಚರಣೆಯು. ತುಕಾರಾಮ ಮಹಾರಾಜರ ಇನ್ನೊಂದು ಅಭಂಗವದೆ. "ವ್ಯವಹಾರವನ್ನು ಚೆನ್ನಾಗಿ ಮಾಡಿ, ದುಡ್ಡು ಸಂಪಾದಿಸಿರಿ. ಮತ್ತು ಅದನ್ನು ಉದಾರ ಹೃದಯಿಗಳಾಗಿ ವೆಚ್ಚಮಾಡಿರಿ." ಧನಸಂಪಾದನೆಯನ್ನು ಮಾಡಬೇಡಿರೆಂದು ಸಂತರು ಹೇಳುವದಿಲ್ಲ. ಆದರೆ ಅದನ್ನು ಉತ್ತಮ ರೀತಿಯಿಂದ ವ್ಯವಹಾರ ಮಾಡಿ ಗಳಿಸಿರಿ, ಮತ್ತು ಯೋಗ್ಯ ರೀತಿಯಲ್ಲಿ ಉದಾರ ಹೃದಯದಿಂದ ವೆಚ್ಚ ಮಾಡಿರೆಂದು ಹೇಳುತ್ತಾರೆ.

ವಿಧಿಯೆಂದರೆ ಆಜ್ಞೆ. ಸ್ಮೃತಿಗಳಲ್ಲಿ ವಿಧಿ ಶಬ್ದವು ಮೇಲಿಂದ ಮೇಲೆ ಉಪಯೋಗಿಸಲ್ಪಟ್ಟಿದೆ. ಯಾವ ಕರ್ಮವನ್ನು ಮಾಡಿದರೂ ವಿಧಿಪೂರ್ವಕ ವಾಗಿಯೇ ಮಾಡಬೇಕೆಂದು ಸ್ಮೃತಿಗಳು ಹೇಳುತ್ತವೆ. ವಿಧಿಯೆಂದರೆ ಶಾಸ್ತ್ರವಚನ. ವಿಧಿಯೆಂದರೆ ಸ್ಮೃತಿಗಳಲ್ಲಿ ಅಲ್ಲಲ್ಲಿ ಮಾಡಿದ ವಿಧಾನಗಳು- ನಿಯಮಗಳು. ವಿಧಿಯೆಂದರೆ ಧರ್ಮ, ವಿಧಿಯುಕ್ತವಲ್ಲದ ಕರ್ಮವು ಅಧಾರ್ಮಿಕವೆಂದು ಸ್ಮೃತಿಗಳು ಸಾರುತ್ತವೆ. ಆದರೆ ವಿಧಿ, ಆಜ್ಞೆ, ಬಂಧನ, ಮರ್ಯಾದೆ, ಇವೆಲ್ಲ ಏತಕ್ಕೆ?

ಭಾರತೀಯ ಸಂಸ್ಕೃತಿಯು ಮಾನವನ ಮನಸ್ಸನ್ನು ಅರಿತಿದೆ. ಅವನ ಹೃದಯದ ಹಸಿವನ್ನು ಕಂಡಿದೆ. ಮನುಷ್ಯನಿಗೆ ವಾಸನೆಗಳು ಇವೆ ಎಂಬು ದನ್ನು ಈ ಸಂಸ್ಕೃತಿಯು ಮರೆತಿಲ್ಲ. ಭಾರತೀಯ ಸಂಸ್ಕೃತಿಯ ಗುರಿಯು ಬಹಳ ಉಚ್ಚವಾಗಿದ್ದರೂ, ಅದು ಮನುಷ್ಯನ ಶಕ್ತಿಯ ಮರ್ಯಾದೆಗಳನ್ನು ತಿಳಿದುಕೊಂಡಿದೆ. ಮನುಷ್ಯನ ಆತ್ಮವು ಈ ದೇಹದಲ್ಲಿ ಅಡಗಿದೆ. ಆತ್ಮ ಹಂಸವು ಕೆಸರಿನಲ್ಲಿ ಸಿಕ್ಕಿದೆ. ಇದನ್ನು ಆ ಕೆಸರಿನೊಳಗಿಂದ ಸಾವಕಾಶ ವಾಗಿ ಮುಕ್ತಮಾಡಬೇಕಾಗಿದೆ ಎಂಬ ಮಾತಿನ ಅರಿವು ನಮ್ಮ ಸಂಸ್ಕೃ ತಿಗೆ ಅದೆ.

ಮಾನವೀ ಸಂಸ್ಕೃತಿಯು ಕೆಸರಿನೊಳಗಿಂದಲೇ ಮೇಲಕ್ಕೆ ಬಂದಿದೆ. ಕೆಸರಿನಲ್ಲಿ ಹುಳುಗಳು ಹುಟ್ಟುತ್ತವೆ. ಆದರೆ ಅದೇ ಕೆಸರಿನಲ್ಲಿ ಕಮಲವು ಅರಳುತ್ತದೆ. ಕೆಸರಿನಲ್ಲಿ ಕಮಲಗಳನ್ನು ಅರಳಿಸುವದೇ ಭಾರತೀಯ ಸಂಸ್ಕೃತಿಯ ನಿಜವಾದ ಗುರಿಯು. ಕತ್ತಲೆಯೊಳಗಿಂದ ಪ್ರಕಾಶವನ್ನು, ಮಣ್ಣಿನಿಂದ ಮಾಣಿಕವನ್ನು, ಮರಣದಲ್ಲಿ ಅಮರತ್ವವನ್ನು ಪಡೆಯುವದೇ

ನಮ್ಮ ಸಂಸ್ಕೃತಿಯ ಹೆಗ್ಗುರಿಯು.

ರವೀಂದ್ರನಾಥರು ಒಂದು ಸುಂದರವಾದ ಕವಿತೆಯನ್ನು ಬರೆದಿದ್ದಾರೆ. ಆ ಕವಿತೆಯಲ್ಲಿ ರವೀಂದ್ರರು ಹೇಳುತ್ತಾರೆ. "ಹೂವಿಗೆ ಇತ್ತ ಪರಿಮಳ, ಬಣ್ಣಗಳನ್ನು ದೇವರು ಅದರಿಂದ ಅಪೇಕ್ಷಿಸುತ್ತಾನೆ. ಕೋಗಿಲೆಯು ಕೂವು, ಕೂವು, ಶಬ್ದವನ್ನು ತನಗೆ ಅರ್ಪಿಸಬೇಕೆನ್ನುತ್ತಾನೆ. ವೃಕ್ಷಗಳು ಫಲಗಳನ್ನು ತನಗೆ ಕೊಡಬೇಕೆಂದು ಇಚ್ಛಿಸುತ್ತಾನೆ. ಆದರೆ ಮನುಷ್ಯನಿಗಾಗಿ ಅವನ ನಿಯಮಗಳು ಬೇರೆ ಇವೆ. ಅವನು ಮನುಷ್ಯನಿಗೆ ದುಃಖವನ್ನು ಕೊಟ್ಟಿದ್ದಾನೆ, ಮತ್ತು ದುಃಖದೊಳಗಿಂದ ಮನುಷ್ಯನು ಸುಖವನ್ನು ಪಡೆಯಬೇಕೆಂದು ಆಶಿಸುತ್ತಾನೆ. ಮನುಷ್ಯನಿಗೆ ಕತ್ತಲೆಯನ್ನು ಕೊಟ್ಟಿದ್ದಾನೆ, ಮತ್ತು ಕತ್ತಲೆಯೊಳಗಿಂದಲೇ ಬೆಳಕನ್ನು ನಿರ್ಮಿಸೆಂದು ಹೇಳುತ್ತಾನೆ. ಮನುಷ್ಯನು ಸಾಯುವ ಪ್ರಾಣಿಯು. "ಮರಣದಲ್ಲಿ ಅಮೃತತ್ವವನ್ನು ಪಡೆ" ಎಂದು ಹೇಳಿದ್ದಾನೆ. ಸುತ್ತುಮುತ್ತಲೆಲ್ಲ ಕೆಸರು ಹಬ್ಬಿದೆ. ಸುಳ್ಳು ಸುಳಿಯುತ್ತದೆ. ಈ ಸುಳ್ಳಿನಲ್ಲಿ ಸತ್ಯ ಕಾಣಲು, ವಿಷದಲ್ಲಿ ಅಮೃತವನ್ನು ದೊರಕಿಸಲು, ಹೊಲಸಿನಲ್ಲಿ ಹೊನ್ನು ಪಡೆಯಲು ಮಾನವನಿಗೆ ದೇವರು ಹೇಳುತ್ತಾನೆ. ಮಾನವನ ವಿಷಯದಲ್ಲಿ ಈ ರೀತಿ ಪಕ್ಷಪಾತವೇಕೆ? ಮಾನವನ ಮೇಲೆ ಇಷ್ಟು ಹೊಣೆ ಏಕೆ? ಮಾನವನನ್ನು ಕುರಿತು ಈ ಕಠೋರತೆಯೇಕೆ? ಇಲ್ಲ; ದೇವರು ಕಠೋರನಲ್ಲ; ದುಷ್ಟನಂತೂ ಅಲ್ಲವೇ ಅಲ್ಲ. ಇಡೀ ಸೃಷ್ಟಿಯಲ್ಲಿ ಮಾನವನು ಶ್ರೇಷ್ಠನೆಂದು ಅವನು ಭಾವಿಸಿದ್ದಾನೆ. ಅವನಿಂದಲೇ ಇವೆಲ್ಲವುಗಳನ್ನು ಅಪೇಕ್ಷಿಸದೆ ಮತ್ತಾರಿಂದ ಅಪೇಕ್ಷಿಸಬೇಕು? ಇದರಲ್ಲಿ ಮಾನವನ ಗೌರವವಿದೆ. ವೀರನಿಗೆ ಸಣ್ಣ ಹುಳುವನ್ನು ಕೊಲ್ಲಲು ಹೇಳಿದರೆ, ಅದು ಅವನಿಗೆ ಅವಮಾನವಾಗುವದು. ಅದರಂತೆ ಮಾನವನಿಂದ ಕ್ಷುದ್ರ ವಸ್ತುಗಳನ್ನು ಅಪೇಕ್ಷಿಸುವದೆಂದರೆ ಅದು ಅವನ ಅಪಮಾನವಾಗುವದು. ನನ್ನ ಮುದ್ದು ಮಗ ಮಾನವನಿಗೆ ಇದನ್ನೆಲ್ಲ ನೆರವೇರಿಸಲು ಸಾಧ್ಯವೆಂದು ಅವನ ಆಸೆ. ಎಂಭತ್ತುನಾಲ್ಕು ಲಕ್ಷ ಯೋನಿಗಳನ್ನು ದಾಟಿ, ಹುಟ್ಟಿದ ಹಿರಿದಾದ ಪ್ರಾಣಿ ಮಾನವ. ದೇವರ ಇಡೀ ಸೃಷ್ಟಿಯ ಮುಕುಟಮಣಿ, ಇವನೇ ನನ್ನ ಆಶೆ. ಇವನು ನನ್ನನ್ನು ನಿರಾಶೆ ಮಾಡಲಿಕ್ಕಿಲ್ಲ ಎಂಬ ನಂಬುಗೆಯು ದೇವರಿಗೆ ಇದೆ.''

ಎಷ್ಟು ಸುಂದರವಾದ ಕಾವ್ಯವಿದು! ಎಂತಹ ಉಚ್ಚ ವಿಚಾರಗಳು! ಎಷ್ಟು ಆಳ ಮತ್ತು ಗಂಭೀರವಾದ ದೃಷ್ಟಿ ಇದು! ಮಾನವನ ಹಿರಿಮೆ

ಯನ್ನು ಆಂಗ್ಲ ಮಹಾಕವಿ ಶೇಕ್ಸಪಿಯರನು ಹೀಗೆ ಬಣ್ಣಿಸಿದ್ದಾನೆ. "ಹೇಗೆ ಮಾತಾಡುತ್ತಾನೆ, ನಡೆಯುತ್ತಾನೆ, ಎಷ್ಟು ಅಂದವಿದ್ದಾನೆ, ಎಂಥ ವಿಶಾಲ ಹೃದಯದವನಿದ್ದಾನೆ. ವಿಚಾರ ಮಾಡುವ ಶಕ್ತಿಯುಳ್ಳವನು. ಆಳವಾದ ದೃಷ್ಟಿಯುಳ್ಳವನು. ಈ ಮಾನವನೆಂದರೆ ಭಗವಂತನ ಪ್ರತಿಮೆ ಇದ್ದಂತೆ.''

ಭಾರತೀಯ ಸಂತರೆಲ್ಲರೂ ಈ ಮನುಷ್ಯ ದೇಹದ ವರ್ಣನೆಯನ್ನು ಮಾಡಿದ್ದಾರೆ. 'ಧನ್ಯವಾದದ್ದು ಈ ನರದೇಹವು. ಅದು ಅಪೂರ್ವವಾದದ್ದು.' ಎಂದು ಸಮರ್ಥ ರಾಮದಾಸರು ಒಂದೆಡೆಯಲ್ಲಿ ಹೇಳಿದ್ದಾರೆ. "ಮಹತಾ ಪುಣ್ಯ ಪಣ್ಯೇನ ಕ್ರೀತೇಯಂ ಕಾಯನೌಸ್ತ್ವಯಾ.'' ಅತುಲವಾದ ಪುಣ್ಯ ವನ್ನು ಕೊಟ್ಟು ಈ ಕಾಯವನ್ನು ಪಡೆದಿರುತ್ತೀದಿ. ಈ ದೇಹವು ಸಿಕ್ಕದ್ದು ನಿನಗೆ ಒಂದು ಹಿರಿದಾದ ಭಾಗ್ಯವು. "ಬಂಗಾರದ ಕೊಡ''ವೆಂದು ಈ ನರದೇಹವನ್ನು ತುಕಾರಾಮ ಮಹಾರಾಜರು ಸಂಬೋಧಿಸುತ್ತಾರೆ. ನರ ನಿದ್ದ ನೀನು ನಾರಾಯಣನಾಗುವದೇ ಈ ನರದೇಹ ಧರಿಸಿದವನ ಗುರಿ ಯೆಂದು ಭಾರತೀಯ ಸಂಸ್ಕೃತಿಯು ಸಾರುತ್ತಿದೆ.

ಮನುಷ್ಯನಿಂದಲ್ಲವೇ ಈ ಎಲ್ಲ ಹಿರಿದಾದ ಅಪೇಕ್ಷೆಗಳು! ಮನುಷ್ಯನು ಈ ಆಸೆಯನ್ನು ಹೇಗೆ ಪೂರೈಸುವನು ? ದನದಂತೆ ನಡೆದುಕೊಳ್ಳುವ ಈ ಮಾನವನು ದೇವನಾಗುವದೆಂದು ? ಬರ್ನಾರ್ಡ ಶಾನು ಒಂದೆಡೆಯಲ್ಲಿ ಕೆಳಗಿನಂತೆ ಬರೆದಿದ್ದಾನೆ. ಮನುಷ್ಯನನ್ನು ಹುಟ್ಟಿಸಿ ಸಾವಿರಾರು ವರ್ಷ ಗಳಾದವು. ಆಸೆಯಿಂದ ದೇವರು ಹಾದೀ ನೋಡುತ್ತಿದ್ದಾನೆ. ತನ್ನ ಹೇತು ವನ್ನು ಪೂರ್ಣಗೊಳಿಸಲು ದೇವರು ಬೇರೆ ಬೇರೆ ಪ್ರಯೋಗಗಳನ್ನು ಮಾಡುತ್ತಿದ್ದನು. ಬೇರೆ ಬೇರೆ ಪ್ರಾಣಿಗಳನ್ನು ನಿರ್ಮಿಸಿದನು. ಈ ಪ್ರಾಣಿಯು ತನ್ನ ಆಸೆಯನ್ನು ಪೂರೈಸಬಹುದು, ಇನ್ನೊಂದು ಪ್ರಾಣಿಯು ಹಾಗೆ ಮಾಡಬಹುದು, ಹೀಗೆ ಮಾಡುತ್ತ ಮಾಡುತ್ತ, ದೇವರು ಸಾವಿ ರಾರು ಬಗೆಯ ಪ್ರಾಣಿಗಳನ್ನು ಹುಟ್ಟಿಸಿದನು. ಆದರೆ ದೇವರ ಆಶೆ ಪೂರ್ತಿ ಯಾಗಲಿಲ್ಲ. ಮೊದಲು ಪಡೆದ ಅನುಭವದಿಂದ ಜಾಣನಾಗಿ ದೇವರು ಹೊಸ ಪ್ರಾಣಿಗಳನ್ನು ಹುಟ್ಟಿಸುತ್ತಿದ್ದನು. ಆದರೆ ಆ ಎಲ್ಲ ಪ್ರಾಣಿಗಳು ಅವನನ್ನು ನಿರಾಶೆಗೆ ಈಡು ಮಾಡಿದವು. ಹೀಗೆ ಮಾಡುತ್ತ ಮಾಡುತ್ತ ಮಾನವ ಪ್ರಾಣಿಯನ್ನು ಅವನು ನಿರ್ಮಿಸಿದನು. ತನ್ನ ಎಲ್ಲ ಕೌಶಲ್ಯ ವನ್ನೂ, ಅನುಭವವನ್ನೂ ಸುರಿಸಿ ಈ ದಿವ್ಯ ಜೀವವನ್ನು ಹುಟ್ಟಿಸಿ, ದೇವರು

ನಿಂತನು; ದಣಿದ ದೇವರು ಮಲಗಿದನು. ತನ್ನ ಆಶೆ ಆಕಾಂಕ್ಷೆಗಳೆಲ್ಲವು ಗಳನ್ನೂ ಈ ಮಾನವ ಪ್ರಾಣಿಯು ಪೂರೈಸುವನೆಂದು ನಂಬಿ, ಮನಸ್ಸಿನಲ್ಲಿ ಯಾವ ತರಹದ ಶಂಕೆ ಇಲ್ಲದೆ ಮಲಗಿದ್ದಾನೆ. ತಾನು ಎದ್ದಕೂಡಲೇ ತನ್ನ ಆಶೆ ಆಕಾಂಕ್ಷೆಗಳು ಪೂರೈಸಿದ್ದು ನೋಡಲು ಸಿಗುವದು. ಈ ಮನುಷ್ಯ ಪ್ರಾಣಿಯ ದಿವ್ಯ ಕೃತಿಗಳು ಕಾಣುವವೆಂಬ ಆಶೆಯಿಂದ ದೇವರು ಮಲಗಿದ್ದಾನೆ. ಆದರೆ ಸಾವಿರಾರು ವರ್ಷಗಳು ಆಗಿಹೋಗಿವೆ. ಇಂದು ದೇವರು ಅಕಸ್ಮಾತ್ತಾಗಿ ಎದ್ದರೆ, ಅವನಿಗೆ ಕಾಣುವದೇನು ? ಅವನ ಮನಸ್ಸಿಗೆ ಪ್ರಸನ್ನವೆನಿಸಬಹುದೇ ? ಆ ಜಗತ್ಪ್ರತಿಪಾಲಕನಿಗೆ ಧನ್ಯತೆ ಎನಿಸಬಹುದೋ ? ಮಾನವನ ಇಂದಿನ ಸಂಸಾರವನ್ನು ಕಂಡು ಅವನ ಕಣ್ಣಿನಲ್ಲಿ ಆನಂದಾಶ್ರುಗಳು ಬರಬಹುದೋ ? ಅವನ ಹೃದಯದಲ್ಲಿಯ ಪ್ರೇಮ ಸಾಗರವು ಉಕ್ಕೇರುವದೋ ? ಮಾನವನನ್ನು ಅಪ್ಪಿಕೊಂಡು ಆನಂದದ ಕಂಬನಿಯಿಂದ ಎರೆಯಬಹುದೋ ?

“ಇಲ್ಲ; ಇಲ್ಲ; ಮನುಷ್ಯನು ಮನುಷ್ಯರನ್ನು ಗುಲಾಮರನ್ನಾಗಿ ಮಾಡಿದ್ದಾನೆ. ಮನುಷ್ಯರು ಮನುಷ್ಯರನ್ನು ಹಿಂಡುತ್ತಾರೆ, ಕಾಡುತ್ತಾರೆ, ಪೀಡಿಸುತ್ತಾರೆ. ದೇಶಗಳು ದೇಶಗಳನ್ನು ಹರಿದು ತಿನ್ನುತ್ತವೆ. ಒಬ್ಬರ ಮೇಲೊಬ್ಬರು ಹಲ್ಲುಕಡಿದು ಹರಿಹಾಯುತ್ತಾರೆ. ಹುಲಿ, ತೋಳ, ಹಾವು, ಸಿಂಹ, ಹದ್ದು-ಗಿಡಗ ಇವೆಲ್ಲವು ಸಾವಿರಾರು ಪಾಲು ಬೇಕು. ಆದರೆ ಈ ಮನುಷ್ಯ ಪ್ರಾಣಿಯು ಬೇಡ. ಇಡೀ ಸೃಷ್ಟಿಯ ಹಿಂಸೆಯನ್ನು ನಡೆಸಿದ್ದಾನೆ ಇವನು. ಹಣ್ಣು ಕಾಯಿ ತೊಪ್ಪಲಗಳನ್ನು ಇವನು ತಿನ್ನುತ್ತಾನೆ. ಪಶು-ಪಕ್ಷಿಗಳನ್ನು ಕೊಂದು ತಿನ್ನುತ್ತಾನೆ. ಆಟವೆಂದು ಬೇಟೆಮಾಡುತ್ತಾನೆ. ಒಂದು ವೇಳೆ ಇವನ್ನೂ ಸಹಿಸಬಹುದು. ಆದರೆ ಇವನು ತನ್ನ ಜಾತಿಯ ಹಿಂಸೆಯನ್ನೇ ನಡೆಸಿದ್ದಾನೆ. ಹೆಣ್ಣು ಹುಲಿಯು ತನ್ನ ಮರಿಯನ್ನು ತಿಂದುಬಿಡುತ್ತದೆ. ಆದರೆ ಅದರಲ್ಲಿ ಕೆಲವು ಉಳಿಯುತ್ತವೆ. ಅದರಂತೆ ಬೆಕ್ಕು ಕೆಲವೊಂದು ವೇಳೆಯಲ್ಲಿ ತನ್ನ ಮರಿ ತಿನ್ನುತ್ತದೆ. ಪ್ರಸವ ವೇದನೆಯಿಂದಾಗುವ ಬೇನೆಯ ಆಯಾಸದಿಂದ ತನ್ನ ಮರಿಗಳನ್ನು ತಿನ್ನುತ್ತದೆ. ಹೊಟ್ಟೆಯಲ್ಲಿಯ ಕಿಚ್ಚನ್ನು ತಣ್ಣಿಸುವದಕ್ಕಾಗಿ ತನ್ನ ಮರಿಗಳನ್ನೇ ತಿಂದುಬಿಡುತ್ತದೆ ಹೆಣ್ಣು ಹುಲಿಯು. ಆದರೆ ಮಾನವನೂ ಇದನ್ನೇ ಮಾಡಹತ್ತಿದ್ದಾನೆ. ತನ್ನ ಹೊಟ್ಟೆಯಲ್ಲಿಯ ಕಿಚ್ಚನ್ನು ಸಮಾಧಾನಗೊಳಿಸುವದಕ್ಕಾಗಿ ನೆರೆಹೊರೆಯ ರಾಷ್ಟ್ರಗಳನ್ನೇ ನುಂಗುತ್ತಿದ್ದಾನೆ. ಮನುಷ್ಯನು

ಮನುಷ್ಯನನ್ನೇ ತಿನ್ನುತ್ತಾನೆ. ಮನುಷ್ಯನೆಂದರೆ ಬುದ್ಧಿಯುಳ್ಳ ಹುಲಿಯಾಗಿದ್ದಾನೆ ಕ್ರೌರ್ಯದಲ್ಲಿ ಬುದ್ಧಿಯ ಜೋಡು! ಮತ್ತೇನು ಬೇಕು? ಹುಲಿಗೆ ತೀಕ್ಷ್ಣವಾದ ಹಲ್ಲು, ಉಗುರುಗಳು ಮಾತ್ರ ಇವೆ. ಪ್ರಾಣಿಗಳು ಅದರ ಹತ್ತರ ಹೋದರೆ ಮಾತ್ರ ಹುಲಿಯು ಅವುಗಳನ್ನು ಹರಿದು ತಿನ್ನುವದು. ಆದರೆ ಈ ಬುದ್ಧಿವಂತ ಮನುಷ್ಯ-ಹುಲಿಯು ಎಷ್ಟೋ ಚಮತ್ಕಾರಗಳನ್ನು ಏರ್ಪಡಿಸಿದೆ. ಅವನು ಇಪ್ಪತ್ತೈದು ಮೈಲಿನ ಮೇಲಿಂದ ಕೊಲ್ಲಬಲ್ಲನು. ಅಂತರಾಳದಿಂದ, ನೀರಿನಲ್ಲಿ, ನೀರಿನ ಮೇಲೆ, ಹಗಲು, ರಾತ್ರಿ, ಬೇಕಾದಾಗ ಕೊಲ್ಲಬಲ್ಲನು. ಸೃಷ್ಟಿಯಲ್ಲಿದ್ದ ಎಲ್ಲ ಸಂಹಾರ ತತ್ವಗಳನ್ನು ಆರಿಸಿ, ಬೆರಿಸಿ ಅವುಗಳ ಉಪಾಸಕನಾಗಿದ್ದಾನೆ ಮಾನವನು! ಕೊಲ್ಲುವ ಸಾಧನಗಳನ್ನು ಕಂಡು ಹಿಡಿಯುವದೇ ಇವನ ಸಂಸ್ಕೃತಿಯಾಗಿದೆ. ಮಾನವ ಸಂಸಾರವೆಲ್ಲ ರಕ್ತದಲ್ಲಿ ಮುಳುಗಿದೆ. ಎಲ್ಲಿ ನೋಡಿದಲ್ಲಿ ಹೋರಾಟ, ಚೀರಾಟ. ಗಟ್ಟಿಗರು ದುರ್ಬಲರನ್ನು ಅರೆಯುತ್ತಾರೆ. ಮಾರಕ ಶಕ್ತಿಯ ಪವಾಡಗಳು ಹಾಡಲ್ಪಡುತ್ತವೆ. ಪಾಶವೀಶಕ್ತಿಯ ಉಪನಿಷತ್ತುಗಳು ಬರೆಯಲ್ಪಡುತ್ತವೆ. ಈ ಉಪನಿಷತ್ತುಗಳ ಅಭ್ಯಾಸವು ನಡೆದದೆ. ಕೆಲವರಿಗೆ ಸುಖ; ಹಲವರಿಗೆ ದುಃಖ; ಕೆಲವರಿಗೆ ವಿಲಾಸ; ಹಲವರಿಗೆ ವಿಲಯ; ಕೆಲವರಿಗೆ ಮಹಲು; ಹಲವರಿಗೆ ಬೀದಿ; ಕೆಲವರು ಅಜೀರ್ಣದಿಂದ ಬಳಲುತ್ತಾರೆ; ಹಲವರು ಅನ್ನವಿಲ್ಲದೆ ಸಾಯುತ್ತಾರೆ; ಕೆಲವರು ಉಡುಪಿನ ಭಾರದಿಂದ ಬಳಲುತ್ತಾರೆ. ಹಲವರಿಗೆ ಮಾನಮುಚ್ಚಲು ಕೂಡ ಉಡುಪುಗಳಿಲ್ಲ; ಕೆಲವರಿಗೆ ಪಲಂಗು, ಮಹಲು, ಕಾಲಿಗೆ ಮಣ್ಣು ಸಹ ಹತ್ತುವಂತಿಲ್ಲ; ಹಲವರಿಗೆ ಗಾಳಿ ಬಿಸಿಲು, ಸುಖದಿಂದ ಒಂದು ದಿನವಾದರೂ ನಿದ್ದೆ ಹತ್ತುವಂತಿಲ್ಲ. ಕೆಲವರು ದುಡಿಮೆಯಿಲ್ಲದೆ ಗಾದಿಯ ಮೇಲೆ ಲೋಲಾಡುವರು; ಹಲವರು ಊಟವಿಲ್ಲದೆ, ಬೇನೆ ಬೇಸರಿಕೆಗಳ ಪರಿವೆ ಇಲ್ಲದೆ, ಗಾಳಿ ಬಿಸಿಲಿನಲ್ಲಿ ದುಡಿಯುವರು; ಒಂದೆಡೆ ಹಾಡು, ಇನ್ನೊಂದು ಕಡೆ ಬಳಲುವ ಪಾಡು; ಒಂದು ಕಡೆ ವಿಲಾಸ, ಇನ್ನೊಂದು ಕಡೆ ವಿನಾಶ; ಏನಿದು ಮಾನವೀ ಸಂಹಾರದ ಚಿತ್ರ!!!

"ಅಯ್ಯೋ! ಅಕಟಕಟಾ! ದೇವರ ಎದೆ ಸೀಳುವಂಥ ಭೀಕರ ದೃಶ್ಯವಿದು. ತನ್ನ ಆಶೆ ಆಕಾಂಕ್ಷೆಗಳೆಲ್ಲ ಮಣ್ಣುಮುಕ್ಕಿದ್ದು ನೋಡಿ ಆ ದೇವರಿಗೆ ಏನೆನಿಸಬಹುದು? ನಿರಾಶೆಯಿಂದ ಹುಚ್ಚುಹಿಡಿಯಬಹುದು ಅವನಿಗೆ. ಅವನ ಅನಂತ ಆಶೆಯ ಅಂತವಾಗುವದು. ಅವನ ತಾಳ್ಮೆಯು

ಕೊನೆಮುಟ್ಟುವದು. ರೇಗಿಗೆದ್ದು ಮಾನವನನ್ನು ತಪ್ಪ ದೃಷ್ಟಿಯಿಂದ ನೋಡುವನು. ಮಾನವನು ಸುಟ್ಟುಬೂದಿಯಾಗುವನು. ಮಾನವನನ್ನು ಸೃಷ್ಟಿಯೊಳಗಿಂದ ನಿರ್ನಾಮ ಮಾಡುವನು. ತಾನು ಹೂಡಿದ ಪ್ರಯೋಗವು ಯಶಸ್ವಿಯಾಗಲಿಕ್ಕಿಲ್ಲವೆಂದು ಅವನು ತಿಳಿಯುವನು. ಏನೊ ಇನ್ನೊಂದು ಬೇರೆ ಪ್ರಯತ್ನ ಮಾಡಬಹುದು. ಯಾರಿಗೆ ಗೊತ್ತು?''

ದೇವರು ಮನುಷ್ಯನನ್ನು ಇಲ್ಲದಂತೆ ಮಾಡಬಹುದೆಂದು ಬರ್ನಾರ್ಡ ಶಾನಿಗೆ ಅನಿಸುತ್ತದೆ. ಆದರೆ ದೇವರು ಹಾಗೆ ಮಾಡುವದಿಲ್ಲ. ಯಾಕಂದರೆ ಮನುಷ್ಯ ಪ್ರಾಣಿಯಲ್ಲಿದ್ದ ಶಕ್ತಿಯ ಅರಿವು ಅವನಿಗೆ ಅದೆ. ಇದೇ ರಕ್ಕಸ ಮತ್ತು ತುಂಟ ಮಾನವ ಕುಲದಲ್ಲಿಯೇ ಭಗವಾನ್ ಬುದ್ಧ, ಯೇಸುಕ್ರಿಸ್ತರು ಜನ್ಮವೆತ್ತಿದ್ದಾರೆ. ಸಂತ ತುಳಸೀದಾಸ, ಪುರಂದರದಾಸ, ಸೆಂಟಫ್ರಾನ್ಸಿಸ್ ಇವರಾದರೂ ಮನುಷ್ಯನ ಮಕ್ಕಳೆಂಬುವದು ಅವನಿಗೆ ಗೊತ್ತು. ಮಾನವರೊಳಗಿಂದಲೇ ಮಹಾತ್ಮಾಜಿಯವರು ಪ್ರಕಟ ಹೊಂದಿದ್ದಾರೆ. ದೇವರಿಗೆ ಆಸೆ ಇದೆ. ಹುಳಿಯೆಂದು ಮಾವನ್ನು ಬಿಡುವದು ಲೇಸಲ್ಲ. ಅದೇ ಹುಳಿ ಮಾವು ಕಾಲಕ್ರಮೇಣ ಮಧುರವಾಗುವದು. ಅದರಂತೆಯೇ ಮಾನವ ಪ್ರಾಣಿಯು. ಕೆಲವು ಪಕ್ವವಾದ ಹಣ್ಣುಗಳು ಬಹಳೇ ಸೊಗಸು ಮತ್ತು ಮಧುರವಾದದ್ದನ್ನು ದೇವರು ಅನುಭವಿಸಿದ್ದಾನೆ. ಅನಂತಕಾಲ ಬಾಳುವ ತಾಳ್ಮೆ, ಆಶೆ ಅವನಲ್ಲಿದೆ.

ಸ್ವಾಮಿ ರಾಮತೀರ್ಥರು ಒಂದೆಡೆಯಲ್ಲಿ ಹೀಗೆ ಹೇಳಿದ್ದಾರೆ. "ಜ್ಞಾನದ ಮೆಟ್ಟಲನ್ನು ಹತ್ತುವ ಬಾಲಕರು ನಾವೆಲ್ಲರು. ಕೆಲವರು ಎಲ್ಲ ಮೆಟ್ಟಲುಗಳನ್ನು ಹತ್ತಿ ಜ್ಞಾನಮಂದಿರದಲ್ಲಿ ಸೇರಿದ್ದಾರೆ. ಕೆಲವರು ಕೊನೆಯ ಮೆಟ್ಟಲಿನ ಮೇಲಿದ್ದಾರೆ. ಕೆಲವರು ನಡುವೆ ಇದ್ದಾರೆ. ಮತ್ತೆ ಕೆಲವರು ತೀರ ಕೆಳಮೆಟ್ಟಲಿನ ಮೇಲೆ, ಇನ್ನೂ ಕೆಲವರು ಆ ಮೆಟ್ಟಲಿನ ದಿಕ್ಕಿನತ್ತ ಧಾವಿಸುತ್ತಿದ್ದಾರೆ. ಒಂದು ದಿನ ಈ ಎಲ್ಲ ಬಾಲಕರು ಜ್ಞಾನ ಮಂದಿರದಲ್ಲಿ ಭೆಟ್ಟಿಯಾಗುವದು ಖಂಡಿತ. ಅವರೆಲ್ಲರೂ ಮಧುರ ಸಂಗೀತವನ್ನು ನಿರ್ಮಿಸುವರು."

ಮಾನವನ ಯಾತ್ರೆ ಆರಂಭವಾಗಿದೆ. ನಾವೆಲ್ಲ ಯಾತ್ರಿಕರು ಮಂಗಲ ಯಾತ್ರೆ ಮಾಡಲು ಹೊರಟವರು. ಕಡಲನ್ನು ಅಪ್ಪಿಕೊಳ್ಳಲು ಹೊರಟ ಹೊಳೆಯು ಎಂದಾದರೂ ಸರಳವಾಗಿ ಹೋಗಿದೆಯೋ? ಒಂದೇ ಗತಿಯಿಂದ ಅದೇ ವೇಗದಿಂದ ಸಾಗುವದೋ? ಹೊಳೆ ಹಾವಿನಂತೆ ಡೊಂಕಾಗಿ ಸಾಗು

ವದು. ಒಮ್ಮೊಮ್ಮೆ ಗುಡ್ಡಗಳ ಮೇಲಿಂದ ಜಿಗಿದು ಹರಿಯುವದು; ಕೆಲವು ವೇಳೆ ಉಚ್ಛೃಂಖಲವಾಗುವದು; ಒಮ್ಮೊಮ್ಮೆ ಹಳ್ಳಿ, ಪಟ್ಟಣಗಳನ್ನೇ ಹಾಳುಮಾಡುವದು; ಹೊಳೆ ನಗುವದು, ಅಳುವದು. ಕೆಲಕಾಲ ತುಂಬಿ ಹರಿಯುವದು, ಕೆಲಕಾಲ ಹರಿಗಡಿಯುವುದು. ನಿಬಿಡ ಅರಣ್ಯವನ್ನು ಸೇರುತ್ತದೆ, ಮತ್ತೆ ಪ್ರಸನ್ನವಾಗಿ ಬಯಲನ್ನು ಸೇರಿ, ಗಂಭೀರವಾಗಿ ಹರಿಯುವದು. ಎಲ್ಲಿಯೇ ಹರಿಯಲಿ, ಹೇಗೇ ಹರಿಯಲಿ, ಕೊನೆಗೊಮ್ಮೆ ಕಡಲನ್ನು ಮುಟ್ಟುವದು. ಮತ್ತು ಹೊಳೆಯ ಹಾದೀ ಕಾಯುವ ಸಾಗರ ರಾಜನು ತನ್ನ ಸಾವಿರಾರು ಕೈಗಳಿಂದ ಬರಮಾಡಿಕೊಂಡು ಅಪ್ಪಿಕೊಳ್ಳುವನು. ಮತ್ತು ಅದನ್ನು ತನ್ನೊಡನೆ ಏಕರೂಪಿ ಮಾಡಿಕೊಳ್ಳುವನು.

ಆ ಪರ್ವತಗಳು-ನದಿಗಳ ಉಗಮಸ್ಥಾನಗಳು ತಮ್ಮ ಮಕ್ಕಳ ಮೇಲೆ ಎಂದೂ ಸಿಟ್ಟಿಗೆ ಬರುವಂತಿಲ್ಲ. ಅವುಗಳ ಆಶೆ ಹೊಳೆಗಳ ಮೇಲೆ. ತಮ್ಮ ಆಶೀರ್ವಾದಗಳನ್ನು ಕಳಿಸುತ್ತ ಇರುತ್ತವೆ. ಸತತವಾಗಿ ಅವುಗಳಿಗೆ ಜೀವನವನ್ನು ಕೊಡುತ್ತವೆ. ಹೊಳೆಗಳು ಅತ್ತಿತ್ತ ಹೊಯ್ದಾಡುತ್ತ ಹರಿದರೂ, ಕೊನೆಗೊಮ್ಮೆ ತನ್ನ ಮಕ್ಕಳಾದ ಹೊಳೆಗಳು ಅನಂತ ಸಾಗರವನ್ನು ಹೋಗಿ ಕೂಡುತ್ತವೆಂಬ ಆಶೆ ಈ ಪರ್ವತಗಳಿಗೆ ಇದೆ. ತಾನು ಕರಗಿ ಹಿಮಾಲಯವು ಹೊಳೆಗಳಿಗೆ ನೀರು ಪೂರೈಸುತ್ತದೆ. "ಅಮ್ಮಾ ಗಂಗೆ, ಯಮುನೆ, ನಾನು ಶ್ರದ್ಧಾವಂತನು. ನಿಮ್ಮ ಗುರಿ ಸಾಧಿಸಲು ಹೋಗಿರಿ. ನಿಮ್ಮಲ್ಲಿ ನನಗೆ ನಂಬುಗೆ ಇದೆ'' ಎಂದು ಹಿಮಾಲಯವು ಹೇಳುತ್ತದೆ.

ಪರಮೇಶ್ವರನ ಆಶೆ ಇದೇ ರೀತಿಯದು. ಮಾನವನು ಕೊನೆಗೆ ನನ್ನೆಡೆಗೆ ಬರುವನು. ಪ್ರೇಮ, ಸಹಕಾರ್ಯ, ಐಕ್ಯ, ಮಂಗಲ, ಪಾವಿತ್ರ್ಯ, ಇವುಗಳನ್ನೆಲ್ಲ ನಿಜವಾಗಿ ಸಾಧಿಸುವನೆಂಬ ಆಶೆ ದೇವರಿಗಿದೆ. ಈ ನಂಬಿಗೆಯಿಂದಲೇ ಅವನು ಸೂರ್ಯ-ಚಂದ್ರರನ್ನು ಪ್ರಕಾಶಿಸುತ್ತಾನೆ. ಚಿಕ್ಕೆಗಳನ್ನು ಹೊಳೆಯಿಸುತ್ತಾನೆ. ಮೋಡಗಳನ್ನು ಕಳಿಸುತ್ತಾನೆ. ಗಾಳಿಗಳನ್ನು ಕುಣಿದಾಡಿಸುತ್ತಾನೆ. ಮತ್ತು ಕಾಳುಕಡಿಗಳನ್ನು ಬೆಳೆಯಿಸುತ್ತಾನೆ.

ಮಾನವನಿಗೆ ಈ ಹೆಗ್ಗುರಿಯನ್ನು ಸಾಧಿಸಲು ಅನುವು ಮಾಡಿಕೊಡುವದು ಧರ್ಮದ ಕೆಲಸ. ಇದೇ ಸಂಸ್ಕೃತಿಯು ಗಳಿಸತಕ್ಕ, ಸಾಧಿಸತಕ್ಕ, ವಸ್ತುವು. ಮಾನವ ಜನಾಂಗವು ಈ ಹೆಗ್ಗುರಿ ಮುಟ್ಟಲೆಂದು ಸಾಧುಸಂತರು ಹಗಲಿರುಳು ಹಂಬಲಿಸುತ್ತಾರೆ. ಹೆಣಗಾಡುತ್ತಾರೆ. ಸಾಧುಗಳೆಲ್ಲರು ಮುಕ್ತರು. ಆದರೆ ಬದ್ಧರನ್ನು ಮುಕ್ತಮಾಡಲು ಮತ್ತೆ ಬದ್ಧರಾಗು

ತ್ತಾರೆ. ಕೆಸರಿನಲ್ಲಿ ಸಿಕ್ಕವರನ್ನು ಮೇಲಕ್ಕೆತ್ತುವದಕ್ಕಾಗಿ ಅವರು ಕೆಸರಿನಲ್ಲಿ ಧುಮುಕುತ್ತಾರೆ. ಜ್ಞಾನಮಂದಿರದಲ್ಲಿಯೇ ಕೂಡುವದಾಗುವದಿಲ್ಲ ಅವರಿಗೆ. ಅತ್ತಿತ್ತ ಬಯಲಲ್ಲಿ ಓಡಾಡುವ ತಮ್ಮ ಬಾಂಧವರನ್ನು ಮೆಟ್ಟಿನ ಕಡೆ ಒಯ್ಯಲು ಟೊಂಕಕಟ್ಟಿ ನಿಲ್ಲುತ್ತಾರೆ. ಆತ್ಮ ಬಲಿದಾನವನ್ನು ಮಾಡಲು ಸಹ ಸಿದ್ಧರಿರುತ್ತಾರೆ.

ಕುದುರೆಯನ್ನು ಓಡಿಸಬೇಕಾದರೆ ಚೂ ಚೂ ಎಂದು ಓಡಿಸಬೇಕಾಗುತ್ತದೆ. ಅದರಂತೆ ಮನುಷ್ಯನನ್ನು ಸಹ ಧ್ಯೇಯದ ಕಡೆಗೆ ಒಯ್ಯಬೇಕಾದರೆ ತಾಳ್ಮೆಯಿಂದ ಒಯ್ಯಬೇಕಾಗುತ್ತದೆ. ಸಾಧುಸಂತರು ಮಾನವರಿಗೆ ಸಾರಥಿಗಳಂತೆ ಇದ್ದಾರೆ. "ವಿಷಯೋಪಭೋಗಗಳನ್ನು ಉಪಭೋಗಿಸು, ದುಡ್ಡು ಗಳಿಸು, ಆದರೆ ಅದರಲ್ಲಿ ಮಿತಿ ಇರಲಿ'' ಎಂದು ಸಂತರು ಹೇಳುತ್ತಾರೆ. ತಿನ್ನಲು, ಕುಡಿಯಲು, ಹೊಡೆಯಲು, ಕೊಲ್ಲಲು ಮನುಷ್ಯನಿಗೆ ಕಲಿಸುವ ಕಾರಣವಿಲ್ಲ. ಅದು ಮನುಷ್ಯ ಪ್ರಾಣಿಯ ಹುಟ್ಟುಗುಣವು. ಧರ್ಮವು ಹೀಗೆ ಮಾಡಲು ಹೇಳುವುದಿಲ್ಲ; ಈ ವೃತ್ತಿಯ ಕೊಲೆಯನ್ನು ಮಾಡಲೂ ಹೋಗುವುದಿಲ್ಲ. "ನಿನ್ನ ಮನಸ್ಸಿನ ಓಟಕ್ಕೆ ತಡೆಹಾಕು''ಎಂದು ಧರ್ಮವು ಹೇಳುತ್ತದೆ. "ತಿನ್ನುವದು ಇದ್ದರೆ ತಿನ್ನು, ಆದರೆ ಕರಿದ ಪದಾರ್ಥ, ಮಾಂಸ, ಹಳಸಿದ ಪದಾರ್ಥಗಳನ್ನು ತಿನ್ನಬೇಡ. ನಾಲಿಗೆಯ ಮೇಲೆ ಹಿಡಿತವಿರಲಿ, ಹಸಿವು ಆದಾಗ ಮಾತ್ರ ತಿನ್ನು. ವೇಳೆಗೆ ಸರಿಯಾಗಿ ಊಟಮಾಡು, ಮಲಗುವದಕ್ಕಿಂತ ಎರಡು ತಾಸು ಮೊದಲು ಊಟ ಮಾಡು. ಮೀನ, ಮಾಂಸ ತಿನ್ನುವದಿದ್ದರೆ ಪಚನವಾಗುವಂತಹದೇ ತಿನ್ನು. ಸಿಕ್ಕ ಸಿಕ್ಕ ಪ್ರಾಣಿಗಳ ಮಾಂಸವನ್ನು ತಿನ್ನಬೇಡ. ಕೆಲವೊಂದು ನಿಯಮಗಳನ್ನು ಮಿತಿಯಿಂದ ಪಾಲಿಸೆ''ಂದು ಧರ್ಮವು ಹೇಳುತ್ತದೆ.

ನಿನಗೆ ಮಲಗುವದಿದ್ದರೆ ಮಲಗು. ಆದರೆ ಬೇಗನೇ ಮಲಗಿ ಬೇಗನೆ ಏಳಬೇಕು. ಬಹಳ ಹೊತ್ತು ಹಾಸಿಗೆಯಲ್ಲಿ ಉರುಳಾಡಬೇಡ. ಅದರಿಂದ ಆಲಸ್ಯವು ಹೆಚ್ಚಾಗುವದು. ಶರೀರವು ದುರ್ಬಲವಾಗುವದು. ಪಕ್ಕಡಿಯ ಮೇಲೆ ಮಲಗಬೇಕು. ನಿದ್ದೆ ಮಾಡುವದರಲ್ಲಿಯೂ ಕೆಲವೊಂದು ನಿಯಮಗಳಂತೆ ನಡೆದುಕೊಳ್ಳಬೇಕು.

ಅದರಂತೆಯೇ ವಿಷಯೋಪಭೋಗಗಳ ಬಗ್ಗೆ. ವಿಷಯದಲ್ಲಿಯೇ ಲೋಲಾಡಬೇಡ. ಹಗಲಿರುಳು ಲೋಲುಪನಾಗುವದು ನಿನಗೆ ಶೋಭಿಸುವದಿಲ್ಲ. ಪಶುಪಕ್ಷಿಗಳು ಕೂಡ ಸಂಯಮದಿಂದ ಇರುವವು. ನೀನಂತೂ

ಮನುಷ್ಯ. ಅಮಾವಾಸ್ಯೆ, ಕೆಲವು ವಾರ, ಋತುಗಳನ್ನು ಬಿಡು. ಏನಾದರೊಂದು ಬಂಧನವನ್ನು ಹಾಕಿಕೊಳ್ಳು. ಕೆಲವೊಂದು ವ್ರತಗಳನ್ನು ಕೈಕೊಳ್ಳು. ವಿಷಯ ಸೇವನೆ ಮಾಡುವ ನಿನ್ನ ಶಕ್ತಿ ಬಹಳ ದಿವಸ ಬಾಳಬೇಕೆಂದಾದರೂ, ಮಿತಿಯಿಂದ ಇರು. ಒಂದೇ ದಿವಸ ಅಳತೆ ಮೀರಿ ತಿಂದರೆ ಸತ್ತುಹೋಗುವಿ. ಅದರಂತೆ ಮಿತಿಮೀರಿ ವಿಷಯ ಸೇವನೆ ಮಾಡಿದರೆ ದುರ್ಬಲನಾಗುವಿ. ದಿನಾಲು ಮಿತಿಯಿಂದ ತಿಂದರೆ ರಸನೆಯ ರುಚಿಯು ಹೆಚ್ಚು ಕಾಲ ಬಾಳುವದು. ಅದರಂತೆ ವಿಷಯ ಭೋಗವನ್ನು ಮಿತಿಯಿಂದ ಅನುಭೋಗಿಸಿದರೆ ನಿನ್ನ ಶಕ್ತಿಯು ಬಹುಕಾಲ ಬಾಳುವದು. ನಿನ್ನ ಸುಖಕ್ಕಾದರೂ ನಿಯಮಗಳನ್ನು ಪಾಲಿಸು.

ಹಿಂಸೆ ಮಾಡೇತೀರಬೇಕೆಂದಿದ್ದರೆ ಮಾಡು; ಆದರೆ ಇಲ್ಲಿಯಾದರೂ ಬಂಧನವನ್ನು ಇಟ್ಟುಕೋ. ವಿಷವಾಯುಗಳನ್ನು ಉಪಯೋಗಿಸಬೇಡ. ಬಾಂಬುಗಳನ್ನು ಸುರಿಸಬೇಡ. ಗದಾಯುದ್ಧ ಮಾಡುವ ಕಾಲಕ್ಕೆ ನಡದ ಕೆಳಗೆ ಪೆಟ್ಟು ಕೊಡಬೇಡ. ರಾತ್ರಿ ಯುದ್ಧ ಮಾಡಬೇಡ. ಒಬ್ಬನ ಮೇಲೆ ಅನೇಕರು ಏರಿ ಹೋಗಬೇಡಿರಿ. ಸ್ತ್ರೀಯರು, ಹುಡುಗರು, ಮುದುಕರು ಇವರನ್ನು ಕಾರಣವಿಲ್ಲದೆ ಕೊಲ್ಲಬೇಡ, ಅನ್ಯಾಯದಿಂದ ಯಾರ ಮೇಲೆಯೂ ಏರಿ ಹೋಗಬೇಡ. ಅನ್ಯರು ನಿನ್ನನ್ನು ಹೊಡೆಯಲಿಕ್ಕೆ ಬಂದರೆ ಮಾತ್ರ ಎದುರಿಸಲು ಸಿದ್ಧನಿರು. ಕಪಟದಿಂದ ಯಾರನ್ನೂ ಕೊಲ್ಲಬೇಡ.

ದುಡ್ಡು ಗಳಿಸುವದಿದ್ದರೆ ಗಳಿಸು; ಆದರೆ ಉತ್ತಮ ವ್ಯವಹಾರದಿಂದ ಗಳಿಸು. ಮೋಸದಿಂದ ಅಪಹರಿಸಬೇಡ. ಕಳವು ತುಡುಗುಗಳಿಂದ ಗಳಿಸಬೇಡ. ಬಡವರನ್ನು ಹಿಂಡಬೇಡ. ಬಹಳ ಲಾಭ, ಬಹಳ ಬಡ್ಡಿ ತಕ್ಕೊಳ್ಳುವದು ಬೇಡ. ಇತರ ರಾಷ್ಟ್ರಗಳಿಗೆ ಶೆರೆ ಕುಡಿಸಿ, ಅಫು ತಿನಿಸಿ ದುಡ್ಡು ಗಳಿಸಬೇಡ. ಬೇರೆ ರಾಷ್ಟ್ರಗಳಲ್ಲಿರುವ ಜನರನ್ನು ನಿರುದ್ಯೋಗಿಗಳನ್ನಾಗಿ ಮಾಡಿ, ಅವರ ವ್ಯವಹಾರಗಳನ್ನು ಹಾಳುಮಾಡಿ ಗಳಿಸಬೇಡ. ಎರಡನೆಯವರ ಮನೆಗಳನ್ನು ಮುರಿದು ಮಹಲುಗಳನ್ನು ಕಟ್ಟಬೇಡ. ಎರಡನೆಯವರನ್ನು ಸುಲಿದು ಮೆರೆಯಬೇಡ. ಪರರನ್ನು ಅಳಿಸಿ ನಗಬೇಡ. ಹೀಗೆ ಧರ್ಮವು ಆದೇಶಿಸುತ್ತದೆ. ಧರ್ಮ ಸಂಸ್ಥಾಪಕರು ನೇರವಾಗಿ ನಿಮ್ಮನ್ನು ಪ್ರಗತಿಪಥದ ಮೇಲೆ ಒಯ್ಯುತ್ತಾರೆ. ಧರ್ಮ, ಅರ್ಥ, ಕಾಮ, ಮೋಕ್ಷ. ಅರ್ಥ-ಕಾಮಕ್ಕಿಂತ ಮೊದಲು ಧರ್ಮ, ಮತ್ತು ಕೊನೆಗೆ

ಮೋಕ್ಷ. ಮನುಷ್ಯನು ಮಾಡುವ ಎಲ್ಲ ಪ್ರಯತ್ನಗಳು ಮೋಕ್ಷಕ್ಕಾಗಿಯೇ ಇವೆ. ಮೋಕ್ಷವೆಂದರೆ ಬಿಚ್ಚು ಮನಸ್ಸಿನಿಂದ ಇರುವದು, ಆನಂದ. ಮೋಕ್ಷವೆಂದರೆ ದುಃಖ-ಚಿಂತೆಗಳಿಂದ ಬಿಡುಗಡೆ. ಮೋಕ್ಷವೆಂದರೆ ಪರಮಸುಖ, ಕೇವಲ ಶಾಂತಿ. ಇಂಥ ಮೋಕ್ಷವನ್ನು ಗಳಿಸುವದೇ ಮನುಷ್ಯ ಜೀವನದ ಗುರಿಯು. ಆದರೆ ಇದನ್ನು ಪಡೆಯುವದು ಹೇಗೆ? ವಾಸನೆ-ವಿಕಾರಗಳ ಮುದ್ದೆಯಾದ, ದುರ್ಬಲ ಮಾನವನಿಗೆ ಪರಮಶಾಂತಿಯು ದೊರಕುವದು ಹೇಗೆ ?

ಭೋಗದಿಂದ ಶಾಂತಿ ಸಿಕ್ಕುವದು ಸಾಧ್ಯವೇ ? ಭೋಗವನ್ನು ಸೇವಿಸುವಾಗ ನಗುವನು. ಸೇವನೆಯು ಮುಗಿದೊಡನೆ ಅಳುವನು. ಭೋಗದಿಂದ ನಿಜವಾದ ಸುಖವು ಸಿಗುವದಿಲ್ಲ. ಮಿತಿ ಇಲ್ಲದ, ಸ್ವೈರ ವೃತ್ತಿಯ ಭೋಗದಲ್ಲಿ ಸುಖವಿಲ್ಲ. ಮಿತಿ ಇಲ್ಲದ, ವ್ರತವಿಲ್ಲದ, ಸಂಯಮವಿಲ್ಲದ ಭೋಗಜೀವನವು ಮನುಷ್ಯನನ್ನು ದುಃಖಕ್ಕೀಡು ಮಾಡದೆ ಇರದು. ಇಂಥ ಜೀವನದಿಂದ ಮನುಷ್ಯನು ತಾನೂ ದುಃಖಿಯಾಗುತ್ತಾನೆ; ಸಮಾಜವನ್ನೂ ದುಃಖಕ್ಕೀಡುಮಾಡುತ್ತಾನೆ. ಭೋಗ ಭೋಗಿಸುವ ಪ್ರಯೋಗಗಳನ್ನು ಹಿರಿಯರು ಮಾಡಿ ನೋಡಿದ್ದಾರೆ. ಯಯಾತಿಯು ಇಂಥ ಜೀವನವನ್ನು ಸಾಗಿಸಿದ್ದಾನೆ. ಪುನಃ ಪುನಃ ತರುಣನಾಗುತ್ತಿದ್ದನು. ತನ್ನ ಮಕ್ಕಳ ತಾರುಣ್ಯವನ್ನು ತಾನು ತಕ್ಕೊಂಡು ಭೋಗವನ್ನು ಸೇವಿಸುತ್ತಿದ್ದನು. ಆದರೆ ಕೊನೆಗೆ ಅವನು ಬೇಸತ್ತನು. ಸಾವಿರಾರು ವರ್ಷ ಹೀಗೆ ಜೀವನವನ್ನು ಸಾಗಿಸಿ ಮಾನವ ಜಾತಿಗೆಲ್ಲ ಈ ಸಿದ್ಧಾಂತವನ್ನು ದಯಪಾಲಿಸಿದ್ದಾನೆ. "ನ ಜಾತು ಕಾಮಃ ಕಾಮಾನಾಮುಪಭೋಗೇನಶಾಮ್ಯತಿ." ವಿಷಯವನ್ನು ಎಷ್ಟು ಸೇವಿಸಿದರೂ ಕಾಮವು ಶಾಂತವಾಗುವದಿಲ್ಲ. ಅಗ್ನಿಗೆ ಆಹುತಿ ಕೊಟ್ಟು ನೊಂದಿಸುವ ಪ್ರಯತ್ನದ ಹಾಗೆ ಆಗುವದು.

ಈ ಪ್ರಯೋಗವಂತೂ ಯಶಸ್ವಿಯಾಗಲಿಲ್ಲ. ಹಾಗಾದರೆ ಮಾಡುವದಾದರೂ ಏನು ? ಇಂದ್ರಿಯಗಳಿಗೆ ಸುಖವು ಬೇಕು. ಇಂದ್ರಿಯಗಳಿಗೆ ಭೋಗವು ಬೇಕೇಬೇಕು. ನಾವು ಇಂದ್ರಿಯಗಳ ದಾಸರಾಗಿದ್ದೇವೆ. ಈ ಇಂದ್ರಿಯಗಳ ಸ್ವಾಮಿಯಾಗುವದಾದರೂ ಹೇಗೆ ? ಅವುಗಳಿಗೆ ಭೋಗಗಳ ಅನುವನ್ನೇ ಮಾಡಿಕೊಡದಿದ್ದರೆ ಅವು ಹಪಾಪಿಸಿ ಅನುಕೂಲ ಸಂಧಿ ದೊರೆತೊಡನೆ ಅನಿಯಂತ್ರಿತವಾಗುವವು. ಇಂದ್ರಿಯಗಳನ್ನು ಈ ರೀತಿ ಉಪವಾಸಕ್ಕೀಡು ಮಾಡುವದು ಕಷ್ಟ. ಆತ್ತ ಅವುಗಳನ್ನು ಬಲುಮೆಯಿಂದ

ಸಾದು ಮಾಡುವದು ಕಷ್ಟ. ಇಂದ್ರಿಯಗಳಿಗೆ ಸ್ವಾತಂತ್ರ್ಯ ಕೊಡುವದೆಂದರೆ ಹಾನಿಕರವು. ಅದಕ್ಕಾಗಿಯೇ ಭಾರತೀಯ ಸಂಸ್ಕೃತಿಯು ಸಾರಿ ಹೇಳು ತ್ತದೆ. "ಭೋಗಗಳನ್ನು ಸೇವಿಸಲು ಅನುವು ಮಾಡು. ಆದರೆ ಅಳತೆ ಇರಲಿ, ಅದಕ್ಕೆ ಮರ್ಯಾದೆ ಇರಲಿ."

ಅರ್ಥ, ಕಾಮಗಳಿಗೆ ಧರ್ಮದ ಬೆಂಬಲವಿರಲಿ. ಮೊದಲು ಧರ್ಮದ ಅಧಿಷ್ಠಾನ. ಧರ್ಮದ ಪಾಯದ ಮೇಲೆಯೇ ಅರ್ಥ, ಕಾಮದ ಮಂದಿರ ಗಳನ್ನು ನಿಲ್ಲಿಸಿರಿ. ಅರ್ಥ, ಕಾಮಗಳ ಜೊತೆಗೆ ಧರ್ಮವಿದ್ದರೆ ಸುಖವು. ಹೀಗಿದ್ದರೆ ಮಾತ್ರ ಅವು ನಮ್ಮನ್ನು ಬಂಧಿಸದೆ, ಮುಕ್ತ ಮಾಡುವವು. ಅರ್ಥ ಕಾಮಗಳಲ್ಲಿಯೂ, ಅರ್ಥಕ್ಕೆ ಮಹತ್ವವು ಹೆಚ್ಚು. ಯಾಕಂದರೆ ಅರ್ಥವಿಲ್ಲದೆ ಕಾಮವೆಲ್ಲಿಂದ? ಹೊಟ್ಟೆಗಿಲ್ಲದಿದ್ದರೆ, ಬಟ್ಟೆಗಿಲ್ಲದಿದ್ದರೆ, ನಾವು ಸಾಯುವೆವು. ಆ ಮೇಲೆ ಕಾಮೋಪಭೋಗವೆಲ್ಲಿ? ಅರ್ಥವು ಎಲ್ಲ ಕಾಮಗಳ ಸಾಧನವು. ದುಡ್ಡಿಲ್ಲದೆ ಬೇರೆ ಬೇರೆ ವಿಷಯೋ ಪಭೋಗಗಳನ್ನು ಅನುಭವಿಸುವದಾದರೂ ಹೇಗೆ? ದುಡ್ಡಿಲ್ಲದೆ ಎಲ್ಲವೂ ವ್ಯರ್ಥವಾದದ್ದು. ಧನ ಧಾನ್ಯವಿಲ್ಲದಿದ್ದರೆ ಕಾಮವು ಸತ್ತು ಹೋಗುವದು. ಅರ್ಥ, ಕಾಮಗಳಲ್ಲಿಯೂ ಭಾರತೀಯ ಸಂಸ್ಕೃತಿಯು ಅರ್ಥಕ್ಕೆ ಹೆಚ್ಚು ಪ್ರಾಶಸ್ತ್ಯವನ್ನಿತ್ತಿದೆ. ಮತ್ತು ಇವೆರಡಕ್ಕೂ ಧರ್ಮದ ಬೆಂಬಲವನ್ನು ಇಟ್ಟಿದೆ. ಅರ್ಥ, ಕಾಮಗಳೆರಡನ್ನೂ ಧರ್ಮವು ನಿಯಂತ್ರಿಸುವುದು. ಆದರೆ ಧರ್ಮದ ನಿಯಂತ್ರಣವೆಂದರೇನು? ಧರ್ಮವೆಂದರೇನು? ಧರ್ಮ ವೆಂದರೆ ಚಂಡಿಕೆಯೋ, ಜನಿವಾರವೋ, ಗಂಧವೋ, ಜಪಮಾಲೆಯೋ? ಹರಿ ಹರಿ ಅನ್ನುವದೋ, ಜಪವನ್ನು ಮಾಡುವದೋ? ಧರ್ಮವೆಂದರೆ ಏನೂ ಮಾಡದೆ ಭೋಗಗಳನ್ನು ಭೋಗಿಸುವದೊ, ಅಥವಾ ಶಂಖವನ್ನು ಊದುವದೋ, ಗಂಟೆಯನ್ನು ಬಾರಿಸುವದೊ? ಏನು ಧರ್ಮವೆಂದರೆ ವಾದ್ಯಗಳನ್ನು ಬಾರಿಸದೆ ಇರುವದೊ, ಅಥವಾ ಬಾರಿಸುವದೊ? ಧರ್ಮ ವೆಂದರೇನು? ಭಾರತೀಯ ಸಂಸ್ಕೃತಿಯು ಧರ್ಮದ ಅತ್ಯಂತ ಶಾಸ್ತ್ರಶುದ್ಧ ವಾದ ವ್ಯಾಖ್ಯೆಯನ್ನು ಮಾಡಿದೆ. "ಧಾರಣಾತ್ ಧರ್ಮಃ'' ಎಂಬುವದೇ ಆ ವ್ಯಾಖ್ಯೆಯು. ಇಡೀ ಸಮಾಜ ಧಾರಣೆಯು ಯಾವುದರಿಂದ ಆಗುತ್ತ ದೆಯೋ ಅದೇ ಧರ್ಮವು. ಆದರೆ ಈ ಧಾರಣೆಯು ಯಾರದು? ನನ್ನದೋ, ನನ್ನ ಜಾತಿಯದೋ, ನನ್ನ ದೇಶದ್ದೋ? ಮಾನವ ಜಾತಿಯದೋ, ಇಡೀ ಚರಾಚರ ಸೃಷ್ಟಿಯದೋ? ಮಾನವನು ಈ ಸೃಷ್ಟಿಯಲ್ಲಿ ಮಹತ್ವ

ವುಳ್ಳ ಪ್ರಾಣಿಯು. ಮಹತ್ವವು ಪುಕ್ಕಟೆಯಾಗಿ ದೊರೆಯುವದಿಲ್ಲ. ಹಿರಿಮೆ ಯೆಂದರೆ ಹೊಣೆ. ಮಾನವನೇ ಇಡೀ ಸೃಷ್ಟಿಯ ಎಲ್ಲ ವ್ಯವಸ್ಥೆ ಮಾಡುವ ಹೊಣೆ ಹೊರತಕ್ಕದ್ದು. ಮಾನವನ ನೀತಿಶಾಸ್ತ್ರವು ಇಡೀ ಸೃಷ್ಟಿಯ ವಿಚಾರವನ್ನು ಮಾಡತಕ್ಕದ್ದು. ಮನುಷ್ಯನು ಮನುಷ್ಯನೊಡನೆ ಯಾವ ರೀತಿಯಿಂದ ನಡಕೊಳ್ಳಬೇಕು. ಎಂಬುದನ್ನು ನೀತಿಶಾಸ್ತ್ರವು ನಿರ್ಣಯಿ ಸುವದು. ಆದರೂ ಇದಕ್ಕೂ ಮುಂದೆ ಹೋಗಿ ಪಶುಪಕ್ಷಿಗಳೊಡನೆ, ವನಸ್ಪತಿಗಳೊಡನೆ, ಹೊಳೆ ಹಳ್ಳಗಳೊಡನೆ ಹೇಗೆ ನಡಕೊಳ್ಳಬೇಕೆಂಬು ದನ್ನು ನೀತಿಶಾಸ್ತ್ರವು ನಿರ್ಣಯಿಸಬೇಕು.

ಮನು ತನ್ನ ಸ್ಮೃತಿಗೆ ಮಾನವ ಧರ್ಮಶಾಸ್ತ್ರವೆಂಬ ಹೆಸರನ್ನು ಇಟ್ಟನು. ಆರ್ಯ ಅಥವಾ ಭಾರತೀಯ ಎಂಬ ಹೆಸರನ್ನಿಡಲಿಲ್ಲ. ಮನು ಮಾನವನ ಧರ್ಮವನ್ನೇ ಹೇಳುತ್ತಾನೆ. ಮನು ತನ್ನ ದೃಷ್ಟಿಯಿಂಧ ಮಾನವ್ಯದ ಆಚಾರವನ್ನೇ ನಿವೇದಿಸಿದ್ದಾನೆ. ಇಂದು ನಮಗೆ ಅವನು ಹೇಳಿರುವ ವಿಚಾರಗಳು ಸರಿದೋರಲಿಕ್ಕಿಲ್ಲ. ಅವನ ದೃಷ್ಟಿಯಾದರೂ ತಪ್ಪು ಎಂದು ತೋರಬಹುದು. ಆದರೆ ಅವನ ನಿಜವಾದ ದೊಡ್ಡಸ್ತಿಕೆಯು, ಅವನು ಮಾನವರ ವಿಚಾರ ಮಾಡುತ್ತಾನೆಂಬ ದೃಷ್ಟಿಯಲ್ಲಿದೆ. "ಮಾನವ ಧರ್ಮಶಾಸ್ತ್ರ" ಎಂಬ ಶಬ್ದಗಳ ಉಚ್ಚಾರದೊಡನೆ ನನ್ನ ಹೃದಯ ಸಾಗರವು ಆನಂದದ ಅಲೆಗಳಿಂದ ಉಕ್ಕೇರುತ್ತದೆ.

ಆದ್ದರಿಂದ ಧರ್ಮವನ್ನು ಧಾರಣ ಮಾಡುವವರೆಲ್ಲರು ಮಾನವ ಜಾತಿಯವರು. ಒಂದು ಕ್ಷಣ ಮಾನವೇತರ ಸೃಷ್ಟಿಯನ್ನು ಬದಿಗಿಡುವಾ. ಮಾನವರ ಕಲ್ಯಾಣವನ್ನಾದರೂ ವಿಚಾರಿಸೋಣ. ಮನು ಹೇಳುತ್ತಾನೆ. "ಎಲ್ಲ ಮಾನವರ ವಿಚಾರವನ್ನೂ ಮಾಡಿರಿ." ಇಡೀ ಮಾನವ ಜನಾಂಗದ ಹಿತದ ಪಾಯದ ಮೇಲೆಯೇ ಅರ್ಥಶಾಸ್ತ್ರವನ್ನು ಆಧರಿಸಬೇಕು. ಒಂದು ಜಾತಿ, ಒಂದು ದೇಶ, ಒಂದು ಜನಾಂಗ ಇವುಗಳ ಕಲ್ಯಾಣದ ತಳಹದಿಯ ಮೇಲೆ ಆಧರಿಸಿದ ಅರ್ಥಶಾಸ್ತ್ರವು ಧರ್ಮಮೂಲವಾದದ್ದಲ್ಲ. ಧರ್ಮದ ಪಾಯದ ಮೇಲೆ ಇದ್ದ ಅರ್ಥಶಾಸ್ತ್ರವು ಮಾನವ ಜನಾಂಗದವರೆಲ್ಲರ ಹಿತವನ್ನು ಬಯಸುವಂತಹದೇ ಇರುವದು.

ಹಿಂದುಸ್ತಾನವನ್ನು ಬಡತನದ ಗೋಳಿಗೆ ಈಡುಮಾಡಿ, ಇಂಗ್ಲಂಡವು ಸಂಪನ್ನವಾಗುತ್ತಿದ್ದರೆ ಇಂಗ್ಲಂಡದ ಅರ್ಥಶಾಸ್ತ್ರವು ಧರ್ಮ ಮೂಲವಾದ ದ್ದಲ್ಲ. ಚೀನದ ಕುತ್ತಿಗೆ ಹಿಚುಕಿ ಜಪಾನವು ಶ್ರೀಮಂತವಾದರೆ ಜಪಾನದ

ಅರ್ಥಶಾಸ್ತ್ರವು ಅನ್ಯಾಯದ್ದು. ಅನಾರ್ಯರನ್ನು ದಾಸ್ಯದ ಕೊಳೆಯಲ್ಲಿ ಚೆಲ್ಲಿ, ಆರ್ಯರ ದೊಡ್ಡಸ್ತಿಕೆಯನ್ನೇ ಹೊಗಳುವ ಅರ್ಥ ಶಾಸ್ತ್ರವು ಸದೋಷವಾದದ್ದು. ಬ್ರಾಹ್ಮಣೇತರರನ್ನು ಬದಿಗೊತ್ತಿ ಬ್ರಾಹ್ಮಣರು, ಹರಿಜನರನ್ನು ಬದಿಗೊತ್ತಿ ಬ್ರಾಹ್ಮಣೇತರರು, ಮಹಾರಾಷ್ಟ್ರವನ್ನು ಸುಲಿದು ಗುಜರಾತದವರು, ಬಂಗಾಲವನ್ನು ಮುಣುಗಿಸಿ ಮಾರವಾಡಿ ಜನರು ಸಿರಿವಂತರಾಗುತ್ತಿದ್ದರೆ, ಅವರವರು ಆಧರಿಸುವ ಅರ್ಥಶಾಸ್ತ್ರವು ಧರ್ಮಮಯವಾದುದಲ್ಲ.

ಅಸಹಾಯ ಸ್ಥಿತಿಯಲ್ಲಿದ್ದ ರೈತರನ್ನು ಹಗಲಿರುಳು ಗುಲಾಮರಂತೆ ದುಡಿಸಿ, ಅವರು ಕಷ್ಟದಿಂದ ಬೆಳೆಸಿದ ಪೈರನ್ನು ತಮ್ಮ ಹಗೆಗಳಲ್ಲಿ ತುಂಬಿಡುವ ಜಮೀನದಾರರು ಪಾಪಿಗಳು. ಕೂಲಿಕಾರರನ್ನು ದನದಂತೆ ೧೦-೧೦ ತಾಸು ದುಡಿಸಿಕೊಂಡು, ಹೊಟ್ಟೆಗೆ ಸಹ ಸಾಲದಷ್ಟು ಕೂಲಿಯನ್ನು ಕೊಡದಿರುವ, ಅವರ ಗುಡಿಸಲುಗಳು ಇರಲಿಕ್ಕೆ ಯೋಗ್ಯ ಅವೆಯೋ ಇಲ್ಲೋ, ಎಂದು ವಿಚಾರವನ್ನು ಸಹ ಮಾಡದೆ ಇರುವ, ಅವರ ಮಕ್ಕಳ ವಿಚಾರವನ್ನು ಮಾಡದಿರುವ, ಅವರ ಸುಖ ದುಃಖಗಳನ್ನು ಸಹ ಅರಿಯದಿರುವ ಕಾರಖಾನೆಯ ಒಡೆಯರು ಮಹಾ ಪಾಪಿಗಳು. ಇವರೆಲ್ಲರ ಅರ್ಥಶಾಸ್ತ್ರವು ಅನ್ಯಾಯದ, ಅಧರ್ಮದ ತಳಹದಿಯ ಮೇಲೆ ನಿಂತದ್ದು ಇರುತ್ತದೆ. ಭೂಮಿ ಬೆಳೆಯಲಿ, ಬೆಳೆಯದೆ ಇರಲಿ, ಅದರ ವಿಚಾರವನ್ನೇ ಮಾಡದೆ ಖಣಕೋರ ಜನರ ಹೊಲಮನೆಗಳನ್ನು ಜಪ್ತಮಾಡಿಸಿ, ದನಕರುಗಳನ್ನು ಮಾರಿಸಲು ಹಂಬಲಿಸುವ ಧನಕೋರ ಜನರು ಅಧರ್ಮದ ಅರ್ಥಶಾಸ್ತ್ರವನ್ನೇ ಹಿಂಬಾಲಿಸುತ್ತಾರೆ.

ಜಗತ್ತಿನಲ್ಲಿ ಎಲ್ಲೆಡೆಯಲ್ಲಿಯೂ ಅಧರ್ಮದ ಅರ್ಥಶಾಸ್ತ್ರವೇ ನೆಲೆಗೊಂಡಿದೆ. ಆದ್ದರಿಂದಲೇ ವೈಷಮ್ಯ, ದುಃಖ, ದಾರಿದ್ರ್ಯ ಹಬ್ಬಿವೆ. ಕೆಲವು ಬಂಡವಳಗಾರರು ಮಾತ್ರ ಜಗತ್ತನ್ನು ಆಳುತ್ತಾರೆ. ಭಾರತೀಯ ಸಂಸ್ಕೃತಿಗೆ ಸಹನವಾಗದ ಮಾತು ಇದು. ಅದ್ವೈತದ ತಳಹದಿಯ ಮೇಲೆ ನಿಂತ ಸಂಸ್ಕೃತಿ ಇದು. "ಸರ್ವೇತ್ರ ಸುಖಿನಃ ಸಂತು। ಸರ್ವೇ ಸಂತು ನಿರಾಮಯಾಃ ॥ ಸರ್ವೇ ಭದ್ರಾಣಿ ಪಶ್ಯಂತು ಮಾಕಶ್ಚಿತ್ ದುಃಖಮಾಪ್ನುಯಾತ್ ॥" ಎಲ್ಲರೂ ಸುಖದಿಂದ, ಆರೋಗ್ಯದಿಂದ ಬಾಳಲಿ, ಎಲ್ಲರೂ ಕಲ್ಯಾಣವಿದ್ದದ್ದನ್ನೇ ಕಾಣಲಿ. ಇವು ಭಾರತೀಯ ಸಂಸ್ಕೃತಿಯ ಧ್ಯೇಯಗಳು. ಒಬ್ಬನು ಸುಖದಲ್ಲಿ ತೇಲಾಡಬೇಕೆಂದು, ಲಕ್ಷಾವಧಿ ಜನರು ಹುಳು ಹುಪ್ಪಡಿಗಳಂತೆ ಹೇಗಾದರೂ ಜೀವಿಸಬೇಕೆಂದು ಭಾರತೀಯ

ಸಂಸ್ಕೃತಿಯು ಹೇಳುವದಿಲ್ಲ. "ಪ್ರಪಂಚದಲ್ಲಿ ಸುಖವನ್ನೇ ಬೀರುವೆವು. ಮೂರು ಲೋಕಗಳನ್ನು ಆನಂದದಿಂದ ತುಂಬುವೆವು.'' ಇದು ಭಾರತೀಯ ಸಾಧು ಸತ್ಪುರುಷರು ಸಾರಿದ ಡಂಗುರವು. ಎಲ್ಲರನ್ನು ಸುಖಿ ಮತ್ತು ಸಮೃದ್ಧ ಮಾಡುವ ಹೊಣೆಯನ್ನು ಭಾರತೀಯ ಸಂತರು ಹೊತ್ತಿದ್ದಾರೆ. ಕೂಲಿಕಾರರನ್ನು ದನದಂತೆ, ಗುಲಾಮರಂತೆ ದುಡಿಸಿಕೊಳ್ಳುವ ಕಾರಖಾನೆಯ ಒಡೆಯರು, ರೈತರನ್ನು ಹಿಂಡುವ ಸಾಹುಕಾರರು, ಕಾಡುವ ಜಮೀನದಾರರು, ಮತ್ತು ಇವರಿಗೆ ಆಶೀರ್ವಾದವನ್ನು ದಯಪಾಲಿಸುವ ದಂಭಾಚಾರಿ ಸಂತ ಮಹಂತರು ಭಾರತೀಯ ಸಂಸ್ಕೃತಿಯ ಉಪಾಸಕರಲ್ಲ. ಇವರಿಗೆ ಸನಾತನ ಸಂಸ್ಕೃತಿಯ ಅರಿವಿಲ್ಲ, ತಿಳುವಳಿಕೆಯೂ ಇಲ್ಲ. ವಿಶಾಲ ಹೃದಯದ, ಉದಾರ ಮನಸ್ಸಿನ ಋಷಿಗಳಿಂದ ಹುಟ್ಟಿದ ಸಂಸ್ಕೃತಿ ಇದು. ಸಂಕುಚಿತ ಮತ್ತು ಕೀಳು ಮನಸ್ಸಿನವರಿಗೆ ಇದು ತಿಳಿಯುವದೆಂದು ನನಗನಿಸುವದಿಲ್ಲ. ಭಾರತೀಯ ಸಂಸ್ಕೃತಿಯನ್ನು ಬಾಯಿತುಂಬಾ ಹೊಗಳುವ ಮಹನೀಯರು ಸಮಾಜದಲ್ಲಿದ್ದ ವಿಷಮತೆಯನ್ನು ಕಂಡು ಮನಸ್ಸಿಗೆ ಏನೂ ಅನಿಸದೆ ನೋಡುತ್ತ ಇದ್ದಾರೆ. ಅವರಿಗೆ ಇದರ ಬಗ್ಗೆ ದುಃಖವಿಲ್ಲ. ದುಡಿಯದೆ ಬಾಳುವ ಸಿರಿವಂತರನ್ನು ಅವರು ಆಶೀರ್ವದಿಸುತ್ತಾರೆ. ಈ ಸಿರಿವಂತರು ಎಷ್ಟು ಸಿರಿಹೀನರನ್ನು ದುಃಖಕ್ಕೀಡು ಮಾಡುತ್ತಾರೆಂಬ ಮಾತು ಇವರ ಲಕ್ಷದಲ್ಲಿಯೇ ಇಲ್ಲ. ಭಾರತೀಯ ಸಂಸ್ಕೃತಿ, ಭಾರತೀಯ ಸಂಸ್ಕೃತಿ ಎಂದು ಘೋಷಿಸುವ ಈ ಮಹನೀಯರು ಇಂದು ನಮ್ಮ ಸಂಸ್ಕೃತಿಯ ಕೊಲೆಮಾಡಹತ್ತಿದ್ದಾರೆ. ಸಂತ, ಋಷಿಗಳನ್ನು ಮಣ್ಣುಪಾಲು ಮಾಡಹತ್ತಿದ್ದಾರೆ. ವೇದ, ಉಪನಿಷತ್ತುಗಳನ್ನು ಮಣ್ಣಿನಲ್ಲಿ ಹುಗಿಯಹತ್ತಿದ್ದಾರೆ. ಸಾಮ್ಯವಾದಿಗಳೇ ಭಾರತೀಯ ಸಂಸ್ಕೃತಿಯ ಜೀವಾಳವನ್ನು ಅರಿಯಬಲ್ಲರು. "ದರಿದ್ರಾನ್ ಭರ ಕೌಂತೇಯ'' ಎಂಬ ಅರ್ಥಶಾಸ್ತ್ರದ ಸಿದ್ಧಾಂತವೊಂದನ್ನು ಮಹಾಭಾರತವು ಹೇಳುತ್ತದೆ. ಬಡವರಿಗೆ ಕೊಡಲೇಬೇಕು. ತೆಗ್ಗುಗಳನ್ನು ತುಂಬಬೇಕು. ಆದರೆ ಒಂದೆಡೆಯಲ್ಲಿದ್ದ ತಗ್ಗುಗಳನ್ನು ತುಂಬಲು ಇನ್ನೊಂದು ಕಡೆಗೆ ಇದ್ದ ಗುಡ್ಡಗಳನ್ನು, ದಿನ್ನೆಗಳನ್ನು ಕಡಿಯಬೇಕು. ಇಂದು ಒಂದು ಕಡೆ ದುಡ್ಡಿನ ರಾಶಿ, ಇನ್ನೊಂದು ಕಡೆ ಒಂದು ಕವಡಿ ಸಹ ಇಲ್ಲ. ಇಂಥ ಚಿತ್ರವನ್ನು ಸಮಾಜದಲ್ಲಿ ಕಾಣುತ್ತೇವೆ.

ದುಡ್ಡು ಗಳಿಸುವ ಸಾಧನಗಳೆಲ್ಲವೂ ಸಮಾಜದ ಒಡೆತನ ಸೇರಬೇಕು. ವ್ಯಕ್ತಿಗಳ ಒಡೆತನವು ಅಪಾಯವನ್ನುಂಟು ಮಾಡುವದು. ವಿಶೇಷವಾಗಿದೆ

ಹೇರಳವಾಗಿ ಸರಕುಗಳನ್ನು ಸಿದ್ಧಪಡಿಸುವ ಕಾರಖಾನೆಗಳು ವೈಯಕ್ತಿಕ ಒಡೆತನದಲ್ಲಿರತಕ್ಕದ್ದಲ್ಲ. ಹೀಗೆ ಮಾಡಿದ ಹೊರತು, ಸಮಾಜದಲ್ಲಿದ್ದ ತಗ್ಗುಗಳು ತುಂಬಿಬರುವುದು ಸಾಧ್ಯವಿಲ್ಲದ ಮಾತು. ಸಮಾಜದಲ್ಲಿ ಹುಟ್ಟಿದ ದುಡ್ಡು ಯೋಗ್ಯ ರೀತಿಯಿಂದ ಹಂಚಲ್ಪಡಬೇಕು.

ಇಂದಿನ ವರೆಗೆ ಪ್ರತಿಯೊಬ್ಬನು ತನ್ನ ತನ್ನ ವಿಶೇಷ ಗುಣಧರ್ಮಕ್ಕೆ ಹೆಚ್ಚು ಬೆಲೆ ಕಟ್ಟುವ ರೀತಿ ನಡೆದದೆ. ಆದರೆ ಯಾವದೇ ಒಂದು ಕರ್ಮದ ಅಥವಾ ಕೌಶಲ್ಯದ ಬೆಲೆ ಕಟ್ಟುವ ಬಗೆ ಯಾವದು ? ಮೈಮುರಿದು ದಿನಾಲು ಎಂಟು ತಾಸು ದುಡಿಯುವ ಕೂಲಿಕಾರನ ಕೆಲಸದ ಬೆಲೆ ಎರಡು ಆಣೆ, ಮತ್ತು ಐದೇ ನಿಮಿಷ ಬಂದು ರೋಗಿಯನ್ನು ನೋಡಿದ ಡಾಕ್ಟರನ ಕೆಲಸದ ಬೆಲೆ ಐದು ರೂಪಾಯಿಯೇ? ಪ್ರಾಥಮಿಕ ಶಾಲೆಗಳಲ್ಲಿ ಎರಡೂ ಹೊತ್ತು ದುಡಿಯುವ ಶಿಕ್ಷಕನ ಬೆಲೆ ತಿಂಗಳೊಂದಕ್ಕೆ ಹದಿನೈದು ರೂಪಾಯಿ. ಮತ್ತು ವಿಶ್ವವಿದ್ಯಾನಿಲಯಗಳಲ್ಲಿ ವಾರಕ್ಕೆ ೨-೩ ತಾಸು ಕಲಿಸುವ ಪ್ರಾಧ್ಯಾಪಕರ ಬೆಲೆ ತಿಂಗಳೊಂದಕ್ಕೆ ಐದಾರು ನೂರು ರೂಪಾಯಿಗಳೇ ? ಚಳಿ, ಗಾಳಿ, ಬಿಸಿಲುಗಳಲ್ಲಿ ಉಗಿಬಂಡಿಗೆ ದಾರಿ ತೋರಿಸುವ ರೇಲ್ವೆ ಕಾಮುಗಾರನ ಬೆಲೆ ತಿಂಗಳಿಗೆ ರೂ. ೧೦. ಮತ್ತು ಇಂಜನ್ನನ್ನು ನಡಿಸುವವನ ಬೆಲೆ ರೂ. ಮುನ್ನೂರೇ ? ಬೀದಿಗಳನ್ನು ಉಡುಗುವವನ ಬೆಲೆ ತಿಂಗಳಿಗೆ ಐದು ಮತ್ತು ಒಂದು ತಾಸು ಹಾಡು ಹಾಡುವ ಗಾಯಕನ ಬೆಲೆ ರೂ. ಐದು ನೂರೇ ?

ಈ ಬೆಲೆಗಳನ್ನು ನಿಶ್ಚಯಗೊಳಿಸುವವರು ಯಾರು ? ಗಿರಣಿಯ ಒಡೆಯನೊಬ್ಬನು ಅನ್ನುತ್ತಾನೆ. "ನಾನು ಮೊದಲು ಬಂಡವಾಳವನ್ನು ಪೂರೈಸಿದ್ದೇನೆ. ಅತ್ತಿತ್ತ ಓಡಾಡಿದೆ. ಶೇಅರು ಹಣವನ್ನು ಕೂಡಿಸಿದೆ. ಎಲ್ಲ ಯೋಜನೆಯನ್ನು ಸಿದ್ಧಪಡಿಸಿದೆ. ಆದ್ದರಿಂದಲೇ ಈ ಗಿರಣಿಯು ನಿಂತಿದೆ. ನನ್ನ ಈ ಸಂಘಟನಾ ಕೌಶಲ್ಯದ ಬೆಲೆಯನ್ನು ಕಟ್ಟಲು ಬರುವಂತಿಲ್ಲ. ಕೂಲಿಕಾರರಿಗೆ ಅಲ್ಪ ವೇತನವನ್ನು ಕೊಟ್ಟು ಉಳಿದ ಹಣವೆಲ್ಲ ನನ್ನ ಕೌಶಲ್ಯದ ಬೆಲೆಯೆಂದು ನನಗೇ ಸಲ್ಲತಕ್ಕದ್ದು. ಇದು ಅನ್ಯಾಯವೂ ಅಲ್ಲ, ಅಧರ್ಮವೂ ಅಲ್ಲ. ನನ್ನಲ್ಲಿದ್ದ ಗುಣವಿಶೇಷದ ಬೆಲೆಯೆಂದೇ ನಾನು ಈ ಲಾಭವನ್ನು ಏಕೆ ಪಡೆಯಬಾರದು ?"

ಹೀಗೆ ವಿಚಾರ ಪ್ರದರ್ಶನ ಮಾಡುವವರು, ತಮ್ಮಲ್ಲಿದ್ದ ಗುಣಗಳು ವಿಶೇಷವಾದ ಸುತ್ತುಮುತ್ತಲಿನ ಪರಿಸ್ಥಿತಿ ಮತ್ತು ವಾತಾವರಣದಿಂದಲೇ ಬಂದಿರುತ್ತವೆ, ಎಂಬುದನ್ನು ಮರೆಯುತ್ತಾರೆ. ಮನುಷ್ಯನಲ್ಲಿದ್ದ ಗುಣ

ಗಳು ಸಮಾಜ ನಿರ್ಮಿತವಾದವು. ಅವುಗಳ ಶ್ರೇಯವು ಸಮಾಜಕ್ಕೆ ಸಲ್ಲ ತಕ್ಕದ್ದೇ ಹೊರತು ಆ ವ್ಯಕ್ತಿಗೆ ಅಲ್ಲ. ಆದ್ದರಿಂದ ಮನುಷ್ಯನು ತನ್ನಲ್ಲಿದ್ದ ಗುಣಗಳ ವಿಷಯಕ್ಕೆ ಒಣ ಹೆಮ್ಮೆ ಪಡತಕ್ಕದ್ದಲ್ಲ. ಆ ಆ ಗುಣಗಳು ತನ್ನಲ್ಲಿದ್ದದ್ದಕ್ಕಾಗಿ ಅವನು ಸಮಾಜಕ್ಕೆ ಋಣಿಯಾಗಬೇಕು. ಮತ್ತು ಆ ಗುಣಗಳಿಂದ ಪಡೆಯುವ ಲಾಭವನ್ನು ಸಮಾಜಕ್ಕೆ ಸಲ್ಲಿಸಬೇಕು.

ಬಲವುಳ್ಳ ಬಲಭೀಮನೊಬ್ಬನು ಹೀಗೆಂದರೆ— "ನಾನು ಶಕ್ತಿಯುಳ್ಳವನು, ನನ್ನ ಮನಸ್ಸಿಗೆ ಬಂದ ಹಾಗೆ ನಾನು ನನ್ನ ಕಸುವನ್ನುಪಯೋಗಿಸುವೆನು, ಬೇಕಾದವರನ್ನು ಹೊಡೆಯುವೆನು, ಬಡೆಯುವೆನು, ತುಳಿಯುವೆನು, ಹಿಂಡುವೆನು." ಹೀಗಂದರೆ ಅದು ಯೋಗ್ಯವಾಗಬಹುದೋ ? ನನ್ನಲ್ಲಿದ್ದ ಶಕ್ತಿಯು ಬಲಹೀನರ ರಕ್ಷಣೆಗಾಗಿದೆ, ಕಲ್ಯಾಣಕ್ಕಾಗಿದೆ. ಯಾಕೆಂದರೆ ನನ್ನ ಶಕ್ತಿಯು ನನ್ನದಲ್ಲ. ಅದು ಸಮಾಜವು ನನಗೆ ಕೊಟ್ಟದ್ದು. ಸಮಾಜವು ನನ್ನ ಹೊಟ್ಟೆಗೆ ಕೊಟ್ಟಿತು; ಸೃಷ್ಟಿಯು ಬೆಳಕನ್ನೂ, ಶುದ್ಧ ಹವೆಯನ್ನೂ ದಯಪಾಲಿಸಿತು. ಆದ್ದರಿಂದಲೇ ನಾನು ಕಸುವುಳ್ಳವನಾದೆನು. ನನ್ನ ಶಕ್ತಿಯನ್ನು, ನನಗೆ ಬೆಳವಣಿಗೆಯನ್ನಿತ್ತ ಸಮಾಜಕ್ಕೆ ನಾನು ಅರ್ಪಿಸಬೇಕು.

ನಿಮ್ಮ ನಿಮ್ಮ ಒಲವಿಗನುಸರಿಸಿ, ಸೇವಾಕರ್ಮಗಳನ್ನು ಆರಿಸಿರೆಂದು ಭಾರತೀಯ ಸಂಸ್ಕೃತಿಯು ಹೇಳುತ್ತದೆ. ಆದರೆ ಆ ಕರ್ಮಗಳಲ್ಲಿ ತರಗತಿಗಳನ್ನು ಹಚ್ಚಬೇಡಿರಿ. ಬುದ್ಧಿಯಿಂದ ಮಾಡುವ ಕರ್ಮದ ಬೆಲೆ ಹೆಚ್ಚು, ಮೈಮುರಿದು ಮಾಡಲಾಗುವ ಕೆಲಸದ ಬೆಲೆ ಕಡಿಮೆಯೆಂದು ಲೆಕ್ಕಿಸಬೇಡಿರಿ. ಯಾವ ಕರ್ಮದ ಬೆಲೆ ಯಾವ ಕಾಲಕ್ಕೆ ಎಷ್ಟಾಗಬಹುದೆಂದು ಹೇಳಲು ಬರುವಂತಿಲ್ಲ. ಪ್ರತಿಯೊಬ್ಬರು ತಮ್ಮ ತಮ್ಮ ವಿಶೇಷ ಒಲವಿಗನುಸರಿಸಿ, ಶಕ್ತಿ, ಬುದ್ಧಿ, ಪಾತ್ರತೆಗಳಿಗೆ ಸರಿಹೊಂದುವಂಥ ಕರ್ಮವನ್ನು ಮಾಡಬೇಕು. ಮೇಲ್ವಿಚಾರಣೆ ಮಾಡಲು ಸಾಧ್ಯವಿದ್ದವರು ಅದನ್ನು ಮಾಡಬೇಕು. ಯಂತ್ರಗಳನ್ನು ನಡೆಯಿಸಲು, ದುರಸ್ತಿ ಮಾಡಲು ಅರಿತವರು ಅದನ್ನು ಮಾಡಬೇಕು. ಆದರೆ ಕರ್ಮಗಳು ಬೇರೆ ಬೇರೆ ವಿಧದವೆಂದು ಕೊಡಲಾಗುವ ವೇತನದಲ್ಲಿ ವ್ಯತ್ಯಾಸ ಮಾಡಬಾರದು.

ಒಲವಿಗೆ, ಶಕ್ತಿಗೆ ಅನುಗುಣವಾದ ಕೆಲಸ, ಮತ್ತು ಅವಶ್ಯವಿದ್ದಷ್ಟು ವೇತನ, ಇವೆರಡು ನಿಜವಾದ ಧರ್ಮಮಯ ಅರ್ಥಶಾಸ್ತ್ರದ ತಳಹದಿಗಳು. ಇಬ್ಬರು ಕೂಲಿಕಾರರಿದ್ದಾರೆ, ಒಬ್ಬನು ಕುಶಲನಿದ್ದಾನೆ. ಇನ್ನೊಬ್ಬನು

ಅವನಷ್ಟು ಚತುರನಲ್ಲ. ಆದರೆ ಕುಶಲ ಕೂಲಿಕಾರನಿಗೆ ಇಬ್ಬರು ಮಕ್ಕಳು ಮತ್ತು ಇನ್ನೊಬ್ಬನಿಗೆ ನಾಲ್ಕು ಮಕ್ಕಳಿದ್ದಾರೆಂದು ತಿಳಿಯುವಾ. ಇಂತಹ ಪಕ್ಷದಲ್ಲಿ ಮೊದಲನೆಯವನು ಕುಶಲನಿದ್ದರೂ, ಅವನಿಗಿಂತ ಕಡಿಮೆ ಕುಶಲ ನಿದ್ದವನಿಗೆ ಹೆಚ್ಚು ವೇತನ ಕೊಡಬೇಕಾಗುವದು. ಯಾಕಂದರೆ ಅವನ ಆವಶ್ಯಕತೆಗಳು ಹೆಚ್ಚು. ಇಂಥ ಸನ್ನಿವೇಶದಲ್ಲಿ ಸಮಾಜವು ಅವನಿಗೆ ಹೆಚ್ಚು ವೇತನವನ್ನಾದರೂ ಕೊಡಬೇಕು. ಇಲ್ಲದಿದ್ದರೆ ಎಲ್ಲ ಮಕ್ಕಳ ವ್ಯವಸ್ಥೆಯನ್ನಾದರೂ ಮಾಡಬೇಕು.

ಕಾರಕೂನನಿಗೆ ನಾಲ್ಕು ಮಕ್ಕಳಿದ್ದರೆ ಮತ್ತು ಮಾಮಲೇದಾರರಿಗೆ ಮಕ್ಕಳು ಇಲ್ಲದಿದ್ದರೆ ಕಾರಕೂನನಿಗೆ ತಿಂಗಳಿಗೆ ಐವತ್ತು ರೂಪಾಯಿ ಸಂಬಳ ಕೊಡಬೇಕು. ಮತ್ತು ಮಾಮಲೇದಾರರಿಗೆ ಹದಿನೈದು ರೂಪಾಯಿ ಮಾತ್ರ ಕೊಡಬೇಕು. ಸಂಬಳವು ಮನುಷ್ಯರ ಗರಜಿಗಾಗಿ ಅದೆ. ಮಾಮಲೇದಾರರಿಗೆ ಅತ್ತಿತ್ತ ಅಡ್ಡಾಡುವದಿದ್ದರೆ, ಸರಕಾರವು ಅವರಿಗೆ ವಿಶೇಷ ಸೌಕರ್ಯಗಳನ್ನು ಒದಗಿಸಿಕೊಡಬೇಕು. ಅವರಿಗೆ ಒಂದು ಸ್ವತಂತ್ರ ಕಟ್ಟಡವನ್ನು ಕೊಡಲು ಅಡ್ಡಿಯಿಲ್ಲ.

ಮಾಮಲೇದಾರರಾಗಲೀ, ಇಂಥ ಯಾವ ಅಧಿಕಾರಸ್ಥರಾಗಲೀ ಹೆಚ್ಚು ಬಲ್ಲವರಿದ್ದರೆ ಅವರಿಗೆ ಹೆಚ್ಚಾಗಿ ಅಧಿಕಾರವನ್ನು ಕೊಡಬೇಕು. ಅವರಿಗೆ ತಕ್ಕ ಕೆಲಸವನ್ನು ಕೊಡಬೇಕು. ಆದರೆ ವೇತನವನ್ನು ಮಾತ್ರ ಅವಶ್ಯವಿದ್ದಷ್ಟು ಕೊಡಬೇಕು. ಯೋಗ್ಯತೆಯಂತೆ ಕೆಲಸ, ಮತ್ತು ಗರಜು ಇದ್ದಷ್ಟು ವೇತನ ಈ ತತ್ವದಂತೆ ನಡೆದುಕೊಂಡರೆ ಮಾತ್ರ ನಿಜ ವಾದ ವರ್ಣಧರ್ಮವು ವಿಕಾಸ ಹೊಂದುವದು. ವರ್ಣಧರ್ಮವೆಂದರೆ ಯೋಗ್ಯತೆಗನುಸರಿಸಿ ಕೆಲಸ ಆರಿಸುವದು, ಮತ್ತು ಹೊಟ್ಟೆಗೆ ಸಾಲುವಷ್ಟು ವೇತನವನ್ನು ಪಡೆಯುವುದು.

ಭಾರತೀಯ ಸಂಸ್ಕೃತಿಯಲ್ಲಿ ಹೇಳಲಾದ ಯಜ್ಞತತ್ವದಲ್ಲಿ ಒಂದು ಹಿರಿದಾದ ಅರ್ಥವು ಅಡಕವಾಗಿದೆ. ವರ್ಣಧರ್ಮವು ಪ್ರತಿಯೊಬ್ಬರಿಗೆ ಅವರವರ ಯೋಗ್ಯತೆಗೆ ಒಲವಿಗೆ ಅನುಸರಿಸಿ ಕರ್ಮವನ್ನು ಕೈಕೊಳ್ಳಲು ಹೇಳುತ್ತದೆ. ಆದರೆ ಯಜ್ಞಧರ್ಮವು ಎಲ್ಲರ ಪರಾಮರ್ಶವನ್ನು ವಹಿಸಲು ಹೇಳುತ್ತದೆ. ಆದರೆ ಯಜ್ಞವೆಂದರೇನು ? ಯಜ್ಞಶಬ್ದದಲ್ಲಿ ಆಳವಾದ ಅರ್ಥವು ಅಡಕವಾಗಿದೆ. ದೇವರಿಗಾಗಿ ಯಜ್ಞವನ್ನು ಕೈಕೊಳ್ಳುವದು. ದೇವತೆಗಳು ನಮಗಾಗಿ ಮಳೆಗರೆಯುತ್ತಾರೆ. ಪ್ರಕಾಶವನ್ನೀಯು

ತ್ತಾರೆ. ಗಾಳಿ ಬೀಸುತ್ತದೆ. ದೇವತೆಗಳು ನಮಗಾಗಿ ಸವೆಯುತ್ತವೆ. ಅವರಲ್ಲಿ ಉಂಟಾಗುವ ಸವಕಳಿಯನ್ನು ನಾವು ತುಂಬಿ ತೆಗೆಯಬೇಕು. ಅದಕ್ಕಾಗಿ ನಾವು ದೇವತೆಗಳಿಗೆ ಹವಿರ್ಭಾಗವನ್ನು ಕೊಡುತ್ತೇವೆ. ನಮ್ಮಲ್ಲಿದ್ದ ತುಪ್ಪದ ಸಿರಿಯ ಕೆಲವೊಂದು ಭಾಗವನ್ನು ದೇವತೆಗಳಿಗೆ ಕೊಡುವದು. ದೇವತೆಗಳು ನಮಗಾಗಿ ಸವೆಯುತ್ತವೆ, ನಾವೂ ಅವರಿಗಾಗಿ ಸವೆಯಬೇಕು. ಯಜ್ಞವೆಂದರೆ ಪರಸ್ಪರರಲ್ಲಿ ಉಂಟಾದ ಸವಕಳಿಯನ್ನು ತುಂಬಿ ತೆಗೆಯುವದು. ನೀನು ನನಗಾಗಿ, ನಾನು ನಿನಗಾಗಿ. ಹೀಗೆ ನೀನು ನನಗೆ ಜೀವನವನ್ನು ಕೊಡಬೇಕು, ನಾನು ನಿನಗೆ ಕೊಡುತ್ತೇನೆ. "ಜೀವೋ ಜೀವಸ್ಯ ಜೀವನಮ್" ಈ ವಚನದಲ್ಲಿ ಒಂದು ವಿಶೇಷವಾದ ಅರ್ಥವು ಅಡಕವಾಗಿದೆ. ಪ್ರತಿಯೊಂದು ಜೀವವು, ಇನ್ನೊಂದು ಜೀವದ ಜೀವನವದೆ. ಪ್ರತಿಯೊಂದು ಪ್ರಾಣಿ ಇನ್ನೊಂದು ಪ್ರಾಣಿಗಾಗಿ ಸವೆಯುತ್ತದೆ. ನಾವೆಲ್ಲರೂ ಸವೆದು ತ್ಯಾಗಮಾಡಿ, ನಮ್ಮೆಲ್ಲರಿಗೂ ಜೀವನವನ್ನು ಕೊಡುತ್ತಲಿದ್ದೇವೆ.

ಕಾರಖಾನೆಯೊಡೆಯರು ಕೂಲಿಕಾರರಿಗಾಗಿ ಸವೆಯಲಿ. ಮತ್ತೆ ಕೂಲಿಕಾರರು ಒಡೆಯರ ಸಲುವಾಗಿ ಸವೆಯಲಿ. ರೈತರು ಜಮೀನದಾರರಿಗಾಗಿ, ಜಮೀನದಾರರು ರೈತರಿಗಾಗಿ, ಒಕ್ಕಲಿಗರು ಸಾಹುಕಾರರಿಗಾಗಿ, ಸಾಹುಕಾರರು ಒಕ್ಕಲಿಗರಿಗಾಗಿ, ಸವೆಯಲಿ. ಸರಕಾರಕ್ಕಾಗಿ ಪ್ರಜೆ ಸವೆಯುತ್ತಲಿದೆ. ಆದರೆ ಪ್ರಜೆಗಾಗಿ ಸರಕಾರವು ಸವೆಯಲಿ. ಹೀಗೆ ಪರಸ್ಪರರಲ್ಲಿ ಉಂಟಾದ ಸವಕಳಿಯನ್ನು ತುಂಬಿ ತೆಗೆಯುವಾ.

ನಾವು ಒಕ್ಕಲುತನವನ್ನು ಸಾಗಿಸುವಾಗ ಭೂಮಿತಾಯಿಯು ನಮಗಾಗಿ ಸವೆಯುತ್ತಾಳೆ, ಮತ್ತು ನಮಗೆ ಕಾಳುಕಡಿಯನ್ನು ಕೊಡುತ್ತಾಳೆ. ಭೂಮಿಯಲ್ಲಿದ್ದ ಕಸುವು, ಸತ್ವವು ಕ್ರಮೇಣ ಕಡಿಮೆಯಾಗುತ್ತ ಹೋಗುತ್ತದೆ. ನಾವು ಈ ಸವಕಳಿಯನ್ನು ತುಂಬಬೇಕಾಗುತ್ತದೆ. ನಾವು ರಂಟೆ ಹೊಡೆವಾಗ ಭೂಮಿಯಲ್ಲಿ ಸೂರ್ಯ ಕಿರಣಗಳು ಸೇರುತ್ತವೆ. ನಾವು ಗೊಬ್ಬರವನ್ನು ಹಾಕುತ್ತೇವೆ, ಮತ್ತು ಹೀಗೆ ಆದ ಸವಕಳಿಯನ್ನು ತುಂಬುತ್ತೇವೆ. ನಾವು ರಂಟೆ ಹೊಡೆದು ಗೊಬ್ಬರ ಹಾಕಿ, ದೇಹವನ್ನು ಶ್ರಮಿಸಿ, ದುಡ್ಡು ವೆಚ್ಚಮಾಡಿ, ಭೂಮಿ ತಾಯಿಗಾಗಿ ಸವೆಯುತ್ತೇವೆ. ಅವಳು ನಮಗೆ ಉತ್ತಮವಾದ ಪೈರನ್ನು ಕೊಟ್ಟು ನಮ್ಮಲ್ಲಿ ಉಂಟಾದ ಸವಕಳಿಯನ್ನು ತುಂಬುತ್ತಾಳೆ. ಹೀಗೆ ನಮಗಾಗಿ ಭೂಮಿತಾಯಿಯು, ಮತ್ತು ಅವಳಿಗಾಗಿ ನಾವು ಸವೆಯುತ್ತೇವೆ.

ಗೀತೆಯ ಮೂರನೇ ಅಧ್ಯಾಯದಲ್ಲಿ ಮಹಾ ಯಜ್ಞತತ್ತ್ವವು ಹೇಳಲಾಗಿದೆ. ಸೃಷ್ಟಿಯನ್ನು ಹುಟ್ಟಿಸುವಾಗ ಅದರೊಡನೆ ಯಜ್ಞತತ್ತ್ವವನ್ನು ಪರಮೇಶ್ವರನು ನಿರ್ಮಿಸಿದ್ದಾನೆ. "ಸಹ ಯಜ್ಞಾಃ ಪ್ರಜಾಸೃಷ್ಟ್ವಾಃ ಪುರೋವಾಚ ಪ್ರಜಾಪತಿ। ಅನೇನ ಪ್ರಸವಿಷ್ಯಧ್ವಮ್ ಏಷವೋಽಸ್ತ್ವಿಷ್ಟ ಕಾಮಧುಕ್ ॥" ಪ್ರಭು ಹೇಳಿದ್ದಾನೆ "ಮಾನವರೇ! ನಿಮ್ಮೊಡನೆಯೇ ನಾನು ಯಜ್ಞವನ್ನು ನಿರ್ಮಿಸಿದ್ದೇನೆ. ನಿಮಗೆ ಬೇಕಾದದ್ದನ್ನೆಲ್ಲ ಈ ಯಜ್ಞದಿಂದಲೇ ಪಡೆಯಬಹುದು. ಯಜ್ಞವೇ ಕಾಮಧೇನುವೆಂದು ತಿಳಿಯಿರಿ." ಸಕಲ ಸುಖಗಳ ಸಾಧನವಾದ ಈ ಯಜ್ಞವನ್ನು ಪರಮೇಶ್ವರನು ನಮ್ಮ ಸ್ವಾಧೀನ ಮಾಡಿದ್ದಾನೆ. ದೇವರನ್ನು ನಾವು ದೂಷಿಸುವದರಲ್ಲಿ ಏನೂ ಪ್ರಯೋಜನವಿಲ್ಲ. ನಮಗೆ ದುಃಖವಾದರೆ ಸಮಾಜದಲ್ಲಿ ವೈಷಮ್ಯ, ದೈನ್ಯ, ದಾರಿದ್ರ್ಯ, ಅಸಮಾಧಾನ, ಅಶಾಂತಿಗಳಿದ್ದರೆ, ನಾವು ಯಜ್ಞಧರ್ಮದಂತೆ ನಡೆಯದೆ ಇದ್ದದ್ದೆ ಅದಕ್ಕೆ ಕಾರಣ; ಇವೆಲ್ಲವುಗಳನ್ನೂ ಹೋಗಲಾಡಿಸಬೇಕಾಗಿದ್ದರೆ, ನಾವು ಯಜ್ಞಪೂಜೆಯನ್ನು ಆರಂಭಿಸಬೇಕು. ಯಜ್ಞವೆಂದರೆ ಸಾಧನವು. ಯಜ್ಞವೇ ಧರ್ಮ; ಈಶ್ವರನನ್ನು ನಾವು "ಯಜ್ಞಸ್ವರೂಪಿ ನಾರಾಯಣ"ನೆಂದು ಬಣ್ಣಿಸಿದ್ದೇವೆ.

ಇಂದಿನ ಮಾನವಿ ಸಮಾಜದಲ್ಲಿ ಯಜ್ಞತತ್ತ್ವಕ್ಕೆ ಸ್ಥಳವಿಲ್ಲ. ಆದ್ದರಿಂದ ನಾವೆಲ್ಲರೂ ದುಃಖದಿಂದ ಬಳಲುತ್ತಿದ್ದೇವೆ. ಕೆಲವು ವರ್ಗಗಳು ಎರಡನೆಯವರಿಗಾಗಿ ದುಡಿಯುತ್ತವೆ. ಆದರೆ ಅವರಲ್ಲಿ ಉಂಟಾದ ಸವಕಳಿಯನ್ನು ತುಂಬಲು ಯಾರೂ ಮುಂದೆ ಬರುವದಿಲ್ಲ. ಕೂಲಿಕಾರರು ಬಂಡವಾಳಗಾರರಿಗಾಗಿ ದುಡಿದು ದುಡಿದು ಸವೆಯುತ್ತಾರೆ. ಬಂಡವಳಗಾರರು ಅವರಿಗಾಗಿ ಸವೆಯುವದಿಲ್ಲ. ಅವನು ದಿನಾಲು ಹೆಚ್ಚು ಉಬ್ಬುತ್ತ ನಡೆದಿದ್ದಾನೆ. ಅವನ ಚೈನಿ, ಮೋಟರು ಬೆಳೆಯುತ್ತ ನಡೆದಿವೆ. ಕೂಲಿಕಾರರು ಸುಖದಿಂದ ಬಾಳಲೆಂದು ಅವರು ತಮ್ಮ ಚೈನಿಯನ್ನು ಕಡಿಮೆ ಮಾಡುವಂತಿಲ್ಲ. ಆದರೆ ಸೃಷ್ಟಿಯು ಅವರಿಗೆ ಸಂದೇಶ ಕೊಡುತ್ತಲಿದೆ. "ಮೋಡಗಳಿಗಾಗಿ ಹೊಳೆ, ಹಳ್ಳ, ಕೆರೆ, ಬಾವಿಗಳೆಲ್ಲವೂ ಒಣಗುತ್ತಿವೆ. ಆದರೆ ಅವೆಲ್ಲವನ್ನು ತುಂಬಲು ಮೋಡಗಳು ಮತ್ತೆ ಮಳೆಗರೆಯುವವು." ಮೋಡಗಳ ಹತ್ತಿರ ಇದ್ದ ಸಂಪತ್ತಿಯು ನದಿ, ಹಳ್ಳ, ಕೆರೆ, ಬಾವಿಗಳಿಂದಲೇ ಉಗಿರೂಪವಾಗಿ ಬಂದದ್ದು ಅದೆ. ಹೊಳೆ, ಹಳ್ಳಗಳು ಮಾಡಿದ ಈ ತಪಶ್ಚರ್ಯೆಯನ್ನು ಮೇಘರಾಜನು ಮರೆಯುವದಿಲ್ಲ. ಮೋಡಗಳು ಕೃತಜ್ಞತೆಯಿಂದ ತುಂಬಿ

ಕೆಳಗೆ ಬಂದು ತಮ್ಮ ಸರ್ವಸ್ವವನ್ನು ಮತ್ತೆ ಅರ್ಪಿಸುತ್ತವೆ. ಮತ್ತೆ ನದಿಗಳು ಪ್ರೇಮದಿಂದ ಮೋಡಗಳನ್ನು ತುಂಬುತ್ತವೆ. ಹೀಗಿದೆ ಪ್ರೇಮಪೂರಿತ ಅನ್ಯೋನ್ಯ ಯಜ್ಞಧರ್ಮ.

ಕೂಲಿಕಾರರು ಒಡೆಯರಿಗೆ ಹೇಳಬೇಕು. "ಶೆಟ್ಟರೆ! ನಿಮಗಾಗಿ ನಾವು ಯಂತ್ರಗಳಂತೆ ದುಡಿದು ಸವೆಯುತ್ತೇವೆ. ಎಲ್ಲ ಸಿರಿಯನ್ನು ನಿಮಗೆ ಕೊಡುತ್ತೇವೆ. ತಗೊಳ್ಳಿರಿ ಅದನ್ನು." ಒಡೆಯನು ಸಹ ಕೂಲಿಕಾರರಿಗೆ ಹೀಗೆ ಅನ್ನಬೇಕು. "ಅಣ್ಣ ತಮ್ಮಂದಿರೆ! ಈ ಸಿರಿಯನ್ನೆಲ್ಲ ನಾನು ಪುನಃ ನಿಮಗೆ ಕೊಡುತ್ತೇನೆ, ತಗೊಳ್ಳಿರಿ." ಹೀಗಾದರೆ ಮಾತ್ರ ಸಮಾಜದಲ್ಲಿ ಆನಂದವು ನೆಲೆಗೊಳ್ಳುವುದು.

ಈ ರೀತಿ ಒಬ್ಬರ ಕೂಡೊಬ್ಬರು ನಡೆದರೆ ಸಮಾಜದಲ್ಲಿ ಸಮತೆಯು ನೆಲೆಗೊಳ್ಳುವದು. ಒಂದು ಬದಿ ಗುಡ್ಡ, ಇನ್ನೊಂದು ಬದಿ ಕೊಳ್ಳಗಳು ಇಂಥ ದೃಶ್ಯಗಳು ಅದೃಶ್ಯವಾಗುವವು. ಒಂದೆಡೆ ಭವ್ಯವಾದ ಕಟ್ಟಡಗಳು, ಇನ್ನೊಂದೆಡೆ ಗುಡಿಸಲುಗಳು; ಒಂದೆಡೆ ದಿವ್ಯ ಸಂಗೀತ ಇನ್ನೊಂದು ಕಡೆ ಭೀಕರ ರೋದನ; ಇಂಥ ಹೃದಯವನ್ನು ಸೀಳುವಂಥ ದೃಶ್ಯಗಳು ಇಲ್ಲದಂತಾಗುವವು.

ಒಂದೇ ಸಪಾಟಿಯಲ್ಲಿರುವದು ನೀರಿನ ಗುಣ. ನೀರಿನ ಸಂಚಯದೊಳಗಿಂದ ನೀವು ಒಂದು ಕೊಡ ನೀರನ್ನು ತಕ್ಕೊಳ್ಳಿರಿ. ಅಲ್ಲಿ ಉಂಟಾದ ತಗ್ಗನ್ನು ಸುತ್ತುಮುತ್ತಲಿನ ನೀರಿನ ಬಿಂದುಗಳು ಕ್ಷಣಮಾತ್ರದಲ್ಲಿ ತುಂಬಿಬಿಡುತ್ತವೆ. ತಗ್ಗು ನೋಡುವದರಲ್ಲಿ ಆ ಬಿಂದುಗಳಿಗೆ ಸಮಾಧಾನವಿಲ್ಲ. ಅದನ್ನು ತುಂಬುವದರಲ್ಲಿಯೇ ಸಮಾಧಾನ. ಅದೇ ಒಂದು ಕಲ್ಲುರಾಶಿಯನ್ನು ನೋಡಿರಿ. ಕಲ್ಲುರಾಶಿಯೊಳಗಿಂದ ಒಂದು ಬುಟ್ಟಿ ಕಲ್ಲನ್ನು ತಕ್ಕೊಂಡರೆ ಅಲ್ಲಿ ಆಗುವ ತಗ್ಗು ಹಾಗೇ ಇರುವದು ಸುತ್ತುಮುತ್ತಲಿನ ಕಲ್ಲುಗಳು ಅದನ್ನು ತುಂಬಲು ಧಾವಿಸುವದಿಲ್ಲ. ಏನೋ ಅಪ್ಪಿ ತಪ್ಪಿ ಅಲ್ಲೇ ಇದ್ದ ಒಂದೆರಡು ಕಲ್ಲುಗಳು ಧಾವಿಸಬಹುದು. ಆದರೆ ಆ ತೆಗ್ಗು ಕಾಣುವದು. ಮೋಜು ನೋಡುವ ಕಲ್ಲುಗಳೇ ಬಹಳ; ತುಂಬುವ ಗೋಜಿಗೆ ಹೋಗುವದಿಲ್ಲ. ಕಲ್ಲು ಅವು!! ಅವಕ್ಕೇನಾದರೂ ದುಃಖವಿದೆಯೋ?

ಸಮಾಜವು ಕಲ್ಲಿನ ರಾಶಿ ಇದ್ದಂತೆ ಇದೆ. ನೀರಿನ ಸಹೃದಯತೆ ಇಲ್ಲದ್ದರಿಂದಲೇ ಸಮಾಜದ ಜೀವನವು ಒಣಗಹತ್ತಿದೆ. ವೈಷಮ್ಯದಿಂದ ಉಂಟಾದ, ಪರಸ್ಪರರ ಜೀವನದಲ್ಲಿ ಉಂಟಾಗುವ ತಗ್ಗುಗಳನ್ನು ತುಂಬಲು

ಯಾರೂ ಮುಂದೆ ಬರುವದಿಲ್ಲ. ಸಮತೆಯು ಉಂಟಾಗುವದಿಲ್ಲ. ಯಜ್ಞ ಧರ್ಮವು ಲೋಪವಾಗಿದೆ. ಅಗ್ನಿಹೋತ್ರದ ಯಜ್ಞ ಕುರಿಗಳನ್ನು ಅರ್ಪಿಸುವ ಯಜ್ಞ, ಇವುಗಳ ಪುನರುಜ್ಜೀವನ ಮಾಡಲು ಕೆಲ ವಿಚಿತ್ರ ಜನರು ಹಂಬಲಿಸುತ್ತಾರೆ. ಆದರೆ "ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ'' ಪರಸ್ಪರ ಭಾವನೆಗಳನ್ನು ಅರಿತು ಪ್ರೇಮದಿಂದ ನಡೆದುಕೊಂಡು ಆನಂದವನ್ನು ಗಳಿಸುವಾ. ನಿಜವಾದ ಕಲ್ಯಾಣ, ಶ್ರೇಯ (ಸ್ವಂತದ್ದು ಮಾತ್ರವಲ್ಲ) ದೊರಕಿಸಿರಿ. ಎಂದು ಭಗವಂತನು ಹೇಳಿದ ಯಜ್ಞ ಧರ್ಮದ ಪುನರುಜ್ಜೀವನ ಮಾಡಲು ಹಾತೊರೆಯುವವರು ಯಾರೂ ಇಲ್ಲ. ಮತ್ತು "ಇಂಥ ಯಜ್ಞಕರ್ಮವನ್ನು ಆಚರಿಸಿರಿ. ನಿಮಗಾಗಿ ಸವೆಯುವ, ದುಡಿಯುವ ಕೂಲಿಕಾರರ, ಒಕ್ಕಲಿಗರ ಸವಕಳಿಯನ್ನು ತುಂಬಿ ತೆಗೆಯಿರೆ''ಂದು ಹೇಳುವ ಸಾಮ್ಯವಾದಿಗಳಾದ ಇಂಥ ಧ್ಯೇಯದಿಂದ ಉದ್ಯುಕ್ತರಾದ ಜವಾಹರರನ್ನು ಧರ್ಮಶೂನ್ಯರೆಂದು ಸಂಬೋಧಿಸುತ್ತಾರೆ. ಗೀತಾಪ್ರಣೀತವಾದ ಈ ಯಜ್ಞಧರ್ಮವನ್ನೇ ಆಚರಿಸಿರಿ. ಮತ್ತು ಪರಮ ಶ್ರೇಯಸ್ಸನ್ನು ಪಡೆಯಿರೆಂದು ಜವಾಹರರು ಸಾರಿ ಹೇಳುತ್ತಿದ್ದಾರೆ. ಯಜ್ಞಹೀನರಿಗೆ ಈ ಹಿರಿದಾದ ಯಜ್ಞಧರ್ಮದ ದೀಕ್ಷೆಯನ್ನು ಕೊಡಲು, ಉದ್ಯುಕ್ತರಾದ, ಹಿರಿದಾದ ಧರ್ಮಸೇವಕರವರು.

ಸಾಮ್ಯವಾದಿಗಳು ಹೇಳುತ್ತಾರೆ "ಧರ್ಮ ಇತ್ಯಾದಿ ನಮಗೇನೂ ತಿಳಿಯುವದಿಲ್ಲ. ಧರ್ಮವೆಂದರೆ ಅಫೂದ ಗುಳಿಗೆ. ಎಲ್ಲರೂ ಸುಖದಿಂದ ಬಾಳಬೇಕು ಎನ್ನುವ ಮಾತು ನಮಗೆ ತಿಳಿದಿದೆ, ಹೊಳೆದಿದೆ. ಅದೊಂದೇ ಚಿಂತೆ ನಮಗೆ. ಅದೇ ನಮ್ಮ ಧರ್ಮ." "ಧರ್ಮ" ವೆಂದೊಡನೆ ಅವರ ತಲೆ ಏಕೆ ತಿರುಗಲಿಕ್ಕಿಲ್ಲ ? ಲಕ್ಷಾವಧಿ ಜನರು ದುಃಖದಿಂದ ಬಳಲುವದನ್ನು ಆನಂದದಿಂದ ನೋಡುವದು ಧರ್ಮವೋ ? ಇಂಥ ಧರ್ಮದ ಹೆಸರಾದರೂ ಅವರಿಗೆ ಹೇಗೆ ಸಹನವಾಗುವದು.

"ಯೇನ ಜ್ಞಾತಂ ತೇನ ನ ಜ್ಞಾತಮ್ । ಯೇನ ನ ಜ್ಞಾತಂ ತೇನ ಜ್ಞಾತಮ್;'' ಹೀಗೆ ಉಪನಿಷತ್ತು ಹೇಳುತ್ತಿದೆ. ತಿಳಿದದೆ ಎಂದವನಿಗೆ ಏನೂ ತಿಳಿದಿಲ್ಲ, ತಿಳಿದಿಲ್ಲವೆನ್ನುವವನಿಗೆ ನಿಜವಾಗಿ ತಿಳಿದಿರುತ್ತದೆ. ಅದರಂತೆ ಧರ್ಮ, ಧರ್ಮವೆಂದು ಬಾಯಿಂದ ಹೇಳುತ್ತ, ಲಕ್ಷಾವಧಿ ಜೀವಗಳು ಉಪವಾಸದಿಂದ ಬಳಲುತ್ತಿರುವಾಗ, ತಾವು ಸುಖದಿಂದ ಬಾಳುವಂಥವರು ಧರ್ಮದಿಂದ ನಡೆಯುವವರಲ್ಲ. ಮತ್ತು ಯಾರು ತಮಗೆ ಧರ್ಮವು ತಿಳಿ

ದಿಲ್ಲ, ಗೊತ್ತಿಲ್ಲ ಎಂದು ಅನ್ನುತ್ತಾರೆಯೋ ಮತ್ತು "ಎಲ್ಲರೂ ಸುಖದಿಂದ ಬಾಳಬೇಕೆಂಬದೊಂದೇ ಗೊತ್ತಿದೆ. ಮತ್ತು ಅದಕ್ಕಾಗಿಯೇ ನಾವು ಸರ್ವಾರ್ಪಣವನ್ನು ಮಾಡಲು ಸಿದ್ಧರಿದ್ದೇವೆ''ಂದು ಅನ್ನುತ್ತಾರೆಯೋ ಅವರೇ ನಿಜವಾದ ಧರ್ಮವನ್ನರಿತವರು. ದಲಿತರು ಪೀಡಿತರು ನಮ್ಮವರು ಅನ್ನುವವರೇ ಸಾಧುಗಳು. ಇಂಥವರಲ್ಲಿ ದೇವರು ಇರುತ್ತಾನೆ.

ಗೀತಾ, ಭಾಗವತ, ಪುರಾಣ ಮುಂತಾದವುಗಳ ಮೇಲೆ ಪ್ರವಚನ ಮಾಡುವವರು, ದುಡಿಯದೇ ಮಿಷ್ಟಾನ್ನ ಸೇವಿಸುವವರು, ಪಾದಪೂಜೆಯನ್ನು ಮಾಡಿಕೊಳ್ಳುವವರು, ಯಾವಾಗಲೂ ಸುಖದಲ್ಲಿ ಲೋಲಾಡುತ್ತ ಅದ್ವೈತದ ಮೇಲೆ ಭಾಷ್ಯವನ್ನು ಮಾಡುವವರು ಸಂತರಲ್ಲ, ಸಾಧುಗಳಲ್ಲ; ಅವರ ಜೊತೆಯಲ್ಲಿ ದೇವರೂ ಇರುವದಿಲ್ಲ, ಧರ್ಮವೂ ಇರುವಂತಿಲ್ಲ. ದುಃಖದಿಂದ ಬಳಲುವವರನ್ನು ಕಂಡು ಕರುಳು ಕರಗಿ, ಅವರಿಗೆ ಸಹಾಯ ನೀಡುವವನ ಹತ್ತಿರವೇ ನಿಜವಾದ ಧರ್ಮವು ವಾಸಿಸುವದು· ಇವರಿಗೆ ಭೇದಗಳ ಗುರುತಿರುವದಿಲ್ಲ. ಹಿಂದು–ಮುಸಲ್ಮಾನರೆಂಬುದನ್ನು ಇವರು ನೋಡುವದಿಲ್ಲ. ದುಡಿದು ದುಡಿದು ಪೀಡಿತರಾದ ಕೂಲಿಕಾರರು, ಒಕ್ಕಲಿಗರು ಇವರ ಬಾಂಧವರು. ಅವರಿಗಾಗಿಯೇ ಇವರು ಹಗಲಿರುಳು ಸಾಹಸ ಪಡುವರು. ಸ್ಪೇನದಲ್ಲಿರುವ ಬಡಬಗ್ಗರಿಗೆ ದುಃಖವಿದೆಯೋ? ಹಾಗಾದರೆ ನನ್ನ ಒಂದಾಣೆಯನ್ನಾದರೂ ಕಳಿಸುವೆನು. ನನ್ನಲ್ಲಿ ದುಡ್ಡಿಲ್ಲದಿದ್ದರೆ ನಾನು ಸಹಾನುಭೂತಿಯನ್ನಾದರೂ ತೋರುವೆನು. ಅವರ ದುಃಖವು ನನ್ನದೇ. ಸಹಾನುಭೂತಿಯಿಂದ ಆಡಿದ ಒಂದು ಶಬ್ದ ಸಹ ಅವರಿಗೆ ಧೈರ್ಯವನ್ನು ಕೊಡುವದು. ಇಡೀ ಸೃಷ್ಟಿ ಇಂದು ಹತ್ತಿರ ಬರಹತ್ತಿದೆ. ಅಂತರವು ಕಡಿಮೆಯಾಗಹತ್ತಿದೆ. ಉಗಿಬಂಡಿ, ಉಗಿಹಡಗ, ವಿಮಾನ, ತಾರು, ಆಕಾಶವಾಣಿ, ಇವೇ ಮೊದಲಾದ ಸಾಧನಗಳಿಂದ ಮಾನವರೆಲ್ಲರೂ ಸಮೀಪ ಬರಹತ್ತಿದ್ದಾರೆ. ಅಂತರವು ಲೋಪವಾಗಹತ್ತಿದೆ. ದೂರ ದೂರ ಇದ್ದ ಅಣ್ಣ ತಮ್ಮಂದಿರು ಸಮೀಪ ಬರತೊಡಗಿದ್ದಾರೆ. ಬರಲಿ, ಸ್ವಾಗತಿಸಿರಿ ಅವರನ್ನು. ನಾವೇಕೆ ದೂರಿರಬೇಕು? ನಾನು ಎಲ್ಲರಿಗಾಗಿ ಇದ್ದೇನೆ. ನನ್ನ ಕೈ, ಕಾಲು, ಹೃದಯ, ಕಂಬನಿ ಎಲ್ಲರಿಗಾಗಿ ಅವೆ. ಹೀಗೆನ್ನುವವರು, ನಡೆಯುವವರು ನಿಜವಾದ ಸಾಧುಗಳು, ಋಷಿಗಳು ಇವರ ಹತ್ತಿರವೇ ಧರ್ಮವದೆ. ದೇವರು ಎಲ್ಲಿಯಾದರೂ ಇದ್ದದ್ದೇ ನಿಜವಿದ್ದರೆ ಅವನು ಇಂಥವರಲ್ಲಿಯೇ ಇದ್ದಾನೆ. "ತೀರ್ಥಗಳಲ್ಲಿ ಕಲ್ಲು ನೀರು, ಸಜ್ಜನರ

ಹೃದಯದಲ್ಲಿ ದೇವರು.''

ಅಗ್ನಿಯೆಂದರೆ ದೇವರ ಮುಖ, ನಮಗಾಗಿ ಸವೆಯುವ ದೇವತೆಗಳ ಮುಖವೆಂದರೆ ಅಗ್ನಿ. ಈ ಅಗ್ನಿಗೆ ಆಹುತಿಯನ್ನು ಕೊಟ್ಟರೆ ದೇವತೆಗಳು ತೃಪ್ತರಾಗುವರು. "ಅಗ್ನಿರ್ವೈ ದೇವಾನಾಂ ಮುಖಂ." ಆದರೆ ಈ ಕಿಚ್ಚು, ಈ ಅಗ್ನಿಯು ಎಲ್ಲಿದೆ? ಲಕ್ಷಾವಧಿ ದುಡಿಯುವ ಜೀವಗಳ ಹೊಟ್ಟೆಯಲ್ಲಿರುವ ಕಿಚ್ಚು ಈ ಅಗ್ನಿಯು. ಈ ಅಗ್ನಿಗೆ, ಕಿಚ್ಚಿಗೆ ಆಹುತಿಯನ್ನೀಯಿರಿ. ಈ ದುಡಿಯುವ ದೇವತೆಗಳ ಹೊಟ್ಟೆಯಲ್ಲಿ ಬೆಂಕಿಯು ಎದ್ದಿದೆ. ಈ ಕಿಚ್ಚನ್ನು ಶಾಂತಗೊಳಿಸಲು ಏಳಿರಿ. ಸನಾತನಿಗಳೇ, ಇನಾಮುದಾರರೇ, ಜಮೀನದಾದರೆ, ಸಾಹುಕಾರರೇ, ಧರ್ಮದ ಹೆಸರನ್ನೆತ್ತುವ ಮಠಾಧೀಶರೆ, ಸಾಧುಗಳೇ ಏಳಿರಿ. ಏಳಿರಿ. ಈ ನಿಮ್ಮ ಅಕ್ಕತಂಗಿಯರ, ಅಣ್ಣ ತಮ್ಮಂದಿರ, ಅವರ ಮುದ್ದು ಮಕ್ಕಳ ಹೊಟ್ಟೆಯಲ್ಲಿರುವ ಕಿಚ್ಚನ್ನು ತೃಪ್ತಿಗೊಳಿಸುವದೆಂದರೆ ಮಹಾಯಜ್ಞವು, ನಿಜವಾದ ಧರ್ಮವು.

ಆದರೆ ಈ ಯಜ್ಞವು ಸನಾತನಿಗಳಿಗೆ ಇಂದು ತಿಳಿಯದಂತಾಗಿದೆ. ಲಕ್ಷಾವಧಿ ಬಡವರ ಗೋಳು ಅವರಿಗೆ ಕಾಣದಾಗಿದೆ. ಅವರ ಬುದ್ಧಿಯು ಸತ್ತುಹೋಗಿದೆ. ಹೃದಯವು ಕೊಳೆಯುತ್ತ ನಡೆದಿದೆ. ಕಾರ್ಪಣ್ಯವೊಂದೇ ಅವರಲ್ಲಿ ಉಳಿದದೆ. ಎರಡನೆಯವರು ಉಪವಾಸದಿಂದ ಬಳಲುವದನ್ನು ನೋಡಿ ಇವರ ಹೊಟ್ಟೆ ನೋಯುವದಿಲ್ಲ. ಸಜ್ಜನಗಡದ ಸ್ವಾಮಿಯವರದೊಂದು ಕಥೆ ಇದೆ. ದಾಸನವಮಿಯ ಉತ್ಸವದ ಕಾಲಕ್ಕೆ ಒಂದು ದಿನ ರಾತ್ರಿ ಸ್ವಾಮಿಯವರ ಹೊಟ್ಟೆನೋಯಲು ಆರಂಭಿಸಿತು. ಯಾರಾದರೂ ಈ ಮಠದ ಸುತ್ತಲು ಉಪವಾಸವಿದ್ದಾರೇನು ನೋಡಲು ಅವರು ಹೇಳಿದರು. ಸ್ವಲ್ಪ ಸಮಯದಲ್ಲಿ ಓರ್ವ ಕುರುಡನೂ, ಕುಂಟನೂ ಆದ ಒಬ್ಬ ತಿರುಕನು ಉಪವಾಸದಿಂದ ಇದ್ದದ್ದು ಕಂಡುಬಂದಿತು. ಅವನನ್ನು ಕರೆದು ಉಣಿಸಿದರು. ಕೂಡಲೇ ಸ್ವಾಮಿಯವರ ಹೊಟ್ಟೆ ನೋವು ನಿಂತಿತು. ದಾಸನವಮಿಯ ಉತ್ಸವದಲ್ಲಿ ಸಜ್ಜನಗಡಕ್ಕೆ ಬಂದವರೆಲ್ಲರೂ ಊಟ ಮಾಡಿದ ಹೊರತು ಸ್ವಾಮಿಗಳು ಉಣ್ಣುವದಿಲ್ಲ. ಓರ್ವ ಬಡವನ ಹೊಟ್ಟೆಯ ಕಿಚ್ಚು ಶಾಂತವಾದೊಡನೆ ಸ್ವಾಮಿಯವರ ಹೊಟ್ಟೆಯಲ್ಲಿದ್ದ ನೋವು ಶಾಂತವಾಯಿತು.

ಇಂಥ ಧರ್ಮಮಯವಾದ ಹೊಟ್ಟೆನೋವು ಎಷ್ಟು ಸನಾತನಿಗಳಲ್ಲಿದೆ? ಎಷ್ಟು ಜನ ಸಂಸ್ಕೃತಿ ಸಂರಕ್ಷಕರಲ್ಲಿ ಇದೆ? ಧರ್ಮದ ಹೆಸರ

ನ್ನೆತ್ತುವವರಿಗೆ ಅದೆ ? ಎರಡನೆಯವರಲ್ಲಿಯ ಹೊಟ್ಟೆಯ ಬೆಂಕಿಯ ದೊಂಬಿ, ಯಜ್ಞಕುಂಡ, ಆ ಪವಿತ್ರ ಜಠರಾಗ್ನಿ ಶಾಂತವಾಗುವದಿಲ್ಲವೆಂದು ಮನಸ್ಸಿನಲ್ಲಿ ಅಶಾಂತಿಯೆನಿಸುವವರೆಷ್ಟು ಜನ ? ಕಂಬನಿ ಸುರಿಸುವವರೆಷ್ಟು ಜನ ? ರೊಚ್ಚಿಗೇಳುವವರೆಷ್ಟು ಜನ ? ಹೀಗೆ ಅನಿಸುವವರು ನಿಜವಾದ ಶರಣರು, ಭಾರತೀಯ ಸಂಸ್ಕೃತಿಯ ಉಪಾಸಕರು, ಸಂತರ ಸೇವಕರು, ಋಷಿಗಳನ್ನು ಪೂಜಿಸುವವರು. ಆದ್ದರಿಂದಲೇ ಮಹಾತ್ಮಾಜಿ, ಜವಾಹರ ಲಾಲರಂಥ ಕಳಕಳಿಯುಳ್ಳ ಆತ್ಮವಿದ್ದವರೇ ನಿಜವಾದ ಸಂಸ್ಕೃತಿ ಸಂರಕ್ಷ ಕರು. ಶರಣರ, ಸಂತರ, ಋಷಿಗಳ ಸತ್ಪುತ್ರರಾಗಿ ಶೋಭಿಸುತ್ತಾರೆ. ಇವರು ಹಗಲಿರುಳು ಅಗ್ನಿಹೋತ್ರವನ್ನು ನಡೆಯಿಸಿದ್ದಾರೆ. ಮತ್ತು ಇದರ ಪ್ರಖರ ದೀಕ್ಷೆಯನ್ನು ಸಾವಿರಾರು ತರುಣರಿಗೆ ಕೊಡುತ್ತಲಿದ್ದಾರೆ.

ಇದು ಧರ್ಮಮಯ ಅರ್ಥಶಾಸ್ತ್ರದ ದೃಷ್ಟಿಯು. ಧರ್ಮಾರ್ಥ ಕಾಮಮೋಕ್ಷ ಈ ಚತುರ್ವಿಧ ಪುರುಷಾರ್ಥಗಳಲ್ಲಿಯ 'ಅರ್ಥ'ವು ಹಿರಿ ದಾದ ಧರ್ಮದ ಪಾಯದ ಮೇಲೆಯೆ ನಿಲ್ಲಬೇಕು. ಸಮಾಜದ ಶಕ್ತಿಯ ಧಾರಣೆ ಮತ್ತು ಪೋಷಣೆ ಯೋಗ್ಯರೀತಿಯಿಂದ ಆಗುವಂತಾಗಬೇಕು, ಅಂದರೆ ಮಾತ್ರ ಇಡೀ ಮಾನವ ಜನಾಂಗದ ಹಿತವನ್ನು ಸಾಧಿಸುವಂಥ ಅರ್ಥಶಾಸ್ತ್ರವಾಗುವದು. ಇಂಥ ಅರ್ಥಶಾಸ್ತ್ರದ ಪ್ರಾರಂಭ ಸಹ ಇನ್ನೂ ಆಗಿಲ್ಲ. ಆದ್ದರಿಂದಲೇ ಜಗತ್ತಿನಲ್ಲಿ ಮೋಕ್ಷ, ಸ್ವಾತಂತ್ರ್ಯ ಯಾರಿಗೂ ಇಲ್ಲ. ಮೋಕ್ಷವು ಇನ್ನೂ ಹುಟ್ಟಬೇಕಾಗಿದೆ. ನಾವೆಲ್ಲರೂ ಗುಲಾಮರಾಗಿದ್ದೇವೆ. ಹಿಂದುಸ್ತಾನವು ಇಂಗ್ಲಂಡದ ದಾಸ್ಯದಲ್ಲಿದೆ. ಆದರೆ ಇಂಗ್ಲಂಡವೂ ಹಿಂದು ಸ್ತಾನದ ದಾಸ್ಯದಲ್ಲಿದೆ. ಹಿಂದುಸ್ತಾನವು ಇಂಗ್ಲಂಡದ ಸರಕುಗಳನ್ನು ಕೊಂಡರೆ ಇಂಗ್ಲಂಡವು ಬದುಕುವುದು. ನಾಲ್ಕು ಆಳು ಕುಂಟ ಶ್ರೀಮಂತ ನನ್ನು ನಡೆಯಿಸುವಂತೆ ಈ ವ್ಯವಹಾರ ಅದೆ. ಆ ನೌಕರರು ಆ ಸಿರಿವಂತನ ದಾಸರು, ಸಿರಿವಂತನು ಈ ನೌಕರರ ದಾಸನು. ಈ ಆಳುಗಳು ತಮ್ಮ ಆಧಾರವನ್ನು ಸಿರಿವಂತರಿಗೆ ಕೊಡದಿದ್ದರೆ ಅವರು ಮಣ್ಣುಪಾಲಾಗುವರು. ಭಾರತವು ಇಂಗ್ಲಂಡದ ಆಧಾರವನ್ನು ತಕ್ಕೊಂಡು ಬಿಟ್ಟರೆ, ಇಂಗ್ಲಂಡವು ನಾಶಹೊಂದುವದು. ಎರಡನೆಯವರನ್ನು ದಾಸ್ಯದಲ್ಲಿಡುವವನು ತಾನೂ ತಿಳಿಯದೆ ದಾಸನಾಗುತ್ತಾನೆ. ಬಿತ್ತಿದ್ದನ್ನೆ ಬೆಳೆಯುವದು. ಒಬ್ಬನು ಸಿರಿ ವಂತ ದಾಸನು, ಇನ್ನೊಬ್ಬನು ಬಡದಾಸನು !

ಜಗತ್ತಿನಲ್ಲಿ ಎಲ್ಲಿಯ ವರೆಗೆ ಧರ್ಮಮಯ, ಎಲ್ಲರ ಉದಯವನ್ನು

ಮಾಡಲು ಹಾತೊರೆಯುವ, ಮಾನವರೆಲ್ಲರೂ ಒಪ್ಪುವ ಅರ್ಥಶಾಸ್ತ್ರವು ಇಲ್ಲವೋ, ಅಲ್ಲಿಯ ತನಕ ಜಗತ್ತಿನಲ್ಲಿ ನಿಜವಾದ ಸ್ವಾತಂತ್ರ್ಯವು ಇರುವದು ಸಾಧ್ಯವಿಲ್ಲ. ಇಂದು ನಾವು ಕಾಣುವದು ಸ್ವಾತಂತ್ರ್ಯದ ನೆರಳು, ಸೋಗು, ಪಿಶಾಚ. ಎಲ್ಲರ ವಿಕಾಸವನ್ನು ಬಯಸುವ, ಮಂಗಲಕರವಾದ ಸ್ವಾತಂತ್ರ್ಯದ ಉದಯವು ಇನ್ನೂ ಬಹಳ ದೂರ ಇದೆ. ಇಂಥ ಮಂಗಳಮಯ ಬಾಲಕನನ್ನು ಹೆರುವ ಪ್ರಸವ ವೇದನೆ ತುಸುಮಟ್ಟಿಗೆ ಅಲ್ಲಲ್ಲಿ ಕಂಡುಬರುತ್ತದೆ. ಭೂಮಾತೆಯ ಹೊಟ್ಟೆಯ ಒಂದು ಮೂಲೆಯಲ್ಲಿ ಈ ವೇದನೆಗಳು ಪ್ರಾರಂಭವಾಗಿವೆ. ಈ ಪ್ರಸವ ವೇದನೆಗಳು ಪೂರ್ಣ ಹೊಂದಿ, ದಿವ್ಯ ಸ್ವಾತಂತ್ರ್ಯ ಬಾಲಕನು ಹುಟ್ಟಲು ಎಷ್ಟು ಯುಗಗಳು ಬೇಕಾಗುವವೋ ಅದನ್ನಾರು ಹೇಳಬಲ್ಲರು ?

ಧರ್ಮಮಯ ಅರ್ಥಶಾಸ್ತ್ರದಂತೆ ಧರ್ಮಮಯ ಕಾಮಶಾಸ್ತ್ರ. ಭಾರತೀಯ ಸಂಸ್ಕೃತಿಯು ಕಾಮವನ್ನು ಸದೆಬಡಿಯಲು ಬಯಸುವದಿಲ್ಲ. ಕಾಮವೆಂದೊಡನೆಯೆ ಕಿವಿ ಮುಚ್ಚಿಕೊಳ್ಳುವ ಸಂಸ್ಕೃತಿಯಲ್ಲ ಇದು. ಮನುಷ್ಯನ ವಿಕಾರಗಳನ್ನು ಅಳತೆಯಲ್ಲಿಟ್ಟುಕೊಂಡು, ಅವುಗಳಿಗೆ ಯೋಗ್ಯ ಮಾರ್ಗವನ್ನು ತೋರಿಸುವ ಸಂಸ್ಕೃತಿಯಿದು. ವಿಕಾರದೊಳಗಿಂದಲೇ ವಿಕಾಸಹೊಂದುವ ಸಂಸ್ಕೃತಿ ಇದು. "ಧರ್ಮಾಽವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ." ಧರ್ಮಕ್ಕೆ ವಿರೋಧವಿಲ್ಲದಂಥ, ಪ್ರಮಾಣದಲ್ಲಿದ್ದ ಕಾಮವೆಂದರೆ ನನ್ನ ಸ್ವರೂಪವೆಂದು ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದ್ದಾನೆ. ಮರ್ಯಾದೆಯಲ್ಲಿದ್ದ ಕಾಮವೆಂದರೆ ಪರಮೇಶ್ವರನು. ಅದೊಂದು ಅವನದೇ ದಿವ್ಯ ವಿಭೂತಿ.

ಕಾಮಕ್ಕೆ ನಮ್ಮ ಸಂಸ್ಕೃತಿಯು ಧರ್ಮದ ಅಧಿಷ್ಠಾನವನ್ನಿತ್ತಿದೆ. ಮತ್ತು ಧರ್ಮವೆಂದರೆ ಸಮಾಜದ ಧಾರಣೆ. ನನ್ನ ವಿಷಯೋಪಭೋಗಗಳಿಂದ, ಸಮಾಜದಲ್ಲಿಯ ಸ್ವಾಸ್ಥ್ಯವು ಕೆಡಬಾರದು; ಅಶಾಂತಿಯು ಉತ್ಪನ್ನವಾಗಬಾರದು; ಸಮಾಜದಲ್ಲಿ ದುಃಖ, ಬಡತನ, ದಾಸ್ಯ, ದೈನ್ಯ, ಉಂಟಾಗಬಾರದು. ನನ್ನ ವಿಷಯೋಪಭೋಗವು ಸಮಾಜಕ್ಕೆ ಹಿತಕರವಾಗುವಂತಹದಿರಬೇಕು. ಕಾಮಶಬ್ದದಲ್ಲಿ ಪಂಚೇಂದ್ರಿಯ ಭೋಗಗಳ ಅರ್ಥವು ಅಡಕವಾಗಿದ್ದರೂ, ಮುಖ್ಯವಾಗಿ ಸ್ತ್ರೀ-ಪುರುಷ ಸಂಬಂಧವೇ ಅದರಲ್ಲಿ ಒಡೆದುಕಾಣುತ್ತದೆ. ಈ ಸಂಬಂಧದ ಮೇಲೆ ಸಮಾಜದ ಸ್ವಾಸ್ಥ್ಯವಷ್ಟೇ ಅಲ್ಲ, ಸಮಾಜದ ಅಸ್ತಿತ್ವವೇ ಅವಲಂಬಿಸಿದೆ. ಯಾವಾಗಲೂ

ವಿಷಯದಲ್ಲಿಯೇ ಆಸಕ್ತನಾದವನು ದುರ್ಬಲನಾಗಿಯೇ ಉಳಿಯುವನು, ಅವನಲ್ಲಿ ಉತ್ಸಾಹದ ಅಭಾವವೇ ಕಂಡುಬರುವದು. ಇಂಥವನು ಸಮಾಜ ಸೇವೆಯನ್ನು ಮಾಡುವದಾದರೂ ಹೇಗೆ ? ತನ್ನ ಕರ್ಮಗಳನ್ನು ಚೆನ್ನಾಗಿ ಮಾಡುವದಾದರೂ ಹೇಗೆ? ಸಮಾಜದ ಕರ್ಮಗಳನ್ನು ನೆಟ್ಟಗೆ ನೆರವೇರಿಸಲು ಅನುವಾಗಬೇಕೆಂದು ಕಾಮಸೇವನೆಯು ಅಳತೆಯಲ್ಲಿರಬೇಕು.

ಸ್ತ್ರೀ-ಪುರುಷ ಸಂಬಂಧಗಳು ಪ್ರೀತಿಯಿಂದ ತುಂಬಿರಬೇಕು. ಹೆಣ್ಣು ಯಾರ ಸೊತ್ತೂ ಅಲ್ಲ. ಅವಳಿಗೆ ಹೃದಯ, ಬುದ್ಧಿ, ಭಾವನೆಗಳಿವೆ. ಅವಳಿಗೆ ಸ್ವಾಭಿಮಾನವೂ ಅದೆ; ಆತ್ಮವಿದೆ; ಸುಖ-ದುಃಖಗಳಿವೆ. ಇದನ್ನೆಲ್ಲ ಗಂಡಸರು ನೆನಪಿನಲ್ಲಿಡಬೇಕು. ಇದರ ಅರಿವು ಅವರಿಗೆ ಇರಬೇಕು. ಹೆಣ್ಣು ಜಗತ್ತಿನಲ್ಲಿ ಒಂದು ದೊಡ್ಡ ಶಕ್ತಿಯು. ಈ ಶಕ್ತಿಯೊಡನೆ ನಡೆದುಕೊಳ್ಳಲು ಬಯಸುವ ಗಂಡಸರು ಶಿವಸ್ವರೂಪವಾಗಬೇಕು. ಶಿವ-ಶಕ್ತಿಗಳ ಪ್ರೇಮದ ಮೇಲೆ ಜಗತ್ತಿನ ಪ್ರಾಣವೇ ಅವಲಂಬಿಸಿದೆ. ಶಿವ-ಶಕ್ತಿಗಳ ಪ್ರೇಮವುಳ್ಳ, ಸಂಯಮಯುಕ್ತವಾದ ಸಂಬಂಧದಿಂದಲೇ ಜಗತ್ತಿನಲ್ಲಿ ಕರ್ತೃತ್ವವುಳ್ಳ ಕುಮಾರನು ಜನ್ಮವೆತ್ತಿದನು; ಶೌರ್ಯ, ಧೈರ್ಯದ ಸಾಗರರು, ವಿದ್ಯೆಯ ತೌರಾದವರು ಹುಟ್ಟುತ್ತಾರೆ.

ಮನುಷ್ಯನು ತನ್ನ ಕೃತಿಯ ಪರಿಣಾಮವೇನಾಗಬಹುದೆಂಬುದರ ವಿಚಾರವನ್ನು ಮಾಡಿಯೇ, ಕೃತಿ ಮಾಡಲು ಆರಂಭಿಸಬೇಕು. ಹೆಣ್ಣು, ಗಂಡು ಕೂಡಿದರೆ ಹುಡುಗರು ಹುಟ್ಟುವವರೇ. ಹುಟ್ಟಿದ ಹುಡುಗರೆಂದರೆ ದೇವರ ಮೂರ್ತಿಗಳು. ಈ ದೇವರ ಕಾಳಜಿಯನ್ನು ವಹಿಸುವದು ಸಾಧ್ಯವೇ? ಅವರಿಗೆ ಹೊಟ್ಟೆ, ಬಟ್ಟೆಗೆ ಒದಗಿಸುವದು ಸಾಧ್ಯವೇ ? ಅವರವರ ವರ್ಣ ವಿಕಾಸಕ್ಕೆ ಅನುವು ಮಾಡಿಕೊಡಬಹುದೇ ? ಇವೇ ಮೊದಲಾದ ಸಂಗತಿಗಳನ್ನು ತಂದೆ ತಾಯಿಯರು ಮೊದಲು ವಿಚಾರಿಸಬೇಕು. ಇಲ್ಲದಿದ್ದರೆ ಮನೆತುಂಬ ಚೀರಾಡುವ, ಅಳುವ ಹುಡುಗರು. ಅವರಿಗೆ ಅರಿವೆಗಳಿಲ್ಲ, ಶಿಕ್ಷಣವಿಲ್ಲ; ಇಂಥ ಸಂಸಾರವು ಹೇಗೆ ಸುಖವುಳ್ಳದ್ದು ಆಗುವದು ? ಇಂಥ ಸಂಸಾರದಿಂದ ತುಂಬಿದ ಸಮಾಜವು ಹೇಗೆ ತೇಜಸ್ಸುಳ್ಳದ್ದು ಆಗುವದು ? ಮತ್ತೂ ಇಂಥ ಸಮಾಜವು ಹೇಗೆ ಬದುಕುವದು ?

ನಿಜವಾಗಿ, ಅರ್ಥಶಾಸ್ತ್ರವು ಸುಧಾರಿಸದೆ ಕಾಮಶಾಸ್ತ್ರವು ಸುಧಾರಿಸುವಂತಿಲ್ಲ. ಸಮಾಜದ ಧಾರಣೆಯನ್ನು, ಪೋಷಣೆಯನ್ನು ಮಾಡುವ ಎಲ್ಲರಿಗೂ ವಿಕಾಸಕ್ಕೆ ಅನುವು ಮಾಡಿಕೊಡುವ ಮತ್ತು ಧರ್ಮಮಯವಾದ

ಅರ್ಥಶಾಸ್ತ್ರವು ಎಲ್ಲಿಯವರೆಗೆ ಇಲ್ಲವೊ, ಅಲ್ಲಿಯತನಕ ತೇಜಸ್ಸುಳ್ಳ ಕಾಮ ಶಾಸ್ತ್ರವಾದರೂ ಹೇಗೆ ಅಸ್ತಿತ್ವದಲ್ಲಿ ಬರುವದು ? ಕೂಲಿಕಾರರಿಗೆ ಬ್ರಹ್ಮ ಚರ್ಯದ ಪಾಠಗಳನ್ನು ಕಲಿಸಬೇಕೆ? ಉಚ್ಚವರ್ಗದವರು ಭೋಗವಿಲಾಸ ಗಳಲ್ಲಿ ಲೋಲಾಡಬೇಕು. ಮತ್ತು ಕೂಲಿಕಾರರೂ ಅವರ ಮುದ್ದು ಮಕ್ಕಳೂ ಉಪವಾಸದಿಂದ ಬಳಲಬೇಕು. ಸಿರಿವಂತರು ಇಂದು ಎರಡೂ ದೃಷ್ಟಿಯಿಂದ ಪಾಪಕ್ಕೊಳಗಾಗಿದ್ದಾರೆ. ಅವರು ಸಂತತಿ ನಿಯಮನವನ್ನು ಮಾಡಿ, ವಿಷಯೋಪಭೋಗಗಳಲ್ಲಿ ತೇಲಾಡುತ್ತಿದ್ದಾರೆ. ಇದರಿಂದ ಸಮಾಜಕ್ಕೆ ಮಕ್ಕಳನ್ನು ಹೆತ್ತುಕೊಡುವದಿಲ್ಲ. ಸಮಾಜಕ್ಕಾಗಿ ಅವರು ಮಾಡಬೇಕಾದ ಮಹಾ ಕರ್ಮದ ಹೊಣೆಯನ್ನು ತಪ್ಪಿಸಹತ್ತಿದ್ದಾರೆ. ಸಮಾಜದಲ್ಲಿ ಸಿರಿ ಹುಟ್ಟುವದನ್ನು ಕೂಲಿಕಾರರೇ ಮಾಡಬೇಕಾಗಿದೆ. ಮತ್ತು ಮಕ್ಕಳನ್ನು ಹೆತ್ತು ಸಮಾಜದ ಅಸ್ತಿತ್ವವನ್ನು ಸಹ ಅವರೇ ಸ್ಥಿರಗೊಳಿಸಬೇಕಾಗಿದೆ. ಆದರೆ ಈ ಕೂಲಿಕಾರರ ಮಕ್ಕಳ ಹೊಟ್ಟೆ ಬಟ್ಟೆಯ ವ್ಯವಸ್ಥೆಯನ್ನು ಕೂಡ ಮಾಡಲು ಈ ಸಿರಿವಂತರು ಬಯಸುವದಿಲ್ಲ. ಬಡವರು ಸವೆದು ಸಂಪತ್ತು ನಿರ್ಮಿಸಬೇಕು. ಮತ್ತು ಬಡವರ ಹೆಣ್ಣು ಮಕ್ಕಳು ಮಕ್ಕಳನ್ನು ಹೆತ್ತು ಸಂತತಿ ಬೆಳೆಯಿಸಬೇಕು. ಎರಡೂ ಕಡೆಯಿಂದ ಸುಡಹತ್ತಿದ ಈ ಮೇಣ ಬತ್ತಿಯು ಎಷ್ಟು ದಿನ ತಾಳಬಲ್ಲದು ? ಬಾಳಬಲ್ಲದು ?

ಕೂಲಿಕಾರರಿಗೆ ಹೊಟ್ಟೆತುಂಬ ಅನ್ನವಿಲ್ಲ, ಸಂತತಿ ನಿಯಮಗಳ ಸಾಧನಗಳೂ ಇಲ್ಲ. ಸಂತತಿ ನಿಯಮಗಳ ವಿರುದ್ಧ ಸನಾತನಿಗಳ ಕೂಗು ನಡೆದಿದೆ. ಆದರೆ ಬಡವರ ಮಕ್ಕಳಿಗೆ ಹೊಟ್ಟೆತುಂಬಾ ಅನ್ನ ದೊರೆಯು ವಂಥ, ಅವರವರ ವರ್ಣಕ್ಕೆ ಒಲವಿಗೆ ಸರಿಹೋಗುವಂಥ ಶಿಕ್ಷಣವು ಸಿಗು ವಂಥ, ಧರ್ಮಮಯ ಅರ್ಥಶಾಸ್ತ್ರವನ್ನು ನಿರ್ಮಿಸಲು ಮಾತ್ರ ಈ ಸನಾ ತನಿಗಳು ಪ್ರಯತ್ನಪಡುವದಿಲ್ಲ. ಸಮಾಜದಲ್ಲಿ ವಿಷಮತೆ ಇರುವವರೆಗೆ, ಬಡವರಿಗೆ ಸಂತತಿ ನಿಯಮನದ ಹೊರತು ಮತ್ತಾವ ಮಾರ್ಗವಿದೆ ? ಇವ ನಿಗೇನು ಬ್ರಹ್ಮಚರ್ಯದ ಉಪದೇಶ ಮಾಡುವದದೆಯೇ ? ಅದು ಗಾಯದ ಮೇಲೆ ಬರೆಕೊಟ್ಟಂತಾಗುವದು.

ಆದರೆ ಸಂತತಿ ನಿಯಮನದ ಜ್ಞಾನವನ್ನು ಕೂಲಿಕಾರರಿಗೆ ಮಾಡಿ ಕೊಡುವವರಾರು ? ಈ ಜ್ಞಾನವು, ಸಾಧನಗಳು ಕೇವಲ ಸಿರಿವಂತರಿ ಗಾಗಿಯೇ ಅವೆ. ಔಷಧಕ್ಕೆ ಕಾಸಿಲ್ಲದವನು ಡಾಕ್ಟರನನ್ನು ಹೇಗೆ ಕರೆಯ ಬೇಕು ? ಆರೋಗ್ಯದ ಸಾದಾ ನಿಯಮಗಳ ಜ್ಞಾನವಿಲ್ಲದವನು ಈ ಗೂಢ

ಜ್ಞಾನವನ್ನು ಪಡೆಯುವ ಬಗೆ ಏನು ? ಕೂಲಿಕಾರರ ಸಂಸಾರಲ್ಲಿ ಹೊಟ್ಟೆ ಗಿಲ್ಲ, ಬಟ್ಟೆಗಿಲ್ಲ, ವಿದ್ಯಾಭ್ಯಾಸದ ಸಾಧನಗಳಿಲ್ಲ. ಎಲ್ಲಿ ನೋಡಿದಲ್ಲಿ ಕತ್ತಲೆಯಿದೆ. ಹುಡುಗರು ಹುಟ್ಟುವರು, ಮತ್ತು ಸಮಾಜವು ಹೆಚ್ಚೆಚ್ಚಾಗಿ ದೈನ್ಯ, ದಾಸ್ಯ, ದಾರಿದ್ರ್ಯಗಳಿಗೆ ಗುರಿಯಾಗುವದು.

ಧರ್ಮಮಯ ಅರ್ಥಶಾಸ್ತ್ರವೊಂದೇ ಇವೆಲ್ಲ ಸಂಗತಿಗಳ ವಿಚಾರ ಮಾಡಬಲ್ಲದು. ಪೃಥ್ವಿಯ ಮೇಲೆ ಎಷ್ಟು ಜನ ಬದುಕಬಲ್ಲದು ? ಎಷ್ಟು ಜನರ ಪೋಷಣೆಯು ಸಾಧ್ಯವದೆ ? ಪಡಬಿದ್ದ ಜಮೀನುಗಳೆಷ್ಟು ಸಾಗ ಮಾಡಬಲ್ಲರು ? ಸುಧಾರಿಸಿದ ಒಕ್ಕಲತನದ ಪದ್ಧತಿಯನ್ನು ತರುವದು, ವಿದ್ಯುಚ್ಛಕ್ತಿ, ಉಷ್ಣತೆಯನ್ನು ಕೊಟ್ಟು ವರ್ಷದಲ್ಲಿ ನಾಲ್ಕೈದು ಪೈರುಗಳನ್ನು ತಕ್ಕೊಳ್ಳುವದು, ಮರುಭೂಮಿಗಳನ್ನು ಸಾಗುಮಾಡುವದು, ಕೃತ್ರಿಮ ರೀತಿಯಿಂದ ಮಳೆಗರೆಯುವದು, ಇವೆಲ್ಲವುಗಳ ವಿಚಾರವನ್ನು ಧರ್ಮ ಮತ್ತು ಅರ್ಥಶಾಸ್ತ್ರವು ಮಾಡುವದು. ಜನಸಂಖ್ಯೆ ಬೆಳೆದಿದೆಯೆಂದು ಸುಮ್ಮನೆ ಕೂಗುವದಿಲ್ಲ ಈ ಅರ್ಥಶಾಸ್ತ್ರವು. ಪೃಥ್ವಿಯು ಎಷ್ಟು ಜನ ಬದುಕಿಸಬಲ್ಲದೆಂಬದನ್ನು ನೋಡಿ, ಆ ಮೇಲೆ ನಿಯಮನವನ್ನು ಅವಲಂಬಿಸಲು ಹೇಳುವದು. ಇಷ್ಟೇ ಮಕ್ಕಳನ್ನು ಹಡೆಯಿರಿ ಎಂದು ಧರ್ಮಮಯ ಅರ್ಥಶಾಸ್ತ್ರವು ಆಜ್ಞಾಪಿಸುವದು.

ಹಿಂದುಸ್ತಾನದಲ್ಲಿ ವಿಪುಲ ಭೂಮಿ ಇದ್ದಾಗ ಮತ್ತು ಜನಸಂಖ್ಯೆಯು ಕಡಿಮೆ ಇದ್ದಾಗ "ಅಷ್ಟಪುತ್ರ ಸೌಭಾಗ್ಯವತೀ ಭವ" ಎಂಬ ಆಶೀರ್ವಾದವು ಧರ್ಮಮಯವಾಗಿತ್ತು. ಇಂದು ಮಾತ್ರ ಇದು ಶಾಪವೆಂದೇ ಭಾವಿಸಬೇಕಾಗಿದೆ. ನಮ್ಮ ಮಾತು ನಮಗೆ ತಿಳಿಯದಾಗಿವೆ. ಹೌದು, ಎಂಟು ಮಕ್ಕಳನ್ನು ಹಡೆಯಬಹುದು; ಆದರೆ ಈ ಮಹನೀಯರು ಎಂಟು ಮಕ್ಕಳ ಹೊಟ್ಟೆಬಟ್ಟೆಯ ವ್ಯವಸ್ಥೆ ಮಾಡಲು, ಸಮಾಜವಾದವನ್ನು ಆಚರಿಸಲು ಸಿದ್ಧರಿರುವರೋ ? ಮಕ್ಕಳಾಗದೇ ಭೋಗವನ್ನು ಸೇವಿಸುವದನ್ನಾದರೂ ಕಲಿಸಿರಿ, ಅಂದರೆ ಈ ಮಹನೀಯರು ರೊಚ್ಚಿಗೇಳುವರು. ಬ್ರಹ್ಮಚರ್ಯದಿಂದ ಇರುವದು ದೇವರಿಗೂ, ಋಷಿಗಳಿಗೂ ಸಾಧ್ಯವಾಗಿಲ್ಲ. ನಮಗೆ ಬ್ರಹ್ಮಚರ್ಯವಂತೂ ಸಾಧ್ಯವಿಲ್ಲ. ಭೋಗಗಳನ್ನಂತೂ ಸೇವಿಸಬೇಕಾಗಿದೆ. ಆದರೆ ಸಮಾಜದಲ್ಲಿ ಅತ್ತಿತ್ತ ಅಳುಬುರುಕ, ದುರ್ಬಲ ಬಾಲಕರು ಸುಳಿದಾಡುವದನ್ನು ಕಾಣುವದು ಬೇಡವಾಗಿದೆ. ಹೊಟ್ಟೆಗಿಲ್ಲದ, ಬಟ್ಟೆಯಿಲ್ಲದ, ಶಿಕ್ಷಣವಿಲ್ಲದ ಮಕ್ಕಳನ್ನು ನೋಡುವದು ಯಾವ ತಂದೆ ತಾಯಿಗಳಿಗೆ

ಸೇರುವದು ? ಯಾರು ಸಹಿಸಬಲ್ಲರು ?

ಸ್ವಾಮ್ಯವಾದವನ್ನಾದರೂ ಆಚರಿಸಿರಿ, ಇಲ್ಲವೇ ಸಂತತಿನಿಯಮನ ವನ್ನಾದರೂ ಬಡಬಗ್ಗರಿಗೆ ಕಲಿಸಿರಿ. ಹೀಗೆ ಪ್ರಚಾರ ಮಾಡುವದು ಇಂದಿನ ಯುಗಧರ್ಮವಾಗಿದೆ. ಈ ಯುಗ ಧರ್ಮವನ್ನು ಆಚರಿಸದೆ ಇರುವದೆಂದರೆ ಜಡತ್ವದ ಲಕ್ಷಣವು; ಕಲ್ಲು ಹೃದಯದ ಲಕ್ಷಣವು. ಇಂಥ ವರ್ತನವು ಧರ್ಮಸಂಮತವೂ ಅಲ್ಲ, ಬುದ್ಧಿಗೆ ಸರಿಹೋಗುವಂತಹದೂ ಅಲ್ಲ. ಇದು ರಾಕ್ಷಸೀ ವೃತ್ತಿಯು.

ಸ್ತ್ರೀಯರ ಮನಸ್ಸಿನ ವಿಚಾರವನ್ನಂತೂ ಯಾರೂ ಮಾಡುವಂತೆ ಕಾಣುವದಿಲ್ಲ. ಹೊಟ್ಟೆತುಂಬ ಅನ್ನವಿಲ್ಲ; ಮೈತುಂಬ ಬಟ್ಟೆ ಇಲ್ಲ. ದೇಹಕ್ಕೆ ವಿಶ್ರಾಂತಿ ಇಲ್ಲ. ಮತ್ತು ಮೇಲಿಂದ ಮೇಲೆ ಬಾಣಂತಿತನ. ಹಡೆಯುವ ಕಾಲಕ್ಕೆ ಹೆಣ್ಣು ಮಕ್ಕಳು ಅನುಭವಿಸುವ ಕಷ್ಟವನ್ನು ನೋಡಿ ಯಾರ ಕಣ್ಣಿನಲ್ಲಿ ನೀರು ಬರುವದಿಲ್ಲ? ಹೆಣ್ಣಿಗೆ ವಿಷಯ ನಿವೃತ್ತಿಯಾಗುತ್ತದೆ. ಆದರೆ ಗಂಡಸರಿಗೆ ಆಗುವದಿಲ್ಲ. ಓರ್ವ ದೊಡ್ಡ ಹೆಣ್ಣುಮಗಳು ನನಗೆ ಹೇಳಿದಳು. "ನನ್ನ ಹೆಣ್ಣುಮಕ್ಕಳು, ಸೊಸೆಯಂದಿರ ಜೊತೆಗೆ ನನ್ನ ಮಗುವಿನ ತೊಟ್ಟಿಲನ್ನು ತೂಗುವದೆಂದರೆ ನನಗೆ ನಾಚಿಕೆಯಾಗುತ್ತದೆ. ಆದರೆ ಅವರಿಗಾಗಿ ನಾನು ಇದನ್ನೆಲ್ಲ ಸಹಿಸಬೇಕಾಗಿದೆ. ಇಲ್ಲದಿದ್ದರೆ ಅವರು ಕೆಟ್ಟ ಮಾರ್ಗವನ್ನು ಹಿಡಿಯುವ ಸಂಭವ ಹೆಚ್ಚು.'' ಇದನ್ನು ನಾನು ಎಂದಿಗೂ ಮರೆಯುವಂತಿಲ್ಲ. ಹೆಂಗಸರಿಗೆ ಗಂಡಸರು ದಣಿವಾರಿಸಲು ಅವಸರವನ್ನೇ ಕೊಡುವದಿಲ್ಲ. ಹೆಂಗಸರಿಗೂ ಕಾಮವಾಸನೆ ಇರುತ್ತದೆ. ಆದರೆ ಎಲ್ಲಿಯ ವರೆಗೆ ಕಾಮವಾಸನೆಯನ್ನು ನಿಯಮಿಸಲು ಬರುವದಿಲ್ಲವೊ ಮತ್ತು ಸಮಾಜದಲ್ಲಿ ವಿಷಮತೆ ಇದೆಯೋ ಅಲ್ಲಿಯ ತನಕ ಸಂತತಿ ನಿಯಮನವನ್ನು ಅವಲಂಬಿಸಿ ಭೋಗಗಳನ್ನು ಸೇವಿಸುವದೇ ಯೋಗ್ಯವಾದ ಧರ್ಮವಾಗುವದು.

ಸಮಾಜದಲ್ಲಿ ರೋಗಿಷ್ಠ ಬಾಲಕರು ಹುಟ್ಟಬಾರದೆಂಬ ಜಾಗ್ರತೆಯನ್ನು ಧರ್ಮಮಯ ಕಾಮಶಾಸ್ತ್ರವು ವಹಿಸುವದು. ಉತ್ತಮವಾದ ದನಗಳಾಗಬೇಕೆಂದು ನಾವು ಹಂಬಲಿಸುತ್ತೇವೆ. ಆದರೆ ಉತ್ತಮವಾದ ಮನುಷ್ಯರು ಹುಟ್ಟಬೇಕೆಂದು ಶಾಸ್ತ್ರೀಯ ದೃಷ್ಟಿಯಿಂದ ಪ್ರಯತ್ನಪಡುವವರಾರು ? ಗೋ:ರಕ್ಷಣ ಸಭೆಗೆ ಅಧ್ಯಕ್ಷರಾಗಲು ಸ್ವಾಮಿ ವಿವೇಕಾನಂದರನ್ನು ಕೇಳಿದಾಗ ಅವರು ಹೇಳಿದರು. "ಮಾನವ ರಕ್ಷಣೆಯ ಸಭೆಯ ಅಧ್ಯಕ್ಷನಾ

ಗುವೆನು.'' ಇದರಿಂದ ಅವರು ಗೋರಕ್ಷಣೆಯನ್ನು ಮಾಡಬಾರದೆಂದು ಅನ್ನುತ್ತಿರಲಿಲ್ಲ. ಆದರೆ ಮನುಷ್ಯರು ಪಶುಗಳಂತೆ ಆಗಿದ್ದಾರೆ, ಇವರ ವಿಚಾರ ಮಾಡುವವರಾರು? ಇದಕ್ಕಾಗಿಯೇ ಜರ್ಮನಿಯಲ್ಲಿ ರೋಗಿ ಗಂಡಸರಿಗೆ ಸಂತತಿಯಾಗದಂತೆ ಅವರ ಮೇಲೆ ಶಸ್ತ್ರಕ್ರಿಯೆಯನ್ನು ಕೈಕೊಳ್ಳುತ್ತಾರೆ. ಸಮಾಜ ಕಲ್ಯಾಣವನ್ನು ಲೆಕ್ಕಿಸದೆ, ಮನುಷ್ಯನು ಸ್ವೈರವೃತ್ತಿಯಿಂದ ನಡೆಯಲಾರಂಭಿಸಿದರೆ ಕಾಯಿದೆಯಿಂದ ಅವನಿಗೆ ಹಾಗೆ ಮಾಡಲು ಬಂಧನವನ್ನು ಹಾಕಬೇಕಾಗುತ್ತದೆ. ಪ್ರೇಮ, ವಿವೇಕ, ಸಂಯಮ ಇವೆಲ್ಲವುಗಳನ್ನು ಮನುಷ್ಯನಿಗೆ ಕಾಯದೆಯಿಂದ ಕಲಿಸಬೇಕಾಗುವದೇ? ನಾವು ಎಲ್ಲರಿಗಾಗಿ ದುಡಿಯಬೇಕು. ಆದರೆ ಹಾಗೆ ಯಾರೂ ದುಡಿಯುವದಿಲ್ಲ. ಹೀಗಾದ ಮೇಲೆಯೆ ಕ್ರಾಂತಿಯಾಗಿ ಸಮಾಜಸತ್ತಾವಾದದ ಮೇಲೆ ಆಧಾರಭೂತವಾದ ಸರಕಾರವು ಬಂದು ಅಧಿಕಾರದಿಂದ ದುಡಿಯಲು ಹಚ್ಚುತ್ತದೆ. ರೋಗಿಗಳು ಮಕ್ಕಳನ್ನು ಹಡೆಯಬಾರದು. ಆದರೆ ಈ ಮಾತನ್ನು ಯಾರೂ ಕೇಳುವದಿಲ್ಲ. ಆದ್ದರಿಂದಲೇ ಕಾಯದೆ ಮಾಡಿ ಶಸ್ತ್ರಕ್ರಿಯೆ ಮಾಡಬೇಕಾಗುತ್ತದೆ.

ಮದುವೆ ಮಾಡುವ ಪೂರ್ವದಲ್ಲಿ ವಧೂವರರನ್ನು ಭಿಷಗ್‌ರತ್ನರಿಂದ ಪರೀಕ್ಷೆ ಮಾಡಿಸಿಕೊಳ್ಳಲು ಸ್ಮೃತಿಗಳು ಹೇಳುತ್ತವೆ. "ಸ್ತ್ರೀತ್ವೇ ಪುಂಸ್ತ್ವೇ ಪರೀಕ್ಷತಃ।'' ವಧು ಗರ್ಭಧಾರಣೆ ಮಾಡಲು ಸಮರ್ಥಳಿದ್ದಾಳೆಯೇ ಇಲ್ಲವೆ, ಏನಾದರೂ ದೋಷವಿದೆಯೋ ಹೇಗೆ ಇದನ್ನು ಮೊದಲೇ ಪರೀಕ್ಷಿಸಬೇಕು. ಅದರಂತೆ ವರನ ಪರೀಕ್ಷೆಯಾಗಬೇಕು. ಹೀಗಾದರೆ ಮಾತ್ರ ಆ ಮದುವೆಯಿಂದ ವಧೂವರರ ಮತ್ತು ಸಮಾಜದ ಕಲ್ಯಾಣವಾಗುವದು. ನಂಪುಸಕ ಗಂಡಸರು ಪುನಃ ಪುನಃ ಮದುವೆಯಾದ ಉದಾಹರಣೆಗಳು ನಮಗೆ ಗೊತ್ತಿವೆ. ಆದರೆ ನಪುಂಸಕನು ನೂರಾರು ಸಾರೆ ಲಗ್ನವಾದರೂ ಅವನಿಗೆ ಸಂತತಿಯಾಗುವದು ಹೇಗೆ?

ಎಷ್ಟೋ ಮಠಾಧೀಶರು ತಮ್ಮ ಸಿರಿವಂತರಾದ ನಪುಂಸಕ ಶಿಷ್ಯರಿಗೆ ಮತ್ತೆ ಮತ್ತೆ ಮದುವೆಯಾಗಲು ಹೇಳಿದ ಉದಾಹರಣೆಗಳು ಇವೆ. ಮದುವೆಯಾದ ಮೇಲೆ ಹುಚ್ಚು ಹಿಡಿದ ಹೆಂಡಂದಿರಿದ್ದಾರೆ. ಅವರಿಗೆ ಭೂತಬಾಧೆಯಾಯಿತೆಂದು ಕೆಟ್ಟ ರೀತಿಯಿಂದ ನಡಿಸಿಕೊಂಡದ್ದು ನಾವು ಕಾಣುತ್ತೇವೆ. ಎಷ್ಟೋ ಇಂಥ ಹೆಣ್ಣುಮಕ್ಕಳು ಮನೆಯಲ್ಲಿದ್ದ ಆಳುಗಳೊಡನೆ ವ್ಯಭಿಚಾರ ಮಾಡಿದ್ದನ್ನು ಕೇಳಿದ್ದೇವೆ. ಎಂತಹ ಧರ್ಮವಿದು? ಎಂಥಹ ಸಂಸ್ಕೃತಿ ಇದು?

ಮದುವೆಯನ್ನು ನೆರವೇರಿಸುವ ಪೂರ್ವದಲ್ಲಿ ಪುರೋಹಿತನು "ವಧೂವರರ ಪರೀಕ್ಷೆಯಾಗಿದೆಯೋ ಇಲ್ಲವೋ" ಎಂದು ಕೇಳಬೇಕು. ಶಿಕ್ಷಣ, ವರದಕ್ಷಿಣೆ ಮೊದಲಾದ ಎಲ್ಲವನ್ನೂ ಕುರಿತು ವಿಚಾರಿಸುವರು. ಆದರೆ ಈ ಮುಖ್ಯವಾದ ಮಾತನ್ನೇ ಎತ್ತುವದೆಂದರೆ ಅಬ್ರಹ್ಮಣ್ಯಂ ಎಂದೆನಿಸುತ್ತದೆ ಇವರಿಗೆ.

ವಧೂವರರ ಗುಣಧರ್ಮವೆಂದರೆ ಮಾನಸ ಪರೀಕ್ಷೆ, ಮತ್ತು ಅವರ ಆರೋಗ್ಯವೆಂದರೆ ಶಾರೀರಕ ಪರೀಕ್ಷೆ. ಇವೆರಡರಲ್ಲಿ ಅವರು ಉತ್ತೀರ್ಣರಾಗಬೇಕು. ಅಂದರೆ ಮಾತ್ರ ಅದು ಸಮಾನ ವರ್ಣದ ಮದುವೆಯಾಗುವದು. ವರ್ಣವೆಂದರೆ ಒಲವು ಎಂಬುದನ್ನು ಈ ಮೊದಲೇ ನಾವು ಕಂಡಿದ್ದೇವೆ. ಮದುಮಗಳ ವರ್ಣವು, ಒಲವು ಯಾವದು? ಅವಳ ಬುದ್ಧಿ, ಹೃದಯ ಇವುಗಳ ವರ್ಣ ಯಾವದು? ಇದರ ಪರೀಕ್ಷೆಯಾಗಬೇಕು. ಆದರೆ ಬರೇ ದೇಹದ ವರ್ಣವನ್ನು ನೋಡುತ್ತೇವೆ. ಅವಳ ಅಂತರಾತ್ಮದ ವರ್ಣವನ್ನು ನೋಡುವರಾರು? ಸ್ತ್ರೀಯರಿಗೆ ಆತ್ಮವೇ ಇಲ್ಲವೆಂದೆನ್ನುವವರೇ ಬಹಳ ಜನ. ಇಂಥ ನಿಜವಾದ ಪರೀಕ್ಷೆ ಇಲ್ಲದ್ದರಿಂದಲೇ ಇಂದಿನ ಮದುವೆಗಳೆಲ್ಲವು ಅಶಾಸ್ತ್ರೀಯ ಮತ್ತು ಧರ್ಮಕ್ಕೆ ವಿರುದ್ಧವಾದವು ಅವೆ. ಗಂಡುಹೆಣ್ಣಿನ ಹೃದಯ, ಬುದ್ಧಿಗಳನ್ನು ಮತ್ತು ಶಾರೀರಿಕ ಅಂಗವಿಕಲತೆಯಿಲ್ಲದುದನ್ನು ನೋಡಿ ಮಾಡಿದ ಮದುವೆಗಳಷ್ಟೇ ಶಾಸ್ತ್ರೀಯ ಮದುವೆಗಳೆಂದು ಎಣಿಸಲ್ಪಡಬೇಕು.

ದೇವಗಣ, ರಾಕ್ಷಸಗಣಗಳನ್ನು ಪಂಚಾಂಗ ನೋಡಿ ಹೇಳಲಾಗುತ್ತದೆ. ಇವುಗಳನ್ನು ಪಂಚಾಂಗ ನೋಡಿ ನಿರ್ಣಯಿಸುವದು ಉಚಿತವೇ? ಸಮಾಜವು ಹಸಿವೆಯಿಂದ ಬಳಲುತ್ತ ಸಾವಿಗೆ ತುತ್ತಾಗುತ್ತಿರುವಾಗ ತನ್ನ ಮನೆಯಲ್ಲಿಯ ಕೋಠಿಗಳನ್ನು ತುಂಬುವವನು, ತನ್ನ ತಿಜೋರಿಗಳನ್ನು ದುಡ್ಡಿನಿಂದ ತುಂಬಿಡುವವನು, ನಿಜವಾದ ರಾಕ್ಷಸನು. ತನಗಾಗಿ ಉಳಿಸುವವನು ರಾಕ್ಷಸನು; ಪರರಿಗಾಗಿ ಕಷ್ಟಪಡುವವನು ದೇವರು. ವರ್ಣಗಳನ್ನು ಬಾಹ್ಯಾಕೃತಿಯಿಂದ ನಿರ್ಣಯಿಸತಕ್ಕದ್ದು. ಆತ್ಮದ ಬಣ್ಣವು ಮನುಷ್ಯನ ಕೃತಿಯೊಳಗೆ ಕಂಡುಬರುತ್ತದೆ. ಅದನ್ನು ಪಂಚಾಂಗದಿಂದ ನೋಡತಕ್ಕದ್ದಲ್ಲ.

ಇದರಂತೆಯೇ ಹಲವು ಸಣ್ಣ ಜಾತಿಗಳು ತಮ್ಮ ಬಣಬಿಟ್ಟು ಹೊರಗೆ ಮದುವೆಯಾಗಲು ಬರುವಂತಿಲ್ಲ. ಇಂಥ ಜಾತಿಗಳಲ್ಲಿ ಎಲ್ಲರ ರಕ್ತಕೂಡಿ

ಹೋಗಿರುತ್ತದೆ. ಎಲ್ಲರು ಪರಸ್ಪರ ಆಪ್ತರೇ ಇರುತ್ತಾರೆ. ಖಾನದೇಶದಲ್ಲಿ ಲಾಡಸಕ್ಕೆ ಎಂಬ ಒಂದು ಚಿಕ್ಕ ಜಾತಿ ಇದೆ. ಆ ಜಾತಿಯಲ್ಲಿ ಎಲ್ಲರೂ ಪರಸ್ಪರ ಆಪ್ತರೇ ಇದ್ದಾರೆ. ಆದರೆ ಪ್ರತಿವರ್ಷ ಸನಾತನಿಯವರು ಅವರ ಮದುವೆಗಳನ್ನು ನೇರವೇರಿಸುತ್ತಾರೆ. ಏನಿದು ಅಧರ್ಮ, ಅಶಾಸ್ತ್ರೀಯತೆ!!

ವರ್ಧಾ ಸತ್ಯಾಗ್ರಹಾಶ್ರಮದಲ್ಲಿದ್ದ ಆಚಾರ್ಯ ವಿನೋಬಾ ಭಾವೆ ಯವರು ಹೇಳಿದ್ದಾರೆ. "ನಮ್ಮ ಮದುವೆಗಳು ಸಮುದ್ರದಷ್ಟು ವಿಶಾಲ ವಾದವೂ ಬೇಡ, ಅಥವಾ ಗುಂಡಿಗಳಷ್ಟು ಸಂಕುಚಿತವಾದವೂ ಬೇಡ.'' ಇದೊಂದು ಅತ್ಯಂತ ಉಪಯುಕ್ತವಾದ ಸೂತ್ರವು. ಭಾರತೀಯನೊಬ್ಬನು ಅಮೇರಿಕನ್ನರ ಜೊತೆ ಲಗ್ನವಾಗುವದೂ ತಪ್ಪು, ಮತ್ತು ಸಣ್ಣ ಜಾತಿಯಲ್ಲಿ ತಮ್ಮ ಆಪ್ತರೊಡನೆಯೇ ಮದುವೆಯಾಗುವದೂ ದೋಷಯುಕ್ತವಾದದ್ದು. ಮಹಾರಾಷ್ಟ್ರದೊಳಗಿದ್ದ ಆಕಳಕ್ಕೆ ಇಂಗ್ಲಂಡದ ಹೋರಿಯು ಸರಿಹೋಗ ಲಿಕ್ಕಿಲ್ಲ. ಆದರೆ ಪಂಜಾಬ, ಅಥವಾ ಗುಜರಾತದೊಳಗಿನ ಹೋರಿಯು ನಡೆಯಬಹುದು. ತೀರ ದೂರದ್ದಾದರೆ ಭಿನ್ನ ವಾತಾವರಣವು ಆಗುವದು. ಅತಿ ಸಮೀಪದ್ದಾದರೆ ಅದೇ ಅದೇ ವಾತಾವರಣವಾಗುವದು.

ಪ್ರಪಂಚದಲ್ಲಿ ಕೆಲವು ವೇಳೆ ಮಿಶ್ರವಿವಾಹವು ಸಮಾಜದ ಹಿತಕ್ಕಾಗಿ ಬರಬಹುದು. ಭೂಮಿಯಲ್ಲಿ ನಾವು ಒಂದೇ ಬಗೆಯ ಪೈರನ್ನು ಬೆಳೆಯು ವದಿಲ್ಲ. ಬೀಜದ ಸುಧಾರಣೆಗಾಗಿ, ಬೆಳವಣಿಗೆಗಾಗಿ, ಎರಡನೇ ಪೈರು ತಕ್ಕೊಳ್ಳುತ್ತೇವೆ. ಬೀಜದ ಸುಧಾರಣೆಗಾಗಿ ಇನ್ನೊಂದು ಪೈರು ! ನಡುವೆ ಒಂದು ವರ್ಷ ಬೇರೆ ಪೈರು ತಕ್ಕೊಂಡರೆ ಮತ್ತೆ ಮೊದಲಿನ ಪೈರು ಕಸು ವುಳ್ಳದ್ದಾಗಿ ಬರುತ್ತದೆ.

ಸಮಾಜದ ಸಂತತಿ ಶಾಸ್ತ್ರದಲ್ಲಿಯೂ ಇಂತಹದೊಂದು ಕಾಲವು ಬರುವ ಸಂಭವವದೆ. ಮಿಶ್ರವಿವಾಹದಿಂದ ಸಮಾಜವು ಕಸುವುಳ್ಳದ್ದಾಗು ವದು ಅಸಂಭವನೀಯವಲ್ಲ. ಹೀಗಾದರೆ ಸಾಮಾನ್ಯ ಜನತೆಯು ಉತ್ಸಾಹ, ಬುದ್ಧಿ ಇವುಗಳ ಬೆಳವಣಿಗೆಯಾಗಬಹುದು. ಭಾರತದಲ್ಲಿಯ ಪ್ರಾಚೀನ ಋಷಿಗಳು ಮಿಶ್ರವಿವಾಹದ ಸಂತಾನಗಳಾಗಿದ್ದಾರೆ. ಅದಕ್ಕಾಗಿಯೇ ಋಷಿಯ ಮೂಲ, ನದಿಯ ಮೂಲ ನೋಡಬಾರದೆಂದು ಗಾದೆ ಇದೆ. ಇದರಿಂದ ಆ ಋಷಿಗಳಿಗೆ ಯಾವ ಕುಂದೂ ಬಂದಿಲ್ಲ. ಮಿಶ್ರ ವಿವಾಹಗಳು ಅವಶ್ಯವೆನಿಸುವಂಥ ಕಾಲವು ಸಮಾಜದಲ್ಲಿ ಬಂದೇಬರುತ್ತದೆ. ಇಂತಹ ದೊಂದು ಅವಸರವು, ಸನ್ನಿವೇಶವು ಭಾರತದಲ್ಲಿ ಇಂದು ಬಂದಂತೆ ನನಗೆ

ಅನಿಸುತ್ತದೆ.

ಮಾಂಸವನ್ನು ತಿಂದರೆ ಕಸುವು ಬರುತ್ತದೆಂಬುದು ನಿಜವಲ್ಲ. ಮಿಶ್ರ ವಿವಾಹಗಳಿಂದ ಸಾಧಿಸುವದು ಶಕ್ಯವಿದೆ. ಪ್ರಾಣಿಶಾಸ್ತ್ರಜ್ಞರು ಇಂಥ ಯಶಸ್ವಿ ಪ್ರಯೋಗಗಳನ್ನು ಮಾಡಿದ್ದಾರೆ. ಇದಕ್ಕೆ ಪ್ರಾಣಿಶಾಸ್ತ್ರದಲ್ಲಿ "cross breeding" ಮಿಶ್ರ ಪ್ರಜೋತ್ಪತ್ತಿ ಅನ್ನುತ್ತಾರೆ.

ಮಿಶ್ರ ವಿವಾಹಗಳು ಯಾವಾಗಲೂ ಇರಬೇಕು ಎಂಬುದು ಇದರ ಅರ್ಥವಲ್ಲ. ಆದರೆ ಕೆಲವು ಕಾಲ ಅಥವಾ ಶತಕಗಳಲ್ಲಿ ಅವುಗಳ ಅವಶ್ಯಕತೆ ಎನಿಸಬಹುದು. ಕೆಲಕಾಲ ಗತಿಸಿದ ಮೇಲೆ ಮತ್ತೆ ಸಮಾಜದ ಸ್ಥಿತಿಯನ್ನು ಅನುಲಕ್ಷಿಸಿ ಹೊಸ ನಿಯಮಗಳನ್ನು ಮಾಡಬಹುದು. ಹೀಗೆ ಕಾಮಶಾಸ್ತ್ರದ ಧಾರ್ಮಿಕ ಮತ್ತು ಬೌದ್ಧಿಕ ವಿವೇಚನವೂ ಆಚರಣೆಯೂ ಆಗಬೇಕು. ಕಾಮಶಾಸ್ತ್ರವೆಂದರೆ ಸಂತತಿಶಾಸ್ತ್ರವು. ತೇಜಸ್ಸುಳ್ಳ, ನೀರೋಗಿಯಾದ ಮಕ್ಕಳು ಹೇಗೆ ಹುಟ್ಟುವರು ಮತ್ತು ಬೆಳವಣಿಗೆ ಹೊಂದುವರು ಇದನ್ನು ವಿಚಾರಿಸುವದೇ ಧರ್ಮಮಯ ಕಾಮಶಾಸ್ತ್ರದ ಮುಖ್ಯ ಹೇತುವು.

ಸಂಯಮ, ಹೆಣ್ಣು ಗಂಡಿನ ಪ್ರೇಮ, ಅವರವರ ಮನಸ್ಸಿನ ಒಲವುಗಳು, ಸೇರಿಕೆಗಳು, ಬೇಡಿಕೆಗಳು, ಅವರ ಆರ್ಥಿಕ ಪರಿಸ್ಥಿತಿಯು, ಶಾರೀರಕ ನಿರ್ದೋಷತೆಯು, ಬೌದ್ಧಿಕ ಸಮಾನತೆಯು ಮುಂತಾದ ಎಲ್ಲ ವಿಷಯಗಳನ್ನು ಹೊಸ ದೃಷ್ಟಿಯಿಂದ ಬೆಳಕಿನಲ್ಲಿ ನೋಡಬೇಕಾಗಿದೆ. ಜ್ಞಾನವು ಬೆಳೆಯುತ್ತಲಿದೆ. ಅನುಭವಗಳು ಬರುತ್ತಲಿವೆ. ವೇದಗಳು ಅನಂತವಾಗಿವೆ. ವೇದವೆಂದರೆ ಅನುಭವ. ಆದರ ಪಾಯದ ಮೇಲೆ, ಶಾಸ್ತ್ರೀಯ ಜ್ಞಾನದ ತಳಹದಿಯ ಮೇಲೆ, ನಿಂತ ಈ ಸನಾತನ ಧರ್ಮವು ಹೊಸ ಬೆಳಕನ್ನು ಜೀವನದಲ್ಲಿ ತರುವದು. ಮತ್ತು ಧರ್ಮಮಯ ಅರ್ಥಕಾಮಶಾಸ್ತ್ರಗಳನ್ನು ಸಮಾಜಕ್ಕೆ ಕೊಟ್ಟು ನಿಜವಾದ ಶಾಂತಿ, ಆನಂದ ಯುಕ್ತವಾದ ನಿಶ್ಚಿತ ಮತ್ತು ನಿರ್ಮಲವಾದ ಮೋಕ್ಷವನ್ನು ಎಲ್ಲರಿಗೂ ಕೊಡುವದು.

ಇಡೀ ಸಮಾಜದ ಧಾರಣೆ, ಪೋಷಣೆ ಮಾಡಲು ಸಿದ್ಧವಿದ್ದ ಅರ್ಥ ಮತ್ತು ಕಾಮ ಇವು ಮೋಕ್ಷದ ಹಾದಿಯ ಕಡೆಗೆ ಒಯ್ಯುತ್ತವೆ. ಆದರೆ ಈ ರೀತಿ ಅರ್ಥಕಾಮಗಳ, ಜ್ಞಾನ-ವಿಜ್ಞಾನಮಯ ಮತ್ತು ಶಾಸ್ತ್ರೀಯ ಅಂದರೆ ಧಾರ್ಮಿಕ ವ್ಯವಸ್ಥೆಯನ್ನು ಮಾಡಲು ಹಂಬಲಿಸುವವರನ್ನು, ನರಕಕ್ಕೆ ಒಯ್ಯುವರೆಂದು ತಿಳಿಯಲಾಗುತ್ತದೆ. ಎಂಥ ದೈವದುರ್ವಿಲಾಸವಿದು ?!!

---

# ೧೩. ನಾಲ್ಕು ಆಶ್ರಮಗಳು

ಸನಾತನ ಧರ್ಮವನ್ನು ವರ್ಣಾಶ್ರಮ ಧರ್ಮವೆಂದೂ ಕರೆಯುತ್ತಾರೆ. ವರ್ಣಾಶ್ರಮವು ಭಾರತೀಯ ಸಂಸ್ಕೃತಿಯ ಪ್ರಧಾನ ಸ್ವರೂಪವಾಗಿದೆ. ವರ್ಣಧರ್ಮವನ್ನು ನಾವು ಈ ಮೊದಲೇ ವಿಚಾರಿಸಿದ್ದೇವೆ. ಈಗ ಆಶ್ರಮಧರ್ಮದ ವಿಚಾರವನ್ನು ಮಾಡುವಾ.

ಮನುಷ್ಯನ ವಿಕಾಸವಾಗಬೇಕೆಂದು ಆಶ್ರಮ ಚತುಷ್ಟಯದ ನಾಲ್ಕು ಮೆಟ್ಟಲುಗಳಿವೆ. ಬ್ರಹ್ಮಚರ್ಯಾಶ್ರಮ, ಗೃಹಸ್ಥಾಶ್ರಮ, ವಾನಪ್ರಸ್ಥಾಶ್ರಮ ಮತ್ತು ಸನ್ಯಾಸಾಶ್ರಮ. ಸನ್ಯಾಸವು ಕೊನೆಯ ಗುರಿಯು. ಕೊನೆಗೆ ಅನಾಸಕ್ತ ಜೀವನವೇ ಗಳಿಸತಕ್ಕ ವಸ್ತುವು. ಈ ಗುರಿಯನ್ನು ಸಾಧಿಸುವದಕ್ಕಾಗಿ ಮೊದಲಿನ ಮೂರು ಆಶ್ರಮಗಳು. ನಿದಾನವಾಗಿ ಬೇಡಿಕೆ ಸೇರಿಕೆಗಳನ್ನು ಬಿಡುತ್ತ ಬಿಡುತ್ತ ನಿವೃತ್ತ ಕಾಮನಾಗುವನು.

ಋಷಿಋಣ, ಪಿತೃಋಣ ಮತ್ತು ದೇವಋಣಗಳೆಂಬ ಮೂರು ಸಾಲಗಳ ಹೊಣೆಯನ್ನು ಹೊತ್ತುಕೊಂಡೇ ಮನುಷ್ಯನು ಜನ್ಮವೆತ್ತುತ್ತಾನೆಂದು ಭಾರತೀಯ ಸಂಸ್ಕೃತಿಯು ಹೇಳುತ್ತದೆ. ಉತ್ಕೃಷ್ಟವಾದ ಜ್ಞಾನವನ್ನು ಗಳಿಸಿ ಬ್ರಹ್ಮಚರ್ಯಾಶ್ರಮದಲ್ಲಿ ಋಷಿಋಣವನ್ನು ನಾವು ತೀರಿಸುತ್ತೇವೆ. ಗೃಹಸ್ಥಾಶ್ರಮದಲ್ಲಿದ್ದು ಮಕ್ಕಳನ್ನು ಹೆತ್ತು ಜೋಪಾನ ಮಾಡಿ ಪಿತೃಋಣವನ್ನು ತೀರಿಸುತ್ತೇವೆ. ಆ ಮೇಲೆ ವಾನಪ್ರಸ್ಥಾಶ್ರಮ ಮತ್ತು ಸನ್ಯಾಸಾಶ್ರಮ ಸೇರಿ ಸಮಾಜ ಸೇವೆಯನ್ನು ಮಾಡಿ ದೇವಋಣವನ್ನು ತೀರಿಸುತ್ತೇವೆ. ದೇವರು ಇಡೀ ಸೃಷ್ಟಿಗಾಗಿಯೇ ಇದ್ದಾನೆ. ಅವನ ಋಣವನ್ನು ತೀರಿಸುವದೆಂದರೆ, ಇಡೀ ಸೃಷ್ಟಿಯೊಡನೆಯೇ ಒಂದಾಗುವದು.

ಬ್ರಹ್ಮಚರ್ಯಾಶ್ರಮದಲ್ಲಿ ಮುಖ್ಯವಾಗಿ ಗಳಿಸತಕ್ಕದ್ದು ಜ್ಞಾನ. ಉಪನಯನವಾದಂದಿನಿಂದ ಬ್ರಹ್ಮಚರ್ಯಾಶ್ರಮದ ಪ್ರಾರಂಭ. ಉಪನಯನವೆಂದರೆ ಬ್ರಹ್ಮಚರ್ಯದ ದೀಕ್ಷೆ. ಬ್ರಹ್ಮಚರ್ಯವು ಯಾವದಾದರೊಂದು ಗುರಿಗಾಗಿ ಇರುತ್ತದೆ. ಗುರಿ ಇಲ್ಲದ ಬ್ರಹ್ಮಚರ್ಯವು ನಿರರ್ಥಕವಾದದ್ದು. ಇಂತಹ ಬ್ರಹ್ಮಚರ್ಯವು ಉಳಿಯುವದೂ ಇಲ್ಲ. ಜ್ಞಾನಕ್ಕಾಗಿ ಬ್ರಹ್ಮಚರ್ಯ. ಗುರುಗಳ ಜೊತೆಯಲ್ಲಿ ಜ್ಞಾನಸಂಪಾದನ ಮಾಡುವವರೆಗೆ ಬ್ರಹ್ಮಚರ್ಯವನು [illegible]

ಉಪನಯನದ ಕಾಲಕ್ಕೆ ಅನ್ನಲಾಗುವ ಮಂತ್ರಗಳಲ್ಲಿ ಬ್ರಹ್ಮಚರ್ಯದ ಮಹಿಮೆ ಬಣ್ಣಿಸಲಾಗಿದೆ. ಕುರುಹುಗಳೆಲ್ಲ ಬ್ರಹ್ಮಚರ್ಯವನ್ನೇ ತೋರುತ್ತವೆ. ಟೊಂಕಕ್ಕೆ ಮೂರು ಪದರಿನ ಮೇಖಲೆಯನ್ನು ಕಟ್ಟುತ್ತಾರೆ, ಕೌಪೀನವನ್ನು ಧರಿಸಲು ಹೇಳುತ್ತಾರೆ. ಇದರ ಅರ್ಥವೇನು? ನಿನಗೆ ಜ್ಞಾನವನ್ನು ಗಳಿಸುವದಿದ್ದರೆ ಕಾಮವಾಸನೆಯನ್ನು ಹೊಡೆದೋಡಿಸು. ಈ ಮೇಖಲೆಯನ್ನು ಧರಿಸುವಾಗ ಹೇಳುವ ಮಂತ್ರಗಳು ಬಹಳೇ ಚನ್ನಾಗಿವೆ. "ಈ ಮೇಖಲೆಯು ನಿನ್ನನ್ನು ಪವಿತ್ರನನ್ನಾಗಿ ಮಾಡುವದು. ನಿನ್ನನ್ನು ಅಡ್ಡತಿಡ್ಡ ಮಾತು ಆಡಗೊಡುವದಿಲ್ಲ. ನಿನಗೆ ಸುಖವನ್ನು ಕೊಡುವದು. ಪ್ರಾಣಾಪಾನದ ದ್ವಾರಗಳಿಂದ ನಿನಗೆ ಶಕ್ತಿಯನ್ನೀಯುವದು. ತೇಜಸ್ಸುಳ್ಳವರಿಗೆ ಈ ಮೇಖಲೆಯು ಪ್ರಿಯವಾದ ವಸ್ತುವು. ಈ ಮೇಖಲೆಯು ಸತ್ಯವನ್ನು ಪಾಲಿಸುವಂತಹದು. ತಪಕ್ಕೆ ಆಧಾರ. ರಾಕ್ಷಸರನ್ನು, ಶತ್ರುಗಳನ್ನು ಓಡಿಸುವಂತಹದು ಮೇಖಲೆಯೇ! ಕಲ್ಯಾಣವನ್ನು ದಯಪಾಲಿಸುವಂಥ ಎಲ್ಲ ವಸ್ತುಗಳೊಡನೆ ಬಂದು ನನ್ನನ್ನು ಸುತ್ತುಗಟ್ಟು; ನಿನ್ನನ್ನು ಧರಿಸುವಂಥ ನಾನು ಎಂದಿಗೂ ನಾಶ ಹೊಂದುವವನಲ್ಲ."

ಟೊಂಕ ಗಟ್ಟಿ ಇದ್ದವನಿಗೆ ಯಾರ ಭಯವು? ಅವನನ್ನು ಕೆಟ್ಟಗಣ್ಣಿನಿಂದ ನೋಡುವವರಾರು? "ಜ್ವಲನ್ನಿವ ಬ್ರಹ್ಮಮಯೇನ ತೇಜಸಾ." ಬ್ರಹ್ಮಚರ್ಯದ ತೇಜಸ್ಸಿನಿಂದ ಉರಿಯುವ ಗೋಲ ಇದ್ದ ಹಾಗೆ; ಒಳಹೊರಗಿನ ಶತ್ರುಗಳೆಲ್ಲರೂ ಓಡಿಹೋಗುವರು.

ಮೇಖಲೆ ಧರಿಸುವದೆಂದರೆ ವ್ರತವನ್ನು ಕೈಕೊಂಡಂತೆ. ಮೇಖಲೆಯನ್ನು ಟೊಂಕಕ್ಕೆ ಕಟ್ಟುವ ಮೊದಲು ದೀಕ್ಷಾವಿಧಿ ಎಂಬ ವಿಧಿ ಇರುತ್ತದೆ. ಆ ಕಾಲಕ್ಕೆ ಗುರು ವಟುವಿಗೆ ಹೇಳುತ್ತಾನೆ. "ಓ ವಟುವೆ, ನಿನ್ನ ಹೃದಯವು ನನ್ನ ವ್ರತದಲ್ಲಿ ಇರಲಿ. ನಿನ್ನ ಮನಸ್ಸು ನನ್ನ ಮನಸ್ಸನ್ನು ಹಿಂಬಾಲಿಸಲಿ. ನಾನು ಹೇಳುವದನ್ನೆಲ್ಲಾ ನಿಷ್ಠೆಯಿಂದ ಮತ್ತು ಏಕಾಗ್ರತೆಯಿಂದ ಲಾಲಿಸು. ಬುದ್ಧಿಪೂಜಕನಾದ ಬ್ರಹಸ್ಪತಿಯು ನಿನ್ನನ್ನು ನನ್ನೆಡೆಯಲ್ಲಿ ಸೇರಿಸಲಿ." ಗುರುವಿನ ಶಬ್ದಗಳನ್ನು ಕೇಳುವದಕ್ಕಾಗಿ ಏಕಾಗ್ರತೆಯು ಮತ್ತು ವ್ರತಗಳು ಬೇಕು. ಬ್ರಹ್ಮಚರ್ಯವು ವ್ರತಗಳ ಸಾರ್ವಭೌಮ. ಬ್ರಹ್ಮಚರ್ಯದಲ್ಲಿ ಎಲ್ಲ ವ್ರತಗಳೂ ಒಳಗೊಂಡಿವೆ.

ವಟುವಿನ ಕೈಗಳನ್ನು ತನ್ನ ಕೈಯಲ್ಲಿ ಹಿಡಿಯುವ ಗುರುವು ದೇವರ ಸ್ವರೂಪವಾಳವನೆಂದು ಮನ್ನಿಸುತ್ತಾರೆ. "ವಟುವೆ, ನಿನ್ನ ಕೈಗಳನ್ನು ಹಿಡಿ

ಯುವವನು ನಾನಲ್ಲ; ಬುದ್ಧಿಗೆ ಗತಿಯನ್ನು ಕೊಡುವ ಆದಿತ್ಯದೇವರೇ ನಿನ್ನ ಕೈ ಹಿಡಿದಿದ್ದಾನೆ. ಅಗ್ನಿಯು ನಿನ್ನ ಆಚಾರ್ಯನು; ನಾನಲ್ಲ." ಗುರು ಅಂದರೆ ಬೆಳಕು. ಜ್ಞಾನದ ಬೆಳಕನ್ನು ಕೊಡುವವನು. ಬೆಳಕಿನ ಮೂರ್ತಿಯಾದ ಗುರುಗಳ ಉಪಾಸನೆಯನ್ನು ಬ್ರಹ್ಮಚಾರಿಯು ಮಾಡಬೇಕಾಗಿರುವುದು. ಉಪನಯನದ ಎಲ್ಲ ಮಂತ್ರಗಳಲ್ಲಿ ತೇಜದ ಉಪಾಸನೆಯೇ ಹೇಳಲಾಗಿದೆ. "ಸೂರ್ಯನಾರಾಯಣನೇ! ಈ ಬ್ರಹ್ಮಚಾರಿಯು ನಿನ್ನವನು; ಅವನನ್ನು ರಕ್ಷಿಸು; ಅವನು ಅಮರನಾಗಲಿ." ಬ್ರಹ್ಮಚರ್ಯಾಶ್ರಮವನ್ನು ಸ್ವೀಕರಿಸುವದೆಂದರೆ ಇನ್ನೊಂದು ಜನ್ಮ ಪಡೆದಂತೆ. ಇನ್ನು ಸಂಯಮದಿಂದ ನಡೆದುಕೊಳ್ಳುವದು. "ಬಂದನು! ಈ ತರುಣ ಬ್ರಹ್ಮಚಾರಿಯು ಬಂದನು! ಹೊಸ ಅರಿವೆಗಳನ್ನು, ಜನಿವಾರವನ್ನು ಧರಿಸಿದ್ದಾನೆ. ಅವನು ಇಂದು ಹೊಸ ಜನ್ಮವೆತ್ತಿದ್ದಾನೆ. ಅವನು ಕಲ್ಯಾಣ ಪಥವನ್ನು ಹಿಡಿದಿದ್ದಾನೆ. ಸಂಯಮಿಯಾದ ಜಾಣಗುರುವು ಆವನನ್ನು ಉನ್ನತಿಯ ಮಾರ್ಗಕ್ಕೆ ಒಯ್ಯಲಿ. ಈ ತರುಣನು ಜ್ಞಾನವನ್ನು ಪಡೆದು ಎಲ್ಲರಿಗೂ ಬೇಕಾಗುವಂಥವನಾಗಲಿ."

ಹೋಮವು ಮುಗಿದ ಮೇಲೆ ಈ ರೀತಿ ಪ್ರಾರ್ಥನೆಯನ್ನು ವಟುವು ಮಾಡಬೇಕಾಗುತ್ತದೆ. "ಅಗ್ನಿಯು ನನಗೆ ಬುದ್ಧಿಯನ್ನು, ವಿಚಾರ ಮಾಡುವ ಶಕ್ತಿಯನ್ನು ಮತ್ತು ತೇಜಸ್ಸನ್ನು ಕೊಡಲಿ. ಇಂದ್ರನು ಬುದ್ಧಿ, ವಿಚಾರಶಕ್ತಿ ಮತ್ತು ಸಾಮರ್ಥ್ಯವನ್ನು ದಯಪಾಲಿಸಲಿ. ಸೂರ್ಯನು ಸಹ ಈ ಶಕ್ತಿಗಳನ್ನೆಲ್ಲ ನನಗೆ ಕೊಡಲಿ. ಅಗ್ನಿದೇವನೇ, ನಿನ್ನ ತೇಜದಿಂದ ನನ್ನನ್ನು ತೇಜಸ್ಸುಳ್ಳವನನ್ನಾಗಿ ಮಾಡು. ನಿನ್ನ ಯಶಸ್ಸುಳ್ಳ ತೇಜದಿಂದ ನನ್ನನ್ನು ವರ್ಚಸ್ಸುಳ್ಳಂಥವನಾಗುವಂತೆ ಮಾಡು." ವಟುವು ಮೇಖಲೆಯನ್ನೂ ಲಂಗೋಟಿಯನ್ನೂ ಧರಿಸಿದ ಮೇಲೆ ಕೈಯಲ್ಲಿ ದಂಡವನ್ನು ಧರಿಸುತ್ತಾನೆ. "ಸಂಯಮದ ಅಭಾವವಿದ್ದ ನನಗೆ ಈ ದಂಡವು ಸಂಯಮ ಕಲಿಸುವದು. ಎತ್ತಕಡೆಯಿಂದ ಸಂಕಟ ಒದಗಿದರೂ ಈ ದಂಡವು ನನ್ನನ್ನು ಪಾಲಿಸಲಿ."

ಉಪನಯನದ ಕೊನೆಗೆ ಮೇಧಾ (ಬುದ್ಧಿ) ಸೂಕ್ತವು ಅನ್ನಲಾಗುತ್ತದೆ. ಅದನ್ನು ಇಲ್ಲಿ ಕೊಡದೆ ಇರಲಾರೆನು.

"ಅಂಗಿರಸ ಋಷಿ, ಸಪ್ತರ್ಷಿ, ಇಂದ್ರ, ಅಗ್ನಿ ಮತ್ತು ಸೃಷ್ಟಿಕರ್ತ ಇವರೆಲ್ಲರು ನನಗೆ ಬುದ್ಧಿಯನ್ನು ದಯಪಾಲಿಸಲಿ. ಕಮಲದ ಮಾಲೆಗಳನ್ನು

ಧರಿಸುವ ಅಶ್ವಿನೀಕುಮಾರಕರು ಬುದ್ಧಿಯನ್ನು ನನಗೆ ಕೊಡಲಿ. ಗಂಧರ್ವ, ದೇವ ಮತ್ತು ಮನುಷ್ಯ ಲೋಕದಲ್ಲಿರುವ ಮೇಧಾ ನನ್ನ ಬುದ್ಧಿಯನ್ನು ಸೇರಲಿ. ನಾನು ಮೇಲಿಂದ ಮೇಲೆ ಪಾಠ ಮಾಡದಿದ್ದರೂ ಒಮ್ಮೆ ಓದಿದ್ದು ನನ್ನ ನೆನಪಿನಲ್ಲಿ ಉಳಿಯಲಿ. ಒಮ್ಮೆ ಕಲಿತದ್ದು ನನಗೆ ಎಂದಿಗೂ ಮರೆಯದಿರಲಿ. ಕೇಳಿದ್ದೆಲ್ಲ ಮನದಟ್ಟಾಗಿ ಉಳಿಯಲಿ. ವ್ರತಚಾರಿಗಳಂತೆ ನನ್ನ ವ್ರತವು ಆಗಲಿ. ವಿದ್ವಜ್ಜನರ ಸಹವಾಸವು ಲಭಿಸಲಿ. ನನ್ನ ಇಂದ್ರಿಯಗಳೆಲ್ಲ ಗ್ರಹಣ ಮಾಡುವಂಥವಾಗಲಿ. ಮೋಹವನ್ನು ಹೊಡೆದೋಡಿಸವಂಥ ಮಾತು ನನ್ನದಾಗಲಿ. ತುಟಿಯಲ್ಲಿ ಸವಿ, ಮನಸ್ಸಿನಲ್ಲಿ ವಿಷ ಇಂತಹ ಮಾತು ನನ್ನದಿರಬಾರದು. ನನ್ನ ಉತ್ಸಾಹವು ಅಖಂಡವಿರಲಿ. ಜ್ಞಾನಮಯ ಸೂರ್ಯನು ನನ್ನ ಜ್ಞಾನವನ್ನು ಎಂದಿಗೂ ಸಾಣವಾಗದಂತೆ ನೋಡಿಕೊಳ್ಳಲಿ. ಬುದ್ಧಿಯಲ್ಲಿ ಹೊಳೆಯುವ ಮೇಧಾ, ದಿವ್ಯ ಲೋಕದಲ್ಲಿರುವ ಮೇಧಾ ನನಗೆ ದೊರಕಲಿ. ನನಗೆ ಮೇಧಾ ತೇಜವನ್ನು ದಯಪಾಲಿಸಲಿ. ನಾನು ಬುದ್ಧಿವಂತನಾಗಲಿ. ದೇಹವು ಮುಪ್ಪಾದರೂ ನನ್ನ ಬುದ್ಧಿಯು ತೇಜವುಳ್ಳದ್ದಿರಬೇಕು, ಬುದ್ಧಿ ಯಾವಾಗಲೂ ತೇಜವುಳ್ಳದ್ದಿರಲಿ.

ಮೇಧಾ ಇಂದ್ರನಿಗೆ ಸೇರುತ್ತದೆ. ಸಭೆಗಳಲ್ಲಿ ತನ್ನ ವರ್ಚಸ್ಸನ್ನು ತೋರಿಸುತ್ತದೆ. ಇದು ಅಪೂರ್ವವಾದ ವಸ್ತುವು. ಇದಕ್ಕಾಗಿಯೇ ಅದನ್ನು ಗಳಿಸಲು ನಾನು ಸಾಹಸಪಡುತ್ತೇನೆ. ಇದನ್ನು ಪಿತೃಗಳು ದೇವರು ಪೂಜಿಸುತ್ತಾರೆ. ಇಂಥ ಮೇಧಾ ನನಗೆ ದಯಪಾಲಿಸಿ ನನ್ನನ್ನು ಮೇಧಾವಿಯನ್ನಾಗಿ ಮಾಡಿರಿ. ನಾನು ಬುದ್ಧಿಯುಳ್ಳವನಾಗಬೇಕು, ಉತ್ತಮ ಒಲವುಳ್ಳವನಾಗಬೇಕು. ಉತ್ತಮ ವಸ್ತುಗಳನ್ನು ಪೂಜಿಸುವವನು, ಶ್ರದ್ಧೆಯುಳ್ಳವನು ಮತ್ತು ಸತ್ಯದಲ್ಲಿ ನಿಷ್ಠೆಯುಳ್ಳವನು ಆಗಬೇಕು. ಬ್ರಹ್ಮಚರ್ಯದ ತೇಜದಿಂದ ಹೊಳೆಯುವಂಥವನಾಗಬೇಕು. ಕೀರ್ತಿವಂತನೂ ಧೀರವ್ರತನೂ ಆಗಬೇಕು. ಉತ್ತಮ ಮಾತುಗಾರಿಕೆಯು ನನಗೆ ಬರಬೇಕು. ಬೇಕಾದ ವಿಷಯ ಚರ್ಚೆ ಮಾಡುವ ಸಮಯ ಬಂದಾಗ ನನ್ನ ಬುದ್ಧಿಯ ಪ್ರಭಾವದಿಂದ ನಾನು ಶೋಭಿಸಬೇಕು." ಇಂಥ ಸುಂದರವಾದ ಮಂತ್ರಗಳಿವೆ ಇವು.

ಉಪನಯನವೆಂದರೆ ಬುದ್ಧಿ-ಸಂಪನ್ನನಾಗಲು ಕೈಕೊಂಡ ವ್ರತ. ಜ್ಞಾನ ಧಾರಣಾಶಕ್ತಿ ಮತ್ತು ನೆನಪಿನ ಶಕ್ತಿ ಗಳಿಸುವದಕ್ಕೆ ಬ್ರಹ್ಮಚರ್ಯವು ಅವಶ್ಯವಾದದ್ದು. ಬ್ರಹ್ಮಚರ್ಯವಿಲ್ಲದೆ ಏಕಾಗ್ರತೆ ಇಲ್ಲ. ಎಲ್ಲ ಇಂದ್ರಿಯಗಳ ಶಕ್ತಿಯನ್ನು ಗುರಿಯ ಮೇಲೆ ಕೇಂದ್ರೀಕರಿಸುವದೆಂದರೆ ಬ್ರಹ್ಮಚರ್ಯ. ಕಾಜಿನೊಳಗಿಂದ ಸೂರ್ಯಕಿರಣಗಳನ್ನೆಲ್ಲ ಒಂದೇ ಬಿಂದುವಿನ ಮೇಲೆ

ಪುಂಜಿಸಿದರೆ ಕಿಡಿಯೇಳುತ್ತದೆ. ಅದರಂತೆ ಎಲ್ಲ ಇಂದ್ರಿಯಗಳ ಶಕ್ತಿಯನ್ನು ಒಂದೆಡೆಯಲ್ಲಿ ತಂದು ಅದ್ಭುತವಾದ ತೇಜಸ್ಸು ನಿರ್ಮಿಸುವದೆಂದರೆ ಬ್ರಹ್ಮಚರ್ಯ.

ಭಾರತೀಯ ಸಂಸ್ಕೃತಿಯಲ್ಲಿ ಬ್ರಹ್ಮಚರ್ಯವನ್ನು ಅಲ್ಲಲ್ಲಿ ಹೇರಳವಾಗಿ ಹೊಗಳಲಾಗಿದೆ. ಬ್ರಹ್ಮಪ್ರಾಪ್ತಿಗಾಗಿ ಬೇಕಾಗುವ ನಡತೆ ನಡಾವಳಿಯೆಂದರೆ ಬ್ರಹ್ಮಚರ್ಯ. ಬ್ರಹ್ಮವೆಂದರೆ ನಮ್ಮ ಗುರಿ. ಯಾತಕ್ಕಾಗಿ ಅಳಿಯಬೇಕು ಉಳಿಯಬೇಕೆಂದು ನಮಗೆ ಅನಿಸುತ್ತದೆಯೋ ಅದೆ ನಮ್ಮ ಗುರಿ, ನಮ್ಮ ಬ್ರಹ್ಮ.

ನಮ್ಮಲ್ಲಿದ್ದ ಶಕ್ತಿ ಸರ್ವಸ್ವವನ್ನು ಉಪಯೋಗಿಸಿದ ಹೊರತು ನಮ್ಮ ಗುರಿ ಸಾಧಿಸುವದಿಲ್ಲ. ಗುರಿ ಉಚ್ಚವಾದಂತೆ ಹೆಚ್ಚು ಶಕ್ತಿ ಬೇಕಾಗುತ್ತದೆ. ನಮ್ಮಲ್ಲಿದ್ದ ಶಕ್ತಿಯನ್ನೆಲ್ಲ ಉಪಯೋಗಿಸಿದರೂ ಒಮ್ಮೊಮ್ಮೆ ಗುರಿ ಸಾಧಿಸುವದಿಲ್ಲ. ಆಗ ನಾವು ಪ್ರಾರ್ಥನೆ ಮಾಡಬೇಕಾಗುತ್ತದೆ. ದುರ್ಬಲರ ಪ್ರಾರ್ಥನೆಯಲ್ಲಿ ಅರ್ಥವಿಲ್ಲ. ತನ್ನ ಶಕ್ತಿಯನ್ನು ಗುರಿ ಬಿಟ್ಟು ಎರಡನೆ ಕಡೆಯಲ್ಲಿ ಎಲ್ಲಿಯೂ ಕಳೆಯದೆ, ಗುರಿಯ ಸಾಧನೆಗಾಗಿ ಮಾತ್ರ ಅದನ್ನು ಉಪಯೋಗಿಸಿಯೂ ಕೂಡ ಗುರಿಯು ಇನ್ನೂ ದೂರ ಉಳಿದರೆ ಮಾತ್ರ ನಿಜವಾದ ಪ್ರಾರ್ಥನೆಯು ನಮ್ಮ ಜೀವನದಲ್ಲಿ ಮೂಡುತ್ತದೆ.

ಒಂದೊಂದು ಅಕ್ಷರ ಕಲಿಯಲು ಸಾವಿರಾರು ವರುಷ ಬ್ರಹ್ಮಚರ್ಯ ವ್ರತವನ್ನು ಕೈಕೊಂಡ ಕಥೆಗಳನ್ನು ನಾವು ಉಪನಿಷತ್ತಿನಲ್ಲಿ ಓದಬಹುದು. ಜ್ಞಾನದ ಒಂದು ಬಿಂದುವಿಗಾಗಿ ಎಷ್ಟು ತಪಸ್ಸು ಬೇಕಾಗುತ್ತದೆ, ಬ್ರಹ್ಮಚರ್ಯ ವ್ರತವನ್ನು ಕೈಕೊಂಡ ತರುಣನು ಹೇಗೆ ನಡೆದುಕೊಳ್ಳಬೇಕು ಎಂಬದನ್ನು ಉಪನಿಷತ್ತಿನಲ್ಲಿ ಹೀಗೆ ಹೇಳಿದ್ದಾರೆ. "ತರುಣನು ಸತ್ಪ್ರವೃತ್ತಿಯುಳ್ಳವನಿರಬೇಕು; ಅಭ್ಯಾಸ, ಆಶಾವಾದ, ದೃಢನಿಶ್ಚಯ ಮತ್ತು ಕಸುವು ಅವನಲ್ಲಿ ಇರಬೇಕು. ಧನಧಾನ್ಯಗಳಿಂದ ಸಮೃದ್ಧವಾದ ಪೃಥ್ವಿಯು ಇಂಥವನ ಕಾಲಡಿಯಲ್ಲಿ ಬಂದು ಬೀಳುವದು. ನಾಚು ತಮಾಶೆಗಳನ್ನು ನೋಡಬಾರದು; ಹರಟೆ ಕೊಚ್ಚಬಾರದು, ಏಕಾಂತದಲ್ಲಿ ಅಭ್ಯಾಸ ಮಾಡಬೇಕು. ಗುರು ತಪ್ಪುಹಾದಿ ಹಿಡಿದರೆ ತಾನೂ ಅದರಂತೆ ನಡೆಯಬಾರದು. ಅವಶ್ಯವಿದ್ದರೆ ಮಾತ್ರ ಹೆಣ್ಣುಮಕ್ಕಳೊಡನೆ ಮಾತನಾಡಬೇಕು. ಸ್ವಭಾವವು ಮೃದು ಮತ್ತು ಮಧುರವಿರಬೇಕು. ಯುವಕನು ವಿನಯಶೀಲನು, ಶಾಂತ ಸ್ವಭಾವದವನು, ಸತತ ಉದ್ಯೋಗ ಮಾಡುವಂಥವನು, ದೃಢ

ನಿಶ್ಚಯವುಳ್ಳವನು ಮತ್ತು ಮಮತೆಯುಳ್ಳವನು ಇರಬೇಕು. ಯಾರ ದ್ವೇಷ ವನ್ನು ಮಾಡಬಾರದು, ಯಾರ ಕೆಡಕನ್ನೂ ಬಯಸಬಾರದು. ಮುಂಜಾನೆ ಸಂಜೆಯ ಕಾಲದಲ್ಲಿ ಗುರುಗೃಹದಲ್ಲಿ ನೀರು ತರುವದು, ಗಿಡಗಳಿಗೆ ನೀರು ಹಾಕುವದು, ಉರುವಲ ತರುವದು ಇಂಥ ಕೆಲಸಗಳನ್ನು ಮಾಡಬೇಕು." ಇದು ಉಪನಿಷತ್ತು ನಮ್ಮೆದಿರು ಇಟ್ಟ ಆದರ್ಶ, ಮಾದರಿ.

ಈಗಿನ ವಾತಾವರಣದಲ್ಲಿ ಬ್ರಹ್ಮಚರ್ಯವನ್ನು ಆಚರಿಸುವದು ಬಹಳ ಕಠಿಣವಾಗಿದೆ. ಎಲ್ಲಿ ನೋಡಿದಲ್ಲಿ ಮನುಷ್ಯನ ಮನಸ್ಸಿನ ಶಕ್ತಿಯನ್ನು ಕುಗ್ಗಿಸುವಂಥ ಕಾಮೋತ್ತೇಜಕವಾದ ವಾತಾವರಣವು ಹಬ್ಬಿದೆ. ಸಿನೆಮಾ, ರೆಡಿಯೋ, ಫೋನೋ ಇವುಗಳಿಂದ ಮನುಷ್ಯನ ಮನಸ್ಸು ಪೊಳ್ಳಾಗಿದೆ.

ಎಲ್ಲ ಬಗೆಯ ಬೇಡಿಕೆ, ಸೇರಿಕೆ ಮತ್ತು ಒಲವುಗಳ ಬೀಜಗಳು ನಮ್ಮ ಮನಸ್ಸಿನಲ್ಲಿವೆ. ಈ ಬೀಜಗಳು ಅಂಕುರಿಸಬಾರದು ಎಂದೆನಿಸಿದರೆ, ಅವುಗಳಿಗೆ ಅನುಕೂಲವಾಗುವಂಥ ಪರಿಸ್ಥಿತಿಯನ್ನು ಕಲ್ಪಿಸಿಕೊಡಬಾರದು. ಶೃಂಗಾರರಸ ಪ್ರಧಾನವಾದ ಪದಗಳನ್ನು ಹಾಡುತ್ತಿದ್ದರೆ ಬ್ರಹ್ಮಚರ್ಯವು ಹೇಗೆ ಉಳಿಯುವದು ? ವಾತಾವರಣವೆಲ್ಲ ಭೋಗ ಶಿಕ್ಷಣವನ್ನೇ ಕಲಿಸುತ್ತಿರುವಾಗ ತರುಣನ ಬ್ರಹ್ಮಚರ್ಯವು ಹೇಗೆ ಉಳಿಯುವದು ?

ಬಾಲವಾಚನಾಲಯಗಳು, ಛಾತ್ರವಾಚನಾಲಯಗಳ ಕಲ್ಪನೆಯಂತೂ ನಮ್ಮ ದೇಶದಲ್ಲಿ ಇಲ್ಲವೇ ಇಲ್ಲ. ಒಂದೇ ಒಂದು ವಿಷಯವನ್ನು ಕುರಿತು ಚರ್ಚಿಸುವ, ವಿಚಾರಿಸುವ ಮಾಸಪತ್ರಿಕೆಗಳು ನಮ್ಮಲ್ಲಿ ಇಲ್ಲ. ಇತಿಹಾಸ, ವಾಙ್ಮಯ, ಆರೋಗ್ಯ, ಶಿಕ್ಷಣ, ವ್ಯಾಪಾರ ಮೊದಲಾದ ಶಾಸ್ತ್ರಗಳನ್ನು ಜನರಿಗೆ ಕೂಲಂಕಷವಾಗಿ ತಿಳಿಸಿ ಹೇಳುವ ಮಾಸಪತ್ರಿಕೆಗಳು, ವಾರಪತ್ರಿಕೆಗಳು ಬೇಕು. ಇಂಥ ಶಾಸ್ತ್ರದ ವಿವೇಚನದಲ್ಲಿ ಕಾಮಶಾಸ್ತ್ರದ ವಿಚಾರವೂ ಬರಬಹುದು. ಆದರೆ ಕಾಮಶಾಸ್ತ್ರವೆಂದರೆ ಚುಂಬನ ಆಲಿಂಗನ ಇವಲ್ಲ. ಮಕ್ಕಳಿಗೆ ಜನನೇಂದ್ರಿಯಗಳನ್ನು ಕುರಿತು ವಿವರಗಳನ್ನು ತಿಳಿಹೇಳುವದು, ಅವುಗಳನ್ನು ಆರೋಗ್ಯದಿಂದ ಇಡುವ ರೀತಿಯನ್ನು ಕಲಿಸುವದು, ಅವರಿಗೆ ತಿಳುವಳಿಕೆ ಬಂದಹಾಗೆ ಅವುಗಳ ಕಾರ್ಯವನ್ನು ತಿಳಿಸುವದು–ಇದು ನಿಜವಾದ ಕಾಮಶಾಸ್ತ್ರವನ್ನು ತಿಳಿಸಿ ಹೇಳುವ ಪದ್ಧತಿಯು. ಇಂಥ ಪತ್ರಿಕೆಗಳು ಇರಬೇಕು.

ಇಂಥ ಶಾಸ್ತ್ರೀಯ ಶಿಕ್ಷಣವಂತೂ ನಮ್ಮ ಮಕ್ಕಳಿಗೆ ದೊರೆಯುವದೇ ಇಲ್ಲ. ಸಮಾಜವು ಇತ್ತ ಕಡೆಗೆ ಲಕ್ಷಕೊಡುವದಿಲ್ಲ. ಮಕ್ಕಳ ದೇಹದ ಪರವೆ

ಇಲ್ಲದವರು, ಅವರ ಮನಸ್ಸಿನ ಹಸಿವನ್ನು ಅರಿತು ಅದನ್ನು ಸಂತೈಸು ವದೆಂತು ?

ಇವೆಲ್ಲ ಮಾತುಗಳ ವಿಚಾರವು ಬ್ರಹ್ಮಚರ್ಯಾಶ್ರಮದಲ್ಲಿ ಮಾಡುವ ದದೆ. ಏನು ತಿನ್ನಬೇಕು, ಓದಬೇಕು, ನೋಡಬೇಕು, ಹೇಗೆ ಮಲಗ ಬೇಕು, ಯಾವಾಗ ಏಳಬೇಕು, ಇದೆಲ್ಲವನ್ನು ವಿಚಾರಿಸಿ ನಿರ್ಣಯಿಸ ಬೇಕು. ಬ್ರಹ್ಮಚರ್ಯವು ಒಂದು ಶಾಸ್ತ್ರವು. ಬ್ರಹ್ಮಚರ್ಯದಿಂದ ಇರ ಬೇಕಾದರೆ ಆ ಶಾಸ್ತ್ರದಂತೆ ನಡೆಯಬೇಕು.

"ಬ್ರಹ್ಮಚರ್ಯವೆಂದರೆ ಒಂದೇ ಇಂದ್ರಿಯದ ಸಂಯಮವಲ್ಲ, ಇಡೀ ನಮ್ಮ ಇರುವಿಕೆಯ ಸಂಯಮ'' ಎಂದು ಮಹಾತ್ಮಾಜಿಯವರು ಹೇಳಿ ದ್ದಾರೆ. ಲೋಕಮಾನ್ಯರು ಪರಸ್ತ್ರೀಯನ್ನು ಕಣ್ಣು ಎತ್ತಿ ನೋಡುತ್ತಿದ್ದಿಲ್ಲ. ಓರ್ವ ಹೆಣ್ಣುಮಗಳ ಕೆಲಸವಿದ್ದಾಗ ಅವರು ಅವಳ ಕಡೆಯಿಂದ ವಿವರ ಗಳನ್ನು ತಿಳಿದುಕೊಂಡು ಅರ್ಜಿ ಬರೆದರು. ಇದೆಲ್ಲ ಆಗಬೇಕಾದರೆ ಅವರಿಗೆ ಮೂರು ತಾಸು ಹಿಡಿಯಿತು. ಆದರೆ ಅವರು ಆ ಹೆಣ್ಣು ಮಗಳ ಕಡೆ ಒಮ್ಮೆ ಸಹ ನೋಡಲಿಲ್ಲ. ಮಹಾತ್ಮಾಜಿ, ಲೋಕಮಾನ್ಯ ಟಿಳಕ, ಸರ ಅಶುತೋಷ ಮೂಕರ್ಜಿ ಇವರ ಕಣ್ಣಿನಲ್ಲಿದ್ದ ತೇಜವು ಯಾರ ಕಣ್ಣನ್ನಾ ದರೂ ಕುಕ್ಕಿಸುವಂತಹದು. ಅದು ಅವರು ಬ್ರಹ್ಮಚರ್ಯದಿಂದ ಇದ್ದದ್ದರ ಫಲವೆ. ಕಲಕತ್ತಾ ವಿಶ್ವವಿದ್ಯಾಲಯದ ಒಂಹು ಸಭೆಯಲ್ಲಿ ಡಾಕ್ಕಾ ಕಾಲೇಜದ ಪ್ರಿನ್ಸಿಪಾಲ ಟರ್ನರ ಇವರು ಆಶುತೋಷರ ವಿರುದ್ಧ ಮಾತ ನಾಡಲು ಎದ್ದರು. ಆದರೆ ಅಶುತೋಷರು ಅವರ ಕಡೆ ದಿಟ್ಟಿಸಿ ನೋಡಿ ದರು. ಮಾತನಾಡದೆ ಆ ಸಾಹೇಬರು ಸುಮ್ಮನೆ ಕೂತರು. ಅವರು ತಮ್ಮ ಡಾಯರಿಯಲ್ಲಿ ಬರೆದಿದ್ದಾರೆ.

"The black man stared at me and I staggered back in my chair'' (ಆ ಕಪ್ಪು ಬಣ್ಣದ ಪುರುಷನು ನನ್ನ ಕಡೆ ದಿಟ್ಟಿಸಿ ನೋಡಿದನು. ನಾನು ಅಳುಕುತ್ತ ನನ್ನ ಖುರ್ಚಿಯ ಮೇಲೆ ಕೂತುಬಿಟ್ಟೆ). ಸ್ವಾಮಿ ರಾಮತೀರ್ಥ, ವಿವೇಕಾನಂದ, ಇತಿಹಾಸ ಸಂಶೋ ಧಕ ರಾಜವಾಡೆ ಇವರ ನೆನಪಿನ ಶಕ್ತಿ, ಏಕಾಗ್ರತೆ, ತೀಕ್ಷ್ಣವಾದ ಬುದ್ಧಿ. ಇವೆಲ್ಲವು ಅವರ ಬ್ರಹ್ಮಚರ್ಯದ ಪ್ರಭಾವಗಳೇ.

ಬ್ರಹ್ಮಚರ್ಯದ ತೇಜಸ್ಸು ದೇಹದಲ್ಲೆಲ್ಲ ಹಬ್ಬುತ್ತದೆ. ತುಂಬಿತುಳು ಕುತ್ತದೆ. ವಿವೇಕಾನಂದರನ್ನು ನೋಡಿದೊಡನೆ ಕಣ್ಣು ಕುಕ್ಕುತ್ತಿದ್ದವು.

ರಾಮತೀರ್ಥರನ್ನು ನೋಡಿದರೆ ಮನಸ್ಸು ಸಂತೋಷಗೊಳ್ಳುತ್ತಿತ್ತು.

ನಮ್ಮ ಇರುವಿಕೆಯು ಸಾರ್ಥಕವಾಗಬೇಕಾದರೆ ಬ್ರಹ್ಮಚರ್ಯವು ಅವಶ್ಯವಾದದ್ದು. ಜೇಡಿಕೆ, ಒಲವುಗಳನ್ನು ಗೆದ್ದರೆ ಮಾತ್ರ ಉಕ್ಕಿನಂಥ ಇಚ್ಛಾಶಕ್ತಿಯು ಸಾಧ್ಯವಾದದ್ದು. ಬ್ರಹ್ಮಚರ್ಯವನ್ನು ಗಳಿಸಬೇಕಾದರೆ ಅದಕ್ಕೆ ಪ್ರಯತ್ನ ಮಾಡಲೇಬೇಕು. ಇದು ಒಮ್ಮೆಲೆ ಸಾಧ್ಯವಾಗುವದಿಲ್ಲ. ನಾವು ತಪ್ಪಬಹುದು, ಆದರೆ ಮತ್ತೆ ಪ್ರಯತ್ನ ಮಾಡಬೇಕು. ಇದನ್ನು ಗಳಿಸಬೇಕಾದರೆ ನಾವು ಬರಿ ನಮ್ಮಲ್ಲಿಯ ದೋಷಗಳನ್ನಷ್ಟೇ ವಿಚಾರಿಸ ಬಾರದು. ಯಾವಾಗಲೂ ದೋಷಗಳನ್ನೇ ನಾವು ವಿಚಾರಿಸಿದರೆ ಅವೇ ನಮ್ಮಲ್ಲಿ ಬೆಳೆಯುವವು. ನಾವು ಯಾವಾಗಲೂ ನಮ್ಮಲ್ಲಿದ್ದ ಗುಣಗಳನ್ನು ಅರಿತು ಅವುಗಳನ್ನೇ ಬೆಳೆಯಿಸಲು ಪ್ರಯತ್ನಪಡಬೇಕು. ಭಾರತೀಯ ಸಂಸ್ಕೃತಿಯು ಸಂಕಲ್ಪದ ಮಹತ್ವವನ್ನು ಒತ್ತಿಹೇಳುತ್ತದೆ. "ಅಹಂ ಬ್ರಹ್ಮಾಸ್ಮಿ ಶಿವಃ ಕೇವಲೋಽಹಮ್" "ನಾನು ಬ್ರಹ್ಮನು, ನಾನೇ ಶಿವನು" ಈ ರೀತಿ ಜಪಿಸಲು ಹೇಳುತ್ತದೆ. ಇದನ್ನೆ ಮನಸಿನ ಮೇಲೆ ಮೂಡಿಸಲು ಹೇಳಲಾಗುತ್ತದೆ. ನಮ್ಮ ಶ್ರದ್ಧೆ ನಮ್ಮ ಇರುವಿಕೆಗೆ ಆಕಾರವನ್ನು ಕಲ್ಪಿಸಿ ಕೊಡುತ್ತದೆ.

ಇಂದು ರಾಷ್ಟ್ರೀಯ ಧ್ಯೇಯಕ್ಕಾಗಿ ಬಡಿದಾಡುವವರು ಕಾಣುವದಿಲ್ಲ. ಎಲ್ಲಿ ನೋಡಿದಲ್ಲಿ ನಿರಾಶೆ, ಉದಾಸೀನತೆ ಮತ್ತು ನಿರುತ್ಸಾಹವೃತ್ತಿ ಕಂಡು ಬರುತ್ತದೆ. ನಾನು ಜ್ಞಾನವನ್ನೂ ಶರೀರ ಸಂಪತ್ತನ್ನೂ ಗಳಿಸಿ ಮುಂದಾ ಗುವೆನು, ಎಂಬ ಭಾವನೆಯು ನಮ್ಮ ತರುಣರ ಮನಸ್ಸಿನಲ್ಲಿ ಬರುವದಿಲ್ಲ. ಮಹತ್ವಾಕಾಂಕ್ಷೆಯು ಅಳಿದಿದೆ. ಅಭ್ಯಾಸ ಮಾಡುವದರಲ್ಲಿ ಉತ್ಸಾಹವಿಲ್ಲ. ದೇಶ ಹೇಗೊ ಬದುಕಿದೆ. ತರುಣರು ಹೇಗೋ ನಡೆದುಕೊಳ್ಳುತ್ತಿದ್ದಾರೆ. ಬ್ರಹ್ಮಚರ್ಯದ ಹ್ರಾಸವು ಇದಕ್ಕೆ ಸಬಲವಾದ ಒಂದು ಕಾರಣವಾಗಿದೆ.

ಉತ್ಕೃಷ್ಟವಾದ ಬ್ರಹ್ಮಚರ್ಯಾಶ್ರಮವಿದ್ದರೆ ಮಾತ್ರ ಸಬಲವಾದ ತೇಜಸ್ಸುಳ್ಳ ಗೃಹಸ್ಥಾಶ್ರಮವು ಹುಟ್ಟಿ ಬಾಳುವದು. ಮಾನಸಿಕ, ಬೌದ್ಧಿಕ ಮತ್ತು ಶಾರೀರಿಕ ಸಂಪತ್ತುಗಳನ್ನು ನಾನು ಪಡೆದು ಗೃಹಸ್ಥಾಶ್ರಮವನ್ನು ಸೇರಿದರೆ ಮಾತ್ರ ನನ್ನ ಗೃಹಸ್ಥಾಶ್ರಮದ ಇರುವಿಕೆಯು ಸುಖದಿಂದ ತುಂಬಿ ತುಳುಕುವದು.

ಪತಿ ಪತ್ನಿ ನಿರೋಗಿಯಾಗಿದ್ದರೆ ಮಾತ್ರ ಅವರ ಮಕ್ಕಳು ಸದೃಢ ರಾಗುವರು. ಬೇನೆಕೊಳಕ ಮಕ್ಕಳನು ನೋಡುವನಗೆ...

ದುಃಖದ ಮಾತು! ಚಿಕ್ಕಬಾಲಕರ ನಗೆಮುಖದಷ್ಟು ಪವಿತ್ರವಾದ ವಸ್ತು ಯಾವದು? ನಗೆಮುಖದ ಬಾಲಕರು ಹುಟ್ಟಬೇಕಾದರೆ, ಪೂರ್ವಾಶ್ರಮದಲ್ಲಿ ಪತಿಪತ್ನಿಯರ ಬ್ರಹ್ಮಚರ್ಯಾಶ್ರಮದ ಜೀವನವು ಉತ್ತಮವಾದದ್ದಿರಬೇಕು. ಬೀಜವಿದ್ದಂತೆ ಫಲವು. ಭೂಮಿಯ ಸಾಗುವಳಿಯು ಉತ್ತಮವಿದ್ದರೆ ಮಾತ್ರ ತುಂಬಿದ ತೆನೆಗಳು ಅಲ್ಲಾಡುವವು. ಅದರಂತೆ ಯಾವ ಗಂಡಹೆಂಡಿರ ಇರುವಿಕೆಯ ಶಕ್ತಿಯು ಕುಗ್ಗಿರುವದಿಲ್ಲವೋ ಅವರ ಮನೆಯಲ್ಲಿಯೇ ನಗೆಮುಖದ ನಿರೋಗಿ ಬಾಲಕರು ಅತ್ತಿತ್ತ ಕುಣಿಯುವದನ್ನು ಕಾಣಬಹುದು.

ಗೃಹಸ್ಥಾಶ್ರಮವು ಇಡೀ ಸಮಾಜದ ಅಡಿಗಲ್ಲು. ಸಮಾಜದ ಭವಿತವ್ಯ ಭಾಗ್ಯ ಗೃಹಸ್ಥಾಶ್ರಮವೆ ನಿರ್ಮಿಸುತ್ತದೆ. ಇದರ ಮಹಿಮೆಯನ್ನು ಎಲ್ಲರು ಹಾಡಿದ್ದಾರೆ."ಧನ್ಯೋ ಗೃಹಸ್ಥಾಶ್ರಮಃ''ಧನ್ಯ ಗೃಹಸ್ಥಾಶ್ರಮವು! ಆದರೆ ಇಂಥ ಧನ್ಯತೆಯು ಪುಕ್ಕಟೆಯಾಗಿ ಸಿಗುವ ಮಾತಲ್ಲ. ಇದು ಕಷ್ಟಸಾಧ್ಯವಾದದ್ದು. ಪ್ರಯತ್ನದಿಂದಲೆ ಸಿಕ್ಕುವಂತಹದು.

ಗಂಡಹೆಂಡಂದಿರ ದೇಹಾರೋಗ್ಯವು ಉತ್ತಮವಾಗಿರಬೇಕು. ಅದರಂತೆಯೇ ಅವರ ಮನಸ್ಸು ಪವಿತ್ರವಾಗಿರಬೇಕು. ಪರಸ್ಪರರಲ್ಲಿ ನಿಷ್ಠೆ ವಿಶ್ವಾಸಗಳಿರಬೇಕು. ಯಾವ ವಿವಾಹ ವಿಧಿಗಳಿಂದ ಗಂಡಹೆಂಡರ ಆಪ್ತತ್ವವು ಉಂಟಾಗುತ್ತದೆಯೋ ಆ ವಿವಾಹ ವಿಧಿಯ ಭಾಗವಾದ ಕೆಲವು ಮಂತ್ರಗಳು ಬಹಳೇ ಸುಂದರವಾಗಿವೆ.

ವಾಗ್‌ನಿಶ್ಚಯದ ಕಾಲಕ್ಕೆ ಅನ್ನುವ ಮಂತ್ರವು- " ಸಮಾನಿ ವ ಆಕೂತಿಃ ಸಮಾನಾ ಹೃದಯಾನಿ ವಃ। ಸಮಾನಮಸ್ತು ವೊ ಮನಃ ಯಥಾವಃ ಸುಸಹಾಸತಿ॥'' "ನಮ್ಮ ನಿಮ್ಮ ಉದ್ದೇಶವು, ಮನಸು ಮತ್ತು ಹೃದಯಗಳು ಒಂದಾಗಲಿ; ನಮ್ಮ ನಿಮ್ಮ ಎಲ್ಲ ಸಂಘಟನೆಗಳಿಗೆ ಬಲ ಬರುವಂತೆ ನೋಡಿಕೊಳ್ಳುವಾ.''

ವಿವಾಹ ಹೋಮದ ಕಾಲಕ್ಕೆ ವರನು ವಧುವಿಗೆ ಹೇಳುತ್ತಾನೆ. "ನಾನು ಆಕಾಶ, ನೀನು ಪೃಥ್ವಿ; ನಾನು ಸಾಮವೇದ, ನೀನು ಋಗ್ವೇದ. ನಾವಿಬ್ಬರು ಪರಸ್ಪರರನ್ನು ಪ್ರೀತಿಸುವಾ, ಶೋಭಿಸುವಾ, ನಿಷ್ಕಪಟತನದಿಂದ ನಡೆದುಕೊಂಡು ನೂರು ವರ್ಷ ಬಾಳುವಾ.''

ಗೃಹಪ್ರವೇಶದ ಕಾಲಕ್ಕೆ ವರನು ಅನ್ನುತ್ತಾನೆ- " ಹೇ ವಧೂ! ನೀನು ಅತ್ತೆ, ಮಾವ, ಮೈದುನ, ನಾದಿನಿಯರ ಮೇಲೆ ಅಧಿಕಾರವನ್ನು

ನಡೆಸುವಂಥವಳಾಗು. ಎಲ್ಲ ದೇವತೆಗಳು ನಮ್ಮ ಹೃದಯಮಂದಿರಗಳನ್ನು ತೆರೆಯಲಿ. ವರುಣನು ನಮ್ಮ ಮನಸ್ಸನ್ನು ನಿರ್ಮಲ ಮಾಡಲಿ. ವಿಧಾತಾ ಮತ್ತು ಸರಸ್ವತಿ ಇವರು ನಮ್ಮ ಜೀವನಗಳನ್ನು ಕೂಡಿಸಲಿ."

ವಿವಾಹ ಮಂತ್ರಗಳಲ್ಲಿ ಹೀಗೆ ಇರುವಿಕೆಯ ಮಹತ್ವವನ್ನು ತೋರುವ, ಹೆಣ್ಣುಮಕ್ಕಳ ಮಹತ್ವವನ್ನು ನಿದರ್ಶಿಸುವ ಹಲವಾರು ಮಂತ್ರಗಳಿವೆ. ವಿವಾಹ ಸೂಕ್ತದಲ್ಲಿ ವಧುವನ್ನು ಕರೆಯಲಾಗುವ ವಿಶೇಷಣಗಳು ಸೂಚಕವಾಗಿವೆ. ಅವಳನ್ನು ಅಘೋರ-ಚಕ್ಷು, ಶಿವಾ, ಸುಮನಾ, ಶ್ರದ್ಧೆಯುಳ್ಳವಳು, ವೀರಪ್ರಸೂ ಇವೆ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ.

ಲಗ್ನವೆಂದರೆ ಕೇವಲ ಬಾಹ್ಯಲಗ್ನವಲ್ಲ. ಲಗ್ನವೆಂದರೆ ಮನಸಿನ, ಹೃದಯದ ಕೂಡುವಿಕೆ. ವಧೂವರರು ಪರಸ್ಪರ ಮಾಲೆ ಹಾಕುವದೆಂದರೆ ತಮ್ಮ ನಿರ್ಮಲವಾದ ಹೃದಯ ಪುಷ್ಪಗಳನ್ನು ಅರ್ಪಿಸಿದಂತೆ. ಅಗ್ನಿಯ ಸುತ್ತು ಕೈಯಲ್ಲಿ ಕೈ ಹಿಡಿದು ನಡೆಯುವದೆಂದರೆ ಸಹಕಾರ. ಸತಿ-ಪತಿಗಳು ಕೂಡಿಯೆ ಇರುವದು, ಏಳುವದು, ಬಾಳುವದು, ಬೀಳುವದು. ವಿವಾಹ ಕಾಲದಲ್ಲಿ ಅವರ ಸುತ್ತಲೂ ನೂಲು ಸುತ್ತುತ್ತಾರೆ. ಅದರ ಅರ್ಥವಾದರೂ ಇನ್ನು ಇವರ ಜೀವನ ಪಟವು ಒಂದು; ಅದರಲ್ಲಿ ಬೇರೆತನವಿಲ್ಲ.

ಬರೀ ದೇಹವನ್ನು ಪ್ರೀತಿಸಿದರೆ ನಿಜವಾದ ಪ್ರೀತಿ ಸಾಧ್ಯವಿಲ್ಲ. ದೇಹವು ಕುರೂಪವಿದ್ದರೆ ಪ್ರೀತಿಯು ಅಳಿದುಹೋಗುವದು. ನೀವು ಪ್ರೀತಿಸುವದನ್ನು ದೇಹದಿಂದ ಆರಂಭಿಸಬಹುದು; ಆದರೆ ದೇಹಾತೀತರಾಗಲು ಪ್ರಯತ್ನಪಡಬೇಕು. ದೇಹದಲ್ಲಿ ವಾಸವಾಗಿರುವ ಆತ್ಮನನ್ನು ಕಾಣಲೆತ್ನಿಸಬೇಕು. ಮನೆ ಸೇರಬೇಕಾದರೆ ಮೊದಲು ಅಂಗಳ, ಆ ಮೇಲೆ ನಡುಮನೆ, ಕೊನೆಗೆ ದೇವರಮನೆ ಸೇರುತ್ತೇವೆ. ದೇಹವನ್ನೇ ಪ್ರೀತಿಸುವ ಪತಿ ತನ್ನನ್ನು ಅವಮಾನಿಸುತ್ತಾನೆಂದು ಸತಿ ತಿಳಿಯಬೇಕು. ಈ ಮಣ್ಣಿನ ಮುದ್ದೆಯೆಂದರೆ ನಾನಲ್ಲ. ಸತಿಪತಿಗಳೆಂದರೆ ಬರೀ ಮಣ್ಣಿನ ಮಾಂಸದ ಮುದ್ದೆಗಳಲ್ಲ. ಒಬ್ಬರನ್ನೊಬ್ಬರು ನೋಡಿದೊಡನೆ ಸತಿಪತಿಯರು ತಮ್ಮ ತಮ್ಮಲ್ಲಿದ್ದ ದಿವ್ಯತೆಯನ್ನು ಕಾಣಬೇಕು. ಭೋಗಗಳನ್ನು ಅನುಭವಿಸುತ್ತ ಒಂದು ದಿನ ವಿರಕ್ತರಾಗಬೇಕು. ದೇಹದಲ್ಲಿ ಹೊಕ್ಕು ದೇಹಾತೀತರಾಗಿ ಆತ್ಮನನ್ನು ಆತ್ಮನೊಡನೆ ಕೂಡಿಸಬೇಕು.

ದೀಪದ ಕಾಜಿಗೆ ಒಳಗಿದ್ದ ಜ್ಯೋತಿಯಿಂದಲೆ ಮಹತ್ವವು. ನಾವು ಜ್ಯೋತಿಯ ಉಪಾಸಕರಾಗಬೇಕು. ಆತ್ಮದ ಮಹತ್ವವು ತಿಳಿಯದ

ಹೊರತು ನಿಜವಾದ ಪ್ರೇಮವು ಇರುವದಿಲ್ಲ. ಸತಿಯ ಆತ್ಮವನ್ನು ಅರಿತ ಪತಿಯು ಅವಳಿಗೆ ಜ್ಞಾನವನ್ನು ಕೊಟ್ಟು ಗುರಿಯನ್ನು ತಿಳಿಸುವನು. ಬರಿ ಆಭರಣಗಳಿಂದ ಶೃಂಗರಿಸುತ್ತ ಕೂಡ್ರುವಂತಿಲ್ಲ. ಅದರಂತೆ ಪತಿಯಲ್ಲಿಯ ದಿವ್ಯತೆಯನ್ನು ಕಂಡ ಹೆಂಡತಿಯು ಅವನಿಗೆ ವಾಮಮಾರ್ಗದಿಂದ ದುಡ್ಡು ಗಳಿಸಲು ಕೊಡುವದಿಲ್ಲ.

ಇದರಂತೆ ಗೃಹಸ್ಥಾಶ್ರಮದಲ್ಲಿ ಪಾವಿತ್ರ್ಯವನ್ನು ಬೀರಬೇಕಾಗಿದೆ, ತರಬೇಕಾಗಿದೆ. ಒಬ್ಬರಿಗೊಬ್ಬರು ಎಚ್ಚರದಿಂದಿರಲು ಹೇಳುತ್ತ ನೆಡವಿನಿಂದ ಪ್ರೀತಿಯಿಂದ ಬಾಳಿ ಒಂದು ದಿನ ಅಣ್ಣ ತಂಗಿಯರಂತೆ ಇರಬೇಕಾಗಿದೆ. ಆಸಕ್ತಿಮಯ ಪ್ರೇಮದೊಳಗಿಂದ ಅನಾಸಕ್ತ ಪ್ರೀತಿಯನ್ನು ನಿರ್ಮಿಸಬೇಕಾಗಿದೆ. ಕೆಸರಿನಲ್ಲಿಯೇ ಕಮಲವನ್ನು ಅರಳಿಸುವದು. ಸಂಸಾರದಲ್ಲಿಯೇ ಮೋಕ್ಷದ ಸಿರಿಯನ್ನು ಕಾಣಬೇಕು.

ಭಾರತೀಯ ಸಂಸ್ಕೃತಿಯಲ್ಲಿ ಹೇಳಲಾದ ಗೃಹಸ್ಥಾಶ್ರಮವೂ ಮೋಕ್ಷದ ಮಾರ್ಗದ ಕಡೆಗೆ ಒಯ್ಯುವ ಒಂದು ಮೆಟ್ಟು. ನಿರಂತರವಾಗಿ ಇದೇ ಆಶ್ರಮದಲ್ಲಿ ಉಳಿಯುವಂತಿಲ್ಲ. ಗೃಹಸ್ಥಾಶ್ರಮದಲ್ಲಿದ್ದು ಮಕ್ಕಳನ್ನು ಪಡೆದು ವಾಸನೆ ವಿಕಾರಗಳನ್ನು ತಣಿಸಿ, ತ್ಯಾಗದ ಬೇರೆ ಪಾಠಗಳನ್ನು ಕಲಿತು, ಕೊನೆಗೆ ಚಿಕ್ಕ ಸಂಸಾರದ ತ್ಯಾಗಮಾಡಿ ವಿಶ್ವಸಂಸಾರವನ್ನು ಸೇರಬೇಕಾಗಿದೆ ಎಂಬ ಮಾತನ್ನು ಸತಿಪತಿಯರು ಮರೆಯತಕ್ಕದ್ದಲ್ಲ.

ಗೃಹಸ್ಥಾಶ್ರಮ ! ಇದು ಒಂದು ಆಶ್ರಮ. ಆಶ್ರಮದಲ್ಲಿರತಕ್ಕ ಪಾವಿತ್ರ್ಯವು ಇಲ್ಲಿಯೂ ಇರತಕ್ಕದ್ದು. ಇದು ಸತಿಪತಿ ಮಕ್ಕಳ ಆಶ್ರಮ. ಎಲ್ಲರೂ ಸಹಕರಿಸಿ ಪ್ರೇಮದಿಂದ ಇರುವದು ಇರುತ್ತದೆ. ಪ್ರತಿಯೊಬ್ಬರ ಕುಲದಲ್ಲಿ ಕೆಲವೊಂದು ಪರಂಪರೆ ಆಚಾರ ಇದ್ದೇ ಇರುತ್ತವೆ. ಇವನ್ನು ಕುಲದವರು ನಡೆಸುವದಿರುತ್ತದೆ. ನನ್ನ ಕುಲದಲ್ಲಿ ಯಾರೂ ಕಳವು ಮಾಡಲಿಕ್ಕಿಲ್ಲ. ಸುಳ್ಳು ಆಡಲಿಕ್ಕಿಲ್ಲ, ಅಪಮಾನ ಸಹಿಸಲಿಕ್ಕಿಲ್ಲ, ಅತಿಥಿಯು ವಿಮುಖನಾಗಿ ಹೋಗಲಿಕ್ಕಿಲ್ಲ, ಹೀಗೆ ವಿಶಿಷ್ಟ ಕುಲಾಚಾರಗಳು ಇರುತ್ತವೆ.

ಇಂಥ ಕುಲಪರಂಪರೆಗಾಗಿ ಸರ್ವಸ್ವದ ತ್ಯಾಗ ಮಾಡಿದ ಹಲವಾರು ಉದಾಹರಣೆಗಳನ್ನು ನಾವು ನೋಡಬಹುದು. ಸ್ವಪ್ನದಲ್ಲಿ ಕೊಟ್ಟ ವಚನವನ್ನು ಪಾಲಿಸಲು ಹರಿಶ್ಚಂದ್ರನು ಸರ್ವಸ್ವವನ್ನು ತ್ಯಜಿಸಿದನು. ಆವನ

ಹೆಂಡತಿಯೂ, ಚಿಕ್ಕ ಬಾಲಕನಾದ ರೋಹಿದಾಸನೂ ಅವನೊಡನೆ ಕಾಡಿಗೆ ಹೋದರು. ರೋಹಿದಾಸನಿಗೆ ಬರಬೇಡವೆಂದು ಹರಿಶ್ಚಂದ್ರನೂ ಹೇಳಲಿಲ್ಲ; ತನ್ನ ಮಗನು ತನ್ನ ಜೊತೆಯಲ್ಲಿದ್ದು ತಮ್ಮ ಕುಲಪರಂಪರೆಯನ್ನು ಕಾಯುವದನ್ನು ಕಲಿಯಲೆಂದು. ಶ್ರೀಯಾಳ ಚಾಂಗುಣಿಯರು ಅತಿಥಿಗೆ ತಮ್ಮ ಮಗನನ್ನೆ ಅರ್ಪಿಸಿದರು.

ಗೃಹಸ್ಥಾಶ್ರಮದ ಇಂಥ ಉದಾತ್ತ ಮಾದರಿಗಳು ಎಲ್ಲಿವೆ ಇಂದು ? ಪತಿ ಸೆರೆಮನೆಗೆ ಹೋದರೆ ಹೆಂಡತಿ ಅವನನ್ನು ಹಿಂಬಾಲಿಸುವದಿಲ್ಲ. ಸತಿಯ ಬೆನ್ನ ಹಿಂದೆ ಪತಿ ಹೋಗುವದಿಲ್ಲ. ಮಕ್ಕಳ ಬೆನ್ನ ಹಿಂದೆ ತಾಯಿ ತಂದೆ ಹೋಗುವದಿಲ್ಲ. ಒಂದೇ ಧ್ಯೇಯದ ಪೂಜೆಯೇ ಇಲ್ಲ. ಭಿನ್ನ ಧ್ಯೇಯಗಳಿದ್ದರೆ ಮಾತು ಬೇರೆ. ಆದರೆ ಆಸಕ್ತಿ ಭಯಗಳಿಂದ ಹಿಂದುಳಿದರೆ ಮಾತ್ರ ಗರ್ಹಣೀಯವಾದ ಸಂಗತಿ.

ಇದಕ್ಕೆ ಕಾರಣವೇನು ? ಮನೆಯಲ್ಲಿ ಜ್ಞಾನಚರ್ಚೆ ಇಲ್ಲ. ಗಂಡ ಹೆಂಡತಿಗೆ ತಾನು ಓದಿದ್ದು, ಕೇಳಿದ್ದು ಹೇಳುವ ಪರಿಪಾಠವಿಲ್ಲ. ದೇಶದಲ್ಲಿ ಹಬ್ಬಿದ, ಹಬ್ಬುವ ವಿಚಾರಗಳ ಮಾತು ಮನೆಯ ಮಾತಾಗಲೊಲ್ಲವು. ಪತಿ ಸತಿಯ ಗುರು. ಆದರೆ, ಈ ಪತಿ ತನ್ನ ಕರ್ತವ್ಯವನ್ನು ಮಾಡುತ್ತಿದ್ದಾನೆಯೋ ? ಜ್ಞಾನದಾನ ವಿಚಾರದಾನ ಮಾಡುತ್ತಾನೆಯೋ ? ಸುತ್ತುಮುತ್ತಲು ನಡೆದ ಸಂಗತಿಗಳನ್ನು ಹೆಂಡತಿಗೆ ತಿಳಿಸಿ ಹೇಳುತ್ತಾನೆಯೋ ?

ಹೆಂಡತಿ ಗಂಡನಿಗೆ ರೊಟ್ಟಿಯನ್ನು ಮಾಡಿ ಕೊಡುತ್ತಾಳೆ. ಆದರೆ ಗಂಡನು ಹೆಂಡತಿಗೆ ವಿಚಾರದ ಅನ್ನವನ್ನು ನೀಡುತ್ತಾನೆಯೋ ? ಇಂಥ ಮಾತೇ ಅವನ ಮನಸ್ಸಿನಲ್ಲಿ ಹೊಳೆಯುವದಿಲ್ಲ. ತನ್ನ ಹೆಂಡತಿಗೂ ಬುದ್ಧಿ ಮನಸ್ಸು ಹೃದಯಗಳಿವೆ ಎಂಬ ಅರಿವೇ ಅವನಿಗಿರುವದಿಲ್ಲ. ಆದ್ದರಿಂದ ಪ್ರಪಂಚದಲ್ಲಿ ನಡೆದ ಮಾತು ಮನೆಯಲ್ಲಿ ಎತ್ತುವದಿಲ್ಲ. ಹುಡುಗರಿಗಂತೂ ತಿಳಿಯುವ ಗತಿಯೇನು ? ಹೆಂಡತಿ ಬೆಳೆಯುವದು ಅಜ್ಞಾನದಲ್ಲಿ; ಮಕ್ಕಳನ್ನು ಬೆಳೆಸುವವಳು ಅವಳು.

ಇದು ಭಾರತೀಯ ಸಂಸ್ಕೃತಿಯು ಹೇಳಿದ ಗೃಹಸ್ಥಾಶ್ರಮವಲ್ಲ. ಬಕಾಸುರನ ತುತ್ತು ಆಗುವ ಸಗತಿ ಬಂದಾಗ ಆ ಬ್ರಾಹ್ಮಣ ಕುಟುಂಬದಲ್ಲಿದ್ದ ಪ್ರತಿಯೊಂದು ವ್ಯಕ್ತಿಯು ತಾನು ತುತ್ತಾಗುವೆನೆಂದು ಮುಂದೆ ಬಂದಿತು. ಇದು ನಿಜವಾದ ಗೃಹಸ್ಥಾಶ್ರಮದಲ್ಲಿರುವವರ, ಒಂದೇ ವಿಚಾರದಿಂದ ಒಂದೇ ಧ್ಯೇಯದಿಂದ ನಡೆದುಕೊಳ್ಳುವವರ ಮಾದರಿ.

ಸಂಯಮದ ಪಾಠ ಕಲಿಸುವ ಸಾಲೆ ಗೃಹಸ್ಥಾಶ್ರಮ. ಇದೊಂದು ತಪಶ್ಚರ್ಯೆ. ನಮ್ಮ ಮನಸಿನ ಒಲವುಗಳನ್ನು ಅಂಕಿತದಲ್ಲಿಡಲು ನಾವು ಇಲ್ಲಿ ಕಲಿಯುತ್ತೇವೆ. ಚಿಕ್ಕ ಮಕ್ಕಳನ್ನು ಜೋಪಾನ ಮಾಡುವದಿರುತ್ತದೆ. ಅವರ ಲಹರಿಗಳಂತೆ ನಡೆಯಬೇಕಾಗುತ್ತದೆ. ಹೆಜ್ಜೆ ಹೆಜ್ಜೆಗೆ ಕೋಪ ಬಂದರೆ ನಡೆಯುವದು ಹೇಗೆ ? ಗೃಹಸ್ಥಾಶ್ರಮವು ನಮಗೆ ತ್ಯಾಗದ ಪಾಠಗಳನ್ನು ಕಲಿಸುತ್ತದೆ. ಸತಿ ಪತಿಗಾಗಿ, ಪತಿ ಸತಿಗಾಗಿ, ಸತಿಪತಿಗಳಿಬ್ಬರು ಮಕ್ಕಳಿಗಾಗಿ, ಹೀಗೆ ಒಬ್ಬರಿಗಾಗಿ ಇನ್ನೊಬ್ಬರು ತ್ಯಾಗಮಾಡುತ್ತಾರೆ. ಎರಡನೆಯವರು ಆನಂದದಲ್ಲಿರುವವನ್ನು ನೋಡಿ ಆನಂದಪಡುವದೇ ಗೃಹಸ್ಥಾಶ್ರಮದ ಪಾಠ.

ಅರ್ಧನಾರೀನಟೇಶ್ವರ ಮಾನವನ ಗುರಿಯು. ಪುರುಷನು ಕಠೋರನು ಮತ್ತು ಸ್ತ್ರೀಯು ಮೃದುವು ಇರುತ್ತಾರೆ. ಸತಿಯಿಂದ ಪತಿಯು ಮಿದುವಾಗುವದನ್ನು ಕಲಿಯಬೇಕು. ಪತಿಯಿಂದ ಸತಿ ಕಠೋರಳಾಗುವದನ್ನು ಕಲಿಯಬೇಕು. ಪ್ರಸಂಗ ಬಂದಂತೆ ಬೆಣ್ಣೆಗಿಂತ ಮಿದುವಾಗಬೇಕು, ವಜ್ರದಕಿಂತ ಕಠೋರನಾಗಲೂ ಬೇಕು. ಕೇವಲ ಸ್ತ್ರೀಯಾಗಲಿ, ಪುರುಷನಾಗಲಿ ಅಪೂರ್ಣರು. ಇಬ್ಬರ ಗುಣದ ಕೂಡುವಿಕೆಯಲ್ಲಿ ಪೂರ್ಣತೆ ಇದೆ. ಇದನ್ನೆಲ್ಲಾ ತಿಳಿಯುಕೊಳ್ಳುವ ಶಾಲೆ ಗೃಹಸ್ಥಾಶ್ರಮ. ಮಕ್ಕಳನ್ನು ಉತ್ತಮ ನಾಗರಿಕರಾಗುವಂತೆ ತರಬೇತಿ ಮಾಡುವದು ತಾಯಿ ತಂದೆಯರ ಕರ್ತವ್ಯ. ಹುಡುಗರು ಚನ್ನಾಗಬೇಕಾದರೆ ತಾಯಿ ತಂದೆಯರು ನೆಟ್ಟಗಿರಬೇಕಾಗುತ್ತದೆ. "ಹಿರೇ ಅಕ್ಕನ ಚಾಳಿ ಮನೆಮಂದಿಗೆಲ್ಲ." ಆಚಾರ, ಉಚ್ಚಾರ, ವಿಚಾರ ಎಲ್ಲವೂ ಚೆನ್ನಾಗಿರಬೇಕು. ಸಂಸಾರದಲ್ಲಿ ಪ್ರೇಮಸಹಕಾರ ಕರ್ತವ್ಯಗಳು ಮಕ್ಕಳಿದಿರು ಇರಬೇಕು. ತಾಯಿ ತಂದೆಯರು ದಿನಾಲು ಬಡಿದಾಡಿದರೆ ಮಕ್ಕಳ ಮನಸಿನ ಮೇಲೆ ಅನಿಷ್ಟ ಪರಿಣಾಮವಾಗುತ್ತದೆ. ಸಣ್ಣವರಿರುವಾಗ ಮನಸಿನ ಮೇಲೆ ಆದ ಪರಿಣಾಮಗಳು ಬಹುಕಾಲ ಬಾಳುತ್ತವೆ. ಆದ್ದರಿಂದ ಮಕ್ಕಳು ಉತ್ತಮರಾಗುವಂತೆ ಸಂಸಾರದಲ್ಲಿಯ ವಾತಾವರಣವನ್ನು ಕಲ್ಪಿಸಬೇಕು. "ಬೆಕ್ಕು ಅಡ್ಡಬಂದರೆ ಕೆಲಸವಾಗುವದಿಲ್ಲ." ಇವೆ ಮುಂತಾದ ಹುಚ್ಚು ಕಲ್ಪನೆಗಳು ಇಪ್ಪತ್ತನೆ ಶತಮಾನದ ಬಾಲಕರ ಮನಸ್ಸಿನಲ್ಲಿ ಬರದಂತೆ ಜಾಗ್ರತೆ ವಹಿಸಬೇಕು. ಮನಸ್ಸು ದುರ್ಬಲವಾಗಲು ಅನುವಾಗುವಂಥ ಎಲ್ಲ ಪ್ರಸಂಗಗಳು, ಸನ್ನಿವೇಶಗಳು ಬಾಲಕರ ಜೀವನದಲ್ಲಿ ಬರದಂತೆ ನೋಡಿಕೊಳ್ಳಬೇಕು. ಎಷ್ಟು ಮಕ್ಕಳನ್ನು ಜೋಪಾನ

ಮಾಡುವದು ಸಾಧ್ಯವಿದೆ, ಅವರ ವಿಕಾಸಕ್ಕೆ ಅನುವು ಮಾಡಿಕೊಡಲು ಬರುವದೊ, ಇದನ್ನು ತಾಯಿತಂದೆಯರು ನೋಡಬೇಕು. ಯಾಕಂದರೆ ಮುಂದೆ ವಾನಪ್ರಸ್ಥ ಮತ್ತು ಸನ್ಯಾಸ ಆಶ್ರಮವನ್ನು ಸೇರಬೇಕಾಗಿರುವುದು. ವಾನಪ್ರಸ್ಥಾಶ್ರಮ ಸ್ವೀಕರಿಸುವ ಕಾಲಕ್ಕೆ ಯಾವ ಹೊಣೆಯೂ ಇರಬಾರದು. ವಯಸ್ಸಿನ ೭೦ನೇ ವರುಷಕ್ಕೆ ವಾನಪ್ರಸ್ಥ ಸ್ವೀಕರಿಸುವದಿದ್ದರೆ ಕೊನೆಯ ಮಗನು ಆಗ ಕನಿಷ್ಟ ೨೦ ವರ್ಷದವನಾದರೂ ಇರಬೇಕು. ಅಂದಮೇಲೆ ವಯಸ್ಸಿನ ೪೦ನೇ ವರುಷವೇ ಮಕ್ಕಳನ್ನು ಹಡೆಯುವದನ್ನು ತಡೆಯಬೇಕು. ಅದರಂತೆಯೇ ಈ ವಯಸ್ಸಿನಲ್ಲಿ ೪-೫ ಮಕ್ಕಳಿಗಿಂತ ಹೆಚ್ಚು ಮಕ್ಕಳನ್ನು ಹಡೆಯಬಾರದು. ತಮಗೆ ಜೋಪಾನ ಮಾಡಲು, ಶಿಕ್ಷಣ ಕೊಡಲು ಸಾಧ್ಯವಿದ್ದಷ್ಟು ಮಕ್ಕಳನ್ನೇ ಹಡೆಯಬೇಕು. ಇದೆಲ್ಲ ಸಾಧಿಸಲು ಸಂಯಮವು ಒಂದೇ ಮಾರ್ಗ. ಸಂಯಮ ಸಾಧ್ಯವಿಲ್ಲದವರು ಸಂತತಿ ನಿಯಮನದ ಸಾಧನೆಗಳನ್ನು ಅವಲಂಬಿಸಬೇಕು. ಆದರೆ ಸಂಯಮವೇ ಮಾನವನ ನಿಜವಾದ ಶೋಭೆ.

ಸಂಯಮ, ತ್ಯಾಗ, ಪ್ರೀತಿ, ಸಹಕಾರ ಮತ್ತು ನಮ್ಮ ವಾಸನಾ ವಿಕಾರಗಳನ್ನು ತಡೆಯುವದನ್ನು ಗೃಹಸ್ಥಾಶ್ರಮವು ಕಲಿಸುತ್ತದೆ. ಇರುವಿಕೆಯ ಬೇರೆ ಬೇರೆ ಅನುಭವಗಳನ್ನು ಪಡೆಯುತ್ತೇವೆ. ಇರುವಿಕೆಯಲ್ಲಿಯ ಹುಳಿ ಹೋಗಿ ಅದರಲ್ಲಿ ಸವಿ ಬರುತ್ತದೆ. ಈ ಆಶ್ರಮದಲ್ಲಿ ಮರ್ಯಾದಿತ ಕುಟುಂಬದ ಸೇವೆಯನ್ನು ಮಾಡಬೇಕಾಗುತ್ತದೆ. ಈ ಸೇವೆ ಮಾಡುವಾಗ ನಾವು ಕುಟುಂಬದಲ್ಲಿ ಕಲಿತ ಗುಣಗಳ ಉಪಯೋಗವನ್ನು ಸಮಾಜಕ್ಕೆ ಮಾಡಿಕೊಡುವದಿರುತ್ತದೆ. ಸಮಾಜವೇ ಕುಟುಂಬವಾಗುತ್ತದೆ. ಹೀಗೆ ಆತ್ಮದ ರಾಜ್ಯವನ್ನು ಹೆಚ್ಚಿಸುವದಿರುತ್ತದೆ.

ವಾನಪ್ರಸ್ಥನೆಂದರೆ ವನವನ್ನು ಸೇರುವವನು. ಭವನವನ್ನು ಬಿಟ್ಟು ವನವನ್ನು ಸೇರುವವನು. ಇವರು ವನಗಳಲ್ಲಿ ಆಶ್ರಮಗಳನ್ನು ಸ್ಥಾಪಿಸಿ ತಮ್ಮ ಅನುಭವದ ಲಾಭವನ್ನು ಜನಕ್ಕೆ ಕೊಡತಕ್ಕವರು. ಇವರಂಥ ಉತ್ತಮ ಶಿಕ್ಷಕರು ಯಾರೂ ಇಲ್ಲ. ಶಿಕ್ಷಕರೆಂದರೆ ಒಳ್ಳೆ ಅನುಭವಿಕರೂ, ನಗೆಮುಖದವರೂ, ಶಾಂತ ಸ್ವಭಾವದವರೂ ಇರಬೇಕು. ವಾನಪ್ರಸ್ಥರಿಗೆ ಹೊಟ್ಟೆಗಾದರೂ ಬಹಳ ಬೇಕಾಗಿಲ್ಲ. ಇಂದು ನಮ್ಮ ದೇಶದಲ್ಲಿ ಸಾವಿರಾರು ಸೇವಾ ನಿವೃತ್ತರು ಇದ್ದಾರೆ. ನಿಜವಾಗಿ ಇವರು ವೇತನವಿಲ್ಲದೆ ತಮ್ಮ ಇರುವಿಕೆಯ ಅನುಭವದ ಜ್ಞಾನವನ್ನು ಎಲ್ಲರಿಗೂ ಮಾಡಿಕೊಡಬೇಕು. ಆಶ್ರಮಗಳನ್ನು

ಆರಂಭಿಸಬೇಕು. ಎಂದರೆ ಇಡೀ ದೇಶದಲ್ಲಿ ಶಿಕ್ಷಣ ಪ್ರಸಾರವು ಹತ್ತು ವರ್ಷಗಳ ಕಾಲದಲ್ಲಿ ಆಗುವದು. ಆದರೆ ಭಾರತೀಯ ಸಂಸ್ಕೃತಿಯನ್ನ ಹೊಗಳುತ್ತಾ, ತಮ್ಮ ತಮ್ಮ ಮೊಮ್ಮಕ್ಕಳನ್ನು ಆಡಿಸುತ್ತ ಬೆಂಗಳೂರೊ, ಪುಣೆಯೋ, ಧಾರವಾಡೋ, ಇಂಥ ಊರಲ್ಲಿ ಕಟ್ಟಡಗಳನ್ನು ಕಟ್ಟಿಸಿ ಕೊಂಡು ಕೂತುಬಿಡುತ್ತಾರೆ. ದೇಶದಲ್ಲಿದ್ದ ಎಲ್ಲ ಮೊಮ್ಮಕ್ಕಳನ್ನು ಆಡಿಸು ವದದೆ ಎಂಬ ಮಾತನ್ನು ಇವರು ಮರೆತುಬಿಟ್ಟದ್ದಾರೆ. ನಮ್ಮ ಸಮಾಜದಲ್ಲಿ ವಾನಪ್ರಸ್ಥರು ಯಾರೂ ಇಲ್ಲ. ಕುಟುಂಬದ ಮೇಲಿದ್ದ ಆಸಕ್ತಿಯನ್ನು ಬಿಟ್ಟು ಸಮಾಜ ಸೇವೆಯನ್ನು ನಿಸ್ವಾರ್ಥತನದಿಂದ ಮಾಡುವವರೇ ವಾನಪ್ರಸ್ಥರು.

ಇದಾದ ಮೇಲೆ ಸನ್ಯಾಸ ! ಒಂದು ವಿಶಿಷ್ಟ ಸಮಾಜದ ಸೇವೆಯನ್ನು ಮಾಡಬೇಕು ಎಂಬ ನಿರ್ಬಂಧವು ಇವರ ಮೇಲಿಲ್ಲ ! ಸನ್ಯಾಸಿಗಳಿಗೆ ಹಿಂದು, ಮುಸಲ್ಮಾನ, ಕ್ರಿಶ್ಚನ ಮೊದಲಾದ ಭೇದಗಳಿಲ್ಲ. ಭೇದದಾಚೆಗೆ ಹೋಗಿ ಅವರು ಎಲ್ಲರನ್ನು ಪ್ರೀತಿಸುವರು. ಪಶುಪಕ್ಷಿ, ಹುಳಹುಪ್ಪಡಿ, ಗಿಡಗಂಟಿ ಸಹ ಅವರ ಗೆಳೆಯರು ಅಂದಮೇಲೆ ಮಾನವರಲ್ಲಿ ಭೇದ ಮಾಡುವದಂತೂ ದೂರೇ ಉಳಿಯಿತು. ಈ ಭೇದದ ಕೆಸರಿನ ಆಚೆಗೆ ಅದೆ ಇವರ ಇರುವಿಕೆ.

ಸನ್ಯಾಸವೆಂದರೆ ಆತ್ಮೀಯ ಭಾವನೆಯನ್ನು ಅಳಿಸುವದು. ಸನ್ಯಾಸಿಯ ದೃಷ್ಟಿಯು ಸಮದೃಷ್ಟಿಯು. ಸನ್ಯಾಸಿಯು ಸೂರ್ಯನ ಕಿರಣದಂತೆ ಎಲ್ಲರಿಗಾಗಿ ಇದ್ದಾನೆ. ಅವನು ಗಾಳಿಯಂತೆ ಎಲ್ಲರಿಗೂ ಜೀವವನ್ನು ಕೊಡುವನು. ಸೂರ್ಯನಂತೆ ಪಾವಿತ್ರ್ಯ ಮತ್ತು ಪ್ರಕಾಶವನ್ನು ಕೊಡುವನು.

ಹೀಗೆ ಕೊನೆಗೆ ನಾಲ್ಕು ಆಶ್ರಮದೊಳಗಿಂದ ಪಾರಾಗಿ ನಿರಹಂಕಾರಿಯಾಗಿ ವಿಶ್ವಾಕಾರನಾಗುವನು. ನನ್ನ ಆತ್ಮವು ಬೆಳೆದು ಕೊನೆಗೆ ಇಡೀ ಜಗತ್ತನ್ನು ಪ್ರೀತಿಯಿಂದ ಅಪ್ಪಿಕೊಳ್ಳಬೇಕು. ಇಂದು ನಮ್ಮ ಸಮಾಜದಲ್ಲಿ ಬ್ರಹ್ಮಚರ್ಯವು ಲೋಪವಾಗಿದೆ. ವಾನಪ್ರಸ್ಥ ಸನ್ಯಾಸ ಆಶ್ರಮಗಳ ಹೆಸರು ಮಾತ್ರ ಉಳಿದಿವೆ. ಏನೋ ಹೇಗೋ ಬದುಕಿ ಉಳಿದಿದೆ ಗೃಹಸ್ಥಾಶ್ರಮ; ಅದು ನಿಸ್ತೇಜ ಮತ್ತು ಅಳಬುರುಕವಾಗಿ ಬದುಕುತ್ತಿದೆ.

ವರ್ಣಾಶ್ರಮ ಎಲ್ಲಿಯಾದರೂ ಇದೆಯೋ ಎಂದು ನಾನು ನೋಡಲು ಪ್ರಯತ್ನಿಸಿದೆ. ನನಗಂತೂ ಎಲ್ಲಿಯೂ ಕಂಡುಬರಲಿಲ್ಲ. ವರ್ಣಧರ್ಮದ ಪ್ರಯೋಗಗಳಂತೂ ಸ್ವರಾಜ್ಯವಿಲ್ಲದೆ ಸಾಧ್ಯವಿಲ್ಲ. ಆಶ್ರಮ ಧರ್ಮಗಳು

ಪ್ರತಿಯೊಬ್ಬರ ವಿವೇಕ ದೃಷ್ಟಿಯಲ್ಲಿಯೇ ಹುಟ್ಟಬೇಕಾಗಿವೆ. ಇವನ್ನು ಯಾರ ಮೇಲೂ ಹೇರುವದು ಅಶಕ್ಯವಾದ ಮಾತು. ಒಂದು ವೇಳೆ ವರ್ಣವನ್ನು ಹೇರಬಹುದು. ಆದರೆ ಆಶ್ರಮ ಧರ್ಮವನ್ನು ಹೇರುವದು ಸಾಧ್ಯವಿಲ್ಲ. ವಾನಪ್ರಸ್ಥ ಸನ್ಯಾಸವೆಂದರೆ ಕ್ಯಾಂವಿಬಣ್ಣದ ಬಟ್ಟೆಗಳಲ್ಲ. ಆನಂದ ಮೂರ್ತಿ ಎಂದು ಕರೆದರೆ ಸನ್ಯಾಸಿಯಾಗುವನೇ ? ಸನ್ಯಾಸವು ಉದ್ಯೋಗವಲ್ಲ. ಒಳಗಿನಿಂದ ಬರಬೇಕು ಆ ಪ್ರೇರಣೆಯು. ಆತ್ಮದ ವಿಕಾಸಕ್ಕಾಗಿ ಉಕ್ಕೇರಿ ಬರಬೇಕು. ಆದರೆ ಕ್ರಮೇಣ ನಾನು ಬೆಳೆಯಬೇಕೆಂಬ ಹಸಿವು ಬೇಕು.

ಸಮಾಜಕ್ಕೆ ಇಂದು ಸಾವಿರಾರು ವಾನಪ್ರಸ್ಥರ ಸನ್ಯಾಸಿಗಳ ಆವಶ್ಯಕತೆ ಇದೆ. ನೂರಾರು ಸಂಘಟಕರು ಬೇಕು. ಸಾವಿರಾರು ಪ್ರಚಾರ ಕಾರ್ಯ ಮಾಡುವವರು ಬೇಕು. ಉದ್ಯೋಗ, ಆರೋಗ್ಯ, ಶಿಕ್ಷಣ, ಆರ್ಥಿಕ ಮೊದಲಾದ ಹಲವಾರು ವಿಧದ ಜ್ಞಾನವನ್ನು ಸಮಾಜದಲ್ಲಿ ಹಬ್ಬಿಸುವವರು ಬೇಕು. ಇಂಥ ವ್ರತವನ್ನು ಕೈಕೊಳ್ಳುವವರು ಬೇಕಾಗಿದ್ದಾರೆ. ಹೌದು ! ಬೇಕು ! ಆದರೆ ಸಿಗುವವರು ಯಾರು ? ವರ್ಣಾಶ್ರಮ ಸಂಘಗಳೇನೋ ಅಲ್ಲಲ್ಲಿ ಒಂದೆರಡು ತಲೆದೋರುತ್ತವೆ. ಆದರೆ ಗೃಹಸ್ಥಾಶ್ರಮದ ಆಚೆಗೆ ಹೋಗುವ ಧೈರ್ಯವಿಲ್ಲ.

ಇಂದು ಮಹಾತ್ಮಾಜಿಯವರು ವರ್ಣಾಶ್ರಮ ಧರ್ಮವನ್ನು ಜೋಪಾನ ಮಾಡುತ್ತಿದ್ದಾರೆ. ಅವರು ಅನೇಕರಿಗೆ ವರ್ಣವನ್ನು ಕೊಡುತ್ತಲಿದ್ದಾರೆ. "ಬನ್ನಿರಿ ಬನ್ನಿರಿ ! ಏನಿವೆ ನಿಮ್ಮ ಒಲವುಗಳು ? ಗೋರಕ್ಷಣ, ಖಾದಿ, ಜೇನುಸಾಕುವದು, ಹಳ್ಳಿಗಳಲ್ಲಿ ಕಲಿಸುವದು, ಕಾಗದ ಮಾಡುವದು, ಸಮಾಜದ ಆರೋಗ್ಯವನ್ನು ಸುಧಾರಿಸುವದು, ಯಾವದಿದೆ ನಿಮ್ಮ ಮನಸ್ಸಿನ ಒಲವು ? ನಿಮ್ಮ ಮನಸಿನ ಒಲವಿಗೆ ಹೊಂದುವಂಥ ಕಾರ್ಯಕ್ಷೇತ್ರಗಳನ್ನು ಅವರು ಕಲ್ಪಿಸಿದ್ದಾರೆ ಮತ್ತು ನಿರ್ಮಿಸಿದ್ದಾರೆ. ಇದು ನಿಜವಾದ ವರ್ಣಧರ್ಮವನ್ನು ಆಚರಣದಲ್ಲಿ ತರುವ ರೀತಿಯು.

ದೇಶದಲ್ಲಿ ಅತ್ತಿತ್ತ ಅಡ್ಡಾಡುವ ಕೋಟ್ಯವಧಿ ನಿರುದ್ಯೋಗಿಗಳು ಇರುವವರೆಗೆ ಮತ್ತು ಅವರಿಗೆ ಉದ್ಯೋಗವನ್ನು ಕಲ್ಪಿಸಿ ಕೊಡದೆ ಇರುವವರೆಗೆ, ವರ್ಣಾಶ್ರಮ ಶಬ್ದವನ್ನು ಉಚ್ಚರಿಸುವದೂ ಕೂಡ ಅಪಹಾಸ್ಯದ ಮಾತು. ಮತ್ತು ಯಾವ ಮಹಾತ್ಮನು, ಮಹಾಪುರುಷನು ಇಂದು ಉದ್ಯೋಗವಿಲ್ಲದೆ ಬಳಲುವ ತನ್ನ ದೇಶಬಾಂಧವರಿಗಾಗಿ ಬೇರೆ ಬೇರೆ

ವ್ಯವಸಾಯಗಳನ್ನು ಕಲ್ಪಿಸುತ್ತಾನೆಯೋ, ಅಂಥ ಮಹಾಪುರುಷನು ಧರ್ಮ ನಾಶ ಮಾಡುತ್ತಾನೆಂದು ಕೆಲವರು ಕೂಗುವದೆಂದರೆ ವರ್ಣಧರ್ಮದ ದುರ್ದೈವವೇ ಸರಿ.

ವರ್ಣಧರ್ಮವನ್ನು ಪುನರುಜ್ಜೀವನ ಮಾಡುವಂತೆ ಮಹಾತ್ಮರು ಆಶ್ರಮ ಧರ್ಮವನ್ನೂ ಮರೆತಿಲ್ಲ. ಅದಕ್ಕೂ ಸಹ ಕಾಂತಿಯನ್ನು ಕೊಡ ಲೆತ್ನಿಸುತ್ತಿದ್ದಾರೆ. ಕಳೆದ ಮೂವತ್ತು ವರುಷದಿಂದ ಬ್ರಹ್ಮಚರ್ಯವನ್ನು ಪಾಲನ ಮಾಡಿ ಅವರು ಕಾಮವನ್ನು ಗೆದ್ದಿದ್ದಾರೆ. ಬ್ರಹ್ಮಚರ್ಯದ ಮಹಿಮೆಯನ್ನು ಅವರು ಮೇಲಿಂದ ಮೇಲೆ ಹೇಳುತ್ತಲೇ ಇದ್ದಾರೆ. ರಾಷ್ಟ್ರದಲ್ಲಿ ಬ್ರಹ್ಮಚರ್ಯಕ್ಕೆ ಒಂದು ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾರೆ.

ಮಹಾತ್ಮರು ಬ್ರಹ್ಮಚರ್ಯಾಶ್ರಮಕ್ಕೆ ಕಳೆ ಏರಿಸಿದಂತೆ ಗೃಹಸ್ಥಾಶ್ರಮವನ್ನೂ ಉಜ್ವಲಿಸುತ್ತಿದ್ದಾರೆ. ಸತಿಪತಿಗಳ ಧ್ಯೇಯಗಳೇನಿರಬೇಕೆಂಬದನ್ನು ಅವರು ಸೂಚಿಸಿದ್ದಾರೆ.

ವಾನಪ್ರಸ್ಥ ಮತ್ತು ಸನ್ಯಾಸಗಳನ್ನಂತೂ ತಮ್ಮ ಸ್ವಂತ ಉದಾಹರಣೆಯಿಂದಲೆ ಕಲಿಸುತ್ತಿದ್ದಾರೆ. ಮಹಾತ್ಮರಿಗಿಂತ ಹಿರಿದಾದ ಸನ್ಯಾಸಿ ಯಾರು ಇದ್ದಾರೆ ಇಂದು ! ಮಹಾತ್ಮರ ಆದರ್ಶವನ್ನು ತಮ್ಮೆದಿರು ಇಟ್ಟು ಸಾವಿರಾರು ಕಾರ್ಯಕರ್ತರು ವಾನಪ್ರಸ್ಥರಾಗಿ ಕಾರ್ಯಪ್ರವೃತ್ತರಾಗಿದ್ದಾರೆ. ಸನ್ಯಾಸಿಗಳು ಇನ್ನು ಯಾರೂ ಇಲ್ಲ. ಮಹಾತ್ಮಾಜಿಯವರು ವಾನಪ್ರಸ್ಥರನ್ನು ನಿರ್ಮಿಸಿದ್ದಾರೆ ಮತ್ತು ಬ್ರಹ್ಮಚರ್ಯ ಮತ್ತು ಆದರ್ಶ ಗೃಹಸ್ಥಾಶ್ರಮಕ್ಕಾಗಿ ಸಾಹಸಪಡುವ ಅನೇಕರನ್ನು ಹುಟ್ಟಿಸಿದ್ದಾರೆ.

ನೂರಾರು ವಿಚಾರ ಪ್ರಚಾರಕರನ್ನು ನಿರ್ಮಿಸಿ, ಮಹಾತ್ಮರು ನಿಜವಾದ ಬ್ರಾಹ್ಮಣರನ್ನು ನಿರ್ಮಿಸಿದ್ದಾರೆ. ರಾಷ್ಟ್ರಕ್ಕಾಗಿ ಪ್ರಾಣಾರ್ಪಣವನ್ನು ಮಾಡಲು ಸಿದ್ಧರಾದ ಸಾವಿರಾರು ಕ್ಷತ್ರಿಯರನ್ನು ನಿರ್ಮಿಸಿದ್ದಾರೆ. ಲಕ್ಷಾವಧಿ ಹಳ್ಳಿಗಳಲ್ಲಿ ಹಸಿವೆಯಿಂದ ಬಳಲುತ್ತಿರುವ ದೇಶಬಾಂಧವರಿಗೆ ನಾಲ್ಕು ತುತ್ತು ಅನ್ನ ಸಿಗುವಂತೆ ಸಾಹಸಪಡುವ ವೈಶ್ಯರನ್ನು ನಿರ್ಮಿಸಿದ್ದಾರೆ. ದೇಶದಲ್ಲಿದ್ದ ಹೊಲಸನ್ನು ಹೋಗಲಾಡಿಸಲು ಪ್ರಯತ್ನಿಸುವ ಸಾವಿರಾರು ಶೂದ್ರರನ್ನು ಸಹ ಅವರು ನಿರ್ಮಿಸಿದ್ದಾರೆ. ವರ್ಣಾಶ್ರಮ ಧರ್ಮವು ಬಾಳಿ ಬೆಳೆಯಬೇಕು ಎಂಬ ನಿಜವಾದ ಕಳಕಳಿ ಇದ್ದವರೆಲ್ಲರು ಮಹಾತ್ಮರಡಿಯಲ್ಲಿ ನಿಂತು ಸೇವಾವ್ರತವನ್ನು ಕೈಕೊಳ್ಳುವರು.

ನಿಜವಾದ ವರ್ಣಾಶ್ರಮದ ಮೂರ್ತಿಯೆಂದರೆ ಮಹಾತ್ಮಾಜಿಯವರು.

ಅವರು ಈ ಧರ್ಮದ ನಿಜ ಉಪಾಸಕರು. ಭಾರತೀಯ ಸಂಸ್ಕೃತಿಯ ಪ್ರಧಾನ ಸ್ವರೂಪವಾದ ವರ್ಣಾಶ್ರಮ ಧರ್ಮದ ಹಿರಿದಾದ ತತ್ವವನ್ನು ಜೋಪಾನ ಮಾಡಿ ಅವರೇ ಬೆಳಸುತ್ತಿದ್ದಾರೆ. ಇದು ಎಲ್ಲ ಭಾರತೀಯರ ಇರುವಿಕೆಯಲ್ಲಿ ಮೂಡಬೇಕೆಂದು ಹಗಲಿರುಳು ಸಾಹಸಪಡುತ್ತಿದ್ದಾರೆ. ಭಾರತೀಯ ಸಂಸ್ಕೃತಿಯ ಹಿರಿಉಪಾಸಕನೇ! ನಿನ್ನಿಂದ ಭಾರತದ ಮುಖಕ್ಕೆ ಕಳೆ ಏರಿದೆ. ಭಾರತೀಯ ಸಂಸ್ಕೃತಿಯ ನಿಜಸ್ವರೂಪವನ್ನು ನಿನ್ನಿಂದಲೇ ಜಗತ್ತು ಅರಿತುಕೊಳ್ಳುತ್ತಿದೆ. ಭಾರತೀಯರ ಮೇಲೆ ನಿನ್ನ ಅನಂತ ಉಪಕಾರಗಳು !!

---

# ೧೪. ಹೆಣ್ಣು

## (ಸ್ತ್ರೀ ಸ್ವರೂಪ)

ಭಾರತೀಯ ಸ್ತ್ರೀಯರೆಂದರೆ ತ್ಯಾಗದ ಮೂರ್ತಿಗಳು; ಮೂರ್ತಿಮಂತ ತಪಸ್ಯೆ, ಸೇವೆ. ಭಾರತೀಯ ಸ್ತ್ರೀಯೆಂದರೆ ಅಮರ ಆಶಾವಾದ, ಅಪಾರ ಶ್ರದ್ಧೆ. ನಿಸರ್ಗವು ಸದ್ದಿಲ್ಲದೆ, ಗದ್ದಲಿಲ್ಲದೆ ಹೂವು ಅರಳಿಸುತ್ತದೆ. ತನ್ನ ಕೆಲಸವನ್ನು ಅಖಂಡವಾಗಿ ಸಾಗಿಸುತ್ತದೆ. ಅದರಂತೆ ಭಾರತೀಯ ಹೆಣ್ಣುಮಕ್ಕಳು ಮನೆಮನೆಗಳಲ್ಲಿ ಹಗಲಿರುಳು ದುಡಿದು, ಯಾವ ದೂರು ಹೇಳದೆ ಆನಂದವನ್ನು ಹುಟ್ಟಿಸುತ್ತಿದ್ದಾರೆ. ಇಂಥ ಚಿತ್ರವನ್ನು ಎಲ್ಲ ಮನೆಗಳಲ್ಲಿ ಕಾಣಬಹುದು. ಅವಳಿಗೆ ಕ್ಷಣದ ವಿಶ್ರಾಂತಿ ಸಹ ಇಲ್ಲ.

ಸೀತಾ, ಸಾವಿತ್ರಿ, ದ್ರೌಪದಿ, ಗಾಂಧಾರಿ ಇವರು ಅವರ ಆದರ್ಶಗಳಾಗಿದ್ದಾರೆ. ಸೀತೆಯ ಜೀವನವೆಂದರೆ ಒಂದು ಅಖಂಡವಾದ ಯಜ್ಞ. ಭಾರತೀಯ ಸ್ತ್ರೀಯ ಇರುವಿಕೆಯೊಂದು ಉರಿಯುವ ಹೋಮವಾಗಿದೆ. ಮದುವೆಯೆಂದರೆ ಯಜ್ಞವು. ಪತಿಯೊಡನೆ ಮದುವೆಯಾದ ಕೂಡಲೆ ಈ ಅಖಂಡ ಯಜ್ಞ ಆರಂಭವಾಗುತ್ತದೆ ಮತ್ತು ಅವಳ ಮರಣದಿಂದಲೇ ಅದು ಕೊನೆಗಾಣುತ್ತದೆ.

ಸ್ತ್ರೀಯೆಂದರೆ ಮೂರ್ತಿಮಂತ ಕರ್ಮಯೋಗ. ಅವಳಿಗೆ ತನ್ನವೆಂಬ ಬೇಡಿಕೆ, ಸೇರಿಕೆಗಳೇ ಇಲ್ಲ. ಗಂಡನ, ಮಕ್ಕಳ ಸೇರಿಕೆ ಬೇಡಿಕೆಗಳೇ

ಇವಳ ಇಚ್ಛೆಗಳು. ಇವಳಿಗೆ ಅವರನ್ನು ಬಿಟ್ಟು ಆಶೆ ಆಕಾಂಕ್ಷೆಗಳೇ ಇಲ್ಲ. ಏನು ಮಾಡುವದಾದರೂ ಪತಿಗಾಗಿಯೇ ಮಾಡುತ್ತಾಳೆ. ಪತಿಯೇ ಅವಳ ದೇವರು.

ಅಡಿಯಾಳಾಗುವದೇ ಆವಳ ಭಾಗ್ಯ! ಕಬೀರನು ದೇವರಿಗೆ ಹೇಳುತ್ತಾನೆ. " ನಾನು ನಿನ್ನ ಗುಲಾಮನು, ನೀನು ನನ್ನ ಒಡೆಯನು " ("ಮೈ ಗುಲಾಮ ಮೈ ಗುಲಾಮ ಮೈ ಗುಲಾಮ ತೇರಾ। ತೂ ಸಾಹೇಬ ಮೇರಾ") ಭಾರತೀಯ ಸ್ತ್ರೀಯಾದರೂ ತಿಳಿಯದೆ ತನ್ನ ಪತಿದೇವನಿಗೆ ಹೀಗೆಯೇ ಹೇಳುತ್ತಾಳೆ. ತನ್ನ ಎಲ್ಲವನ್ನು ಅವನಡಿಯಲ್ಲಿ ಅರ್ಪಿಸಿ ಅವನನ್ನು ಪೂಜಿಸುತ್ತಾಳೆ.

ಭಾರತೀಯ ಸ್ತ್ರೀಯು ತಾನು ಪತಿಯೊಡನೆ ಒಂದಾಗಿದ್ದಾಳೆ. ತನ್ನ ಅಸ್ತಿತ್ವವನ್ನು ಅಳಿಸಿದ್ದಾಳೆ. ಆದರೆ ಪತಿದೇವರು ಮಾಡಿದ್ದೇನು? ದೇವರು ಭಕ್ತನ ದಾಸನಾಗುತ್ತಾನೆ. ನಾರದ ಮಹರ್ಷಿ ಒಮ್ಮೆ ವಿಷ್ಣುವಿನ ಕಡೆಗೆ ಹೋದಾಗ ಅವನು ಪೂಜೆ ಮಾಡುತ್ತಿರುವದನ್ನು ನೋಡಿ ಆಶ್ಚರ್ಯಪಟ್ಟರು. ತ್ರಿಭುವನವೆಲ್ಲವು ಇವನನ್ನು ಪೂಜಿಸುತ್ತದೆ, ಇವನು ಯಾರನ್ನು ಪೂಜಿಸುತ್ತಿರಬಹುದು! ಭಗವಾನ ವಿಷ್ಣುವು ಹೊರಗೆ ಬಂದು ಅಂದನು.

**" ಪ್ರಲ್ಹಾದ ನಾರದ ಪರಾಶರ ಪುಂಡಲೀಕ ವ್ಯಾಸಾಂಬರೀಷ ಶುಕಶೌನಕ ಭೀಷ್ಮದಾಲ್ಭ್ಯಾನ್ । ರುಕ್ಮಾಂಗದಾರ್ಜುನ ವಸಿಷ್ಠ ಬಿಭೀಷಣಾದೀನ್ । ಪುಣ್ಯಾನಿಮಾನ್ ಪರಮ ಭಾಗವತಾನ್ ಸ್ಮರಾಮಿ ॥**

ಭಕ್ತರು ದೇವರ ದೇವರು. ಭಗವಂತನು ಅರ್ಜುನನಿಗೆ ಹೇಳಿದ್ದಾನೆ—"ಅರ್ಜುನಾ ಭಕ್ತರು ನನ್ನ ಹಿರಿದಾದ ದೇವರು. ಅವರನ್ನು ನೋಡಲು ನನಗೆ ಕಣ್ಣು, ಆವರನ್ನು ಪೂಜಿಸಬೇಕೆಂದು ನನ್ನ ಕೈಯಲ್ಲಿ ಕಮಲ, ಅವನನ್ನು ಅಪ್ಪಿಕೊಳ್ಳಲು ಎರಡು ಕೈ ಸಾಕಾಗಲಿಕ್ಕಿಲ್ಲವೆಂದು ನಾಲ್ಕು ಕೈ." ಭಕ್ತನನ್ನು ನೋಡಲು ಅವನಲ್ಲಿದ್ದ ಬಯಕೆಯ ಮೂಲಕವೆ ನಿರಾಕಾರ ಪ್ರಭು ಸಾಕಾರವಾಗುತ್ತಾನೆ. ಎಂಥ ಸವಿಭಾವವಿದು!

ನಾವು ಪ್ರೀತಿಯಿಂದ ಎರಡನೆಯವರ ದಾಸರಾದರೆ ಅವರು ನಮ್ಮ ದಾಸರಾಗುತ್ತಾರೆ ಪ್ರೇಮದಿಂದ ದಾಸರಾಗುವದೆಂದರೆ ಮುಕ್ತರಾದಂತೆಯೆ. ಆದರೆ ನಾವು ನಮ್ಮ ಮನೆಗಳಲ್ಲಿ ಕಾಣುವ ದೃಶ್ಯ ಎಂಥದು? ಸ್ತ್ರೀಯು ಎಲ್ಲರ ಅಡಿಯಾಳಾಗಿ ದುಡಿಯುತ್ತಾಳೆ, ಪ್ರೇಮವನ್ನು ಅರ್ಪಿಸುತ್ತಾಳೆ.

ಆದರೆ ಅವಳಿಗೆ ಆನಂದವಾಗಬೇಕು, ಸುಖವಾಗಬೇಕೆಂದು ಅವಳ ದಾಸ ರಾಗುವವರಾರು ? ಅವಳ ಮನಸ್ಸಿನ, ಹೃದಯದ ಹಸಿವುಗಳನ್ನು ಅರಿಯು ವವರಾರು ?

ಸ್ತ್ರೀ ಹೃದಯವನ್ನು ಸೇರುವವರು, ಅದನ್ನು ಅರಿತುಕೊಳ್ಳುವವರು ಯಾರೂ ಇಲ್ಲ. ಎಲ್ಲರೂ ಸ್ತ್ರೀಜೀವನದ ಅಂಗಳದಲ್ಲಿಯೇ ಆಡುವರು. ಅವಳ ಅಂತರ ಗೃಹವನ್ನು ಸೇರುವವರಾರೂ ಇಲ್ಲ! ಅವಳ ಅಂತರ ಗೃಹವು ಔದಾಸೀನ್ಯದಿಂದ ತುಂಬಿದೆ. ಅಲ್ಲಿಯ ತನಕ ಪ್ರೇಮದ ಕಲಶಗಳನ್ನು ಒಯ್ಯುವವರಾರೂ ಇಲ್ಲ. ಸ್ತ್ರೀಹೃದಯವು ಮೂಕವಾಗಿದೆ ! ಸ್ತ್ರೀಯರಿಗೆ ಬಾಯಿಯೇ ಇಲ್ಲ. ಅವರ ಹೃದಯಗಳು ಆಳವಾಗಿರುತ್ತವೆ, ಗಂಭೀರವಾಗಿರುತ್ತವೆ. ಅವಳು ಪ್ರೇಮಯಾಚನೆಯನ್ನು ಮಾಡುವದಿಲ್ಲ; ನೀವು ಕೊಟ್ಟದ್ದನ್ನು ಸ್ವೀಕರಿಸುತ್ತಾಳೆ.

ಭಾರತೀಯ ಹೆಣ್ಣು ಮಕ್ಕಳ ಹೃದಯದ ಅರಿವು ಗಂಡಸರಿಗೆ ಇಲ್ಲ. ಏನೋ ಅವರಿಗೆ ಹೊಟ್ಟೆಗೆ ಅನ್ನ, ಚಂದಾದ ಬಟ್ಟೆ ಕೊಟ್ಟರೆ ಆಯಿತು ಎಂಬುದೊಂದೇ ವಿಚಾರ ಗಂಡಸರಲ್ಲಿದ್ದದ್ದು ಕಂಡುಬರುತ್ತದೆ. ಇದಕ್ಕಿಂತ ಹೆಚ್ಚು ಹೆಣ್ಣುಮಕ್ಕಳಿಗೆ ಬೇಕಾಗುತ್ತದೆ ಎಂಬ ಭಾವನೆಯೇ ಇಲ್ಲ ! ಅವರ ಆತ್ಮದ ದರ್ಶನವೇ ಇಲ್ಲ ಈ ಮಹನೀಯರಿಗೆ. ಸ್ತ್ರೀಯರಿಗೆ ಆತ್ಮವೇ ಇಲ್ಲ ಅನ್ನುವವರೆಗೆ ಸರತಿ ಆದೆ ಕೆಲವರದು. ಆತ್ಮವೇ ಇಲ್ಲ ಅಂದಮೇಲೆ ಮೋಕ್ಷದ ಮಾತೇ ಇಲ್ಲ.

ಭಾರತೀಯ ಸ್ತ್ರೀಯ ಸಹನ ಮಾಡುವ ಮನೋವೃತ್ತಿಯ ದುರುಪ ಯೋಗವನ್ನು ಗಂಡಸರು ಮಾಡಿಕೊಳ್ಳುತ್ತಾರೆ. ಮಕ್ಕಳ ಜೋಪಾನದ ಕಡೆ ಲಕ್ಷಕೊಡುವದಿಲ್ಲ. ಬೇನೆಬೇಸರಿಕೆ ಬಂದರೆ ನೋಡುವದಿಲ್ಲ. ಗಂಡನ ನಿದ್ದೆ ಕೆಡಬಾರದೆಂದು ಇಡೀ ರಾತ್ರಿ ಮಕ್ಕಳು ಅತ್ತರೆ ಅವರನ್ನು ತೊಡೆಯ ಮೇಲೆ ಮಲಗಿಸಿಕೊಳ್ಳುತ್ತಾಳೆ ಈ ಮಹನೀಯಳು.

ಪತಿಯು ಎಂಥ ಸ್ವಭಾವದವನಿದ್ದರೂ ಅವನನ್ನು ಸತಿಯು ಸಂಬಾ ಳಿಸಿಕೊಳ್ಳುತ್ತಾಳೆ. ಮನೆತನದ ಮಾನವನ್ನು ಕಾಯುತ್ತಾಳೆ. ಬಂದ ಕಷ್ಟಗಳನ್ನೆಲ್ಲ ಸಹಿಸಿ, ಮನೆಯ ಹುಳುಕನ್ನು ಎಂದೂ ಹೊರಗೆಡಹುವ ದಿಲ್ಲ. ತನ್ನ ಕಂಬನಿ, ದುಃಖ ಎರಡನೆಯವರ ಎದುರು ಎಂದಿಗೂ ತೋಡಿಕೊಳ್ಳುವದಿಲ್ಲ.

ಗಂಡನ ಲಹರಿಗಳನ್ನು ಸಂಬಾಳಿಸುವದೇ ಅವಳ ಧರ್ಮವಾಗಿದೆ.

ತಾನು ಬರುವದು ರಾತ್ರಿ ೧೦-೧೧ ಘಂಟೆಗೆ. ಪಾಪ ಹೆಂಡತಿ ಹಾದಿ ನೋಡುತ್ತ ಕೂತಿರುತ್ತಾಳೆ. "ಇಷ್ಟೊತ್ತು ಯಾಕೆ ಕೂತಿ? ನೀನು ಊಟವೇಕೆ ಮಾಡಲಿಲ್ಲ?" ಎಂದು ಕೇಳುತ್ತಾರೆ. ಅವರ ಹೃದಯದಲ್ಲಿ ಎಂದಾದರೂ ಹಣಿಕಿ ನೋಡಿದ್ದರೆ ಇಂಥ ಶಬ್ದಗಳು ಅವನ ಬಾಯಿಂದ ಹೊರಬೀಳುತ್ತಿದ್ದಿಲ್ಲ.

ಗಂಡನ ನಗೆಮುಖವೆಂದರೆ ಹೆಂಡತಿಯ ಸರ್ವಸ್ವ! ಅವಳ ಕಣ್ಣು ಯಾವಾಗಲೂ ಗಂಡನ ಮುಖವನ್ನೇ ನೋಡುತ್ತಿರುತ್ತವೆ. ಅವನು ನಗೆಮುಖನಾಗಿದ್ದರೆ, ಅವನ ತುಟಿಯ ಮೇಲೆ ಸ್ಮಿತವಿದ್ದರೆ ಅದೇ ಅವಳ ಮೋಕ್ಷ. ಪತಿಯ ಒಂದು ಸವಿಶಬ್ದವೆಂದರೆ ಅವಳ ಸ್ವರ್ಗ. ಎಷ್ಟು ಅಲ್ಪ ಸಂತುಷ್ಟಳಿದ್ದಾಳೆ ಭಾರತೀಯ ಸ್ತ್ರೀಯು! ಆದರೆ ಇಷ್ಟು ಸಹ ಅವಳಿಗೆ ದುರ್ಲಭವಾಗಿದೆ.

ಗಂಡನು ಪಾಪಿ ಇರಲಿ, ದುಷ್ಟ ಚಟದವನು ಇರಲಿ, ಎಂಥವ ನಿದ್ದರೂ ಭಾರತೀಯ ಸ್ತ್ರೀಯರು ಅವನ ಸೇವೆ ಮಾಡುತ್ತಾರೆ. ಒಮ್ಮೆ ಕಟ್ಟಿದ ಗಂಟು- ಮದುವೆಯ ಗಂಟು ಎಂದೂ ಉಚ್ಚತಕ್ಕದ್ದಲ್ಲ. ಕೆಲವು ಜಾತಿಗಳಲ್ಲಿ ಘಟಸ್ಫೋಟದ ರೂಢಿ ಇದ್ದರೂ ಅದು ಸರ್ವಸಮ್ಮತವಿಲ್ಲ. ಸುಸಂಸ್ಕೃತರ ಲಕ್ಷಣವೆಂದು ತಿಳಿಯಲ್ಪಡುವದಿಲ್ಲ. ಸ್ತ್ರೀ ಎಂದರೆ ಅವಳು ಪೂಜಿಸುವದು ಒಂದೇ ದೇವರು.

ಗಂಡನು ಕೆಟ್ಟವನಿದ್ದರೂ ಅವನನ್ನು ಬಿಡುವದು ಹೇಗೆ? ಒಮ್ಮೆ ತನ್ನವನು ಅಂದಮೇಲೆ ಮುಗಿಯಿತು. ತನ್ನತನದ ಭಾವವೆಂದರೆ ಪರುಷ ವಿದ್ದಂತೆ. ಮಣ್ಣು ಹೊನ್ನಾಗುವದು. ಮಕ್ಕಳು ಪುಂಡಾಟಿಕೆ ಮಾಡಿದರೂ ಅವರನ್ನು ಬಿಸಾಟಿ ಒಗೆಯಬಹುದೆ? ತಾಯಿಯೇ ತುಚ್ಛ ಮಾಡಿದ ಮೇಲೆ ಜಗತ್ತಿನಲ್ಲಿ ಅವರನ್ನು ನೋಡುವವರು ಯಾರು? ಇದು ಭಾರ ತೀಯ ಸ್ತ್ರೀಯ ದೃಷ್ಟಿಯು. ತಾನೇ ತನ್ನ ಗಂಡನನ್ನು ದೂಷಿಸಿದರೆ, ದೂರ ಇಟ್ಟರೆ ಅವನನ್ನು ನೋಡುವವರಾರು? ಜಗತ್ತು ಅವನನ್ನು ದೂಷಿಸಿದರೂ ಮನೆಹೆಂಡತಿ ಅವನನ್ನು ಬರಮಾಡಿಕೊಳ್ಳುವಳು. "ಗೃಹಿಣೀ ಗೃಹಮುಚ್ಯತೆ." ಸತಿ ಎಂದರೆ ಮನೆ. ಮನೆ ಎಂದರೆ ಪ್ರೇಮ, ವಿಶ್ರಾಂತಿ ಸ್ಥಾನ. ಈ ಮನೆ ಪತಿಗಾಗಿ ಮಕ್ಕಳಿಗಾಗಿ ಇದೆ.

ಸತಿಪತಿಗೆ ನಡೆಯುವದಿಲ್ಲೆಂದು ಘಳಿಗೆಗೊಮ್ಮೆ ಘಟಸ್ಫೋಟಗಳಾ ಗಹತ್ತಿದರೆ ಸಮಾಜವಾದರೂ ಹೇಗೆ ನಡೆಯುವದು? ಅದರಿಂದ ಸಾಧಿಸುವ

ದಾದರೂ ಏನು? ಜಗತ್ತಿನಲ್ಲಿ ಪ್ರೇಮ ತ್ಯಾಗ ಶಬ್ದಗಳಿಗೆ ಅರ್ಥವಾದರೂ ಯಾವುದು? ಜಗತ್ತಿನಲ್ಲಿ ಕೂಡಿ ಬಾಳಬೇಕಾಗಿರುವುದು. ಜಗತ್ತು ಎಂದರೆ ಸಹಕಾರ್ಯ, ಜೋಡಿಸುವದು. ಸಂಸಾರವೆಂದರೆ ಕೊಡುವದು, ತಕ್ಕೊಳ್ಳುವದು. ಪತಿ ಸಹಕಾರ ನೀಡದಿದ್ದರೆ ಸತಿ ಅವನನ್ನು ಬಿಟ್ಟುಬಿಡಬೇಕೇ? ಇಲ್ಲ. ತ್ಯಾಗಯುಕ್ತ ಪ್ರೇಮದಿಂದ ಅವನೊಡನೆಯೇ ಇರುವಳು. "ಇದರಲ್ಲಿಯೇ ನನ್ನ ಪ್ರೀತಿಯ ಶಕ್ತಿ ಇದೆ. ಕೆಟ್ಟಗುಣಗಳಿದ್ದರೂ ಸಹ ಸಂಬಾಳಿಸುವದೇ ಪ್ರೇಮವು. ಪ್ರೇಮದಿಂದ ಸೇವೆಮಾಡುವೆನು. ಏನಾದರೂ ಮನುಷ್ಯನಲ್ಲಿ ದೇವರ ಅಂಶವು ಇದೆ. ಒಂದು ದಿನ ಪತಿಯಲ್ಲಿದ್ದ ದಿವ್ಯತೆಯು ಪ್ರಕಟವಾಗದೆ ಹೋಗದು. ಅವನ ಆತ್ಮಚಂದ್ರಕ್ಕೆ ಗ್ರಹಣ ಹತ್ತಿದರೆ ಅವನನ್ನು ಬಿಡಬೇಕೆ?" ಇಲ್ಲ, ಅವನನ್ನು ಕುರಿತು ಸತಿಗೆ ಕರುಣೆ ಬರಬೇಕು. ಜಗತ್ತು ಪತಿಯನ್ನು ಅಪಹಾಸ್ಯಕ್ಕೀಡು ಮಾಡಬಹುದು. ಆದರೂ ಸತಿಯು ಮಾಡುವದಿಲ್ಲ. ತನ್ನ ಬಲಿದಾನ ಮಾಡಿಯಾದರೂ ಅವನನ್ನು ಕಾಪಾಡುವಳು. ಯಾವ ಕಾರ್ಯವು ಅವಳ ಜೀವನದಿಂದ ಸಾಧ್ಯವಾಗಲಿಲ್ಲ ಅಂಥ ಕಾರ್ಯಗಳು ಕೆಲವಾವರ್ತಿ ಮರಣದಿಂದ ಸಾಧ್ಯವಾಗುತ್ತವೆ. ಸಿಂಧೂ ಸತ್ತಮೇಲೆ ಸುಧಾಕರನು ಸುಧಾರಿಸಿದನು. ಅವಳ ಮರಣ ವ್ಯರ್ಥವಾಗಲಿಲ್ಲ.

ಜಗತ್ತಿನಲ್ಲಿ ಪರಸ್ಪರರನ್ನು ಸುಧಾರಿಸುವದೆ ಕರ್ತವ್ಯವಾಗಿರುವುದು. ದಡ್ಡ ಹುಡುಗನಿಗೆ ಕಲಿಸಿದರೆ ಅದರಲ್ಲಿ ಶಿಕ್ಷಕನ ಜಾಣತನವಿದೆ. ದಡ್ಡರನ್ನು ದೂಡುವವನು ಶಿಕ್ಷಕನೇ? ಕಲ್ಲು ನೋಡಿ ಗುರುವಿನ ಪ್ರತಿಭೆಯು ಕರಗಬೇಕು, ಹರಿಯಬೇಕು, ತನ್ನ ಕಲೆಗೆ ನಿಜವಾದ ಅವಸರವಿದೆ ಎಂದು ಭಾವಿಸಬೇಕು. ಭಾರತೀಯ ಸ್ತ್ರೀಯು ಸಹ ಇದನ್ನೇ ಅನ್ನುವಳು "ನನ್ನ ಹಟಮಾರಿ ಪತಿಯನ್ನು ನಾನು ಸುಧಾರಿಸುವೆನು. ಇದೇ ನನ್ನ ಕರ್ತವ್ಯ. ನಿರಾಶಳಾಗದೆ ನನ್ನ ಕರ್ತವ್ಯವನ್ನು ಮಾಡುವೆನು."

"ಪೀರಜಿಂಟ" ಎಂಬ ಹೆಸರಿನ ಒಂದು ಕಾವ್ಯಮಯ ನಾಟಕವನ್ನು ಇಬ್ಸೆನನು ಬರೆದಿದ್ದಾನೆ. ಪೀರಜಿಂಟನ ಹೆಂಡತಿಯು ಅಡವಿಯಲ್ಲಿದ್ದ ಒಂದು ಗುಡಿಸಲದಲ್ಲಿ ಅವನ ಹಾದಿ ಕಾಯುತ್ತಿರುತ್ತಾಳೆ. ಪೀರಜಿಂಟನು ಜಗತ್ತಿನಲ್ಲಿ ಸಂಚರಿಸುತ್ತಿದ್ದನು.

ಅವನು ವಿಧವಿಧದ ಅನುಭವಗಳನ್ನು ಪಡೆದು ಬಹಳ ವರ್ಷಗಳಾದ ಮೇಲೆ ತನ್ನ ಹೆಂಡತಿ ಇದ್ದ ಗುಡಿಸಲಕ್ಕೆ ಬರುತ್ತಾನೆ. ಅವಳು ಕುರುಡಳಾ

ಗಿರುತ್ತಾಳೆ. ಅವಳು ನೂಲುತ್ತ ಕೂತಿದ್ದಳು ಮತ್ತು ತನ್ನ ಗಂಡ ಬಂದೇ ಬರುವನು ಎಂಬರ್ಥದ ಪದವನ್ನು ಹಾಡುತ್ತಿದ್ದಳು.

ಜಿಂಟ:— ನೋಡು ನಾನು ಬಂದಿದ್ದೇನೆ, ದಣಿದು ಬಂದಿದ್ದೇನೆ.

ಅವಳು:— ಓಹೋ ನೀವು ಬಂದಿರ್ಯಾ ! ಬನ್ನಿ, ನೀವು ಬರುವಿರಿ ಎಂಬುವದು ನನಗೆ ಗೊತ್ತಿತ್ತು. ನನ್ನ ತೊಡೆಯ ಮೇಲೆ ನಿಮ್ಮ ತಲೆ ಇಟ್ಟು ದಣಿವು ಆರಿಸಿರಿ. ನಾನು ಹಾಡು ಹಾಡುತ್ತೇನೆ.

ಜಿಂಟ:— ಏನು, ನೀನು ಇನ್ನೂ ನನ್ನನ್ನು ಪ್ರೀತಿಸುತ್ತೀಯಾ ?

ಅವಳು:— ಹೌದು ನೀವು ಬಹಳ ಒಳ್ಳೆಯವರಿದ್ದೀರಿ.

ಜಿಂಟ:— ನಾನು ಒಳ್ಳೆಯವನೇ ? ಜಗತ್ತು ನಾನು ಕೆಟ್ಟವನೆಂದು ಹೇಳುತ್ತದೆ. ನಿನಗೆ ಮಾತ್ರ ನಾನು ಒಳ್ಳೆಯವನೆಂದು ತೋರುತ್ತೇನೆಯೋ?

ಅವಳು:— ಅಹುದು.

ಜಿಂಟ:— ಇಲ್ಲ, ನಾನು ಕೆಟ್ಟವನು.

ಅವಳು:— ಇಲ್ಲ ಇಲ್ಲ, ನನ್ನ ಪ್ರೀತಿಯ ಕಣ್ಣಿಗೆ ನನ್ನ ಸ್ವಪ್ನದಲ್ಲಿ ನೀವು ನನಗೆ ಒಳ್ಳೇಯವರೇ ಕಾಣುತ್ತೀರಿ.

ಇದು ಆ ನಾಟಕದ ಕೊನೆಯ ಭಾಗ. "ಪ್ರೀತಿಯ ಕಣ್ಣಿಗೆ ಸ್ವಪ್ನದಲ್ಲಿ" ಎಂಬುದರಲ್ಲಿ ಸ್ತ್ರೀಯ ಜೀವನದ ಸಾರ ಸರ್ವಸ್ವವೂ ಇದೆ. ಗಂಡನನ್ನು ಕಾಣುವ ಅವಳ ಕಣ್ಣುಗಳೇ ಬೇರೆ ಇರುತ್ತವೆ. ಆ ಕಣ್ಣುಗಳ ಕಲ್ಪನೆಯು ನಮಗೆ ಬರುವದು ಸಾಧ್ಯವಿಲ್ಲ. ಎಷ್ಟು ದುಷ್ಟನಿದ್ದರೂ ಕೂಡ ಒಂದು ದಿನ ಅವನು ಒಳ್ಳೇ ರೀತಿಯಿಂದ ನಡೆಯುವನೆಂಬ ಅಮರ ಆಶೆ ಸ್ತ್ರೀಯ ಹೃದಯದಲ್ಲಿ ಇರುತ್ತದೆ.

ಮನೆಯೆಂದರೆ ಮನುಷ್ಯರಂತೆ ನಡೆದುಕೊಳ್ಳಲು ಕಲಿಸುವ ಸಾಲೆ. ಹುಚ್ಚನಾಯಿ ಕಂಡಕಂಡವರನ್ನು ಏಕೆ ಕಚ್ಚುತ್ತದೆ ? ಅದು ಜಗತ್ತನ್ನು ದ್ವೇಷಿಸುವದಿಲ್ಲ. ಆದರೆ ತನ್ನ ಹಲ್ಲಿನಲ್ಲಿ ತುಂಬಿಕೊಂಡ ವಿಷವನ್ನು ಎಲ್ಲಿಯಾದರೂ ಕಾರಿಕೊಳ್ಳಬೇಕು ಎಂದು ಅದಕ್ಕೆ ಅನಿಸುತ್ತದೆ. ಅದರಂತೆ ಕೆಲವುಟ್ಟಿಗೆ ಮನುಷ್ಯನ ಸ್ವಭಾವ. ತನ್ನಲ್ಲಿದ್ದ ಕಾಮಕ್ರೋಧಾದಿ ವಿಷವನ್ನು ಎಲ್ಲಿಯಾದರೂ ಕಾರಿಕೊಳ್ಳಬೇಕೆಂದು ಮನುಷ್ಯನಿಗೆ ಅನಿಸುತ್ತದೆ. ಅದನ್ನು ಕಾರಿಕೊಂಡರೆ ಅವನಿಗೆ ಸಮಾಧಾನ. ಹೊಟ್ಟೆಯಲ್ಲಿದ್ದ ವಿಷವನ್ನು ಕಾರಿಕೊಳ್ಳುವ ಸ್ಥಳವೆಂದರೆ ಮನೆ. ಪತಿ ಸತಿಯ ಮೇಲೆ ಹರಿಹಾಯುವನು, ಅತ್ತೆ ಸೊಸೆಯನ್ನು ದೂಷಿಸುವಳು; ಎಲ್ಲಿಯಾದರೂ ನಮ್ಮ ವಿಕಾರ

ಗಳಿಗೆ ಹೊರಬೀಳಲು ಅವಕಾಶ ಬೇಕಾಗುತ್ತದೆ.

ಸತಿ ಹೇಳುತ್ತಾಳೆ "ಮನೆಯಲ್ಲಿ ಮನಬಂದಂತೆ ನಡೆಯಿರಿ. ನಾನು ಅದನ್ನೆಲ್ಲ ಸಹಿಸಲು ಸಿದ್ಧಳಿದ್ದೇನೆ. ನನ್ನ ಮೇಲೆ ಸಿಟ್ಟಾಗಿರಿ, ನನ್ನ ಮೇಲೆ ಒದರಿಕೊಳ್ಳಿರಿ, ನಿಮ್ಮ ಕಾಮಕ್ರೋಧಗಳನ್ನು ಶಾಂತಗೊಳಿಸಿರಿ. ನಿಮ್ಮಲ್ಲಿ ಇದ್ದ ಪಶುತ್ವವನ್ನೆಲ್ಲ ನನ್ನಲ್ಲಿ ಸುರಿದು ಸುಟ್ಟುಬಿಡಿರಿ. ನಿಮ್ಮ ಪಶುತ್ವವನ್ನು ಸುಟ್ಟುಬಿಡುವ ವೇದಿಯು ನಾನು. ಮನೆಹೊರಗೆ ಹೋಗುವಾಗ ಪಶುಪತಿಯಾಗಿ ಹೋಗಿರಿ." ಶಿವನಾಗಿ ಹೋಗಿರಿ. ಸತ್‌ಸ್ವರೂಪಿಯಾದ ಪತಿಯನ್ನು ಶಿವಶಂಕರನನ್ನಾಗಿ ಮಾಡುವ ಶಕ್ತಿಯು ಸ್ತ್ರೀಯು. ಸತಿ ಪತಿಯನ್ನು ಮಾನವನನ್ನಾಗಿ ಮಾಡುತ್ತಾಳೆ. ಅವನನ್ನು ಶಾಂತಗೊಳಿಸುತ್ತಾಳೆ. ಸ್ಥಿರಗೊಳಿಸುತ್ತಾಳೆ. ಮತ್ತು ಅವನನ್ನು ಅಳತೆಯಲ್ಲಿಡುತ್ತಾಳೆ.

ಆದರೆ ಇದನ್ನೆಲ್ಲ ಸಾಧಿಸಲು ಪತಿಯಲ್ಲಿ ಪ್ರೇಮದ ಶಕ್ತಿಯು ಇರಬೇಕು. ಅವಳ ಪ್ರೇಮದಲ್ಲಿ ಕಸುವಿರಬೇಕು. ಅವಳ ಸೇವೆ ಬಲವತ್ತರವಾಗಬೇಕು. ಪ್ರೇಮದಲ್ಲಿ ತೇಜಸ್ಸು ಓಜಸ್ಸು ಬೇಕು. ಮೂಲೆಯಲ್ಲಿ ಕೂತು ಅಳುವ ಪ್ರೇಮವಿರಬಾರದು. ಪ್ರೇಮವು ಅಳಲು ಹಚ್ಚುವದಿಲ್ಲ. ಪ್ರೇಮವು ಕರ್ತವ್ಯ ಮಾಡಲು ಪ್ರವೃತ್ತ ಮಾಡುತ್ತದೆ. ಪತಿಗೆ ವ್ಯಸನಗಳಿದ್ದರೆ, ದುಷ್ಟಟಗಳಿದ್ದರೆ ತನ್ನ ಪ್ರೇಮದ ಬಲದಿಂದ ಸತಿಯು ಅವನ ಮನವೊಲಿಸಲು ಸಮರ್ಥಳಾಗಬೇಕು. ಅವನಿಗೆ ಸೆರೆ ಕುಡಿಯಗೊಡಬಾರದು. ಯಾವ ವ್ಯಸನವೂ ಪತಿಯ ಸಮೀಪ ಬರದಂತೆ ಸತಿಯ ಜೀವನದ ಸುದರ್ಶನ ಚಕ್ರವು ನೋಡಿಕೊಳ್ಳಬೇಕು.

ಮಾಂಡವ್ಯ ಋಷಿಗೆ ಅವನ ಸತಿಯು, ಓರ್ವ ವೇಶ್ಯೆಯ ಮನೆಗೆ ಕರೆದುಕೊಂಡು ಹೋದ ಕಥೆ ಇದೆ. ಇದು ಧ್ಯೇಯದ ಪರಮಾವಧಿಯೇ ಸರಿ! ಈ ತ್ಯಾಗದ, ಧೈರ್ಯದ ಕಲ್ಪನೆಯೇ ಬರುವಂತಿಲ್ಲ ನನಗೆ. ಪತಿಯ ಸೇರಿಕೆ ಬೇಡಿಕೆ ತನ್ನವೇ. ಅವನು ಶಗಣಿ ಕೇಳಿದರೂ ಕೊಡತಕ್ಕದ್ದು. ನನ್ನ ಕೈ ಅವನವೇ. ತನಗೆ ಬೇಕಾದದ್ದನ್ನೆಲ್ಲ ನನ್ನ ಕೈಯಿಂದ ತೆಗೆದುಕೊಳ್ಳಬಹುದು. ನಾನು ಕೇವಲ ಅವನ ಅಡಿಯಾಳು!

ನನಗಂತೂ ಈ ಆದರ್ಶದ ಕಲ್ಪನೆ ಸಹ ಮಾಡಲು ಬರುವದಿಲ್ಲ. ಭಾರತೀಯ ಸತಿಯ ಆದರ್ಶವು ದೌರ್ಬಲ್ಯದ ಮಾದರಿ ಎಂದು ನಾನು ಅನ್ನಲಾರೆ. ನಾನು ಪತಿಯೊಡನೆ ಏರುವೆನು, ಇಳಿಯುವೆನು, ಪತಿ ಇದ್ದಲ್ಲಿ ನಾನು. ಅವನ ಇಚ್ಛೆ ನನ್ನ ಇಚ್ಛೆ. ಈ ಮೇಲಿನ ಆದರ್ಶದ ಇದುರು

ನನ್ನ ಕಣ್ಣು ಕುಕ್ಕುತ್ತವೆ. ನನ್ನ ಕಣ್ಣಿಗೆ ಅದು ಸಹನವಾಗುವದಿಲ್ಲ.

ಇದೂ ಒಂದು ಪತಿಯನ್ನು ಸುಧಾರಿಸುವ ಅನೇಕ ಮಾರ್ಗದೊಳಗಿನ ಒಂದು ಮಾರ್ಗ ಇರಬಹುದು. ಆದರೆ ಇದು ಕಠಿಣವಾದ ಮಾರ್ಗವು. ಇದು ಸಾಮಾನ್ಯ ಸ್ತ್ರೀಯರ ಆದರ್ಶವಾಗಲಾರದು. ಏನಿದ್ದರೂ ಇಂದು ಭಾರತೀಯ ಸ್ತ್ರೀಯ ಆದರ್ಶವು ದುರ್ಬಲವಾಗಿದೆ. ಅದರಲ್ಲಿ ಪ್ರಖರತೆ ಇರಬೇಕೆಂದು ನನ್ನ ಬಯಕೆ. ಘಟಸ್ಫೋಟದ ಕಾಯಿದೆಯ ವಿರುದ್ಧ ನಾನಿಲ್ಲ. ಆದರೆ ಪ್ರೇಮ, ಸಹಕಾರ್ಯ, ಸುಧಾರಣೆ, ತ್ಯಾಗ ಈ ಶಬ್ದಗಳಿಗೆ ಜೀವನದಲ್ಲಿ ಏನಾದರೂ ಅರ್ಥವಿದ್ದರೆ, ಅವುಗಳಿಗೆ ಏನಾದರೂ ಬೆಲೆ ಇದ್ದರೆ ಮತ್ತು ಅವುಗಳಿಗೆ ಬೆಲೆ ಉಳಿಯಬೇಕು ಎಂಬ ಆಶೆ ಇದ್ದರೆ, ಸತಿಪತಿಯರು ಯಾವ ಕಾಲಕ್ಕೂ ಯಾವ ಪರಿಸ್ಥಿತಿಯಲ್ಲಿಯೂ ಪರಸ್ಪರರನ್ನು ಬಿಡಬಾರದು. ಇದೇ ಶ್ರೇಯಸ್ಕರವಾದ ಮಾರ್ಗವೆಂದು ನನಗನಿಸುತ್ತದೆ. ಇದರಲ್ಲಿ ಮಾನವತೆ ಇದೆ. ಮಾನವನ ದಿವ್ಯತೆ ಇದೆ.

ಭಾರತೀಯ ಸ್ತ್ರೀಯರು ಕೈಕೊಳ್ಳುವ, ಕೈಕೊಂಡ ವ್ರತದಲ್ಲಿ ಕೂಡ ತೇಜಸ್ಸು, ಓಜಸ್ಸು, ಬರಬೇಕಾಗಿದೆ. ಅದರಂತೆ ಅವರ ಪ್ರೇಮ ವೃತ್ತಿಯಲ್ಲಿ ವೈಶಾಲ್ಯವೂ ಕಂಡುಬರಬೇಕಾಗಿದೆ. ಸ್ತ್ರೀಯರ ಪ್ರೇಮವು ಆಳವಾಗಿರುತ್ತದೆ. ಆದರೆ ಅದಕ್ಕೆ ವಿಶಾಲತೆ ಇರುವದಿಲ್ಲ. ಅದರ ಕ್ಷೇತ್ರವು ಸಂಕುಚಿತವಾಗಿರುತ್ತದೆ. ಮನೆಯಾಚೆಗೆ ಅವರ ದೃಷ್ಟಿ ಹೋಗುವದಿಲ್ಲ. ಅದಕ್ಕಾಗಿಯೇ ಮನೆತನಗಳಲ್ಲಿ ಜಗಳಕ್ಕೆ ಕಾರಣ ಸ್ತ್ರೀಯರೆಂದು ಅನ್ನುವದುಂಟು. ಸ್ತ್ರೀಯರ ಕ್ಷಿತಿಜವು ಬೆಳೆಯಬೇಕು. ಸುತ್ತುಮುತ್ತಲಿನ ಜಗತ್ತಿನ ವಿಚಾರವನ್ನು ಮಾಡಬೇಕು ಅವರು. ಜಗತ್ತಿನಲ್ಲಿದ್ದ ಸುಖ-ದುಃಖದ ವಿಚಾರವನ್ನು ಮಾಡಬೇಕು. ಒಡಕಿನ ಭಾವವನ್ನು ಅಳಿಯಬೇಕು. ತನ್ನ ಗಂಡ, ಮಕ್ಕಳಾಚೆಗಿದ್ದ ಜಗತ್ತನ್ನು ನೋಡಲು ಹವಣಿಸಬೇಕು.

ವಕೀಲನ ಹೆಂಡತಿಯು ಅನ್ನುತ್ತಾಳೆ "ನನಗೇನೂ ಕಡಿಮೆಯಿಲ್ಲ. ಹೊಟ್ಟೆಗೆ ಅದೆ, ಉತ್ತಮವಾದ ಬಟ್ಟೆಗಳಿವೆ. ನನ್ನ ಮಕ್ಕಳಿಗೆ ಎಲ್ಲ ಶಿಕ್ಷಣ ಸೌಕರ್ಯಗಳಿವೆ. ಮನೆ ಇದೆ. ಹೊಲ ಇದೆ. ಫೋನೋ ರೆಡಿಯೋ ಸಹ ಇವೆ." ಆದರೆ ಅವಳು ತನ್ನ ದೃಷ್ಟಿಯನ್ನು ವಿಸ್ತರಿಸಬೇಕು. ಎಲ್ಲಿಂದ ಬರುತ್ತದೆ ಈ ದುಡ್ಡು ? ಇದನ್ನು ಗಳಿಸಲು ತನ್ನ ಪತಿಯು ಅನ್ಯಾಯವನ್ನು ಮಾಡುತ್ತಾನೋ, ಬಡವರನ್ನು ಗೋಳಿಗೆ ಗುರಿಪಡಿಸುತ್ತಾನೋ

ಇದನ್ನು ನೋಡಬೇಕು. ತನ್ನನ್ನು ಸಿಂಗರಿಸಲು ಬಡವರ ಮನೆ ಹಾಳಾಗಿದೆಯೋ ವಿಚಾರಿಸಬೇಕು.

ಇದರಂತೆ ವ್ಯಾಪಾರಸ್ಥನ ಹೆಂಡತಿ, ಡಾಕ್ಟರನ ಹೆಂಡತಿ, ಸರಕಾರಿ ನವಕರನ ಹೆಂಡತಿ ಇವರೂ ವಿಚಾರಿಸಬೇಕು. ಭಾರತೀಯ ಸ್ತ್ರೀಯರು ಇಂಥ ಪ್ರಶ್ನೆಗಳನ್ನು ತಮ್ಮ ಮನಸ್ಸಿಗೆ ಎಂದೂ ಕೇಳುವದಿಲ್ಲ. ಗಂಡಸರೂ ಅವರನ್ನು ಅಜ್ಞಾನದ ಕತ್ತಲೆಯ ಮುಸುಕಿನಲ್ಲಿಯೇ ಇಟ್ಟಿದ್ದಾರೆ. ಆದರೆ ಪತಿಯ ಪಾಪದ ಪಾಲುಗಾರಳು ತಾನೂ ಇದ್ದದ್ದು ಭಾರತೀಯ ಸ್ತ್ರೀಯು ಮರೆಯಬಾರದು. ತನ್ನ ಸಿರಿವಂತ ಪತಿಯು ನೂರಾರು ಜನರ ಮನೆಗಳನ್ನು ಮುರಿದು, ತನ್ನನ್ನು ಒಡವೆ ಅಲಂಕಾರದಲ್ಲಿ ಮುಳುಗಿಸಿದ್ದಾನೆಂಬುದನ್ನು ತನ್ನ ವಕೀಲ ಪತಿಯು ನೂರಾರು ಒಕ್ಕಲಿಗರನ್ನು ಬಿಕ್ಕೆಗೆ ಹಚ್ಚಿ, ತನಗೆ ಜರತಾರಿ ಶಲ್ಲೆಯನ್ನು ಕೊಟ್ಟಿದ್ದಾನೆಂಬುದನ್ನು, ತನ್ನ ಡಾಕ್ಟರ ಪತಿ ನೂರಾರು ಬಡಬಾಂಧವರ ಕಡೆಯಿಂದ ಹೆಚ್ಚು ಫೀಯನ್ನು ತಕ್ಕೊಂಡು ಮನೆಯಲ್ಲಿ ಫೋನೋ ರೇಡಿಯೋ ಇಟ್ಟಿದ್ದಾನೆಂಬುದನ್ನು, ಈ ಭಾರತೀಯ ನಾರಿಯರು ನೆನಪಿನಲ್ಲಿಟ್ಟುಕೊಳ್ಳಬೇಕು. ಈ ವಿಚಾರವು ಅವರ ಮನಸ್ಸಿನಲ್ಲಿ ಬಂದರೆ ಅವರು ಚೇತರಿಸಿಕೊಂಡು ಏಳುವರು. ಯಾಕಂದರೆ ಧರ್ಮವು ಸ್ತ್ರೀಯರ ಜೀವನವು.

ದೇವರು ದಿಂಡರು, ವ್ರತಗಳು ಹಬ್ಬಗಳೆಂದು ಭಾರತೀಯ ಸ್ತ್ರೀಯರು ಮಗ್ನರಾಗಿರುತ್ತಾರೆ. ಆದರೆ ತಮ್ಮ ಸಂಸಾರವು ಪಾಪದ ದುಡ್ಡಿನಿಂದ ನಡೆದಿದೆಂಬ ಮಾತಿನ ಅರಿವು ಅವರಿಗಿಲ್ಲ. ಹೀಗೆ ಅಜ್ಞಾನದ ಕತ್ತಲದ ಮುಸುಕಿನಲ್ಲಿರಬಾರದು ನಮ್ಮ ಸ್ತ್ರೀಯರು. ಅವರು ತಮ್ಮ ದೃಷ್ಟಿಯನ್ನು ವಿಶಾಲ ಮಾಡಬೇಕು. ಅಂದರೆ ಮಾತ್ರ ಜೀವನದಲ್ಲಿ ಧರ್ಮವು ನೆಲೆಗೊಳ್ಳುವದು. ತಾನು ದಾನ ಮಾಡುವ ದುಡ್ಡು ಹೇಗೆ ಗಳಿಸಲಾಯಿತು? ಯಾರಿಗೆ ತಾನು ದಾನ ಮಾಡುತ್ತೇನೆ? ಅದರ ವಿನಿಯೋಗವು ಯೋಗ್ಯ ರೀತಿಯಿಂದ ನಡೆಯುತ್ತದೆಯೋ, ಇಲ್ಲವೋ? ಇದನ್ನೆಲ್ಲ ಭಾರತೀಯ ಸ್ತ್ರೀಯರು ತಿಳಿದುಕೊಳ್ಳಬೇಕು. ಪಾಪದ ದುಡ್ಡು ಪಾಪಕ್ಕೆ ಹೋಗುವದು. ಒಮ್ಮೆ ಇದರ ಅರಿವು ಬಂದಮೇಲೆ ರೇಶ್ಮೆ ಸೀರೆಗಳು ಅವರಿಗೆ ಅಸಹ್ಯವಾಗುವವು! ಒಡವೆಗಳೆಲ್ಲ ಕೆಂಡದಂತೆ ಕಾಣುವವು! ಅಂತಸ್ತುಗಳು ನರಕದಂತೆ ಅನಿಸುವವು! ಆಗ ಪತಿಯು ದುಡ್ಡು ಸನ್ಮಾರ್ಗದಿಂದ ಗಳಿಸಬೇಕೆಂಬ ವಿಚಾರವು ಅವರಿಗೆ ಹೊಳೆಯುವದು.

ಇದುವರೆಗೆ ಭಾರತೀಯ ಸ್ತ್ರೀಯರು ನಮ್ಮ ಗೊತ್ತುಗುರಿಗಳನ್ನು ಕಾಪಾಡಿದ್ದಾರೆ. ಆದ್ದರಿಂದ ಹೊಸ ಗೊತ್ತುಗುರಿಗಳು ಸ್ತ್ರೀಯರಿಗೆ ಕಾಣು ವಂತೆ ಅವಕಾಶ ಕಲ್ಪಿಸಿ ಕೊಡಬೇಕು. ಅಂದರೆ ಮಾತ್ರ ಧ್ಯೇಯಗಳು ಅಮರವಾಗುವವು. ಆಕಳದ ಪಾವಿತ್ರ್ಯವನ್ನು ಇದು ವರೆಗೆ ಅವರೇ ಕಾಯ್ದಿದ್ದಾರೆ. ಶುಚಿಯ ಆರೋಗ್ಯದ ತತ್ವಗಳನ್ನು ಪರಾಕಾಷ್ಠೆಗೆ ಅವರೇ ಒಯ್ದಿದ್ದಾರೆ. ಏಕಾದಶಿ, ಉಪವಾಸ, ದಾನ ಇವೆಲ್ಲವೂ ಅವರಿಂದಲೇ ನಮ್ಮ ಸಮಾಜದಲ್ಲಿ ಅಳಿಯದೆ ಉಳಿದಿವೆ. ಒಂದು ವೇಳೆ ಸ್ತ್ರೀಯರು ಧ್ಯೇಯಗಳನ್ನು ಗೊತ್ತುಪಡಿಸುತ್ತಿರಲಿಕ್ಕಿಲ್ಲ. ಆದರೆ ಒಮ್ಮೆ ಧ್ಯೇಯಗಳು ನಿರ್ಮಾಣವಾದ ಮೇಲೆ ಅವು ಅಳಿಯದಂತೆ ಅವರು ನೋಡಿಕೊಳ್ಳುತ್ತಾರೆ. ಮನೆತನಕ್ಕೆ ಬೇಕಾಗುವ ವಸ್ತುಗಳನ್ನು ತಂದುಕೊಡುವ ಕೆಲಸ ಸಾಮಾನ್ಯ ವಾಗಿ ಗಂಡಸರದು, ಅವುಗಳನ್ನು ಕಾಯುವದು ಹೆಣ್ಣುಮಕ್ಕಳ ಕರ್ತವ್ಯ. ಅದರಂತೆ ಪುರುಷರು ಕೈಕೊಂಡ ಗುರಿಗಳನ್ನು ಅವರು ಜೋಪಾನಮಾಡಿ ಬೆಳಿಸುವರು.

ಗಂಡಸರು ಹೊಟ್ಟೆಯ ಮಕ್ಕಳನ್ನು ಉಪೇಕ್ಷಿಸಬಹುದು, ಆದರೆ ಸ್ತ್ರೀ ಎಂದಿಗೂ ಹಾಗೆ ಮಾಡುವದಿಲ್ಲ. ಪುರುಷರು ಸಮಾಜದಲ್ಲಿ ತಾವು ನಿರ್ಮಿಸಿದ ಧ್ಯೇಯಗಳನ್ನು ಬಿಡಲು ಪ್ರಯತ್ನಪಡಬಹುದು; ಆದರೆ ಹೆಣ್ಣು ಮಕ್ಕಳು ಅವನ್ನು ಬಿಡುವದಿಲ್ಲ. ಶ್ರೀಯಾಳಸು ಅತಿಥಿಯೊಡನೆ ಊಟಕ್ಕೆ ಕೂಡಲು ಒಪ್ಪುವದಿಲ್ಲ. ಅವನ ಧೈರ್ಯಕುಗ್ಗುತ್ತದೆ; ಆದರೆ ಅವನ ಸತಿ ಚಾಂಗುಣೆಯು ಅವನನ್ನು ಕೈಹಿಡಿದು ಅತಿಥಿಯೊಡನೆ ಊಟಕ್ಕೆ ಕೂಡಿ ಸುತ್ತಾಳೆ. ಅವನ ಧ್ಯೇಯ ಬಾಲಕನನ್ನು ಸಾಯಗೊಡುವದಿಲ್ಲ.

ಇದು ಭಾರತೀಯ ಸ್ತ್ರೀಯ ವೈಶಿಷ್ಟ್ಯವು. ಈ ಮಾತನ್ನು ನಾವು ಚನ್ನಾಗಿ ಅರಿತುಕೊಳ್ಳಬೇಕು ಮತ್ತು ಹೊಸ ಧ್ಯೇಯಗಳು ಭಾರತೀಯ ಸ್ತ್ರೀಯರ ಮನಸ್ಸಿಗೆ, ಹೃದಯಕ್ಕೆ ಮುಟ್ಟುವಂತೆ ನೋಡಿಕೊಳ್ಳಬೇಕು. ಅಂದರೆ ಅವು ಉಳಿಯುವವು, ಬೆಳೆಯುವವು. ಖಾದಿ, ಸ್ವದೇಶಿ, ಗ್ರಾಮೋ ದ್ಯೋಗ, ಹರಿಜನಸೇವೆ ಮೊದಲಾದ ಧ್ಯೇಯಗಳು ಇನ್ನು ಸಮಾಜದಲ್ಲಿ ವ್ರತಗಳಾಗಿ ಪರಿಣಮಿಸಲಿ. ಸ್ತ್ರೀಯರ ಧರ್ಮಬುದ್ಧಿಯನ್ನು ಚೇತರಿಸಿರಿ. ಈ ಹೊಸ ಧರ್ಮವನ್ನು ಅವರ ಮನಸ್ಸಿಗೆ ಒಪ್ಪುವಂತೆ ಮಾಡಿರಿ. ಅವರು ಒಪ್ಪಿಕೊಂಡರೆ ಅದು ರಾಷ್ಟ್ರಧರ್ಮವಾಗುವದು. ಸ್ತ್ರೀಯರ ಪೆಟ್ಟಿಗೆಯಲ್ಲಿ ದ್ದದ್ದು ಎಂದೂ ನಷ್ಟವಾಗುವದಿಲ್ಲ.

ತಾಯಿ–ಮಾತೆ ಈ ದೃಷ್ಟಿಯಿಂದ ಸ್ತ್ರೀಯರ ಅಪಾರ ಮಹಿಮೆಯು ಭಾರತದಲ್ಲಿ ಎಲ್ಲೆಡೆಯಲ್ಲಿಯೂ ತುಂಬಿತುಳುಕುತ್ತಿದೆ. ಜೋಪಾನ ಮಾಡುವದು ಅವರ ಕರ್ತವ್ಯ. ಮಕ್ಕಳನ್ನು, ಪತಿಯನ್ನು ಮತ್ತು ಧ್ಯೇಯಗಳನ್ನು ಜೋಪಾನ ಮಾಡುವರು. ಯಾರಿಗೂ ಸಾಯಗೊಲ್ಲುವದಿಲ್ಲ. ಅವರು ಎಲ್ಲರಿಗೂ ಪ್ರೀತಿ ನೀಡುವರು, ಸೇವೆ ಸಲ್ಲಿಸುವರು. ಈಶ್ವರ ಸ್ವರೂಪಳೇ ತಾಯಿ ! ಇದಕ್ಕಾಗಿ ಭಕ್ತರು ಈಶ್ವರನಿಗೆ ತಾಯಿ ಎಂದು ಸಂಬೋಧಿಸುತ್ತಾರೆ. ದೇವರ ಪ್ರೇಮದ ತಿರುಳನ್ನು ಯಾರಾದರೂ ಈ ಜಗತ್ತಿನಲ್ಲಿ ತೋರುತ್ತಿದ್ದರೆ ಆ ವ್ಯಕ್ತಿಯು ತಾಯಿಯೇ, ಮತ್ತಾರಲ್ಲ. ಅದಕ್ಕಾಗಿ ಭಾರತೀಯ ಸಂಸ್ಕೃತಿಯಲ್ಲಿ ಎಲ್ಲ ಕಡೆಯಲ್ಲಿಯೂ ಮಾತೃವಂದನವಿದೆ. ಈ ಜಗತ್ತಿನಲ್ಲಿಯ ದೇವರ ಹೆಸರುಗಳನ್ನು ಹೇಳುವಾಗ ಉಪನಿಷತ್ತಿನ ಆಚಾರ್ಯರು ಮೊದಲು "ಮಾತೃದೇವೋ ಭವ" ಎಂದು ಹೇಳಿದ್ದಾರೆ. ಮೊದಲು ತಾಯಿ, ಆಮೇಲೆ ತಂದೆ. ಪತಿ ಪತ್ನಿ ಎಂಬುವಲ್ಲಿ ಮೊದಲು ಪತಿ ಇದ್ದರೂ ತಾಯಿ ತಂದೆ ಇವರಲ್ಲಿ ಮೊದಲು ಮಾನ ತಾಯಿಗೆ ! ಪತಿಗೆ ಪಿತನಾಗಬೇಕಾಗುವುದು. ಪತ್ನಿಗೆ ಮಾತೆಯಾಗಬೇಕಾಗುವುದು. ಈ ಎರಡು ಸ್ವರೂಪಗಳಲ್ಲಿ ಮಾತೆಯ ಸ್ವರೂಪವು ಉಚ್ಚತರವಾದದ್ದು.

ಆದ್ದರಿಂದಲೆ ಭಾರತೀಯ ಸಂಸ್ಕೃತಿಯು ಮಾತೃಪ್ರಧಾನವಾದದ್ದು. ತಾಯಿಗೆ ಮೂರು ಪ್ರದಕ್ಷಿಣೆ ಹಾಕಿದರೆ ಮೂರುಸಲ ಪೃಥ್ವಿ ಪ್ರದಕ್ಷಿಣೆ ಮಾಡಿದಂತೆ. ತಾಯಿ ತಂದೆಯರ ಸೇವೆಯೆಂದರೆ ಮೋಕ್ಷ. "ನ ಮಾತುಃ ಪರದೈವತಮ್." ತಾಯಿಯ ಋಣವೆಂದಿಗೂ ತೀರುವಂತಿಲ್ಲ.

ವಿಠ್ಠಲ ತನ್ನ ತಾಯಿ, ಭಾರತವು ನಮ್ಮ ತಾಯಿ, ಆಕಳು ನಮ್ಮ ತಾಯಿ ಭಾರತವರ್ಷದಲ್ಲಿ ಎಲ್ಲಕಡೆಯಲ್ಲಿಯೂ ತಾಯಿಯ ಹಿರಿಮೆ. ಬೇಕಾದಂಥ ಮಂಗಲಕಾರ್ಯವಿರಲಿ ಮೊದಲು ತಾಯಿಯ ಆಶೀರ್ವಾದ.

ಗಂಡನ ಸಾವಿರಾರು ಅಪರಾಧಗಳನ್ನು ಹೊಟ್ಟೆಯಲ್ಲಿ ಹಾಕಿಕೊಳ್ಳುವ, ಮಕ್ಕಳನ್ನು ಕಾಪಾಡುವ ಮತ್ತು ಭಾರತೀಯ ಧ್ಯೇಯಗಳನ್ನು ಉಳಿಸುವ ಬೆಳೆಸುವ ಈ ಭಾರತೀಯ ಮಾತೆಗೆ ಅನಂತ ವಂದನೆಗಳು.

ಮತ್ತು ಪತಿ ನಿಧನದ ತರುವಾಯ ಅವನೊಡನೆ ನಗೆಮುಖದಿಂದ ಚಿತೆಯನ್ನೇರುವ ಸತಿ ಅಥವಾ ಪತಿಯ ಚಿಂತನದಲ್ಲಿಯೇ ಮಗ್ನರಾಗಿ ವೈರಾಗ್ಯದಿಂದ ವ್ರತಮಯ ಜೀವನವನ್ನು ಜೀವಿಸುವ ವಿಧವೆಯು ! ಈ ಎರಡು ಪವಿತ್ರ ವಸ್ತುಗಳ ವರ್ಣನವನ್ನು ಮಾಡುವವರಾರು ? ಭಾರತದಲ್ಲಿ

ರುವ ಸತಿಗಳ ವೃಂದಾವನಗಳೆಂದರೆ ಮದುವೆಯನ್ನು ಕುರಿತು ತಿಳಿಹೇಳುವ ಮೂಕ ಪ್ರವಚನಗಳು. ಇವು ಭಾರತಕ್ಕೆ ಪಾವಿತ್ರ್ಯದ ಕಳೆಯನ್ನೇರಿಸುತ್ತವೆ. ಅಲ್ಲಲ್ಲಿ ಬರೆದಿಟ್ಟ ಯಜ್ಞಮಯ ಇತಿಹಾಸವಿದು.

ಬಾಲವಿಧವೆ ! ಒಂದು ಕಾರುಣ್ಯಪೂರ್ಣವಾದ ಕಥೆ ಅವಳು. ಕ್ಷಣಕ್ಷಣಕ್ಕೆ ಚಿತೆಯನ್ನೇರುವ ಜೀವನ ಅವಳದು. ಸುತ್ತುಮುತ್ತಲು ವಿಲಾಸಿ ಜೀವನ. ಅದರ ಮಧ್ಯದಲ್ಲಿ ಬಾಳಬೇಕು ವಿರಕ್ತಳಂತೆ. ಪ್ರತಿಯೊಂದು ಕ್ಷಣವೆಂದರೆ ಅವಳ ಸತ್ವಪರೀಕ್ಷೆ. ಮಂಗಲವಾದ್ಯ, ಮಂಗಲ ಸಮಾರಂಭಗಳು ಜರಗುತ್ತವೆ. ಮದುವೆಯೋ, ಗರ್ಭಾದಾನವೋ, ಕುಬುಸ ಮಾಡುವದೋ, ಇವೆಲ್ಲ ನಡೆದಿರುತ್ತವೆ. ಈ ಸಮಾರಂಭಗಳೆಲ್ಲ ಅವಳಿಗೆ ವರ್ಜ್ಯ ! ಎಲ್ಲಿಯೋ ಮೂಲೆಯಲ್ಲಿ ಕೂಡಬೇಕು ಗೋಣುಮುರಿದ ಕೋಗಿಲೆಯಂತೆ ಇವಳು. ಎಲ್ಲ ವ್ರತಗಳು ಅವಳಿಗಾಗಿ. ಸಂಯಮ, ಬೇರೆ ಬೇರೆ ವಿಧಿನಿಷೇಧಗಳು ಇವಳಿಗಾಗಿ.

ಈ ಎಲ್ಲ ಅಗ್ನಿಪರೀಕ್ಷೆಯೊಳಗಿಂದ ದಿವ್ಯತೇಜದಿಂದ ಪಾರಾಗುತ್ತಾಳೆ. ಬಾಳಕೃಷ್ಣನೊಡನೆ ಅವಳ ಮಾತು, ಅವನಿಗೆ ನೈವೇದ್ಯ, ಪೂಜೆ, ಎಲ್ಲವನ್ನೂ ಮಾಡುತ್ತಾಳೆ, ದೇವರ ತಾಯಿಯಾಗುತ್ತಾಳೆ. ಇಂಥ ಹಿರಿದಾದ ತಾಯಿಯ ದರ್ಶನವು ಅಪವಿತ್ರವೆಂದು ಎಷ್ಟೋ ಮಠಾಧಿಪತಿಗಳು ಸಾರುತ್ತಾರೆ. ನಿಜವಾಗಿ ಅವಳ ಪಾದದ ತೀರ್ಥ ಕುಡಿಯಬೇಕು. ಈ ಮಹನೀಯರು ತಮ್ಮ ಉದ್ಧಾರಕ್ಕಾಗಿ ! ಎಲ್ಲರ ಸೇವೆ ಮಾಡುವದೇ ಅವಳ ಕೆಲಸ. ಅಡಿಗೆ ಮಾಡುವಳು, ಬಾಣಂತಿತನವನ್ನು ಸಾಗಿಸುವಳು, ಮನೆತನದಲ್ಲಿ ಯಾರಿಗೆ ಅಡಚಣಿ ಬಂದರೂ ಅಲ್ಲಿ ನೆರವಾಗಲು ಅವಳು ಹೋಗುವಳು. ಆದರೆ ಎಲ್ಲಿಯೂ ಅವಳಿಗೆ ಸ್ವಾಗತವಿಲ್ಲ. ಸಹಾನುಭೂತಿಯ ಶಬ್ದವಿಲ್ಲ. ಜೀವನದಲ್ಲಿ ಅವಳಿಗೆ ಆನಂದವಿಲ್ಲ, ಬಿಡುಗಡೆಯಿಲ್ಲ. ಜಗತ್ತಿನಲ್ಲಿ ತನಗಾದ ಅವಮಾನವನ್ನೆಲ್ಲ ಸಹಿಸಿ ಅವಳು ಜಗತ್ತಿನ ಕಲ್ಯಾಣವನ್ನೇ ಬಯಸುತ್ತಾಳೆ.

ಭಗವಾನ್ ಶಂಕರನು ಹಾಲಾಹಲ ವಿಷವನ್ನು ಕುಡಿದು ಜಗತ್ತಿನ ಕಲ್ಯಾಣವನ್ನು ಮಾಡಿದನಂತೆ. ಅದರಂತೆ ಇದೆ ವಿಧವೆಯ ಜೀವನ. ಬೈಗಳು, ಅಪಮಾನ ಇವನ್ನೆಲ್ಲ ನುಂಗಿ ಬಿಡುತ್ತಾಳೆ. ಮತ್ತು ಎಲ್ಲರ ಸೇವೆ ಮಾಡಲು ಸಿದ್ಧಳು !

ಆದರ್ಶ ವಿಧವೆ ಜಗತ್ತಿಗೆ ಗುರು. ಸೇವೆ ಸಂಯಮನದ ಮೂರುತಿ. ತನಗಾದ ದುಃಖವನ್ನೆಲ್ಲ ನುಂಗಿ ಜಗತ್ತಿಗಾಗಿ ದುಡಿಯುವ ದೇವತೆ.

ಭಾರತೀಯ ಸಂಸ್ಕೃತಿಯಲ್ಲಿದ್ದ ಮಹತ್ತರವಾದ ಆದರ್ಶವಿದು. ಇಂಥ ದಿವ್ಯ ದೇವತೆಯನ್ನು ಕಂಡರೆ, ಮತ್ತೆ ಮತ್ತೆ ಲಗ್ನವಾಗುವ ಗಂಡಸರನ್ನು ಕಂಡರೆ ಅವರು ಹಂದಿಗಳಂತೆ ತೋರುತ್ತಾರೆ ನನಗೆ. ಧನ್ಯ ಸ್ತ್ರೀ ಜಾತಿಯು !

ಆದರ್ಶವು ಉಚ್ಚವಾದದ್ದಿರಬೇಕು. ಆದರೆ ಅದು ತಮ್ಮ ತಮ್ಮ ಶಕ್ತಿಗೆ ನಿಲುಕುವಂತಹದಿರಬೇಕು. ನಿಲುಕದಂಥ ಆದರ್ಶವಿದ್ದರೆ ಅಪಹಾಸ್ಯಕ್ಕೆ ಈಡಾಗಬೇಕಾಗುವದು. ಶ್ರೀಕೃಷ್ಣನು ಅರ್ಜುನನಿಗೆ ಒತ್ತಾಯದಿಂದ ಸನ್ಯಾಸಿಯಾಗಲು ಹೇಳುವದಿಲ್ಲ. ಬಾಲವಿಧವೆಯರಿಗೆ ಕುಮಾರಿಕೆಯೆಂದು ತಿಳಿದು ಅವರ ಮದುವೆಯನ್ನು ತಾಯಿತಂದೆಯರು ಮಾಡಬೇಕು. ಆದರೆ ಹೀಗೆ ಮಾಡುವಾಗ ಸಹ ಅವರಿಗೆ ಸ್ವಾತಂತ್ರ್ಯವಿರಬೇಕು. ಅವರಿಗೆ ಮದುವೆಯು ಬೇಡವಾದರೆ ಮತ್ತು ಸ್ತ್ರೀ ಜಾತಿಯ ಉದಾತ್ತ ಧ್ಯೇಯವನ್ನೇ ಅನುಸರಿಸಬೇಕೆನಿಸಿದರೆ ಅನುವಿರಬೇಕು. ಅತಿ ಎತ್ತರವಾದ ಧ್ಯೇಯವನ್ನು ಮುಟ್ಟಲೆತ್ನಿಸುವಾಗ ಕೆಳಗೆ ಬೀಳುವ ಸಂಭವವು ಹೆಚ್ಚು, ಆದ್ದರಿಂದ ತನಗೆ ನಿಲುಕಬಹುದಾದ ಧ್ಯೇಯವನ್ನೇ ಆಚರಿಸಬೇಕು.

ಭಾರತೀಯ ಸ್ತ್ರೀಯರ ಸಂಯಮ, ಪಾವಿತ್ರ್ಯ, ವೈರಾಗ್ಯ ಇವೆಲ್ಲವು ಧನ್ಯವಾದವು ! ಸಾವಿರಾರು ವರ್ಷ ನುರಿಸಿದ ಈ ವೈರಾಗ್ಯವು ವ್ಯರ್ಥವಾಗುವದೇ ? ಭಾರತೀಯ ಸತಿಮಣಿಗಳೇ, ನಿಮ್ಮ ದಿವ್ಯ ಮಹಿಮೆಯನ್ನು ಬಣ್ಣಿಸುವದು ನನಗೆ ಅಸಾಧ್ಯವಾದದ್ದು ! ನಿಮ್ಮ ಚಿತ್ರಗಳನ್ನು ನನ್ನ ಮನಸ್ಸಿನ ಇದುರು ತಂದು ನಾನು ಅವನ್ನು ವಂದಿಸುತ್ತೇನೆ. ಮತ್ತು ನನ್ನ ಕಂಬನಿಯಿಂದ ನಿಮ್ಮಡಿಗಳನ್ನು ತೊಳೆಯುತ್ತೇನೆ. ಇದಕ್ಕಿಂತ ನನ್ನಂಥ ಪಾಮರನು ಏನು ಮಾಡಬಲ್ಲನು ?

---

## ೧೫. ಮಾನವೇತರ ಸೃಷ್ಟಿಯೊಡನೆ ಪ್ರೇಮದ ಸಂಬಂಧಗಳು

ಮನುಷ್ಯನ ನೀತಿಶಾಸ್ತ್ರದಲ್ಲಿ ಅಖಿಲ ಚರಾಚರ ಸೃಷ್ಟಿಯ ವಿಚಾರವು ಅಡಕವಾಗಿರಬೇಕು. ಮಾನವನು ಮಾನವರದಷ್ಟೇ ವಿಚಾರವನ್ನು

ಮಾಡಿದರೆ ಮಾನವ ಮತ್ತು ಪಶುಪಕ್ಷಿಗಳಲ್ಲಿ ಯಾವ ಭೇದವೂ ಉಳಿಯು ದಂತಾಗುವದು. ಮಾನವನು ಮಾನವೇತರ ಸೃಷ್ಟಿಯೊಡನೆ ಪ್ರೀತಿಯ ಸ್ನೇಹದ ಸಂಬಂಧಗಳನ್ನು ಇಟ್ಟುಕೊಂಡರೆ ಮಾತ್ರ ಅವನು ಸೃಷ್ಟಿಯಲ್ಲಿ ಶ್ರೇಷ್ಠನೆನ್ನುವದು ಸಿದ್ಧವಾಗುವದು. ಇಡೀ ಸೃಷ್ಟಿಯನ್ನೇ ನಾಶಗೊಳಿಸ ಬಲ್ಲೆ. ಆದ್ದರಿಂದ ನಾನು ಶ್ರೇಷ್ಠನೆನ್ನಿಸಿಕೊಳ್ಳುವದಕ್ಕಿಂತ ನಾನು ಇಡೀ ಜಗತ್ತನ್ನೇ ಪ್ರೀತಿಸಬಲ್ಲೆ, ಆದ್ದರಿಂದ ಶ್ರೇಷ್ಠನೆಂದು ಅನಿಸಿಕೊಳ್ಳುವದರಲ್ಲಿ ನಿಜವಾದ ದೊಡ್ಡಸ್ತಿಕೆ ಇದೆ.

ಪಶುಪಕ್ಷಿ ಗಿಡಗಂಟಿಗಳೊಡನೆ ಸ್ನೇಹ ಬೆಳೆಸುವ ಪ್ರಯತ್ನವನ್ನು ನಮ್ಮ ಸಂಸ್ಕೃತಿಯು ಮಾಡಿದೆ. ಮನುಷ್ಯನ ಇರುವಿಕೆಯಲ್ಲಿ ಅವುಗಳಿಗೂ ಒಂದು ಸ್ಥಾನವಿದೆ. ಮನುಷ್ಯನ ಶಕ್ತಿಗೆ ಮಿತಿ ಇದೆ. ಮರ್ಯಾದಿತ ಶಕ್ತಿ ಯಿಂದ ಸಾಧ್ಯವಿದ್ದದ್ದನ್ನೆಲ್ಲಾ ಮಾಡು ಎಂದು ಭಾರತೀಯ ಸಂಸ್ಕೃತಿಯು ಹೇಳುತ್ತಿದೆ. ಎಲ್ಲ ಜಾತಿಯ ಪಶುಗಳೊಡನೆ ಪ್ರೀತಿಯಿಂದ ನಡೆದು ಕೊಳ್ಳುವದು ಸಾಧ್ಯವಿಲ್ಲದಿದ್ದರೆ ಎತ್ತು ಆಕಳಗಳೊಂದಿಗೆ ಪ್ರೀತಿಯಿಂದ ನಡೆದುಕೋ. ಆಕಳು ಪಶುಸೃಷ್ಟಿಯ ಪ್ರತಿನಿಧಿ. ಆಕಳು ಭಾರತೀಯ ಕುಟುಂಬದಲ್ಲಿಯ ಒಂದು ಮುಖ್ಯವಾದ ಘಟಕವಾಗಿದೆ. ತಾಯಿ ತಂದೆ ಮುದುಕರಾದ ಮೇಲೆ ನಾವೇನು ಅವರನ್ನು ಕೊಲ್ಲುವದಿಲ್ಲ. ಅದರಂತೆ ನಮ್ಮ ಮನೆಯಲ್ಲಿದ್ದು ನಮಗೆ ಹಾಲು ತುಪ್ಪ ಕೊಟ್ಟು ಉಣಿಸಿದ ಆಕ ಳನ್ನು ಮುದಿಆಯಿತೆಂದು ನಾವು ಕಟಗರ ಕಡೆಗೆ ಕೊಡಬಾರದು. ಮುಪ್ಪಿನ ಕಾಲದಲ್ಲಿ ತಾಯಿ ತಂದೆಗಳಿಗೆ "ನೀವು ನಮ್ಮ ಸಲುವಾಗಿ ತನುಮನ ಧನದಿಂದ ಇಷ್ಟು ದಿನ ದುಡಿದಿರಿ, ಇನ್ನು ನೀವು ಪೂರ್ಣ ವಿಶ್ರಾಂತಿ ತೆಗೆದುಕೊಳ್ಳಿರಿ. ನಮಗೆ ಇನ್ನು ಆಶೀರ್ವಾದವನ್ನು ಮಾಡಿರಿ. ನಾವು ಕೃತಜ್ಞತೆಯಿಂದ ನಿಮಗೆ ಸೇವೆ ಸಲ್ಲಿಸುವೆವು'' ಎಂದು ಹೇಳುವಂತೆ ನಾವು ನಮಗೆ ಹಾಲು ತುಪ್ಪ ಕೊಟ್ಟ ಆಕಳಕ್ಕೂ ಹೇಳಬೇಕು. ಮತ್ತು ಅದನ್ನು ಸಾಯುವ ತನಕ ಜೋಪಾನ ಮಾಡಬೇಕು. ಹೀಗೆ ಮಾಡದೆ ಎತ್ತು ಆಕಳು ಮೊದಲಾದ ದನಗಳನ್ನು ಮುದುಕ ಆದಮೇಲೆ ಕಟುಕರಿಗೆ ಕೊಡುವದೆಂದರೆ ಕೃತಘ್ನತೆಯ ಪರಮಾಧಿಯೇ ಸರಿ. ಅವು ತನಗೆ ಇನ್ನು ಮುಂದೆ ಉಪಯೋಗವಾಗುವದಿಲ್ಲೆಂದು ಕೇವಲ ಉಪಯುಕ್ತತಾವಾದವನ್ನೇ ಅವಲಂಬಿಸುವದೆಂದರೆ ಮನುಷ್ಯನಿಗೆ ಬೆಲೆ ಇಲ್ಲದಂತೆ ಆಗುವದು.

ಆಕಳನ್ನು ಚೆನ್ನಾಗಿ ಜೋಪಾನ ಮಾಡಿದರೆ, ಅದು ತನ್ನ ಜೀವ

ಮಾನದಲ್ಲಿ ನಮಗೆ ಪೂರೈಸಿದ ಹಾಲು ತುಪ್ಪ ಗೊಬ್ಬರ ಮೊದಲಾದವುಗಳ ಲೆಕ್ಕಹಾಕಿದರೆ, ಅದರ ಬಡ್ಡಿಯಲ್ಲಿ ಸಹ ನಾವು ಅದನ್ನು ಮುದುಕವಾದ ಮೇಲೆ ಜೋಪಾನ ಮಾಡುವದು ಸಹಜ ಸಾಧ್ಯವಿದೆ. ಇಂದು ಭಾರತ ದಲ್ಲಿ ನಾವು ಕಾಣುವ ಆಕಳುಗಳು ಸೇರು ಅಚ್ಛೇರು ಹಾಲು ಕೊಡು ವಂಥವು. ಯುರೋಪ ಅಮೇರಿಕೆಯಲ್ಲಿಯ ಆಕಳುಗಳು ದಿನಾಲು ೩೦-೪೦ ಸೇರು ಹಾಲು ಕೊಡುತ್ತವೆ. ನಮ್ಮ ದೇಶದಲ್ಲಿಯೂ ಇಂಥ ಆಕಳು ಗಳಿದ್ದವು ಎಂಬ ಮಾತನ್ನು ನಾವು "ಐನ ಅಕಬರಿ" ಮುಂತಾದ ಗ್ರಂಥ ಗಳಲ್ಲಿ ಕಾಣಬಹುದು. ನವೋದಿತ ಶಾಸ್ತ್ರೀಯ ಜ್ಞಾನವನ್ನು ಅರಿತು ಪುನಃ ನಾವು ಗೋಸಂಗೋಪನ, ಗೋಸಂವರ್ಧನೆಯನ್ನು ಕೈಕೊಂಡರೆ ಇದು ಸಾಧ್ಯವಾಗಿ ಭಾರತ ಭೂಮಿಯಲ್ಲಿ ಮತ್ತೆ ಹಾಲಿನಿಂದ ತುಂಬಿದ ಆಕಳದ ಮೊಲೆಗಳನ್ನು ಕಾಣಬಹುದು. ಎಲ್ಲ ಕಡೆಯಲ್ಲಿಯೂ ಹೈನವು ಸಮೃದ್ಧವಾಗುವದು. ಮತ್ತು ಅಲ್ಲಲ್ಲಿ ಗೋಕುಲಗಳನ್ನು ಕಾಣುವೆವು.

ಆಕಳು ನಮಗೆ, ತಾನು ನಮ್ಮ ಮನೆತನದ ಒಂದು ಘಟಕ ಎಂಬ ದೃಷ್ಟಿಯಿಂದ ತನ್ನ ಕಡೆ ನೋಡಲು ಹಚ್ಚುತ್ತದೆ. ಆಕಳಿಗಾಗಿ ಗೋಗ್ರಾಸ, ಆ ಮೇಲೆ ನಾವು ಊಟ ಮಾಡುವದು ಗೋವಿನ ಪೂಜೆಯನ್ನು ಮಾಡಿ ನಾವು ಈ ರೀತಿ ಪ್ರಾರ್ಥಿಸುತ್ತೇವೆ. "ಗೋಮಾತೆ! ನೀನು ಮೂಕಳು, ಮೊದಲು ನಿನ್ನ ನೆನಹು. ನಿನ್ನ ರೂಪದಲ್ಲಿ ನಾನು ಇಡೀ ಪಶುಸೃಷ್ಟಿ ಯನ್ನೇ ಕಾಣುತ್ತೇನೆ. ನಿನಗೆ ತರ್ಪಣ ಮಾಡಿದರೆ ಇಡಿ ಪಶುಸೃಷ್ಟಿಗೆ ಮುಟ್ಟಿದಂತಾಗುತ್ತದೆ." ಭಾರತೀಯ ಸಂಸ್ಕೃತಿಯಲ್ಲಿ ಗೋವಿನ ಮಹತ್ವವು ಎಲ್ಲ ಕಡೆಯಲ್ಲಿಯೂ ಬಣ್ಣಿಸಲಾಗಿದೆ. ಆಕಳನ್ನು ಕುರಿತು ಸಾವಿರಾರು ಹಾಡುಗಳಿವೆ. ಆಕಳ ಕರುವಿನೊಡನೆ ಭಾರತದ ಮಕ್ಕಳು ಆಡುವದನ್ನು ನಾವು ನೋಡುತ್ತೇವೆ. ಆಕಳ ಕರುವೆಂದರೆ ನಮ್ಮ ದೇಶದ ಮಕ್ಕಳಿಗೆ ಅಣ್ಣತಮ್ಮಂದಿರಂತೆ.

ನಮ್ಮ ಹುಡುಗರ ಹುಟ್ಟಿದ ಹನ್ನೆರಡನೆಯ ದಿನ ನಾಮಕರಣ ದಿನ ವೆಂದು ನಾವು ಆಚರಿಸುತ್ತೇವೆ. ಅದರಂತೆ ನಮ್ಮ ಸಂಸ್ಕೃತಿಯು ಆಕಳ ಕರಗಳಿಗೂ ಒಂದು ದಿವಸ ಕಲ್ಪಿಸಿದೆ. ಆಶ್ವೀನ ಕೃಷ್ಣ ಪಕ್ಷದ ದ್ವಾದಶಿಯೇ ಈ ದಿವಸ. "ವಸು ಬಾರಸ" ಎಂಬ ಹೆಸರು ಇದಕ್ಕಿದೆ. ಎಂಥ ಸಹೃದ ಯವಾದ ಭಾವನೆ.

ಆಕಳ, ಆಕಳಕರ ಇವುಗಳ ಪೂಜೆಯ ಹಬ್ಬ ಆಚರಿಸುವಂತೆ, ಎತ್ತು

ಗಳ ಹಬ್ಬವಾದರೂ ಅದೆ. ಕರ್ನಾಟಕದಲ್ಲಿ "ಮಣ್ಣೆತ್ತಿನ ಅಮಾವಾಸಿ" ಎಂದು ಆಚರಿಸುವದುಂಟು. ಅದರಂತೆ ಮಹಾರಾಷ್ಟ್ರದಲ್ಲಿ "ಪೊಳ್ಯಾಚಾ ಸಣ" ಎಂದು ಕರೆಯುತ್ತಾರೆ. ಅಂದು ಎತ್ತುಗಳನ್ನು ಸಿಂಗರಿಸಿ ವಿಜೃಂಭಣೆಯಿಂದ ಮೆರೆಯಿಸುತ್ತಾರೆ. ಮನೆಯ ಯಜಮಾನತಿಯ ಆಭರಗಳನ್ನು ಎತ್ತುಗಳಿಗೆ ಹಾಕುತ್ತಾರೆ. ಹೀಗೆ ದುಡಿದು, ಸವೆದು ನಮಗೆ ಸಲ್ಲಿಸಿದ ಸೇವೆಯನ್ನರಿತು ನಮ್ಮ ಕೃತಜ್ಞತೆಯನ್ನು ತೋರಿಸುತ್ತೇವೆ. ಈ ಹಬ್ಬಗಳ ಕಲ್ಪನೆ ಮನಸ್ಸಿನಲ್ಲಿ ಬಂದೊಡನೆ ಕೃತಜ್ಞತೆಯಿಂದ ಕಣ್ಣು ತುಂಬಿ ಬರುತ್ತವೆ ಮತ್ತು ಭಾರತೀಯ ಸಂಸ್ಕೃತಿಯ ಆತ್ಮವು ನನಗೆ ದಿವ್ಯವಾಗಿ ತೋರುತ್ತದೆ.

ಆದರೆ ಇಂದು ದಾಸ್ಯ ಅಜ್ಞಾನ ದಾರಿದ್ರ್ಯಗಳ ಮೂಲಕ ನಾವು ನಮ್ಮ ದನಗಳನ್ನು ಅತಿ ಕ್ರೂರ ರೀತಿಯಿಂದ ನಡೆಸಿಕೊಳ್ಳುತ್ತೇವೆ. ದನದ ಹಬ್ಬದ ದಿವಸ ನಾವು ಮಾಡುವ ಕೃತಿಗಳು ಯಂತ್ರದಂತೆ ಆಗಿವೆ. ಅವುಗಳಲ್ಲಿ ಹುರುಳಿಲ್ಲ; ಅವರಲ್ಲಿದ್ದ ಭಾವವು ನಮ್ಮ ಹೃದಯದಲ್ಲಿ ನಾಟಲೊಲ್ಲದು. ಹೀಗಿದ್ದರೂ ತಮ್ಮ ಜೀವದಕಿಂತ ಹೆಚ್ಚು ಪ್ರೀತಿಯಿಂದ ದನಗಳನ್ನು ಜೋಪಾನಮಾಡುವ ಒಕ್ಕಲಿಗರನ್ನು ಅಲ್ಲಲ್ಲಿ ಕಾಣಬಹುದು. ಎಷ್ಟೋ ಒಕ್ಕಲಿಗರು ಅವರ ಎತ್ತುಗಳಿಗೆ ಬೈದರೆ ಸಹ ಸಿಟ್ಟಿಗೇಳುತ್ತಾರೆ.

ಭಾರತೀಯ ಸಂಸ್ಕೃತಿಯು ಹೇಳುತ್ತದೆ. "ಆಕಳು ಎತ್ತುಗಳಿಂದ ನಿಮಗೆ ಸಾಕಷ್ಟು ಕೆಲಸಗಳನ್ನು ತಕ್ಕೊಳ್ಳಿರಿ, ಅವನ್ನು ದುಡಿಸಿಕೊಳ್ಳಿರಿ, ಆದರೆ ಅದನ್ನೆಲ್ಲ ಪ್ರೀತಿಯಿಂದ ಪಡೆಯಿರಿ. ಕಾಲಕಾಲಕ್ಕೆ ಅವುಗಳಿಗೆ ನೀರು ಮೇವು ಕಾಳು ಕೊಡಿರಿ. ಬಾರಕೋಲಿನಿಂದ ಹೊಡೆಯಬೇಡಿರಿ. ಮೂಕ ದನಗಳ ಆಶೀರ್ವಾದ ಪಡೆಯಿರಿ. ನಿಮಗಾಗಿ ದುಡಿದು ಸವೆಯುವ ಈ ದನಗಳಿಗೆ ಕೃತಜ್ಞರಾಗಿರಿ. ದನಗಳಿಗೂ ಪ್ರೇಮದ ಭಾವವಿದೆ. ಒಡೆಯನ ಪ್ರೀತಿಯ ಕೈ ಮೈಗೆ ಹತ್ತಿದೊಡನೆ ಅವು ಕುಣಿಯಹತ್ತುತ್ತವೆ. ಒಡೆಯ ತೀರಿಕೊಂಡ ಮೇಲೆ ಕೂಳು ನೀರು ಬಿಟ್ಟು ತಾವೂ ಸತ್ತ ದನಗಳ ಉದಾಹರಣೆಗಳನ್ನು ನಮ್ಮ ದೇಶದಲ್ಲಿ ಅಲ್ಲಲ್ಲಿ ಕಾಣಬಹುದು.

ಮಹಮ್ಮದ ಪೈಗಂಬರರು ಕುರಾಣದಲ್ಲಿ ಬರೆದಿದ್ದಾರೆ. "ಸಂಜೆಯಾದ ಕೂಡಲೆ ದನಗಳು ನಿಮ್ಮ ಮೇಲೆ ಇದ್ದ ಪ್ರೇಮದಿಂದಲೇ ನಿಮ್ಮ ಮನೆಗೆ ತಿರುಗಿ ಬರುತ್ತವೆ." ನಿಜವಾಗಿಯೂ ಇದು ಮನುಷ್ಯನಿಗೆ ಭೂಷಣಾಸ್ಪದವಾದದ್ದು.

ಆಕಳ ರೂಪದಿಂದ ಪಶುಸೃಷ್ಟಿಯೊಡನೆ ನಾವು ಸಂಬಂಧವಿಟ್ಟು ಕೊಂಡಂತೆ ಗಿಳಿ, ಕಾಗೆ, ಗುಬ್ಬಿಗಳೊಡನೆ ಸಂಬಂಧವನ್ನು ಬೆಳಿಸಿ ಪಕ್ಷಿ ಸೃಷ್ಟಿಯೊಡನೆ ನಮ್ಮ ಸ್ನೇಹವನ್ನು ಇಟ್ಟುಕೊಂಡಿದ್ದೇವೆ. ಎಲ್ಲ ಪಕ್ಷಿಗಳೊ ಡನೆ ಸ್ನೇಹ ಬೆಳಿಸುವದು ಅಸಾಧ್ಯವಾದ ಮಾತು. ಅಂತೇ ಆ ಸೃಷ್ಟಿಯ ಕೆಲವು ಪ್ರತಿನಿಧಿಗಳೊಡನೆ ಪ್ರೇಮದಿಂದ ನಡೆದುಕೊಳ್ಳುವದು.

ಚಿಕ್ಕಮಕ್ಕಳಿಗೆ ಉಣಿಸುವಾಗ ತಾಯಂದಿರು ಕಾಗೆಯನ್ನು ತೋರಿಸಿ, ಗುಬ್ಬಿಯನ್ನು ಕರೆದು, ಗಿಳಿಯನ್ನು ಉಣಿಸಿ ತುತ್ತು ಕೊಡುತ್ತಾರೆ. ಈ ಕಾರಣದಿಂದಾದರೂ ಪಕ್ಷಿ ಸೃಷ್ಟಿಯ ನೆನಹು ನಮಗೆ ಆಗುತ್ತದೆ.

ಭಾರತೀಯ ಸಂಸ್ಕೃತಿಯಲ್ಲಿ ಅಲ್ಲಲ್ಲಿ ಪಕ್ಷಿಗಳ ವರ್ಣನೆಯನ್ನು ನಾವು ಕಾಣುತ್ತೇವೆ. ಅಂದವಾದ ಪಕ್ಷಿಗಳ ಸಂಬಂಧವು ನಮ್ಮ ಜೀವನದಲ್ಲಿ ಬಂದಿದೆ. ನಯನ ಮನೋಹರವಾದ ನವಿಲುಗರಿಯ ವಿಸ್ತಾರವನ್ನು ಮರೆ ಯುವರಾರು ? ನವಿಲು ನಮಗೆ ಪವಿತ್ರವಾದ ಪಕ್ಷಿ. ಕೈಯಲ್ಲಿ ವೀಣೆ ಕೊಟ್ಟು ಸರಸ್ವತಿಯನ್ನು ನಾವು ನವಿಲಿನ ಮೇಲೆ ಕೂಡಿಸಿ ಬಿಟ್ಟೆವು. ನವಿಲಿನ ದರ್ಶನ ಶುಭದಾಯಕವೆಂದು ತಿಳಿದುಕೊಂಡು ನಾವು ಮನೆಯಲ್ಲಿ ದೀಪಕ್ಕೆ ಸಹ ನವಿಲಿನ ಆಕಾರವನ್ನು ಕೊಡುತ್ತೇವೆ.

ಅದರಂತೆ ಕೋಗಿಲೆ; ಎಂಟು ತಿಂಗಳು ಮರೆಯಾಗಿ ವಸಂತ ಮಾಸ ದಲ್ಲಿ ಅದರ ಕಂಠವು "ಕೂವೂ ಕೂವೂ'' ಎಂಬ ಹಾಡನ್ನು ಹಾಡಿ ಎಲ್ಲ ರನ್ನು ತಣಿಸುತ್ತದೆ. ಬೇಸಿಗೆಯಲ್ಲಿ ಗಿಡಗಳಿಗೆ ಹೊಸ ಚಿಗುರು ಬಂದದ್ದನ್ನು ನೋಡಿ ಕೋಗಿಲೆಯು ಸ್ಫೂರ್ತಿಗೊಳ್ಳುತ್ತದೆ. ಅವಳು ಬಹಳ ವಿನಯ ಶೀಲಳು, ಲಜ್ಜಾಶೀಲಳು, ಗಿಡದಲ್ಲಿ ದಟ್ಟಾದ ಎಲೆಗಳ ಸಮೂಹದಲ್ಲಿ ಯಾರಿಗೂ ಕಾಣದಂತೆ ಕೋಗಿಲೆ ಕೂತು ಹಾಡುತ್ತದೆ. ಕೋಗಿಲೆಯ ಶಬ್ದ ಕೇಳದೆ ಉಣ್ಣುವಂತೆ ಇಲ್ಲ ಎಂಬ ವ್ರತವನ್ನು ಎಷ್ಟೊ ಹೆಣ್ಣುಮಕ್ಕಳು ಕೈಕೊಳ್ಳುತ್ತಾರೆ. ಅದಕ್ಕೆ "ಕೋಕಿಲಾ ವ್ರತ'' ವೆಂಬ ಹೆಸರು.

ಗಿಳಿ! ನಾವು ಎಂದಾದರೂ ಇದನ್ನು ಮರೆಯಬಹುದೇ ? ಕೆಂಪಾದ ಚುಂಚು, ಹಚ್ಚಗಾದ ಮೈ, ಅದರ ಮಾತು, ಶೀಳು ಹಾಕುವ ಧ್ವನಿ, ಅತ್ತಿತ್ತ ತೂಗಾಡುವ ಗೋಣು ! ಅದರ ಸಡಗರ ನೋಡಬೇಕು ಮತ್ತು ಮನಸ್ಸು ಸಂತೋಷಗೊಳ್ಳಬೇಕು. ಗಿಳಿಗೆ ಪಂಜರದಲ್ಲಿ ಇರುವದು ಬೇಡಾ ದದ್ದು; ಆದರೆ ಮಾನವನಿಗೆ ಪಕ್ಷಿಯೊಡನೆ ತನ್ನ ಸ್ನೇಹ ಬೆಳಿಸಬೇಕೆನ್ನುವ ಹಂಬಲವಿರುತ್ತದೆ. ಗಿಳಿಯ ಕಾಳಜಿಯನ್ನು ಮನುಷ್ಯನು ಬಹಳ ವಹಿಸು ತ್ತಾನೆ.

ನಮ್ಮ ಹುಡುಗರಿಗೆ ನಾವು ರಾಘು, ಮೈನಾ, ಹಂಸಾ ಮೊದಲಾದ ಪಕ್ಷಿಗಳ ಹೆಸರನ್ನಿಡುತ್ತೇವೆ. ಈ ರೀತಿ ವಿವಿಧ ಬಗೆಯಿಂದ ಮಾನವನು ಪಶುಪಕ್ಷಿಗಳೊಡನೆ ತನ್ನ ಪ್ರೀತಿಯ ಸಂಬಂಧಗಳನ್ನು ಬೆಳೆಯಿಸಿದ್ದಾನೆ.

ಇದರಂತೆ ವನಸ್ಪತಿ ಸೃಷ್ಟಿಯೊಡನೆ. ಸೃಷ್ಟಿಯಲ್ಲಿ ಬೆಳೆಯುವ ಎಲ್ಲ ವೃಕ್ಷಗಳ ಹುಲ್ಲುಗಂಟಿಗಳ ಬೆಳವಣಿಗೆಯನ್ನು ನೋಡುವದು ಮಾನವನಿಗೆ ಸಾಧ್ಯವಿಲ್ಲದ ಮಾತು. ಅದಕ್ಕಾಗಿ ಏನೋ ವನಸ್ಪತಿ ಸೃಷ್ಟಿಯ ಪ್ರತಿನಿಧಿಯೆಂದು ತುಳಸಿ, ಬೆಲಪತ್ರಿಗಿಡ, ಆಲದಮರ, ಅರಳಿಮರ, ಹೀಗೆ ಕೆಲವೊಂದು ಮರಗಳ ಕಾಳಜಿ ವಹಿಸುತ್ತಾನೆ ಮಾನವನು. ಅವನ್ನು ಒಳ್ಳೇ ಪ್ರೀತಿಯಿಂದ ಜೋಪಾನ ಮಾಡುತ್ತಾನೆ. ತುಳಸಿಯ ಲಗ್ನ ಮಾಡುತ್ತಾನೆ. ಅರಳಿಮರದ ಮುಂಜಿವಿಯನ್ನು ಮಾಡುತ್ತಾನೆ. ಅವುಗಳಿಗೆ ಕಟ್ಟೆ ಕಟ್ಟಿಸುತ್ತಾನೆ. ಹೀಗೆ ತನ್ನ ಪ್ರೀತಿಯನ್ನು ಬೆಳೆಯಿಸುತ್ತಾನೆ. ಬೇರೆ ಬೇರೆ ನೆವದಿಂದ ಸೃಷ್ಟಿಯೊಡನೆ ಸ್ನೇಹ ಬೆಳಿಸುವದು. ವನಭೋಜನ ಮಾಡುವದು, ದೇವರಿಗಾಗಿ ಹೂ, ಪತ್ರಿ, ಕರಿಕೆ ತರುವದು. ಮನೆಯ ತೋಟದಲ್ಲಿ ಹೂವಿನ ಗಿಡ ಬೆಳಿಸುವದು.

ಭಾರತೀಯ ಸಾಹಿತ್ಯದಲ್ಲಿ ಗಿಡಬಳ್ಳಿಗಳ ಮೇಲಿದ್ದ ಪ್ರೀತಿಯನ್ನು ಕುರಿತು ಅಲ್ಲಲ್ಲಿ ಹಾಡಿದ್ದು ಅದೆ. ಕಾಲಿದಾಸನ ಶಾಕುಂತಲದಲ್ಲಿ ಇದನ್ನು ನಾವು ಕಾಣಬಹುದು. ಶಕುಂತಲೆ ಮಾವಿನ ಗಿಡ ಮತ್ತು ಅತಿ-ಮುಕ್ತ ಲತೆಯ ಮದುವೆಯನ್ನು ಏರ್ಪಡಿಸುತ್ತಾಳೆ. ಬಳ್ಳಿಯಿಂದ ವೃಕ್ಷಕ್ಕೆ ಸೊಗಸು.ಬಳ್ಳಿ ಗಿಡದ ಮೇಲೆ ಹಬ್ಬುವದು, ಗಿಡಬಳ್ಳಿಗೆ ಆಧಾರ. ಶಕುಂತಲೆಯನ್ನು ಬಣ್ಣಿಸುವಾಗ ಕಣ್ವಮಹರುಷಿಯು ಹೇಳಿದ್ದಾನೆ. "ಗಿಡಗಳಿಗೆ ನೀರು ಹಾಕದೆ, ಶಕುಂತಲೆ ನೀರು ಕುಡಿಯುತ್ತಿದ್ದಿಲ್ಲ. ಅವಳು ಹೂಗಳನ್ನು ಮುಡಿಯುತ್ತಿದ್ದಳು. ಹೂವೆಂದರೆ ಹುಚ್ಚು ಅವಳಿಗೆ. ಆದರೂ ಅವಳು ಯಾವ ಗಿಡದ ಹೂವನ್ನಾಗಲಿ ಎಲೆಗಳನ್ನಾಗಲೀ ಹರಿಯುತ್ತಿದ್ದಿಲ್ಲ.'' ಶಕುಂತಲೆಗೆ ಬೀಳ್ಕೊಡಲು ಕಣ್ವನು ಗಿಡಬಳ್ಳಿಗಳಿಗೆ ಹೇಳುತ್ತಾನೆ. ಆ ಪ್ರೇಮವನ್ನು ಸುರಿಸುವ ಶಕುಂತಲೆಯನ್ನು ಅಗಲುವಾಗ ಗಿಡಬಳ್ಳಿಗಳೆಲ್ಲವೂ ಕಣ್ಣೀರು ಸುರಿಸಿರಬೇಕು.

ರಾಮನು ಹನ್ನೆರಡು ವರ್ಷ ವನವಾಸಕ್ಕೆ ಹೊರಟನು. ಆಗ ಅವನಿಗೆ ಸಂಕಟವೆಂದೆನಿಸಿದ್ದಿಲ್ಲ. ಅಯೋಧ್ಯೆಯಲ್ಲಿಯ ಅರಮನೆಗಿಂತ ಅವನಿಗೆ ಕಾಡಿನಲ್ಲಿಯ ಗಿಡಗಳೇ ಹೆಚ್ಚು ಪ್ರಿಯವಾಗಿದ್ದವು. ರಾಮಾಯಣದಲ್ಲಿ

ರಾಮನಿಗೆ "ಅಡವಿಯ ನಲ್ಲ" ಎಂದು ಬಣ್ಣಿಸಿದ್ದು ಅದೆ. ಗಿಡಬಳ್ಳಿಗಳು ಅವನ ಗೆಳೆಯರಾಗಿದ್ದರು. ಪಂಚವಟಿ ಎಂದೊಡನೆ ರಾಮನು ನಮ್ಮ ಕಣ್ಣೆದಿರು ನಿಲ್ಲುವನು. ವಿಶಾಲವಾದ ಆಲದ ಮರದ ಬುಡದಲ್ಲಿ ರಾಮ ಲಕ್ಷ್ಮಣ ಸೀತೆಯರು ಆನಂದದಿಂದ ಬಾಳಿದರು. ಅಲ್ಲಿ ಸೀತೆಯು ಗಿಡಬಳ್ಳಿಗಳನ್ನು ಗೋದಾವರಿಯ ನೀರನ್ನು ಹಾಕಿ ಜೋಪಾನ ಮಾಡಿದ್ದಳು. ಈ ಗಿಡಗಳನ್ನು ನೋಡಿದೊಡನೆ ರಾಮನು ಕಣ್ಣೀರು ಸುರಿಸಿದ್ದು ಉತ್ತರ ರಾಮಚರಿತೆಯಲ್ಲಿ ಬಣ್ಣಿಸಲಾಗಿದೆ.

ದೇವದಾರು ಗಿಡವನ್ನು ಪಾರ್ವತೀದೇವಿಯು ತನ್ನ ಮಗನಂತೆ ಜೋಪಾನ ಮಾಡಿದ್ದರ ವರ್ಣನೆಯನ್ನು ರಘುವಂಶದಲ್ಲಿ ಕಾಣುತ್ತೇವೆ. ಆನೆಗಳು ಬಂದು ಆ ಗಿಡದ ತೊಗಟೆಯಮೇಲೆ ತಮ್ಮ ಮೈ ತಿಕ್ಕಿ ಅವುಗಳನ್ನು ಸುಲಿದದ್ದು ನೋಡಿ ಅವಳಿಗೆ ಸಂತಾಪ ಬಂದಿತು. ಅದನ್ನು ಕಾಯಲು ಶ್ರೀ ಶಂಕರನು ಕಾವಲುಗಾರರನ್ನು ಇಟ್ಟಿದ್ದನು. "ಅಮುಂ ಪುರಃ ಪಶ್ಯಸಿ ದೇವದಾರುಂ ಪುತ್ರೀಕೃತೋಽಸೌ ವೃಷಭಧ್ವಜೇನ" ಎಂದು ಸಿಂಹವು ದಿಲೀಪರಾಯನಿಗೆ ಹೇಳುತ್ತದೆ.

ಈ ರೀತಿ ಗಿಡಬಳ್ಳಿಗಳಿಗೂ ನಮ್ಮಂತೆ ಭಾವನೆಗಳಿವೆ ಎಂಬುದನ್ನು ನಾವು ನಂಬುತ್ತೇವೆ. ಬೇಸಿಗೆಯಲ್ಲಿ ತುಲಸೀ ಗಿಡಕ್ಕೆ ಅಖಂಡ ಧಾರೆಯನ್ನೀಯುತ್ತಾರೆ. ರಾತ್ರಿಯಲ್ಲಿ ಹೂವುಗಳನ್ನು ಎಲೆಗಳನ್ನು ಹರಿಯಬಾರದೆಂದು ವಾಡಿಕೆಯಿದೆ. ನಮಗೆ ರಾತ್ರಿ ಪೂಜೆಗಾಗಿ ಹೂವುಗಳು ಕರಿಕೆ ಬೇಕಾಗಿದ್ದರೆ ಅವನ್ನು ಹಗಲು ತಂದು ಇಡತಕ್ಕದ್ದು. ರಾತ್ರಿ ಗಿಡಗಳು ಮಲಗುತ್ತವೆ ಎಂಬ ನಂಬಿಕೆ ಇದೆ. ಒಂದು ದಿನ ರಾತ್ರಿ ಮಹಾತ್ಮಾಜಿಯವರಿಗೆ ಅರಳಿ ಹಿಂಜುವ ಬಿಲ್ಲಿನ ದಾರಕ್ಕೆ ಹಚ್ಚಲಿಕ್ಕೆ ಸ್ವಲ್ಪ ಎಲೆಗಳು ಬೇಕಾಗಿದ್ದವು. ಅವರು ಮೀರಾಬೇನಳಿಗೆ ಹೇಳಿದರು. ಅವರು ನಿಂಬಿ ಗಿಡದ ಒಂದು ದೊಡ್ಡ ಟೊಂಗೆಯನ್ನೇ ತಂದರು. ಆಗ ಮಹಾತ್ಮಾಜಿಯವರು ಅಂದರು. "ಏನಿದು ನಾನು ಸ್ವಲ್ಪ ಎಲೆ ತರಲಿಕ್ಕೆ ಹೇಳಿದರೆ ಇಡೀ ಟೊಂಗೆಯನ್ನೆ ಹರಿದುಕೊಂಡು ಬಂದೆಯಲ್ಲ. ನೋಡು, ಈ ಎಲೆಗಳು ಹೇಗೆ ಮಲಗಿಕೊಂಡಿವೆ ! ರಾತ್ರಿ ಎಲೆಗಳನ್ನು ಹರಿಯಕೂಡದು. ತೀರ ಅಗತ್ಯ ಇದ್ದ ಪಕ್ಷದಲ್ಲಿ ಎಷ್ಟು ಬೇಕು ಅಷ್ಟೇ ಸಾವಕಾಶ ಹರಿದುಕೊಂಡು ಬರಬೇಕು. ಅಹಿಂಸೆಯ ವಿಚಾರ ಎಷ್ಟು ಮಾಡಿದರೂ ಕಡಿಮೆಯೇ !" ಇದನ್ನು ಕೇಳಿ ಮೀರಾಬೇನಳು ಸದ್ಗದಿತಳಾದಳು.

ನಮ್ಮ ಜನರ ಬೇರೆ ಬೇರೆ ಹಬ್ಬಗಳಲ್ಲಿ ಸಹ ಗಿಡಗಂಟಿ ಬಳ್ಳಿ ಮುಂತಾದ ವನಸ್ಪತಿಗಳ ಮೇಲಿನ ನಮ್ಮ ಪ್ರೇಮವು ಕಂಡುಬರುವದು. ಹೀಗೆ ನಮ್ಮ ಸಂಸ್ಕೃತಿಯು ವನಸ್ಪತಿ ಸೃಷ್ಟಿಯೊಡನೆ ಪ್ರೀತಿಯ ಸಂಬಂಧ ವನ್ನು ಬೆಳೆಯಿಸಿದೆ. ಇದರಂತೆ ಶಿಲಾಸಪ್ತಮಿ ದಿವಸ ಒಲೆಯ ಪೂಜೆ ಮಾಡುವ ಪದ್ಧತಿ ಇದೆ. ನಮಗಾಗಿ ಸುಟ್ಟು ಅನ್ನವನ್ನು ಕೊಡುವ ಒಲೆಗೆ ಒಂದು ದಿವಸ ಬಿಡುವು. ಅಂದು ಅದರ ಪೂಜೆ.

ಹೀಗೆ ದೀಪದ ಅಮಾವಾಸ್ಯೆ. ದೀಪ ನಮಗಾಗಿ ಸುಟ್ಟು ಬೆಳಕನ್ನು ಕೊಡುತ್ತದೆ. ಅದರ ಉಪಕಾರವನ್ನು ನೆನೆಸುವ ದಿವಸ.

ಕೈಯೊಳಗಿನ ಪಾತ್ರೆ ಬಿದ್ದ ಕೂಡಲೆ ಧ್ವನಿ ಹೊರಡುತ್ತದೆ. ಅದನ್ನು ಬಂದು ಮಾಡಲು ನಾವು ಕೈ ಹಚ್ಚುತ್ತೇವೆ. ಏನೋ ಆ ಪಾತ್ರೆಗೆ ನೋವಾಗಿ ಅದು ಅಳುತ್ತದೆ. ಅದಕ್ಕೆ ಕೈ ಹಚ್ಚಿ ಸಮಾಧಾನ ಮಾಡಿದಂತೆ, ಅದಕ್ಕಾಗುವ ದುಃಖವನ್ನು ಅರಿತಂತೆ.

ಹೀಗಿದೆ–ಎಲ್ಲೆಡೆಯಲ್ಲಿಯೂ ಪ್ರೇಮದಿಂದ ನಮ್ಮ ಸಂಸ್ಕೃತಿಯು ತುಂಬಿ ತುಳುಕುತ್ತಿದೆ. ನಾಗಪಂಚಮಿಯ ದಿವಸ ನಾಗರ ಹಾವಿನ ಪೂಜೆ ಯನ್ನು ಮಾಡುವದು. ತೇಜಸ್ಸುಳ್ಳ, ಸಂಯಮಿಯಾದ, ಅಂದವಾದ ನಾಗರಹಾವಿನ ಪೂಜೆ. ನಾಗರ ಹಾವು ಯಾವಾಗಲೂ ಅಡವಿಯಲ್ಲಿಯೇ ವಾಸಿಸುತ್ತದೆ. ಆದರೆ ಮಳೆಗಾಲದಲ್ಲಿ ಅದರ ಹುತ್ತಿನಲ್ಲಿ ನೀರು ಸೇರುವ ದರಿಂದ ಏನೋ ಆಶ್ರಯಕ್ಕೆಂದು ನಮ್ಮ ಸಾನ್ನಿಧ್ಯದಲ್ಲಿ ಬರುತ್ತದೆ. ನಮ್ಮ ಅತಿಥಿ ಇದ್ದಂತೆ. ಅದಕ್ಕೆ ಸೇರುವದು ಕಾಡು, ಪಾವಿತ್ರ್ಯ, ಸ್ವಚ್ಛತೆ, ಪರಿಮಳ. ಅದು ಹೂವಿನ ಹತ್ತರ ಹೋಗುವದು. ಕೇದಿಗೆಯನ್ನು ಮೂಸಿ ನೋಡುವದು ಮತ್ತು ಚಂದನದ ಗಿಡಕ್ಕೆ ಅಪ್ಪಿಕೊಳ್ಳುವದು ! ಅದು ಸಹಜ ವಾಗಿ ಯಾರಿಗೂ ಕಡಿಯುವದಿಲ್ಲ; ಕಡಿದರೆ ಮಾತ್ರ ಸಾವು. ಇಡೀ ವರ್ಷ ದುಡಿದು ಸಿಕ್ಕ ಸಾಮರ್ಥ್ಯವನ್ನು ಪುಕ್ಕಟೆಯಾಗಿ ಕಳೆಯಲು ಅದು ಇಚ್ಛಿ ಸುವುದಿಲ್ಲ. ಆದ್ದರಿಂದಲೇ ಅದರ ಕಡಿತದಲ್ಲಿ ಇಷ್ಟು ಶಕ್ತಿ ಇದೆ. ನಾಗರ ಹಾವು ಹೊಲಗಳನ್ನು ಇಲಿಗಳ ಉಪದ್ರವದಿಂದ ಕಾಯುತ್ತದೆ. ಅದಕ್ಕಾಗಿ ಅದರ ಹುತ್ತಿನ ಹತ್ತರ ಹಾಲು ಅಳ್ಳು ಇಡುವರು. ಅದಕ್ಕೆ "ಕ್ಷೇತ್ರಪಾಲ" ಎಂದು ಹೆಸರಿದೆ. ವಿಷಮಯವಾದ ಹಾವಿನಲ್ಲಿಯೂ ಇದ್ದ ಗುಣಗಳನ್ನು ಕಾಣಲು ಭಾರತೀಯ ಸಂಸ್ಕೃತಿಯು ಹೇಳುತ್ತದೆ.

ಜೀವನದ ಕಡೆ ನೋಡುವ ವ್ಯಾಪಕವಾದ ಭಾರತೀಯ ದೃಷ್ಟಿ ಇದು.

ನದಿಗಳ ಉತ್ಸವ ಪೂಜೆ. ಅಖಂಡವಾಗಿ ಅವು ನಮ್ಮ ಹೊಲಗಳಿಗೆ ನೀರು ಕೊಡುತ್ತವೆ. ಪರ್ವತಗಳ ಜಾತ್ರೆ ಪೂಜೆ. ಅವು ನಮ್ಮ ದನಕರುಗಳಿಗೆ ಹುಲ್ಲನ್ನು ಕೊಡುತ್ತವೆ, ನಮ್ಮ ನದಿಗಳಿಗೆ ನೀರು ಪೂರೈಸುತ್ತವೆ, ಹೊಲ ಗಳಿಗೆ ಉತ್ತಮವಾದ ಮಣ್ಣು ಕೊಡುತ್ತವೆ. ಅನಂತ ವಂದನೆಗಳು ಈ ಪರ್ವತಗಳಿಗೆ.

ನದಿಗೆ ನಮ್ಮ ತಾಯಿಯೆಂದು ಕರೆಯುತ್ತೇವೆ. ತಾಯಿಯ ಹಾಲಿಲ್ಲ ದಿದ್ದರೂ ನಡೆಯಬಹುದು, ಆದರೆ ಈ ನೀರು—ತಾಯಿಯ ಹಾಲು ಬೇಕೇ ಬೇಕು. ನಮ್ಮ ಹೆಣ್ಣುಮಕ್ಕಳಿಗೆ ನದಿಗಳ ಹೆಸರನ್ನು ಇಡುತ್ತೇವೆ.

ಇವೆಲ್ಲವುಗಳಿಗಿಂತ ಹಿರಿದಾದದ್ದು ನಮ್ಮ ಪೃಥ್ವಿ! ಎಷ್ಟು ಕ್ಷಮಾ ವಂತಳು, ಉದಾರಳು! ನೇಗಿಲದಿಂದ ಚುಚ್ಚುತ್ತೇವೆ. ಆದರೆ ನಮಗೆ ತೆನೆ ಗಳನ್ನು ಕೊಡುತ್ತಾಳೆ. ಎಷ್ಟು ಹೊಲಸು ಪೃಥ್ವಿಯ ಮೇಲೆ ನಾವು ಚಲ್ಲು ತ್ತೇವೆ. ಆದರೆ ಭೂಮಾತೆ ಎಂದಿಗೂ ಸಿಟ್ಟಿಗೇಳುವದಿಲ್ಲ. ತನ್ನ ಮಕ್ಕಳೆಲ್ಲ ರನ್ನೂ ಕ್ಷಮಿಸುತ್ತಾಳೆ. "ಭೂಮಾತೆಯನ್ನು ಯಾವಾಗಲೂ ನೆನಸು, ಅವ ಳನ್ನು ಮರೆಯಬೇಡೆ''ಂದು ಭಾರತೀಯ ಸಂಸ್ಕೃತಿಯು ಹೇಳುತ್ತಿದೆ. ಪೃಥ್ವಿಯ ಹಿರಿಮೆಯನ್ನು ನಾವು ಮರೆತಿಲ್ಲ. ಚಂದ್ರ ಸೂರ್ಯ ಚಿಕ್ಕೆಗಳು ಅವಳ ಹೆರಳಿನಲ್ಲಿಯ ಹೂಗಳಿದ್ದಂತೆ. ಸಮುದ್ರವು ಅವಳು ಉಟ್ಟ ವಸ್ತ್ರ ವಂತೆ. ಹೂವಿನ ಹಾರಗಳನ್ನು ಹಾಕಿಕೊಂಡಿದ್ದಾಳೆ, ಹಸರು ಕುಪ್ಪಸ ವನ್ನು ತೊಟ್ಟಿದ್ದಾಳೆ. ಶೇಷ ವಾಸುಕಿ ಇವರು ಅವಳು ತನ್ನ ಕಾಲಲ್ಲಿ ತೊಟ್ಟ ತೋಡೆಗಳಿದ್ದಂತೆ.''

ಪ್ರಾತಃಕಾಲದಲ್ಲಿ ಎದ್ದೊಡನೆ "ತಾಯಿ, ನನ್ನ ಕಾಲು ನಿನಗೆ ತಗಲು ವವು. ನನ್ನನ್ನು ಕ್ಷಮಿಸು'' ಎಂದು ಬೇಡಿಕೊಳ್ಳುವದು.

**"ಸಮುದ್ರವಸನೇ ದೇವಿ ಪರ್ವತಸ್ತನ ಮಂಡಿತೆ।**
**ವಿಷ್ಣುಪತ್ನಿ ನಮುಸ್ತುಭ್ಯಂ ಪಾದಸ್ಪರ್ಶಂ ಕ್ಷಮಸ್ವ ಮೆ॥**

ಚರಾಚರ ಸೃಷ್ಟಿಯಮೇಲೆ ಪ್ರೀತಿ ಮಾಡಲು ಹೇಳುವ ಕೃತಜ್ಞತೆ ಯನ್ನು ಅಲ್ಲಲ್ಲಿ ತೋರುವ ಸಂಸ್ಕೃತಿ ಇದೆ ನಮ್ಮದು. ಈ ಸಂಸ್ಕೃತಿಯ ಅಂತರಾತ್ಮವನ್ನು ಅರಿತುಕೊಳ್ಳಿರಿ. ಅದರ ದನಿ ತಿಳಿದುಕೊಳ್ಳಿರಿ, ಅದರ ಬಾಹ್ಯರೂಪವನ್ನು ಕಾಣಲು ಪ್ರಯತ್ನಿಸಿರಿ. ಈ ಸಂಸ್ಕೃತಿಯ ಗುರಿಯನ್ನು ತಿಳಿಯಿರಿ. ಅದು ಎಲ್ಲಿ ಹೋಗಬಯಸುತ್ತದೆ, ಏತರ ವಿಚಾರ ಮಾಡ ಬಯಸುತ್ತದೆ, ಮತ್ತು ಏನನ್ನು ಗಳಿಸಲು ಹೊರಟಿದೆ ಇದನ್ನು ತಿಳಿದು

ಕೊಳ್ಳಿರಿ. ಸಹೃದಯತೆಯಿಂದ, ಬುದ್ಧಿಪೂರ್ವಕವಾಗಿ ಮತ್ತು ನಮ್ಮ ಹಿರಿಯರ ದೃಷ್ಟಿಯನ್ನು ಮುಂದಿಟ್ಟುಕೊಂಡು ವಿಚಾರ ಮಾಡಿರಿ. ಗುರಿಯನ್ನು ಮುಟ್ಟಲು ಹಗಲಿರುಳು ದುಡಿಯುವದೇ ನಮ್ಮ ಕೆಲಸ.

ವಿಶ್ವವನ್ನೇ ಪ್ರೀತಿಸಲು ಹಚ್ಚುವ ಹೆಗ್ಗುರಿಯನ್ನು ದಯಪಾಲಿಸಿದ ಭಾರತೀಯ ಸಂಸ್ಕೃತಿಯೇ, ನಿನಗೆ ಶತಶಃ ಪ್ರಣಾಮುಗಳು ! ನಿನ್ನನ್ನು ಬೆಳಸಿದ ಮತ್ತು ಬೆಳೆಯಿಸುವ ಹಿರಿಯರಿಗೂ ಅನಂತ ವಂದನೆಗಳು !

---

## ೧೬. ಅಹಿಂಸೆ

"ಅಹಿಂಸಾ ಪರಮೋಧರ್ಮಃ" ಇದು ಭಾರತೀಯ ಸಂಸ್ಕೃತಿಯ ತಳಹದಿಯಾಗಿರುವ ತತ್ವವು. ಇದು ಭಾರತೀಯರ ರೋಮರೋಮದಲ್ಲಿ ಸೇರಿದೆ. ಮೊಲೆಹಾಲಿನೊಡನೆ ಈ ತತ್ವವು ಭಾರತಮ್ಮನ ಮಕ್ಕಳಿಗೆ ದೊರೆಯುತ್ತದೆ. ಭಾರತದ ವಾತಾವರಣದಲ್ಲೆಲ್ಲ ಈ ತತ್ವವು ಹರಡಿದೆ. ಭಾರತೀಯ ಹವೆಯೆಂದರೆ ಈ ತತ್ವದಿಂದ ತುಂಬಿ ತುಳುಕುತ್ತಲಿದೆ. ಇದನ್ನು ಉಸಿರಾಡಿಸುವವರ ಜೀವನದಲ್ಲಿ ಈ ತತ್ವವು ನಿದಾನವಾಗಿ ಸೇರಿಬಿಡುತ್ತದೆ.

ಈ ತತ್ವದ ಮಹತ್ವವು ಭಾರತಕ್ಕೆ ಒಮ್ಮೆಲೆ ಹೊಳೆದಿಲ್ಲ, ತಿಳಿದಿಲ್ಲ. ಹಿರಿದಾದ ತಪಶ್ಚರ್ಯೆಯು ಈ ತತ್ವದ ಹಿನ್ನೆಲೆಯಾಗಿ ನಿಂತಿದೆ. ಇದಕ್ಕಾಗಿ ದೊಡ್ಡ ದೊಡ್ಡ ಪ್ರಯೋಗಗಳು ಕೈಕೊಳ್ಳಲ್ಪಟ್ಟು ಮಾಡಲ್ಪಟ್ಟವೆ. ವೇದಕಾಲದಿಂದ ಇವತ್ತಿನ ವರೆಗೆ ಇರುವ ಭಾರತೀಯ ಸಂಸ್ಕೃತಿಯ ಸುವರ್ಣಸೂತ್ರವೆಂದರೆ ಅಹಿಂಸೆಯು. ಭಾರತದಲ್ಲಿ ನಡೆದ ನಡೆಯುವ ರಾಜಕೀಯ ಧಾರ್ಮಿಕ ಸಾಮಾಜಿಕ ಚಟುವಟಿಕೆಗಳೆಲ್ಲವೂ ಈ ಸೂತ್ರದಲ್ಲಿಯೇ ಬದ್ಧವಾಗಿವೆ. ಭಾರತ ವರ್ಷದ ಇತಿಹಾಸವೆಂದರೆ ಒಂದು ದೃಷ್ಟಿಯಿಂದ ಅಹಿಂಸೆಯ ಪ್ರಯೋಗಗಳ ಇತಿಹಾಸವೇ ಆಗಿದೆ.

ಮಾನವ ಪ್ರಾಣಿಯ ಉತ್ಕ್ರಾಂತಿಯು ಸಾವಕಾಶ ಮತ್ತು ಕ್ರಮೇಣ ಆಗಿದೆ. ಇರಿವೆಯ ಪದಗತಿಯಷ್ಟು ಮಂದವಾಗಿದೆ ಈ ಪ್ರಗತಿಯು. ಭಾರತದಲ್ಲಿಯ ಅಹಿಂಸೆಯ ಇತಿಹಾಸವನ್ನು ನೋಡಹತ್ತಿದರೆ ಈ ಪ್ರಗತಿಯು ಎಷ್ಟು ನಿಧಾನವಾಗಿ ಮತ್ತು ಸಾವಕಾಶವಾಗಿ ನಡೆದಿದೆಂಬ ಮಾತನ್ನು ನಾವು ಕಾಣಬಹುದು.

ಅಹಿಂಸೆ ಈ ಶಬ್ದದ ಅರ್ಥವು ಇಂದು ಬಹಳ ವ್ಯಾಪಕವಾಗಿದೆ. ಶಬ್ದದಿಂದ ಸಹ ಯಾರ ಮನಸ್ಸನ್ನು ನೋಯಿಸಿದರೂ ಅದು ಹಿಂಸೆ ಯೆಂದು ನಾವು ತಿಳಿದುಕೊಳ್ಳುತ್ತೇವೆ. ವಿಚಾರದಿಂದ ಆಚಾರದಿಂದ ಅಥವಾ ಉಚ್ಚಾರದಿಂದ ಯಾರ ಅಕಲ್ಯಾಣವನ್ನು ಬಯಸಿದರೆ ಅದೂ ಹಿಂಸೆಯೆಂದು ನಾವು ಭಾವಿಸುತ್ತೇವೆ.

ಪ್ರಾಚೀನ ಕಾಲದಿಂದ ಮುಖ್ಯವಾಗಿ ಎರಡು ಕಾರಣಗಳಿಗಾಗಿ ಹಿಂಸೆ ಯನ್ನು ಮಾನವರು ಅವಲಂಬಿಸುತ್ತಿದ್ದರು. ಭಕ್ಷಣೆಗಾಗಿ ಮತ್ತು ರಕ್ಷಣೆ ಗಾಗಿ ಮನುಷ್ಯನು ತಿನ್ನುವದಕ್ಕಾಗಿ ಮತ್ತು ತನ್ನನ್ನು ರಕ್ಷಿಸಿಕೊಳ್ಳುವದ ಕ್ಕಾಗಿ ಕೊಲ್ಲುತ್ತಾನೆ. ಹಿಂಸೆಯ ಇನ್ನೊಂದು ಕಾರಣವಿದೆ. ಅದೆಂದರೆ ಯಜ್ಞಕ್ಕಾಗಿ. ಆದರೆ ಈ ಯಜ್ಞೀಯ ಹಿಂಸೆಯು ಭಕ್ಷಣೆಗಾಗಿ ಮಾಡಲಾ ಗುವ ಹಿಂಸೆಯಲ್ಲಿ ಹುದುಗಿಕೊಂಡಿದೆ. ಯಾಕಂದರೆ ಮನುಷ್ಯನು ತಾನು ತಿನ್ನುವವನ್ನೇ ದೇವರಿಗೆ ಅರ್ಪಿಸುತ್ತಾನೆ. ಯಜ್ಞವೆಂದರೆ ದೇವರಿಗೆ ಆಹುತಿ ಕೊಡುವದು ಎಂಬುದು ಯಜ್ಞ ಈ ಶಬ್ದದ ಮೂಲ ಅರ್ಥವಾಗಿದೆ. ದೇವತೆ ಗಳು ನಮಗಾಗಿ ಗಾಳಿ ಬೀಸುತ್ತವೆ, ಮಳೆಗರೆಯುತ್ತವೆ, ಬಿಸಿಲನ್ನು ಕೊಡು ತ್ತವೆ, ನಾವಾದರೂ ಅವುಗಳಿಗೆ ಏನಾದರೂ ಅರ್ಪಣ ಮಾಡಬೇಕು. ಈ ವಿಚಾರದೊಳಗಿಂದಲೇ ಯಜ್ಞ ಕಲ್ಪನೆಯ ಆರಂಭವಾಯಿತು. ಆ ಮೇಲೆ ದೇವರಿಗೆ ಏನನ್ನರ್ಪಿಸಬೇಕು ಎಂಬ ಪ್ರಶ್ನೆಯು ಸಹಜವಾಗಿ ಹುಟ್ಟಿತು. ನಮಗೆ ಸೇರಿದ್ದೇ ದೇವತೆಗಳಿಗೂ ಸೇರುತ್ತದೆ. ಆದ್ದರಿಂದ ನಾವು ತಿನ್ನು ವದನ್ನು ದೇವರಿಗೂ ಅರ್ಪಿಸಬೇಕು. ನಮಗೆ ಮಾಂಸ ಸೇರುತ್ತದೆ; ಹಾಗಾ ದರೆ ದೇವರಿಗೆ ಅದನ್ನೇ ಅರ್ಪಿಸಬೇಕು. ಇದೇ ಯಜ್ಞಧರ್ಮವಾಗಿ ಪರಿ ಣಮಿಸಿತು. ಆದ್ದರಿಂದ ಈ ಯಜ್ಞೀಯ ಹಿಂಸೆಯು ಭಕ್ಷಣದ ಹಿಂಸೆ ಯಿಂದಲೆ ಆರಂಭವಾಗಿರಬೇಕು.

ಅತಿ ಪ್ರಾಚೀನ ಕಾಲದಲ್ಲಿ ಮನುಷ್ಯನು ಮನುಷ್ಯನನ್ನೇ ತಿನ್ನುತ್ತಿ ದ್ದನು. ಮನುಷ್ಯನ ಮಾಂಸವೇ ಅತ್ಯಂತ ಶ್ರೇಷ್ಠ ತರಗತಿಯದೆಂದೂ ಗಣಿಸುತ್ತಿದ್ದರು. ಇದೇ ಕಾಲದಲ್ಲಿ ದೇವರಿಗೆ ನರಬಲಿ ಕೊಡುವ ಪದ್ಧತಿ ಬಂದಿರಬೇಕು. ಇದರಲ್ಲಿ ಸಂದೇಹವಿಲ್ಲ. ಭಾರತವರ್ಷದಲ್ಲಿ ಅತಿ ಪ್ರಾಚೀನ ಕಾಲದಲ್ಲಿ ನರಮೇಧಗಳಿದ್ದವೆಂದು ರಾಜೇಂದ್ರಲಾಲರಂಥ ಪಂಡಿತರು ಬರೆದಿದ್ದಾರೆ.

ಲಿಕ್ಕೆ ಹತ್ತಿತು. ನಮ್ಮಂಥ ಸುಖದುಃಖಗಳಿದ್ದ ಮಾನವರನ್ನೇ ಕೊಂದು, ಸುಟ್ಟು ತಿನ್ನುವದು ಎಂಥ ನಾಚಿಕೆಯ ಮಾತಿದು ಎಂಬ ವಿಚಾರವು ಅವರಿಗೆ ಹೊಳೆಯಿತು. ಮತ್ತು ಸಮಾಜದಲ್ಲಿ ವಿಚಾರವಂತರು ನರಮಾಂಸವನ್ನು ತಿನ್ನುವದನ್ನು ಬಿಟ್ಟರು. ಆದರೆ ಸಮಾಜದಲ್ಲಿ ನೆಲೆಗೊಂಡ ದುಶ್ಚಟಗಳು ಒಮ್ಮೆಲೆ ಹೋಗುವದು ಸಾಧ್ಯವಿಲ್ಲ· ಹೊಸ ವಿಚಾರಗಳನ್ನು ಹರಡುವವರು ಉಪಹಾಸ್ಯಕ್ಕೆ, ಕಷ್ಟನಷ್ಟಕ್ಕೆ ಈಡಾಗುತ್ತಾರೆ. ಪ್ರಾಚೀನ ಕಾಲದಲ್ಲಿ ನರಮೇಧವನ್ನು ನಿಲ್ಲಿಸಲು ಹೊರಟ ಮಹಾನುಭಾವರಿಗೆ ಕಷ್ಟಗಳಾಗಿರಲಿಕ್ಕೆ ಸಾಕು.

ಮಾಂಸವನ್ನು ತಿನ್ನಲಿಕ್ಕೆ ಅಡ್ಡಿಯಿಲ್ಲ, ಆದರೆ ನರಮಾಂಸವನ್ನು ತಿನ್ನಬೇಡಿರಿ ಎಂದು ಅಹಿಂಸೆಯ ಈ ಮೊಟ್ಟಮೊದಲಿನ ಆಚಾರ್ಯರು ಹೇಳಿದರು. ನರಮಾಂಸವನ್ನು ತಿನ್ನುವದಿಲ್ಲೆಂದು ಸಾವಿರಾರು ಜನರು ಪ್ರತಿಜ್ಞೆಯನ್ನು ಮಾಡಿದರು. ಆದರೆ ಈ ಚಟವಿದ್ದವರಿಗೆ ಇದು ಸಹನವಾಗಲಿಲ್ಲ. ಹೊಸ ವ್ರತ ಕೈಕೊಂಡವರಿಗೆ ಕೆಲವರು ಮೋಸಮಾಡಿದರು. ವಸಿಷ್ಠ ಋಷಿ ಮತ್ತು ಕಲ್ಮಾಷಪಾದರಾಜನ ಕಥೆ ಇದನ್ನೇ ತೋರಿಸುತ್ತದೆ. ವಸಿಷ್ಠ ಮೊದಲಾದ ಋಷಿಗಳಿಗೆ ಮೋಸದಿಂದ ನರಮಾಂಸವನ್ನು ಬಡಿಸಲಾಯಿತು. ಇದು ತಿಳಿದ ಮೇಲೆ ವಸಿಷ್ಠರು ಕಲ್ಮಾಷ ಪಾದನನ್ನು ಶಪಿಸಿದರು.

ವಸಿಷ್ಠನು ನರಮಾಂಸವನ್ನು ತಿನ್ನುತ್ತಾನೆ. ಆದರೆ ಸುಳ್ಳು ಜಂಬ ಕೊಚ್ಚುತ್ತಾನೆಂದು ಕೆಲವರು ಅಂದುಕೊಂಡರು. ಹೊಸ ವ್ರತ ಕೈಕೊಂಡ ವಸಿಷ್ಠನಿಗೆ ವ್ಯಸನವಾಗಿರಬೇಕು. ಆದರೆ ವ್ರತಿಗಳು ಇಂತಹ ಮಾತನ್ನು ಸಹಿಸಲೇಬೇಕು. ಖಾದಿ ಧರಿಸುವವರಿಗೆ "ನೀವು ಕಳ್ಳತನದಿಂದ ಮಿಲ್ಲಿನ ಅರಿವೆ ಧರಿಸುತ್ತೀರಿ'' ಅಂದರೆ ಎಷ್ಟು ಕೆಟ್ಟ ಆನಿಸಲಿಕ್ಕಿಲ್ಲ? ಋಗ್ವೇದದಲ್ಲಿ ವಸಿಷ್ಠ ಋಷಿ ಒಂದೆಡೆಯಲ್ಲಿ ಅಂದಿದ್ದಾನೆ. "ಅದ್ಯಮುರೀಯ ಯದಿ ಯಾತು-ಧಾನೋಽಸ್ಮಿ" ನಾನು ನರಮಾಂಸ ಭಕ್ಷಕ ರಾಕ್ಷಸನಂತಿದ್ದರೆ ಈಗಲೆ ಸತ್ತುಹೋಗಲಿ ಎಂದು ಅಂದಿದ್ದಾನೆ.

ಈ ಕಷ್ಟನಷ್ಟಗಳನ್ನು ಸಹಿಸಿ ವಸಿಷ್ಠಾದಿ ವಿಚಾರವಂತರು ಸಮಾಜವನ್ನು ಮುಂದರಿಸುತ್ತ • ನಡೆದರು. ನರಮೇಧಗಳು ಕೊನೆಗಂಡವು. ಸಾವಕಾಶ ಕ್ರಮೇಣ ನರಮಾಂಸ ಭಕ್ಷಣವು ಬಂದಾಯಿತು. ಆದರೆ ಮಾಂಸಾಶನವನ್ನು ಇನ್ನೂ ಸಮಾಜವು ಬಿಟ್ಟಿದ್ದಿಲ್ಲ. ಎಲ್ಲ ಪಶುಗಳ

ಮಾಂಸವನ್ನು ತಿನ್ನುತ್ತಿದ್ದರು. ಆಕಳುಗಳನ್ನು ಕೊಲ್ಲುತ್ತಿದ್ದರು. ಗೋ ಮಾಂಸವನ್ನು ತಿನ್ನುವದು ವಾಡಿಕೆಯ ಮಾತಾಗಿತ್ತು. ಆದರೆ ಗೋವಧೆ ಮಾಡಬಾರದು, ಗೋಮಾಂಸವನ್ನು ತಿನ್ನಬಾರದು. ಗೋವಿನ ಮಹಿಮೆ ಯನ್ನು ಬಣ್ಣಿಸುವ ಋಚೆಗಳನ್ನು ನಾವು ಋಗ್ವೇದದಲ್ಲಿ ಕಾಣಬಹುದು. "ಮಾತಾ ರುದ್ರಾಣಾಂ ದುಹಿತಾ ವಸೂನಾಂ । ಸ್ವಸಾದಿತ್ಯಾನಾಂ ಅಮೃತಸ್ಯ ನಾಭಿಃ'' ಗೋವು ರುದ್ರರ ತಾಯಿ, ವಸುದೇವತೆಯ ಮಗಳು, ಆದಿತ್ಯನ ತಂಗಿ, ಅಮೃತದ ಝರಿ ಎಂದು ಆಕಳವನ್ನು ಋಗ್ವೇದದಲ್ಲಿ ಬಣ್ಣಿಸಲಾಗಿದೆ.

ವೇದ ಕಾಲದಲ್ಲಿ ಆಕಳವನ್ನು ಉಳಿಸುವ ರಕ್ಷಿಸುವ ಪ್ರಯತ್ನಗಳು ಕಂಡುಬಂದರೂ ಸಹ, ಆಕಳ ಎಂದೊಡನೆ ಭಗವಾನ್ ಗೋಪಾಲಕೃಷ್ಣನ ಮೂರುತಿಯೇ ನಮ್ಮ ಕಣ್ಣೆದುರು ನಿಲ್ಲುತ್ತದೆ. ಕಣ್ಣಿಗೆ ಕಾಣುವಂತೆ ಗೋವಿನ ಮಹತ್ವವನ್ನು ಭಾರತದ ನಿದರ್ಶನಕ್ಕೆ ತಂದವನೆಂದರೆ ಭಗವಾನ್ ಕೃಷ್ಣನೇ. ಒಕ್ಕಲತನವೇ ಜೀವಾಳವಾದ ಈ ದೇಶಕ್ಕೆ ಗೋವನ್ನು ಕೊಂದರೆ ಹೇಗೆ ನಡೆಯುವದು ? ಆಕಳು ನಮಗೆ ಹಾಲು ಕೊಡುತ್ತದೆ ಮತ್ತು ಒಕ್ಕಲತನಕ್ಕೆ ಮುಖ್ಯವಾಗಿ ಬೇಕಾದ ಎತ್ತುಗಳನ್ನು ಪರಿಪಾಲಿಸುತ್ತದೆ. ಹೀಗೆ ಈ ಜಾತಿಯ ದನದ ಹೆಣ್ಣು ಗಂಡು ಎರಡೂ ಮಾನವರಿಗೆ ಉಪಯೋಗವಾಗುತ್ತವೆ. ಗಂಡಿನ ಉಪಯೋಗವಿಲ್ಲದ ಜಾತಿಯ ಪಶುಪಕ್ಷಿಗಳನ್ನು ಕೊಲ್ಲುವ ಪ್ರಘಾತವಿದೆ. ಕೋಳಿಗಳನ್ನು ಕಡಿಯುವದು ತೀರ ಕಡಿಮೆ ಆದರೆ ಹುಂಜಗಳನ್ನು ಕಡಿಯುತ್ತಾರೆ. ಕೋಳಿಗಳ ಬೆಳವಣಿಗೆಗೆ ೧-೨ ಹುಂಜಗಳಿದ್ದರೆ ಸಾಕು. ಅದರಂತೆ ಆಡು ಕುರಿ ಇವುಗಳಲ್ಲಿ ಹೆಣ್ಣು ಸಾಕುತ್ತಾರೆ. ಆದರೆ ಹೋತಗಳನ್ನು ಕೊಲ್ಲುತ್ತಾರೆ. ಹೆಣ್ಣು ಗಂಡು ಎರಡೂ ಉಪಯೋಗವಾಗುವಂಥ ಪ್ರಾಣಿಗಳನ್ನಷ್ಟೇ ಮನುಷ್ಯನು ಅಹಿಂಸೆಯಿಂದ ಜೋಪಾನ ಮಾಡಬಲ್ಲನು. ಅವೆಂದರೆ ಆಕಳ ಒಂದೇ. ಉಪಯೋಗವಿಲ್ಲದಂಥ ಪ್ರಾಣಿಗಳನ್ನು ಜೋಪಾನ ಮಾಡುವಷ್ಟು ಸಾಮರ್ಥ್ಯವು ಮಾನವನಲ್ಲಿ ಇಲ್ಲ. ನಿರುದ್ಯೋಗಿಯಾಗಿ ಕುಳಿತ ಮನುಷ್ಯರು ಸಹ ನಮಗೆ ಭಾರಭೂತರಾಗುತ್ತಾರೆ. ಅಂದಮೇಲೆ ಉಪಯೋಗವಿಲ್ಲದ ದನಗಳು ಒಜ್ಜೆಯೆಂದೆನಿಸಿದರೆ ಅದರಲ್ಲಿ ಆಶ್ಚರ್ಯವೇನು?

ಉಪಯುಕ್ತವಾದ ಪ್ರಾಣಿಗಳೆಂದು ತಿಳಿದು ಮನುಷ್ಯನು ಆಕಳ, ನಾಯಿ, ಎತ್ತು ಮುಂತಾದ ಪ್ರಾಣಿಗಳನ್ನು ಸಾಕಿದ್ದಾನೆ. ಶ್ರೀ ಕೃಷ್ಣನು

ಗೋವಿನ ಮಹತ್ವವನ್ನು ಅರಿತನು. ಗೋಕುಲದಲ್ಲಿ ಬೆಳೆದ ಶ್ರೀ ಕೃಷ್ಣನಿಗೆ ಗೋವಿನ ಮಹತ್ವವು ಹೊಳೆಯಿತು. ದೊಡ್ಡವನಾದ ಮೇಲೆ ಅವನು ಆಕಳದ ಮಹತ್ವವನ್ನು ಬಣ್ಣಿಸಿದನು. ತಿಳಿಸಿ ಹೇಳಿದನು. ಗೌಳಿಗನೆಂದು ಕೃಷ್ಣನನ್ನು ಎಷ್ಟೊ ಜನ ಉಪಹಾಸ್ಯಕ್ಕೆ ಈಡು ಮಾಡಿದರು. "ಹೌದು ನಾನು ಬರೀ ಕೃಷ್ಣನಲ್ಲ, ಗೋಪಾಲಕೃಷ್ಣ; ಗೋಪಾಲ ಎಂದು ಅನಿಸಿ ಕೊಳ್ಳುವದರಲ್ಲಿ ನನಗೆ ಭೂಷಣ, ದೂಷಣವಲ್ಲ''ಂದು ಅವನು ಸಾರಿ ಹೇಳಿದನು. ಜಗತ್ತು ತನ್ನನ್ನು ಗೋಪಾಲಕೃಷ್ಣನೆಂದೇ ಕರೆಯಬೇಕೆಂಬ ಹಂಬಲವು ಅವನಿಗಿತ್ತು.

ಆಕಳು ದೇವತೆಯೆಂದು ಎಣಿಸಲ್ಪಟ್ಟಿತು. ಗೋರಕ್ಷಣಕ್ಕಾಗಿ ರಾಜರು ತಮ್ಮ ಜೀವವನ್ನು ಸಹ ಅರ್ಪಿಸಲು ಸಿದ್ಧರಾದರು. ರಘು ವಂಶದಲ್ಲಿದ್ದ ದಿಲೀಪರಾಜನ ಕಥೆ ಇದನ್ನೇ ತೋರಿಸುತ್ತದೆ. ರಾಷ್ಟ್ರಕ್ಕೆ ಹೊಸ ಗುರಿಯನ್ನು ತೋರಿಸಿ ಕೊಡುವವರು ಮತ್ತು ಅದನ್ನು ಕಾರ್ಯ ರಂಗದಲ್ಲಿ ತರಲು ಹಂಬಲಿಸುವವರು ಪ್ರಸಂಗ ಬಂದರೆ ಆ ಗುರಿಗಾಗಿ ಸರ್ವಸ್ವದ ತ್ಯಾಗವನ್ನು ಮಾಡಲು ಸಿದ್ಧರಾಗಬೇಕಾಗುತ್ತದೆ. ಧ್ಯೇಯವೇ ದೇವರು. ಇಂದು ಖಾದಿ ಚರಖಾ ಮೊದಲಾದವುಗಳಿಗಾಗಿ ಸೆರೆಮನೆ ಯಲ್ಲಿ ಆಮರಣ ಉಪವಾಸ ಕೈಕೊಂಡ ಉದಾಹರಣೆಗಳನ್ನು ನಾವು ಕಣ್ಣಾರೆ ನೋಡುತ್ತೇವೆ. ಗುರಿಯನ್ನು ತೋರಿಸುವವರು ಅದನ್ನು ಸಾಧಿಸುವವದಕ್ಕಾಗಿ ಎಷ್ಟರಮಟ್ಟಿಗೆ ತ್ಯಾಗವನ್ನು ಮಾಡಲು ಸಿದ್ಧರಿದ್ದಾ ರೆಂಬುದನ್ನು ಜನರು ಪರೀಕ್ಷಿಸುತ್ತಾರೆ. ಗುರಿ ಸಾಧಿಸುವವನು ಸಾವಿನ ಪರೀಕ್ಷೆಯನ್ನೇ ಕೊಡಬೇಕಾಗುತ್ತದೆ. ಗೋರಕ್ಷಣೆ ಮಾಡಲು ಹೊರಟ ಧೀರ ವೀರರು ಇದನ್ನೇ ಮಾಡಿದರು. ಇಂದು ಭಾರತ ವರ್ಷದಲ್ಲಿ ನಾವು ಕಾಣುವ ಗೋಸೇವೆ, ಗೋವಿನ ಮಹತ್ವ ಇದು ಪುಕ್ಕಟೆಯಾಗಿ ಬಂದಿಲ್ಲ. ಅಪಾರವಾದ ಸ್ವಾರ್ಥತ್ಯಾಗವು ಇದರ ಹಿನ್ನೆಲೆಯಾಗಿ ನಿಂತಿದೆ. ಆಕಳ ಹಾಲನ್ನು ಕುಡಿಯದೆ, ಅದರ ಜೋಪಾನ ಮಾಡದೆ, ಆಕಳವನ್ನು ಕಂಡೊಡನೆ ಅದರ ಬಾಲವನ್ನು ಮುಟ್ಟಿ ಅದಕ್ಕೆ ನಮಸ್ಕಾರ ವನ್ನು ಮಾಡುವದೆಂದರೆ ಡಂಭಾಚಾರವು. ಬರೀ ಯಾಂತ್ರಿಕ ಧರ್ಮವು ಯಾವ ಕಾಲಕ್ಕಾದರೂ ತಿರಸ್ಕರಣೀಯವೆ ಸರಿ.

ಗೋಮಾಂಸವನ್ನು ತಿನ್ನುವದಾದರೂ ಒಮ್ಮೆಲೆ ನಿಂತಿಲ್ಲ. ಭವ ಭೂತಿಯು ೭ನೇ ಶತಮಾನದಲ್ಲಿ ಆಗಿರಬೇಕು. ಅವನು ಬರೆದ ಉತ್ತರ

ರಾಮುಚರಿತವೆಂಬ ನಾಟಕದಲ್ಲಿ, ವಾಲ್ಮೀಕಿ ಋಷಿಯ ಆಶ್ರಮಕ್ಕೆ ವಸಿಷ್ಠ ಜನಕಾದಿಗಳು ಬಂದಾಗ ಆಕಳ ಕರವು ಅವರಿಗಾಗಿ ಕೊಲ್ಲಲ್ಪಟ್ಟಿತೆಂಬ ಉಲ್ಲೇಖವು ಅದೆ. ಆ ಗಡ್ಡವುಳ್ಳ ಋಷಿಯು ನಮ್ಮ ಆಕಳ ಕರವನ್ನು ನುಂಗಿಬಿಟ್ಟನೆಂದು ಆಶ್ರಮದಲ್ಲಿದ್ದ ವಟುಗಳು ಅನ್ನುತ್ತಾರೆ. ಭವಭೂತಿಗೆ ಆಕಳ ಕರುವನ್ನು ಕೊಲ್ಲುವಂಥ ಸನ್ನಿವೇಶವನ್ನು ತನ್ನ ನಾಟಕದಲ್ಲಿ ಹಾಕಲು ಏನೂ ಅನಿಸಲಿಲ್ಲ. ಏನೋ ಪ್ರಾಚೀನ ಕಾಲದ ಪದ್ಧತಿ ಎಂದು ಅವನು ಅದನ್ನು ತನ್ನ ನಾಟಕದಲ್ಲಿ ತೋರಿಸಿರಬಹುದು.

ಉಪನಿಷತ್ತಿನಲ್ಲಿ ಸಹ ಅಲ್ಲಲ್ಲಿ ಗೋಮಾಂಸ ಭಕ್ಷಣದ ಉಲ್ಲೇಖಗಳಿವೆ. ಯಜ್ಞವಲ್ಕ್ಯನಂಥ ತತ್ವಜ್ಞಾನಿಯೂ ಕೂಡ ಗೋಮಾಂಸದ ರುಚಿಯನ್ನು ಬಣ್ಣಿಸುತ್ತಾನೆ. ಆದರೆ ಮಾಂಸಾಶನ ಒಳ್ಳೆಯದಲ್ಲ ಎಂಬ ಮಾತು ಉಪನಿಷತ್ಕಾಲದಲ್ಲಿ ನಾವು ಕಾಣಬಹುದು. ಸುಧಾರಣೆ ಬಯಸುವ ಋಷಿಗಳು ಓದನದ ಮಹಿಮೆಯನ್ನು ಅಲ್ಲಲ್ಲಿ ಬಣ್ಣಿಸಿದ್ದಾರೆ. "ಓದನಮುದ್‌ಬ್ರುವತೆ ಪರಮೇಷ್ಠೀವಾ ಏಷಃ" ಓದನವು ಪರಮೇಶ್ವರನ ರೂಪವೆಂದು ಈ ಮಂತ್ರದ್ರಷ್ಟಾರನು ಹೇಳುತ್ತಾನೆ. ಈ ಮಂತ್ರವು ವಿಶೇಷವಾಗಿ ಊಟದ ಕಾಲಕ್ಕೆ ಅನ್ನುವದದೆ.

ಆಹಾರದ ಪರಿಣಾಮವು ವಿಚಾರಗಳ ಮೇಲೆ ಆಗುತ್ತದೆಂದು ಕೆಲವರು ಹೇಳಹತ್ತಿದರು. "ಆಹಾರ ಶುದ್ಧೇಃ ಸತ್ವ ಶುದ್ಧಿಃ" ಇಂಥ ತತ್ವಗಳು ರೂಢವಾದವು. ತಿನಿಸಿನ ಹೊಸ ಹೊಸ ಪ್ರಯೋಗಗಳನ್ನು ಏರ್ಪಡಿಸುತ್ತಿದ್ದರು. "ಮಾಂಸಾಶನ ಒಂದರಿಂದಲೆ ಬುದ್ಧಿಯು ಸುಧಾರಿಸುವದಿಲ್ಲ. ಅದಕ್ಕೆ ಜೊತೆಗೆ ಓದನವೂ ಬೇಕು. ಅಂದರೆ ಇವೆರಡರ ಸೇವನದಿಂದ ಬುದ್ಧಿ ತೇಜಸ್ಸುಳ್ಳದ್ದಾಗುತ್ತದೆ. ಹೀಗೆ ಕ್ರಮೇಣ ಸಮಾಜವು ಮಾಂಸಾಶನದಿಂದ ವನಸ್ಪತಿ ಆಹಾರದ ಮಾರ್ಗದ ಕಡೆಗೆ ಹೋಗಲಾರಂಭಿಸಿತು.

ಹೊಸ ದೀಕ್ಷೆ ಹೊಸ ವ್ರತಗಳ ಪ್ರಚಾರ ಮಾಡುವದಾದರೆ ಧ್ಯೇಯವಾದಿಗಳು ಅವನ್ನು ಒಳ್ಳೆ ರಭಸದಿಂದ ಹೇಳುತ್ತಾರೆ. ಓದನವೆ ಪರಮೇಶ್ವರ, ಓದನವು ಎಲ್ಲವನ್ನು ನಿಮಗೆ ದಯಪಾಲಿಸುವದು. ಅದರಂತೆ ಆಕಳ ಹಾಲು ತುಪ್ಪ ಇವುಗಳ ಮೊಡ್ಡಸ್ತಿಕೆಯನ್ನು ಬಣ್ಣಿಸಲಾಯಿತು. "ಆಯುರ್ವೈ ಘೃತಂ" ಎಂದು ಹೇಳುತ್ತಾರೆ. ಮಾಂಸವನ್ನು ತಿನ್ನುವದನ್ನು ಬಿಡಿಸಲು ಉದ್ಯುಕ್ತರಾದವರು ಓದನ, ತುಪ್ಪ, ಹಾಲುಗಳ ಮಹತ್ವದ ಪ್ರಚಾರಮಾಡಹತ್ತಿದರು.

ಮನುಷ್ಯನು ನರಮಾಂಸವನ್ನು ಬಿಟ್ಟನು, ಗೋಮಾಂಸವನ್ನು ಬಿಟ್ಟನು. ಆದರೆ ಉಳಿದ ಪ್ರಾಣಿಗಳ ಮಾಂಸ ತಿನ್ನುವದನ್ನು ಬಿಟ್ಟಿಲ್ಲ. ಆಕಳದ ಹಿರಿಮೆಯನ್ನು ಅರಿತನು. ಆದರೆ ಕುರಿ, ಕುರಿಮರಿ ಇವುಗಳ ಮಾಂಸವನ್ನು ಏಕೆ ತಿನ್ನಬಾರದು, ಇದೇನು ಅವನಿಗೆ ತಿಳಿಯಲೊಲ್ಲದು! ಹಾಲು ಉಣ್ಣೆಗಾಗಿ ಆಡು, ಕುರಿ, ಕುರಿಮರಿ ಇವನ್ನು ಸಾಕುವದು ಅವಶ್ಯವಿತ್ತು. ಆದರೆ ಅವುಗಳಲ್ಲಿಯ ಗಂಡು ಪ್ರಾಣಿಗಳನ್ನು ಏನು ಮಾಡಬೇಕು ತಿಳಿಯದಂತಾಯಿತು. ಅದನ್ನು ಮನುಷ್ಯನು ತಿನ್ನಲಾರಂಭಿಸಿದನು. ದೇವರಿಗೆ ಅರ್ಪಿಸಲಾರಂಭಿಸಿದನು. ಇದರಂತೆ ಚಿಗರಿಗಳು. ಭಾರತದಲ್ಲಿ ಪೈರುಗಳಿಗೆ ಚಿಗರಿಯ ಉಪದ್ರವ ಬಹಳ. ಮಾಂಸಾಶನ ಕಡಿಮೆ ಆದಂತೆ ಮನುಷ್ಯನು ಒಕ್ಕಲತನದ ಕಡೆಗೆ ಹೆಚ್ಚಾಗಿ ಲಕ್ಷ ಕೊಡಹತ್ತಿದನು. ಆಗ್ಗೆ ಚಿಗರಿಗಳನ್ನು ಕೊಲ್ಲುವದು ಅವಶ್ಯವೆನಿಸಹತ್ತಿತು. ಚಿಗರಿಗಳನ್ನು ಕೊಲ್ಲುವದು ರಾಜರ ಧರ್ಮವಾಯಿತು. ಕೃಷಿಕರ್ಮ ಉಳಿಸಲು ಇದನ್ನು ಕೈಕೊಳ್ಳಲೇಬೇಕಾಯಿತು. ರಾಜರು ಹೀಗೆ ಕೊಂದ ಚಿಗರಿಗಳ ಮಾಂಸವನ್ನೇ ತಿನ್ನಬೇಕೆಂದು ನಿಯಮವಾಯಿತು. ತಿನ್ನುವದಕ್ಕಾಗಿ ಬೇರೆ ಕೊಲೆ ಮಾಡುವದು ಬೇಡೆಂದೇ ಈ ರೀತಿ ಹೇಳಲಾಯಿತು. ಇದನ್ನೆ ರಾಜರು ಪವಿತ್ರ ಮಾಂಸವೆಂದು ತಿಳಿದು ತಿನ್ನುತ್ತಿದ್ದರು.

ಸಮಾಜದಲ್ಲಿದ್ದ ದಯಾವಂತರಿಗೆ ಚಿಗರಿಗಳನ್ನು ಕೊಲ್ಲುವದು ಮನಸ್ಸಿಗೆ ಬರುತ್ತಿರಲಿಲ್ಲ. ಅವರಿಗೆ ವ್ಯಸನವೆನಿಸುತ್ತಿತ್ತು. ಆದರೆ ಅಪೂರ್ಣನಾದ ಮನುಷ್ಯನಿಗೆ ಇದನ್ನು ಸಂಪೂರ್ಣವಾಗಿ ನಿಲ್ಲಿಸುವದು ಅಸಾಧ್ಯವಾದ ಮಾತಾಗಿತ್ತು. ಅಲ್ಲಲ್ಲಿ ಕೆಲವೊಂದು ಆಶ್ರಮಗಳಲ್ಲಿ ಚಿಗರಿಗಳನ್ನು ಸಾಕುತ್ತಿದ್ದರು. ಆಶ್ರಮವೆಂದ ಕೂಡಲೇ ಚಿಗರಿಗಳು ನಮ್ಮ ಕಣ್ಣೆದುರು ನಿಲ್ಲುತ್ತವೆ. ಶಾಕುಂತಲದಲ್ಲಿ ಬಣ್ಣಿಸಲಾದ ಚಿಗರಿಯ ಮೇಲಿನ ಪ್ರೇಮವು ಕಣ್ಣಲ್ಲಿ ನೀರು ನಿಲ್ಲಿಸಿಬಿಡುತ್ತದೆ. ರಾಜರು ಒಕ್ಕಲುತನವನ್ನು ಉಳಿಸಲು ಲಕ್ಷಾವಧಿ ಚಿಗರಿಗಳನ್ನು ಕೊಲ್ಲುತ್ತಿದ್ದರು. ಚಿಗರಿ ಚರ್ಮವು ಪವಿತ್ರವೆಂದೆನಿಸಲ್ಪಡುತ್ತದೆ. ಚಿಗರಿಗಳನ್ನು ಕೊಲ್ಲುವದು ಅವಶ್ಯವಿತ್ತು, ಆದರೆ ಅಪೂರ್ಣ ಮಾನವನಿಗೆ ತನ್ನ ಹೃದಯದಲ್ಲಿ ನೆಲಸಿದ ಭಾವನೆಯನ್ನು ಅಳಿಯುವದು ಸಾಧ್ಯವಿಲ್ಲ. ಚಿಗರಿಯ ಚರ್ಮ ಪವಿತ್ರವೆಂದು ಅನ್ನುವದರಲ್ಲಿ ಒಂದು ಕೃತಜ್ಞತಾಭಾವವು ಅಡಕವಾಗಿದೆ.

ಮಾಂಸಾಶನದ ವಿರುದ್ಧ ವಿಚಾರ ಪ್ರಚಾರವು ನಡೆದೇ ಇತ್ತು.

ಒಮ್ಮೆಲೆ ಮಾಂಸವನ್ನು ಬಿಡುವದು ಅಸಾಧ್ಯವಾದದ್ದು. ಆದ್ದರಿಂದ ಅದನ್ನು ದಿನಾಲು ತಿನ್ನಬೇಡಿರಿ, ಯಜ್ಞದ ಕಾಲಕ್ಕೆ ಪಶುಹತ್ಯ ಮಾಡಲು ಅಡ್ಡಿ ಇಲ್ಲ, ಆ ಕಾಲಕ್ಕೆ ಮಾಂಸವನ್ನು ಗ್ರಹಿಸಬಹುದೆಂದು ಋಷಿಗಳು ಹೇಳುತ್ತಿದ್ದರು. ಇಷ್ಟು ಸವಲತ್ತು ಸಿಕ್ಕದ್ದು ಸಾಕಾಯಿತು. ಎಷ್ಟೋ ಜನರು ದಿನಾಲು ಯಜ್ಞಮಾಡಲಾರಂಭಿಸಿದರು. ಒಂದೇ ಸವನೆ ಹನ್ನೆರಡು ವರ್ಷಗಳ ವರೆಗೆ ನಡೆಯುವ ಯಜ್ಞಗಳನ್ನು ಮಾಡಲಾರಂಭಿಸಿದರು. ಮಾಂಸ ತಿನ್ನುವದಕ್ಕಾಗಿ ದಿನಾಲು ಒಂದು ಹೊಸ ಯುಕ್ತಿ ಹುಡುಕ ಲಾರಂಭಿಸಿದರು ಜನರು ! ಅಲ್ಲಲ್ಲಿ ಯಜ್ಞಮಾಡಲಾರಂಭಿಸಿದರು. ಮತ್ತು ಇದೆಲ್ಲ ಹಿಂಸೆ ದೇವರ ಹೆಸರಿನಲ್ಲಿ ಮಾಡಲಾಗುತ್ತಿತ್ತು.

ಇಂತಹ ಒಂದು ಅವನತಿಯ ಕಾಲದಲ್ಲಿ ಭಾರತ ಭೂಷಣರಾದ ಭಗವಾನ್ ಬುದ್ಧರು ಅವತರಿಸಿದರು. ಶ್ರೀ ಕೃಷ್ಣನು ಗೋವನ್ನು ಉಳಿಸಿದನು. ಬುದ್ಧ ಭಗವಾನನು ಕುರಿಮರಿಗಳನ್ನು ಉಳಿಸಲು ಧಾವಿಸಿದನು. ಧರ್ಮದ ಹೆಸರನ್ನೆತ್ತಿ ಪಶುವಧೆ ಮಾಡಬೇಡಿರೆಂದು ಅವರ ಮುಖ್ಯವಾದ ಹೇಳಿಕೆ. ಇಂಥ ಬಲಿದಾನದಿಂದ ಸ್ವರ್ಗವು ಹೇಗೆ ಸಿಕ್ಕಬಲ್ಲದು ? ಇಂಥ ಬಲಿದಾನದಿಂದ ಸ್ವರ್ಗ ಸಿಕ್ಕುವದು ನಿಜವಿದ್ದರೆ ನಿಮ್ಮ ಅಣ್ಣ ತಮ್ಮಂದಿರನ್ನು ಬಲಿ ಕೊಡಿರಿ, ಅಂದರೆ ಹಿರಿದಾದ ಸ್ವರ್ಗವು ಸಿಕ್ಕುವದು. ಸಾವಿರಾರು ಕುರಿಮರಿಗಳನ್ನು ಕೊಲ್ಲುವ ಯಜ್ಞಶಾಲೆಗೆ ಬುದ್ಧ ದೇವರು ಹೋಗಿ ನಿಂತರು. ಒಂದು ಕುಂಟ ಮರಿಯನ್ನು ತಮ್ಮ ಹೆಗಲಮೇಲೆ ತಕ್ಕೊಂಡರು. ಮತ್ತು ಅಲ್ಲಿದ್ದ ರಾಜನ ಮನಸ್ಸನ್ನು ಒಲಿಸಿ ಆ ವಧೆಯನ್ನು ನಿಲ್ಲಿಸಿದರು.

ಯಜ್ಞೀಯ ಹಿಂಸೆಯನ್ನು ಬುದ್ಧದೇವರು ಕೊನೆಗಾಣಿಸಿದರೂ ಮಾಂಸಾಶನವು ನಿಲ್ಲಲಿಲ್ಲ. ನಾವು ಗೊಬ್ಬರಕ್ಕಾಗಿ ಹಾಲಿಗಾಗಿ ಕುರಿ ಆಡು ಸಾಕುತ್ತೇವೆ. ಆದರೆ ಹೋತಗಳು ಮನುಷ್ಯನಿಗೆ ಯಾವ ಕೆಲಸಕ್ಕೂ ಉಪಯೋಗಕ್ಕೆ ಬರುವದಿಲ್ಲ. ಅವನ್ನು ಸಾಕುವದೆಂದರೆ ಮನುಷ್ಯನಿಗೆ ಒಜ್ಜೆಯೆನಿಸುತ್ತದೆ. ಎಲ್ಲಿಯ ವರೆಗೆ ಇವುಗಳಿಂದ ಮನುಷ್ಯನಿಗೆ ಉಪಯುಕ್ತವಾದ ಕೆಲಸ ಮಾಡಿಸಿಕೊಳ್ಳುವದು ಸಾಧ್ಯವಿಲ್ಲವೊ ಅಲ್ಲಿಯ ವರೆಗೆ ಅವು ಕೊಲ್ಲಲ್ಪಡುವದು ಸಹಜವಾದದ್ದು, ಮತ್ತು ಮಾಂಸಾಶನವು ನಡೆಯುವದು ಕಟ್ಟಿಟ್ಟ ಮಾತು.

ವೇದ ಕಾಲದಲ್ಲಿಯ ಋಷಿಗಳು ಶ್ರೀಕೃಷ್ಣ, ಭಗವಾನ್ ಬುದ್ಧ,

ಮಹಾವೀರ ಇವರೆಲ್ಲರಿಂದ ಅಹಿಂಸೆಯ ಹಿರಿಮೆಯು ಬೆಳೆಯುತ್ತಾ ಬಂದಿದೆ. ಮನುಷ್ಯ ಮಾತ್ರಕ್ಕೆ ಮಾಂಸಾಶನವು ನಾಚಿಕೆಯ ಮಾತೆಂದು ತಿಳಿದದೆ. ಮಾಂಸಾಶನವು ಭೂಷಣಾಸ್ಪದವೆಂದು ಯಾರೂ ಹೇಳುವದಿಲ್ಲ. ಪಶುಗಳನ್ನು ಕೊಲ್ಲಬೇಕಾದರೂ ಅವು ಗ್ರಾಮದ ಹೊರಗೆ ದೂರ ಎಲ್ಲಿಯಾದರೂ ಕೊಲ್ಲಲ್ಪಡುತ್ತವೆ.

ಯಜ್ಞ ಕಾಲಕ್ಕೆ ಮಾಡಲಾದ ಹಿಂಸೆಯು ನಿಂತಿತು. ಆದರೆ ಹೋತು ಆ ಕಾಲಕ್ಕೆ ಅವಶ್ಯವೆಂದು ಕೆಲವರು ವಾದಿಸಹತ್ತಿದರು. ಆಗ್ಗೆ ಕೆಲವು ಋಷಿಗಳು ಹಿಟ್ಟಿನ ಹೋತದ ಆಕೃತಿ ಮಾಡಿ, ಅದನ್ನು ಕೊಂದರೆ ಆಯಿತೆಂದು ಬೋಧಿಸಿದರು.

ಜನಿವಾರ ಹೊಸದಾಗಿ ಹಾಕುವಾಗ ಅಂದರೆ ಶ್ರಾವಣಿಯ ದಿವಸ ಹಿಟ್ಟಿನ ಸಂಣ ಗುಳಿಗೆಗಳನ್ನು ತಿನ್ನುವ ರೂಢಿ ಇದೆ. ಇದು ಈ ಪಿಷ್ಟಮಯ ಪಶುವನ್ನು ಕೊಲ್ಲುವ ರೂಢಿಯ ಅವಶೇಷವಾಗಿದೆ. ಮಾಂಸಾಶನವು ಪುಷ್ಟಿಯನ್ನು ಕೊಡುವಂಥ ಅನ್ನವು. ಇದನ್ನು ನಿಲ್ಲಿಸಿದರೆ ಅಷ್ಟು ಶಕ್ತಿಯನ್ನು ಕೊಡುವ ಆಹಾರವನ್ನು ಶೋಧಿಸಲು ಆರಂಭಿಸಲಾಯಿತು. ಆಕಳ ತುಪ್ಪ ಸತುವಿನ ಹಿಟ್ಟು ತಿನ್ನಲು ಹೇಳಲಾಯಿತು. ಮತ್ತು ಅದನ್ನೇ ಯಜ್ಞದಲ್ಲಿ ಆಹುತಿಯಾಗಿ ಕೊಡಲು ಆರಂಭವಾಯಿತು. ಹೀಗೆ ಹೊಸ ಪ್ರಯೋಗಗಳು ಅಲ್ಲಲ್ಲಿ ಮಾಡಲಾದವು. ಲಕ್ಷಾವಧಿ ಜನರಿಗೆ ಮಾಂಸ ತಿನ್ನುವದನ್ನು ಬಿಡಿಸುವದು ಹಗುರಾದ ಮಾತಲ್ಲ. ಜನರ ಸಮಾಧಾನವನ್ನು ಮಾಡುವದು ಕಠಿಣವಾಗಿತ್ತು, ದೇವರಿಗೆ ಹೋತವನ್ನು ಬಲಿಕೊಟ್ಟೇ ತೀರುವೆವು ಎಂದು ಅನ್ನುವವರಿಗೆ "ಹಿಟ್ಟಿನ ಹೋತ ಮಾಡಿ ಅದನ್ನು ದೇವರಿಗೆ ಅರ್ಪಿಸಿದರೆ ನಡೆಯುತ್ತದೆ" ಎಂದು ತಿಳಿಸಿ ಹೇಳಲಾಗುತ್ತಿತ್ತು. ಕೆಲವರು ದೇವರಿಗೆ ತೆಂಗಿನಕಾಯಿ ಒಡಿಸಿದರೆ ಎಲ್ಲವೂ ಸರಿಯಾಗುತ್ತದೆಂದು ಹೇಳಿ ಅದೊಂದು ರೂಢಿ ಏರ್ಪಾಟ ಮಾಡಿದರು. ತೆಂಗಿನಕಾಯಿಯೆಂದರೆ ವಿಶ್ವಾಮಿತ್ರನ ಸೃಷ್ಟಿಯಲ್ಲಿಯ ಮನುಷ್ಯನು. ನರಮೇಧವನ್ನು ನಿಲ್ಲಿಸಲು ವಿಶ್ವಾಮಿತ್ರ ಮೊದಲಾದವರು ತೆಂಗಿನಕಾಯಿ ಒಡೆದರೆ ಮನುಷ್ಯನ ಬಲಿ ಕೊಟ್ಟಂತಾಯಿತೆಂದು ಕದಾಚಿತ್ ಹೇಳಿರಬಹುದು. ತೆಂಗಿನಕಾಯಿಗೆ ಕಣ್ಣು ಮೂಗು ಚಂಡಿಕೆ ಇವೆಲ್ಲವು ಇವೆ. ಮನುಷ್ಯನ ರುಂಡ ಕತ್ತರಿಸಿ ಮುಂಡದಿಂದ ಬೇರ್ಪಡಿಸಿ ರಕ್ತದಿಂದ ದೇವರಿಗೆ ಅಭಿಷೇಕ ಮಾಡುವ ಪದ್ಧತಿ ರೂಢವಾಗಿತ್ತು. ತೆಂಗಿನಕಾಯಿ ಒಡೆದು ಅದರಲ್ಲಿಯ

ನೀರನ್ನು ದೇವರ ಮೂರ್ತಿಗೆ ಸಿಂಪಡಿಸುವ ಪದ್ಧತಿ ಈಗಲೂ ಅದೆ. ತೆಂಗಿನ ಕಾಯಿಯ ಚಂಡಿಕೆ ಇದ್ದ ಬಟ್ಟಲ ದೇವರಿಗೆ ಇಟ್ಟು ಇನ್ನೊಂದನ್ನು ಕಾಯಿ ಒಡೆಸಿದವರಿಗೆ ಪ್ರಸಾದವೆಂದು ಕೊಡಲಾಗುತ್ತದೆ. ತೆಂಗಿನಕಾಯಿ ಪೌಷ್ಟಿಕವೂ ಇದೆ. ಹೀಗೆ ನರಮೇಧದ ಬರಲು ತೆಂಗಿನಕಾಯಿ ಬಲಿದಾನ ವನ್ನು ಶೋಧಿಸಿದವನ ಬುದ್ಧಿವಂತಿಕೆಯು ಅಗಾಧವಾದದ್ದು. ಮುಂದೆ ಭಾಗ ಮೇಧಗಳು ಕೊನೆಗೊಂಡಿರಬೇಕು.

ದೇವರಿಗೆ ಸಿಂದೂರವನ್ನು ಹಚ್ಚುವ ಪದ್ಧತಿಯ ಹಿಂದೆ ಸಹ ಹಿಂಸೆ ಯನ್ನು ಕೊನೆಗಾಣಿಸುವ ಪ್ರಯತ್ನವನ್ನು ಕಾಣಬಹುದು. ಬಲಿಕೊಟ್ಟವನ ರಕ್ತವನ್ನು ದೇವರ ಮೂರ್ತಿಯ ಮೇಲೆ ಸಿಂಪಡಿಸುವ ರೂಢಿ ಇದೆ. ಸಾವಿ ರಾರು ಬಲಿದಾನದಿಂದ ದೇವರ ಮೂರ್ತಿಯು ಕೆಂಪಗಾಗುತ್ತಿತ್ತು. ಆದರೆ ತೆಂಗಿನಕಾಯಿ ನೀರಿನಿಂದ ಕೆಂಪಗಾಗುವದು ಹೇಗೆ? ಅದಕ್ಕಾಗಿ ದೇವರಿಗೆ ಸಿಂದೂರ ಹಚ್ಚಿ ಕೆಂಪುಬಣ್ಣ ಕೊಡಹತ್ತಿದರು. ರಕ್ತದ ಬಟ್ಟು ಹಣೆಗೆ ಹಚ್ಚುವ ಪದ್ಧತಿ ಇತ್ತು. ಈಗ ನಾವು ಗಂಧವನ್ನು ಹಚ್ಚುವ ಪದ್ಧತಿ ಈ ರಕ್ತ ಬಲಿದಾನದ ಕುರುಹು ಆಗಿದೆ. ರಕ್ತವನ್ನು ನಾವು ಇನ್ನೂ ಮರೆಯಲು ಸಿದ್ಧರಿಲ್ಲ. ರಕ್ತ ಮರೆತ ದಿನವು ಸುದಿನವಾಗುವದು.

ಈ ರೀತಿ ಮಾಂಸಾಶನ ನಿವೃತ್ತಿಯ ಪ್ರಯೋಗಗಳು ನಡೆದಿವೆ. ಹೊಸ ಹೊಸ ಕಲ್ಪನೆಗಳನ್ನು ಮುಂದಾಳುಗಳು ಹುಡುಕಿದ್ದಾರೆ. ಸಮಾ ಜಕ್ಕೆ ತಿಳಿಯಬೇಕೆಂದು ಹೆಣಗಾಡುತ್ತಾರೆ. ಸಾವಕಾಶವಾಗಿ ತಿಳಿಸಿ ಹೇಳುತ್ತಾರೆ. ಮನಸ್ಸಿನಲ್ಲಿ ನೆಲೆಗೊಂಡ ಕಲ್ಪನೆಗಳು ವಿಕಾಸ ಹೊಂದು ತ್ತವೆ. ತ್ರಿಸುಪರ್ಣದ ಮಂತ್ರದಲ್ಲಿ "ಆತ್ಮಾ ಯಜಮಾನಃ ಶ್ರದ್ಧಾ ಪತ್ನೀ ಮನ್ಯುಃ ಪಶುಃ'' ಎಂಬ ಯಜ್ಞದ ಭವ್ಯವಾದ ಕಲ್ಪನೆಯು ತೋರಿಸಲಾ ಗಿದೆ. ತ್ರಿಸುಪರ್ಣವನ್ನು ರಚಿಸಿದ ಋಷಿ ಹೇಳುತ್ತಾನೆ. "ಹೋತವನ್ನೇಕೆ ಕೊಲ್ಲುತ್ತೀರಿ! ನಿಮ್ಮ ಮನಸ್ಸಿನಲ್ಲಿ ನೆಲೆಗೊಂಡ ವಿಕಾರಗಳನ್ನೆಲ್ಲ ಸುಟ್ಟು ಬಿಡಿರಿ.''

ನಮಗೆ ಸೇರಿದ್ದನ್ನು ನಾವು ದೇವರಿಗೆ ಅರ್ಪಿಸಲಾರಂಭಿಸಿದೆವು. ನಮಗೆ ಎಲ್ಲಕ್ಕೂ ಹೆಚ್ಚಾಗಿ ಸೇರುವದೆಂದರೆ ನಮ್ಮಲ್ಲಿದ್ದ ವಾಸನೆಗಳು. ನಾವು ಈ ವಾಸನೆಗಳ ದಾಸರಾಗಿದ್ದೇವೆ. ಅಂತ್ಯಕಾಲದಲ್ಲಿ ಕೂಡ ಇವನ್ನು ಬಿಡಲು ನಮ್ಮ ಮನಸ್ಸು ಒಪ್ಪುವದಿಲ್ಲ. ಆದ್ದರಿಂದ ಇವನ್ನೇ ನಾವು ಯಜ್ಞದಲ್ಲಿ ಸುಟ್ಟು ಬೂದಿ ಮಾಡಬೇಕು.

ಬೇರೆ ಬೇರೆ ವಿಧದ ಪ್ರಯೋಗಗಳಿಂದ ಯಜ್ಞದ ಭವ್ಯ ಮತ್ತು ಉತ್ಕ್ರಾಂತಿ ಹೊಂದಿದ ತತ್ವಗಳಿಂದ ಸತತವಾಗಿ ನಡೆದ ಪ್ರಚಾರದಿಂದ ಮತ್ತು ಹಿರಿದಾದ ವಿಭೂತಿಗಳು ಈ ತತ್ವಗಳನ್ನು ತಮ್ಮ ಜೀವನದಲ್ಲಿ ಬೆಳಸಿ ಅದರಂತೆ ಇಟ್ಟುಕೊಂಡ ಆಚರಣದಿಂದ, ಭಾರತವರ್ಷದಲ್ಲಿ ಮಾಂಸಾಶನ ನಿವೃತ್ತಿ ಒಳ್ಳೇ ರಭಸದಿಂದ ಸಾಗಿತು. ಭರತಖಂಡದಲ್ಲಿ ಹದಿಮೂರು ಹದಿನಾಲ್ಕನೆ ಶತಮಾನದಲ್ಲಿ ವೈಷ್ಣವ ಧರ್ಮದ ಒಂದು ದೊಡ್ಡ ತೆರೆ ಎದ್ದಿತು. ಮತ್ತು ಅಹಿಂಸೆಯ ಕಾರ್ಯವನ್ನು ಮುಂದುವರಿಸಿತು, ವಾರಕರಿ ಪಂಥದವರು ಸಹ ಇದೇ ಕಾರ್ಯವನ್ನು ಮಾಡಿದರು. ಭಾರತದಲ್ಲಿ ಬೇರೆ ಬೇರೆ ಜಾತಿಗಳ ಮಧ್ಯ ಊಟಉಡಿಗೆ, ಲಗ್ನ ಇತ್ಯಾದಿ ಆಗದೆ ಇರುವದಕ್ಕೆ ಮಾಂಸಾಶನವು ಒಂದು ದೊಡ್ಡ ಕಾರಣವು. ಅದೇ ಉಚ್ಚ ನೀಚ ಭಾವನೆಗಳು ಉಂಟಾಗಲಿಕ್ಕೆ ಒಂದು ಕಾರಣವಾಗಿದೆ. ಮಾಂಸಾಶನ ಮಾಡುವವರು ಕನಿಷ್ಟರೆಂಬ ಭಾವನೆಯು ಸಮಾಜದಲ್ಲಿ ನೆಲೆಗೊಂಡಿತು.

"ಸಮಾನಶೀಲ ವ್ಯಸನೇಷು ಸಖ್ಯಂ" ಎಂಬ ಮಾತು ನಾವು ಇಂದಾದರೂ ಕಾಣಬಹುದು. ಖಾದಿ ಧರಿಸುವವರು ವಿಶೇಷವಾಗಿ ಖಾದಿ ಧರಿಸುವವರೊಡನೆಯೇ ಹೆಚ್ಚಾಗಿ ಆಪ್ತತ್ವವನ್ನು ಬೆಳೆಯಿಸುತ್ತಾರೆ. ಆಪ್ತತ್ವದ ವಿಷಯದಲ್ಲಿ ನಾವು ಆಚಾರ ವಿಚಾರಗಳ ಸಾಮ್ಯವನ್ನೆ ವಿಶೇಷವಾಗಿ ನೋಡುತ್ತೇವೆ. ಒಂದೇ ಆಚಾರ ವಿಚಾರದವರ ಒಂದು ಹೊಸ ಜಾತಿಯೇ ಆಗುತ್ತದೆ. ಹೊಸ ಗುರಿಯೊಡನೆ ಹೊಸ ಜಾತಿ ಹುಟ್ಟುತ್ತದೆ. ಆ ಆ ಗುರಿಯ ಉಪಾಸಕರು ಒಂದೆಡೆ ಸೇರುತ್ತಾರೆ. ಸಂಬಂಧ ಬೆಳೆದಂತೆ ಜಾತಿ ಬೆಳೆಯುತ್ತದೆ. ಜಾತಿಯ ಬೆಳವಣಿಗೆಯೆಂದರೆ ಗುರಿಯ ಬೆಳವಣಿಗೆಯೇ.

ಭಕ್ಷಣೆಗಾಗಿ ಮಾಡಲಾಗುವ ಹಿಂಸೆಯನ್ನು ಕಡಿಮೆ ಮಾಡುವ ಪ್ರಯೋಗಗಳು ನಮ್ಮ ಭೂಮಿಯಲ್ಲಿ ನಡೆದಂತೆ, ರಕ್ಷಣೆಗಾಗಿ ಕೈಕೊಳ್ಳಲಾಗುವ ಹಿಂಸೆ ಹೋಗಲಾಡಿಸುವ ಪ್ರಯತ್ನಗಳೂ ಮಾಡಲ್ಪಟ್ಟವೆ. ಮತ್ತು ಇಂದಿಗೂ ನಡೆದಿವೆ ಎನ್ನುವದು ಸಂತೋಷದ ಮತ್ತು ಹೆಮ್ಮೆಯ ಮಾತಾಗಿದೆ.

ಮನುಷ್ಯನು ಮನುಷ್ಯನನ್ನು ತಿನ್ನಬಾರದು, ಮನುಷ್ಯನು ಮನುಷ್ಯನನ್ನು ಕೊಲ್ಲಬಾರದು ಇದು ಮಾನವತೆಯ ಮೊದಲನೇ ಪಾಠವು.

ಇಂದು ಒಬ್ಬನು ಮತ್ತೊಬ್ಬನನ್ನು ಪ್ರತ್ಯಕ್ಷ ಹರಿದು ತಿನ್ನುವದಿಲ್ಲೆಂಬ ಮಾತು ನಿಜ. ಕ್ವಚಿತ್ತಾಗಿ ಎಲ್ಲಿಯಾದರೂ ನರಮಾಂಸ ಭಕ್ಷಕರು ಪೃಥ್ವಿಯ ಮೇಲೆ ಇರಬಹುದು. ಸುಧಾರಿಸಿದ ಮನುಷ್ಯನು ಇವರಿಗೆ ಕಾಡು ಜನರೆಂದು ಕರೆಯುತ್ತಾನೆ. ಆದರೆ ಇವನು ಮನುಷ್ಯರನ್ನು ಅಪ್ರತ್ಯಕ್ಷನಾಗಿ ತಿನ್ನುವ ಹಾದಿ ಹುಡುಕಿದ್ದಾನೆ. ಈ ಸುಧಾರಿಸಿದ ಮಾನವರು, ಶಸ್ತ್ರಾಸ್ತ್ರ ಬಲದಿಂದ ದುರ್ಬಲರನ್ನು ಗುಲಾಮರನ್ನಾಗಿ ಮಾಡುವರು, ದುಡ್ಡು ಗಳಿಸಿ ಎರಡನೆಯವರನ್ನು ದುಡಿಯಲು ಹಚ್ಚುವರು, ಹೀಗೆ ನಡೆದಿದೆ ಸುಧಾರಕರ ರೀತಿ.

ಹೀಗೆ ನಮ್ಮನ್ನು ಎರಡನೆಯವರು ಗುಲಾಮಗಿಯಲ್ಲಿಟ್ಟರೆ ನಾವೇನು ಮಾಡತಕ್ಕದ್ದು ? ನಮ್ಮ ರಕ್ಷಣೆಗಾಗಿ ಉಪಾಯವಿಲ್ಲವೇ ? ಹಿಂಸೆಯ ಹೊರತು ಇನ್ನೊಂದು ಮಾರ್ಗವಿಲ್ಲವೆಂದು ಅನಿಸಿತ್ತು. ಆದರೆ ಹಿಂಸೆ ಯೋಗ್ಯವಲ್ಲವೆಂದು ಕೆಲವರಿಗೆ ಅನಿಸಹತ್ತಿತ್ತು. ಕೊನೆಗೆ ತಾವು ಸ್ವಂತ ಹಿಂಸೆ ಮಾಡಬಾರದೆಂದು ಇವರು ಅಂದುಕೊಂಡರು. ಬೇಕಾದರೆ ಸಮಾಜದಲ್ಲಿಯ ಕೆಲವೊಂದು ಜನ ಇದನ್ನು ಮಾಡಲಿ. ಅವರು ಈ ಕಲೆಯಲ್ಲಿ ತರಬೇತು ಹೊಂದಲಿ. ಹೀಗಾಗಿ ಬ್ರಾಹ್ಮಣರು ಕ್ಷತ್ರಿಯರಿಗೆ ಹೇಳಿದರು. “ನಾವು ಅಹಿಂಸಾವ್ರತ ಕೈಕೊಳ್ಳುತ್ತೇವೆ. ಯಾರಾದರೂ ನಮ್ಮ ಮೇಲೆ ಕೈ ಎತ್ತಿದರೆ ನೀವು ನಮ್ಮ ರಕ್ಷಣೆಗಾಗಿ ಧಾವಿಸಬೇಕು.”

ಆದರೆ ಇದು ನಿಜವಾಗಿ ಯೋಗ್ಯವಾದ ವಿಚಾರವಲ್ಲ. ವಿಶ್ವಾಮಿತ್ರನು ತನ್ನ ಯಜ್ಞರಕ್ಷಣೆಗಾಗಿ ರಾಮ ಲಕ್ಷ್ಮಣರಿಗೆ ಧನುರ್ವಿದ್ಯೆ ಕಲಿಸಿದನು. ವಿಶ್ವಾಮಿತ್ರನು ಬ್ರಹ್ಮರ್ಷಿಯಾಗಿದ್ದನು. “ರಾಕ್ಷಸರು ನನ್ನ ಯಜ್ಞಗಳಲ್ಲಿ ಅಡ್ಡಿಆತಂಕ ಮಾಡಲು ಬರುವರು. ಅವರನ್ನು ನೀವು ಕೊಲ್ಲಬೇಕು. ನಾನು ನಿಮಗೆ ಧನುರ್ವಿದ್ಯೆ ಕಲಿಸುತ್ತೇನೆ. ನೀವು ಅಜೇಯರಾಗುವಿರಿ ಮತ್ತು ರಾಕ್ಷಸರನ್ನು ಸಹಜವಾಗಿ ಕೊಲ್ಲುವಿರಿ” ಎಂದು ಅವನು ರಾಮ ಲಕ್ಷ್ಮಣರಿಗೆ ಹೇಳಿದನು.

ವಿಶ್ವಾಮಿತ್ರನು ಧನುರ್ವಿದ್ಯೆಯಲ್ಲಿ ನಿಷ್ಣಾತನಾಗಿದ್ದನು. ಆದರೆ ಅವನು ಅಹಿಂಸಾ ವ್ರತವನ್ನು ಕೊಕೊಂಡಿದ್ದನು. ತನ್ನನ್ನು ಯಾರಾದರೂ ರಕ್ಷಿಸಬೇಕು ಎಂದು ಅವನ ಇಚ್ಛೆ ! ಆದ್ದರಿಂದ ಪರಭಾರೆ ರಾಮಲಕ್ಷ್ಮಣರಿಂದ ರಾಕ್ಷಸರನ್ನು ನಾಶಗೊಳಿಸಬೇಕೆಂದು ಅವನು ನಿಶ್ಚಯ ಮಾಡಿದನು, ಮತ್ತು ಹಿಂಸೆ ಮಾಡುವ ಸಾಧನೆಯನ್ನಾದರೂ ಅವರ ಕೈಯಲ್ಲಿ ಕೊಟ್ಟನು.

ಆದರೆ ಹೀಗೆ ಮಾಡುವದರಿಂದ ವಿಶ್ವಾಮಿತ್ರನ ಮೇಲಿನ ಹಿಂಸೆಯ ಹೊಣೆ ತಪ್ಪಬಹುದೇ? ರಾಮಲಕ್ಷ್ಮಣ ಇವರಿಬ್ಬರಿಗಿಂತ ಹೆಚ್ಚಿಗೆ ಹಿಂಸಕನು ವಿಶ್ವಾಮಿತ್ರನು, ಹೀಗೆ ಯುಕ್ತಿಯಿಂದ ಅಹಿಂಸೆಯ ಪುಣ್ಯವು ದೊರಕುವದು ಸಾಧ್ಯವಿಲ್ಲ.

ಚೇಳು ನೋಡಿದೊಡನೆ ಒಬ್ಬನು ಮತ್ತೊಬ್ಬನನ್ನು ಕರೆಯುತ್ತಾನೆ. ಅವನ ಕೈಯಲ್ಲಿ ತನ್ನ ಕಾಲ್ಮರಿ ಕೊಟ್ಟು ಚೇಳನ್ನು ಕೊಲ್ಲಿಸುತ್ತಾನೆ. ಇಂಥವನಿಗೆ ಅಹಿಂಸೆಯ ಪುಣ್ಯ ಸಿಕ್ಕಬಹುದೋ ? ಇದರಂತೆ ವಿಶ್ವಾಮಿತ್ರನ ಸ್ಥಿತಿ.

ಕೇವಲ ಕ್ಷತ್ರಿಯರ ಮೇಲೆ ಹಿಂಸೆಯ ಹೊಣೆ ಇದ್ದದ್ದರಿಂದ ಅವರು ಭಯಂಕರ ಹಿಂಸಕರಾದರು. ಅವರು ಬಲವಂತರಾದರು. ಮತ್ತು ಶತ್ರುಗಳು ಇಲ್ಲದಾಗ ಪ್ರಜೆಗಳನ್ನು ಕಾಡಲುದ್ಯುಕ್ತರಾದರು. ಈ ಮಾತು ಪರಶುರಾಮನಿಗೆ ಸಹನವಾಗಲಿಲ್ಲ. ಸೊಕ್ಕಿಗೆದ್ದ ಕ್ಷತ್ರಿಯರನ್ನೆಲ್ಲ ನಾಶಗೊಳಿಸಲು ಅವನು ನಿಶ್ಚಯಿಸಿದನು. ಕೈಯಲ್ಲಿ ಬಿಲ್ಲು ಬಾಣ ಚಪಗೊಡಲಿಯನ್ನು ಹಿಡಿದು ಕ್ಷತ್ರಿಯರನ್ನು ಕೊಲ್ಲುತ್ತ ಮುಂದೆಸಾಗಹತ್ತಿದನು. ಕ್ಷತ್ರಿಯರ ಯಮನಾದನು. ಹೀಗೆ ಪುನಃ ಪುನಃ ಕ್ಷತ್ರಿಯರ ನಾಶವನ್ನು ಅವನು ಕೈಕೊಂಡನು. ಜಗಜಕ್ಕೆ ಸಹ ಕ್ಷತ್ರಿಯನು ಉಳಿಯಬಾರದೆಂದು ಇಪ್ಪತ್ತೊಂದು ಬಾರಿ ನಿಃಕ್ಷತ್ರಿಯ ಪೃಥ್ವಿ ಮಾಡಿದನು. ಆದರೂ ಕ್ಷತ್ರಿಯರು ಮತ್ತೆ ತಲೆದೋರಹತ್ತಿದರು.

ಶಸ್ತ್ರದಿಂದ ಶಸ್ತ್ರಗಳು ನಾಶಹೊಂದುವದಿಲ್ಲ. ಕತ್ತಿಯಿಂದ ಕತ್ತಿ ನಿರ್ನಾಮವಾಗುವದಿಲ್ಲ. ಯುದ್ಧದಿಂದ ಯುದ್ಧಗಳು ನಿಲ್ಲುವಂತಿಲ್ಲ. ಪರಶುರಾಮನು ಮಾಡಿದ ಪ್ರಯೋಗವು ಯಶಸ್ಸು ಹೊಂದಲಿಲ್ಲ. ಮತ್ತೆ ಮತ್ತೆ ಕ್ಷತ್ರಿಯರನ್ನು ಕೊಂದದ್ದರಿಂದ ಪರಶುರಾಮನೇ ತಾನೊಬ್ಬ ಭಯಂಕರ ಕ್ಷತ್ರಿಯನಾದನು ! ಬ್ರಾಹ್ಮಣರನ್ನೇ ಕ್ಷತ್ರಿಯರಾಗಿ ಮಾಡಿದನು. ತನ್ನಲ್ಲಿದ್ದ ಶಸ್ತ್ರವಿದ್ಯೆಯನ್ನು ಬ್ರಾಹ್ಮಣನಿಗೆ ಮಾತ್ರ ಕಲಿಸಹತ್ತಿದನು. ಇತರರಿಗೆ ಕಲಿಸುವದಿಲ್ಲೆಂದು ಆಣೆ ಮಾಡಿದನು. ಭೀಷ್ಮನು ಅವನಿಂದ ಈ ವಿದ್ಯೆಯನ್ನು ಮೊದಲೇ ಪಡೆದಿದ್ದನು. ಕರ್ಣನು ಕಳವಿನಿಂದ ಕಲಿತನು. ಈ ರೀತಿ ನೂರಾರು ಕ್ಷತ್ರಿಯರು ಪರಶುರಾಮನಿಂದ ಶಸ್ತ್ರವಿದ್ಯೆಯಲ್ಲಿ ತರಬೇತಿ ಹೊಂದಿದ್ದರು. ಹಿಂಸೆಯಿಂದ ಅಹಿಂಸೆ ಸಾಧಿಸಲು ಹೊರಟ ಪರಶುರಾಮನು ಹೆಚ್ಚು ಹಿಂಸಕರನ್ನೇ ಹುಟ್ಟಿಸಿದನು.

ಪರಶುರಾಮನ ಉದ್ದೇಶ ಶುದ್ಧವಿತ್ತು. ಆದರೆ ಅವನು ಕೈಕೊಂಡ

ಮಾರ್ಗ ತಪ್ಪು. ಅವನ ಪ್ರಯೋಗವು ಅಪಯಶ ಹೊಂದಿತು. ಭೋಗದಿಂದ ಭೋಗವನ್ನು ತೃಪ್ತಿಗೊಳಿಸುವ ಯಯಾತಿಯ ಪ್ರಯೋಗದಂತೆ ಇದೊಂದು ಹಿರಿದಾದ ಪ್ರಯತ್ನವಿತ್ತು. ಇಪ್ಪತ್ತು ವರ್ಷಗಳ ವರೆಗೆ ಹಿಂಸೆ ಮಾಡಿ ಅಹಿಂಸೆಯನ್ನು ಪ್ರಪಂಚದಲ್ಲಿ ನೆಲೆಗೊಳಿಸುವ ಪ್ರಯೋಗವನ್ನು ಪರಶುರಾಮನು ಮಾಡಲು ಸಾಹಸಪಟ್ಟನು. ಈ ಪ್ರಪಂಚದಲ್ಲಿ ಬಿತ್ತಿದ್ದನ್ನೆ ಬೆಳೆದುಕೊಳ್ಳಬೇಕಾಗುತ್ತದೆ. ಹಿಂಸೆಯ ಮರಕ್ಕೆ ಅಹಿಂಸೆಯ ಫಲ ಬರುವದು ಹೇಗೆ ಸಾಧ್ಯ?

ಹಿಂಸೆಯಿಂದ ಹಿಂಸೆ ಕೊನೆಗಾಣುವದಿಲ್ಲ. ಯುದ್ಧದಿಂದ ಯುದ್ಧಗಳು ಮುಗಿಯುವದಿಲ್ಲ. ಆದ್ದರಿಂದ ಯುದ್ಧಗಳಲ್ಲಿಯೇ ಆದಷ್ಟು ಕಡಿಮೆ ಹಿಂಸೆಯಾಗಬೇಕು ಎಂಬ ಮಾತಿಗೆ ಒಪ್ಪಿಗೆಯಾಯಿತು.

ಯುದ್ಧಗಳನ್ನು ತಪ್ಪಿಸುವದು ಕಷ್ಟವಾದ ಮಾತು. ಅಂದಮೇಲೆ ಯುದ್ಧದಲ್ಲಿಯಾದರೂ ಕೆಲವೊಂದು ನೀತಿ ನಿಯಮಗಳನ್ನು ಪಾಲಿಸಹತ್ತಿದರು. ಹೆಂಗಸರನ್ನು ಮಕ್ಕಳನ್ನು ಕೊಲ್ಲಬಾರದು. ವೃದ್ಧರು ಅವಧ್ಯರೆಂದು ತಿಳಿಯಬೇಕು. ಶಸ್ತ್ರಹೀನರ ಮೇಲೆ ಏರಿ ಹೋಗಬಾರದು. ಒಬ್ಬನ ಮೇಲೆ ಅನೇಕರು ಏರಿ ಹೋಗಬಾರದು. ಈ ರೀತಿ ಯುದ್ಧ ನೀತಿಯೊಂದು ಬಳಕೆಯಲ್ಲಿ ಬರಹತ್ತಿತು. ಆದಷ್ಟು ಹಿಂಸೆ ಮಾಡಬಾರದೆಂಬುವದೇ ಇದರ ಮುಖ್ಯೋದ್ದೇಶ. ಈ ಹಿಂಸೆಯ ಸಮಯದಲ್ಲಿ ಸಹ ಅಹಿಂಸೆಯ ನೆನಪು ಮನುಷ್ಯನು ಇಟ್ಟಿದ್ದರ ಕುರುಹು ಇದು.

ಎರಡನೆಯವರಿಗೆ ಹಿಂಸೆ ಮಾಡಲು ಹೇಳಿ ವಿಶ್ವಾಮಿತ್ರನು ಅಹಿಂಸೆಯ ಪುಣ್ಯ ಗಳಿಸಲು ಬಯಸಿದನು. ಪರಶುರಾಮನು ಹಿಂಸೆ ಮಾಡಿ ಅಹಿಂಸೆಯನ್ನು ಪ್ರಸ್ಥಾಪಿಸಲು ಸಾಹಸಪಡುತ್ತಿದ್ದನು. ಇವೆರಡು ತಪ್ಪು ಹಾದಿಯನ್ನು ಹಿಡಿದ ಪ್ರಯೋಗಗಳು. ಆದರೆ ವಿಚಾರವಂತನಾದ ಮಾನವನು ಸುಮ್ಮನೆ ಕೂಡಲಿಲ್ಲ. ಹಿಂಸೆ ಕೊನೆಗಾಣಿಸುವದು ಅತ್ಯವಶ್ಯ. ಅದಕ್ಕಾಗಿ ಉಪಾಯವನ್ನು ಶೋಧಿಸಲು ಪ್ರಯತ್ನಪಡಹತ್ತಿದರು. ಹಿಂಸೆಯಿಂದಂತೂ ಹಿಂಸೆ ಕೊನೆಗಾಣುವದಿಲ್ಲೆಂದು ಕಂಡಮೇಲೆ ತಾವೇ ಅಹಿಂಸಾತ್ಮಕರಾಗಿ ಹಿಂಸೆಯನ್ನು ಎದುರಿಸಬೇಕೆಂದು ಮಹಾತ್ಮರು ಮನಗಂಡರು. ತಮ್ಮ ನಿತ್ಯ ಜೀವನದಲ್ಲಿ ಅಹಿಂಸೆಯ ಪ್ರಯೋಗವನ್ನು ಆರಂಭಿಸಿದರು. ಚಿಕ್ಕಮಕ್ಕಳಿಗೆ ಹೊಡೆದರೆ ಸುಧಾರಿಸುತ್ತಾರೋ ಅಥವಾ ತಿಳುವಳಿಕೆ ಹೇಳಿದರೆ ಅವರು ಸುಧಾರಿಸುತ್ತಾರೋ? ಕ್ಷಮೆ ಹೆಚ್ಚು ಬಲ

ವುಳ್ಳದ್ದೊ, ಶಸ್ತ್ರ ಹೆಚ್ಚು ಬಲವುಳ್ಳದ್ದೊ ? ಪ್ರೇಮದ ಸಾಮರ್ಥ್ಯ ಹೆಚ್ಚಿನದೋ, ಅಥವಾ ಶಸ್ತ್ರದ ಸಾಮರ್ಥ್ಯ ಹೆಚ್ಚಿನದೋ ?

ಸಂತರು, ಮಹಾತ್ಮರು ಈ ತತ್ವಗಳ ಆಚರಣೆಯನ್ನು ಮಾಡಹತ್ತಿದರು. ತಮ್ಮ ವೈಯಕ್ತಿಕ ಮತ್ತು ಮರ್ಯಾದಿತ ಜೀವನದಲ್ಲಿ ಹಾಗೆ ನಡೆಯಲು ಆರಂಭಿಸಿದರು. ಬಂಗಾಲದಲ್ಲಿ ಚೈತನ್ಯರೆಂಬೊಬ್ಬ ದೊಡ್ಡ ಸಾಧುಗಳು ಆಗಿಹೋಗಿದ್ದಾರೆ. ಒಂದು ದಿನ ಅವರು ತಮ್ಮ ಶಿಷ್ಯರೊಂದಿಗೆ ಬೀದಿಯಲ್ಲಿ ಮೃದಂಗ ತಾಳ ಸಹಿತವಾಗಿ ನಾಮಸಂಕೀರ್ತನ ಮಾಡುತ್ತ ಹೊರಟಿದ್ದರು. "ಹರಿಹರಿ ಬೋಲ । ಭವಸಿಂಧು ಪಾರಚಲ" (ಹರಿಹರಿ ಅನ್ನುತ್ತ ಈ ಜೀವನ ಸಾಗರವನ್ನು ಪಾರಾಗುವಾ) ಎಂದೆನ್ನುತ್ತ ಹೊರಟಿದ್ದರು. ಅಷ್ಟರಲ್ಲಿ ಇಬ್ಬರು ದುಷ್ಟರು ಬಂದು ಚೈತನ್ಯರ ತಲೆಯ ಮೇಲೆ ಹೊಡೆದರು. ರಕ್ತವು ಸೋರಲಾರಂಭಿಸಿತು. ಚೈತನ್ಯರ ಶಿಷ್ಯ ನಿತ್ಯಾನಂದ ಆ ದುಷ್ಟರ ಮೇಲೆ ಏರಿಹೋದನು. ಆಗ ಚೈತನ್ಯರು ಅಂದರು "ನಿತಾಯಿ! ಬೇಡ, ನನ್ನನ್ನು ಹೊಡೆದವರಿಗೆ ನಾನು ಪ್ರೇಮವನ್ನೆ ಕೊಡುವೆ." ಭಜನವು ನಡೆದೇ ಇತ್ತು. ಚೈತನ್ಯರು "ಹರಿಬೋಲ ಹರಿಬೋಲ" ಎಂದೆನ್ನುತ್ತಿದ್ದರು. ಎಲ್ಲರು ಆ ತಾಲಕ್ಕೆ ಕುಣಿಯುತ್ತಿದ್ದರು. ಆ ದುಷ್ಟರಿಬ್ಬರು ಕುಣಿಯಹತ್ತಿದರು. ಆ ಭಜನೆಯ ರಂಗಿನಲ್ಲಿ ಅವರೂ ಕೂಡಿಕೊಂಡರು. ಚೈತನ್ಯರ ಅಹಿಂಸೆ ಗೆದ್ದಿತು. ಅಂದಿನಿಂದ ಆ ಕುಡುಕರಿಬ್ಬರೂ ಚೈತನ್ಯರ ಏಕನಿಷ್ಠ ಸೇವಕರಾದರು.

ಪ್ರೇಮದಿಂದ ಪಶುಗಳು ಸಹ ತಮ್ಮ ಕ್ರೂರತನವನ್ನು ಮರೆಯುತ್ತವೆ. ಅಂಡ್ರೊಕ್ಲಿಸ್ ಮತ್ತು ಸಿಂಹನ ಕಥೆ ಜಗತ್ಪ್ರಸಿದ್ಧವಿದೆ. ಸೇವೆಯಿಂದ ಪ್ರೇಮದಿಂದ ಕ್ರೂರ ಪಶುಗಳನ್ನು ಸಹ ಸಾದು ಮಾಡುವದು ಸಾಧ್ಯವಿದೆ. ಅಂದಮೇಲೆ ಮನುಷ್ಯರನ್ನು ಸುಧಾರಿಸುವದು ಅಸಾಧ್ಯವೇ ?

ಮಾಡಿದ ಪ್ರೀತಿ ವ್ಯರ್ಥಹೋಗುವದಿಲ್ಲ. ಚೈತನ್ಯರ ತಲೆಯಮೇಲೆ ಇನ್ನೂ ಎರಡು ಪೆಟ್ಟು ಬಿದ್ದು ಅವರು ಸತ್ತಿದ್ದರೆ ? ಆ ಸಾವು ಸಹ ಸುಪರಿಣಾಮಿಯಾಗುತ್ತಿತ್ತು. ಆ ಸಾವಿನ ಪರಿಣಾಮವು ಆ ದುಷ್ಟರಿಬ್ಬರ ಮೇಲೆ ಆಗದೆ ಹೋಗುತ್ತಿತ್ತೇ! ಏನೋ! ಒಂದೇ ಮರಣವು ಅವರಿಗೆ ಸುಧಾರಿಸಲು ಸಾಕಾಗುತ್ತಿದ್ದಿಲ್ಲ. ಆದರೂ ಆ ಮರಣವು ವ್ಯರ್ಥಹೋಯಿತೆಂದು ನಾವು ತಿಳಿಯಬೇಕಾಗಿಲ್ಲ. ಏಕಚ ಪ್ಯಾಲಾ ನಾಟಕದ ಕೊನೆಯಲ್ಲಿ ಸಂಭವಿಸಿದ ಸತಿ ಸಿಂಧೂನ ಮರಣವು ಸುಧಾಕರನ ಕಣ್ಣು ತೆರೆಯಿತು.

ಇಲ್ಲಿಯ ವರೆಗೆ ಸಮಾಜದಲ್ಲಿ ಬಾಳಿದ, ಬಾಳುವ, ಹಿರಿದಾದ ಮಹಾತ್ಮರು ತಮ್ಮ ವೈಯಕ್ತಿಕ ಇರುವಿಕೆಯಲ್ಲಿ ಬಹಳಾವರ್ತಿ ಸಂಣ ಪುಟ್ಟ ಸಂದರ್ಭದಲ್ಲಿ ಹಿಂಸೆಯ ವಿರುದ್ಧ ಅಹಿಂಸೆಯ ಪ್ರಯೋಗವನ್ನು ಮಾಡಿ ನೋಡಿದ್ದಾರೆ. ಹಿಂಸೆಗಿಂತ ಅಹಿಂಸೆಯ ಸಾಮರ್ಥ್ಯವೇ ಹೆಚ್ಚು ಎನ್ನುವದನ್ನು ಅವರು ಮನಗಂಡಿದ್ದಾರೆ. ದಂಡನೆಯಿಂದ ವಿದ್ಯೆ ಬರುತ್ತದೆಂಬ ಮಾತು ಈಗ ಹಳೆಯದಾಗಿದೆ. ಅದು ತಪ್ಪು ಮಾರ್ಗವೆಂದು ಶಿಕ್ಷಣ ಶಾಸ್ತ್ರಜ್ಞರು ಕಂಡುಹಿಡಿದಿದ್ದಾರೆ. ಪ್ರಪಂಚವು ಒಂದು ಹಿರಿದಾದ ಶಾಲೆ. ಶಿಕ್ಷಣ ಶಾಸ್ತ್ರವು ಮನಗಂಡ ತತ್ವಗಳನ್ನು ನಾವು ಪ್ರಪಂಚದ ವ್ಯಾವಹಾರಿಕ ಶಾಲೆಯಲ್ಲಿ ತರಲೇಬೇಕು. ನಮಗೆ ಪರಸ್ಪರರನ್ನು ಸುಧಾರಿಸುವದದೆ. ಈ ಕೆಲಸವು ಬಡಿಗೆಯಿಂದಾಗುವದಿಲ್ಲ. ಅದಕ್ಕಾಗಿ ಹೊಸ ಮಾರ್ಗವನ್ನೇ ಅವಲಂಬಿಸಬೇಕಾಗಿದೆ.

ಶಾಸ್ತ್ರಜ್ಞರು ಮೊದಲು ತಮ್ಮ ಪ್ರಯೋಗಗಳನ್ನು ತಮ್ಮ ಕಿರಿದಾದ ಪ್ರಯೋಗಶಾಲೆಯಲ್ಲಿ ಮಾಡುತ್ತಾರೆ. ಅದರಲ್ಲಿ ಯಶಸ್ಸು ದೊರೆತಮೇಲೆ ಜಗತ್ತಿನ ಮುಂದೆ ಇಡುತ್ತಾರೆ. ಪ್ರಯೋಗಾಲಯದಲ್ಲಿ ಯಶಸ್ಸು ಪಡೆದ ಪ್ರಯತ್ನ ಜಗತ್ತಿನಲ್ಲಿ ರೂಢವಾಗುತ್ತದೆ. ಜ್ಞಾನ ಪಸರಿಸುವ ರೀತಿ ಇದು. ಸಂತರ ವೈಯಕ್ತಿಕ ಜೀವನದಲ್ಲಿ ಅಹಿಂಸೆಯ ಪ್ರಯೋಗವು ಯಶಸ್ಸು ಪಡೆಯಿತು. ವ್ಯಕ್ತಿಯ ಜೀವನದಿಂದ ಅದು ಸಮಾಜದ ಜೀವನದಲ್ಲಿ ಬರುವದು ಅವಶ್ಯವಿದೆ. ಕೋಣೆಯಲ್ಲಿ ಸಿದ್ಧವಾದ ಈ ಜ್ಞಾನವನ್ನು ವ್ಯವಹಾರದಲ್ಲಿ ಬೆರಸುವದದೆ. ಮಹಾತ್ಮಾ ಗಾಂಧಿಯವರು ಈ ಕಾರ್ಯವನ್ನು ಇಂದು ಕೈಕೊಂಡಿದ್ದಾರೆ. ಸಂತರ ಇರುವಿಕೆಯಲ್ಲಿ ಸಾಧ್ಯವಾದ ಈ ಅಹಿಂಸೆಯ ಪ್ರಯೋಗವನ್ನು ಮಹಾತ್ಮಾಜಿಯವರು ಸಾರ್ವಜನಿಕ ಜೀವನದಲ್ಲಿ ತಂದಿದ್ದಾರೆ. ವರ್ಗವರ್ಗಗಳಲ್ಲಿ, ವರ್ಣವರ್ಣಗಳಲ್ಲಿ, ಜಾತಿ ಜಾತಿಗಳಲ್ಲಿ, ದೇಶದೇಶಗಳಲ್ಲಿ ನಡೆದ ವ್ಯಾಜ್ಯಗಳನ್ನು ಅಹಿಂಸೆಯ ಮಾರ್ಗದಿಂದಲೇ ಬಿಡಿಸಲು ಉದ್ಯುಕ್ತರಾಗಿದ್ದಾರೆ.

ಹಿಂಸಕನ ಎದುರು ಅಹಿಂಸಕ ಸಂತನು ನಿಲ್ಲುವಂತೆ ಹಿಂಸೆಮಾಡಲು ಸಿದ್ಧವಾದ ಜನಾಂಗವನ್ನು ಅಹಿಂಸಕರ ಒಂದು ಗುಂಪಿನಿಂದ ಎದುರಿಸುವದು. ಹಿಂಸಕ ಜಮೀನುದಾರರ ವಿರುದ್ಧ ಅಹಿಂಸಕ ರೈತನನ್ನೇ ನಿಲ್ಲಿಸುವದು. ಹಿಂಸಕ ಸಾಮ್ರಾಜ್ಯಶಾಹಿಯನ್ನೆದುರಿಸಲು ಅಹಿಂಸೆಯಲ್ಲಿ ಪೂರ್ಣ ವಿಶ್ವಾಸವಿದ್ದ ಭಕ್ತರನ್ನೇ ನಿಲ್ಲಿಸುವದು. ಹಿಂಸೆಯಿಂದ ಹಿಂಸೆ

ಕೊನೆಗಾಣುವದಿಲ್ಲ. ಹಿಂಸೆಗೆ ಅಹಿಂಸೆಯೇ ಮದ್ದು.

ಅಹಿಂಸೆಯ ಮಾರ್ಗದಿಂದ ಹಿಂಸೆಯನ್ನು ಸೋಲಿಸಿದ ಉದಾಹರಣೆಗಳಿಲ್ಲೆಂದು ಹೇಳಲಾಗುತ್ತಿದೆ. ವೈಯಕ್ತಿಕ ಉದಾಹರಣೆಗಳಂತೂ ಅಸಂಖ್ಯವಾಗಿವೆ. ಸಾಮುದಾಯಿಕ ಉದಾಹರಣೆಗಳೇನೋ ಇಲ್ಲ. ಈಗಾದ ಇತಿಹಾಸದಲ್ಲಿಲ್ಲೆಂದು ಮುಂದಾಗಲಿಕ್ಕಿಲ್ಲೆಂದು ಅನ್ನುವ ಬಗೆ ಹೇಗೆ? ಮಾನವನ ಇತಿಹಾಸವು ಇಲ್ಲಿಗೆ ಮುಗಿದಿಲ್ಲ. ತೀಡಿದ್ದೇ ತೀಡುವದು, ಮಾಡಿದ್ದೇ ಮಾಡುವದು ಮಂದರ ಲಕ್ಷಣವು. ಈಗ ಸುಮಾರು ಹತ್ತು ಸಾವಿರ ವರ್ಷ ಯುದ್ಧಗಳು ನಡೆದಿವೆ. ಯುದ್ಧಮಾಡಿ ಶಾಂತತೆ ನೆಲೆಸಲು ಯತ್ನ ನಡೆದಿದೆ. ಆದರೆ ಯುದ್ಧಗಳು ಕೊನೆಗೊಂಡಿಲ್ಲ. ೧೮೭೦ ರಲ್ಲಿ ಜರ್ಮನಿಯು ಫ್ರಾನ್ಸ ದೇಶವನ್ನು ಸೋಲಿಸಿತು. ಆದರೆ ಈ ಯುದ್ಧದ ಒಪ್ಪಂದದಲ್ಲಿ ೧೯೧೪ ರ ಯುದ್ಧದ ಬೀಜಗಳು ಬಿತ್ತಲ್ಪಟ್ಟಿದ್ದವು. ಜರ್ಮನಿಯ ಸೇಡು ತೀರಿಸಲು ಫ್ರಾನ್ಸ ಆತುರವಾಗಿತ್ತು. ಫ್ರಾನ್ಸ ದೇಶವು ಜರ್ಮನಿಯ ಮೇಲೆ ತನ್ನ ಸೇಡು ತೀರಿಸಿತು. ಆದರೆ ಈಗ ಹಿಟ್ಲರನು ಮತ್ತೆ ಫ್ರಾನ್ಸದ ಸೇಡು ತೀರಿಸಿದ್ದಾನೆ. ಹೀಗೆ ಒಂದು ಯುದ್ಧದಲ್ಲಿ ಹತ್ತು ಯುದ್ಧದ ಬೀಜಗಳು ಬಿತ್ತಲ್ಪಡುತ್ತವೆ.

ಹತ್ತು ಸಾವಿರ ವರ್ಷದ ಈ ಅನುಭವವು ಮನುಷ್ಯನಿಗೆ ಬುದ್ಧಿ ಕಲಿಸಬೇಕಾಗಿತ್ತು. ಇದು ತಪ್ಪುಹಾದಿ ಎಂಬ ತಿಳುವಳಿಕೆ ಅವನಿಗೆ ಬರಬೇಕಾಗಿತ್ತು, ಹಿಂಸೆಯಿಂದ ಹಿಂಸೆ ಕೊನೆಗಾಣಿಸುವ ಪ್ರಯತ್ನದಲ್ಲಿ ಹಿಂಸೆ ಬೆಳೆಯುತ್ತಲೇ ಇದೆ. ಹಿಂಸೆಯ ಸ್ವರೂಪವು ಸಹ ಉಗ್ರವಾಗುತ್ತ ನಡೆದಿದೆ. "ಇನ್ನು ಈ ಮಾರ್ಗವನ್ನು ಬಿಡುವಾ, ಹೊಸ ಹಾದಿಯನ್ನು ಹಿಡಿಯುವಾ, ಅಹಿಂಸೆಯಿಂದಾದರೂ ಇದು ಸಾಧ್ಯವಾಗುವದೇನು ನೋಡುವ" ಎಂದು ಮಹಾತ್ಮಾಜಿಯವರು ಸಾರಿದರು. ದಕ್ಷಿಣ ಆಫ್ರಿಕಾ, ಬಾರ್ಡೋಲಿ, ಚಂಪಾರಣ್ಯ ಮತ್ತು ಮೂರು ಸಾರೆ ಭರತಖಂಡದಲ್ಲಿ ಅಹಿಂಸಾತ್ಮಕ ಚಳವಳಿ ಹೂಡಿದರು. ಜಗತ್ತಿನಲ್ಲಿ ಇದೊಂದು ಹಿಂದೆ ಎಂದಿಗೂ ಆಗದ ಮಾತಾಗಿತ್ತು. ಪ್ರಾಚೀನ ಕಾಲದಿಂದ ಅಹಿಂಸೆಯ ಪ್ರಯೋಗಶಾಲೆಯಾದ ಭರತಖಂಡದಲ್ಲಿಯೇ ಓರ್ವ ಭಾರತಮ್ಮನ ಮಗನು ಒಂದು ವ್ಯಾಪಕವಾದ ಮತ್ತು ಹೊಸದಾದ ಪ್ರಯೋಗವನ್ನು ಆರಂಭಿಸಿದನು. ಹತ್ತು ಸಾವಿರ ವರ್ಷದ ನಂತರ ಮಾನವರ ಇತಿಹಾಸದಲ್ಲಿ ಒಂದು ಹೊಸ ಪುಟ ಬರೆಯಲ್ಪಟ್ಟಿತು.

ಇನ್ನೂ ಈ ಪ್ರಯೋಗವು ಬಾಲ್ಯಾವಸ್ಥೆಯಲ್ಲಿದೆ. ಇಂದಿನ ವರೆಗೆ ಯಾರೂ ಇಂಥ ಸಾಹಸವನ್ನು ಕೈಕೊಂಡಿಲ್ಲ. ಸಂಕುಚಿತ ದೃಷ್ಟಿಯ ಕೆಲ ವರು ಈ ಪ್ರಯೋಗವು ಯಶಸ್ಸು ಹೊಂದಲಿಲ್ಲೆಂದು ಹೇಳುತ್ತಾರೆ. ಯುದ್ಧದ ಪ್ರಯೋಗಕ್ಕೆ ೧೦ ಸಾವಿರ ವರ್ಷ ಅವಧಿ ಕೊಟ್ಟದ್ದಿರಿ. ಅಹಿಂಸೆಗೆ ಅಷ್ಟು ಅವಧಿ ಕೊಟ್ಟು ನೋಡಿರಿ, ಮತ್ತು ಆ ಮೇಲೆ ಅದರ ಸೋಲು ಗೆಲವು ನಿರ್ಧರಿಸೋಣ. ಅರವತ್ತು ಎಪ್ಪತ್ತು ಸಾವಿರ ಜನರು ನಾಲ್ಕಾರು ತಿಂಗಳು ಸೆರೆಮನೆಯಲ್ಲಿ ಕೂತು ಈ ಪ್ರಯೋಗವನ್ನು ಪರೀಕ್ಷಿಸುವದು ಯೋಗ್ಯವಲ್ಲ. ಇವರಲ್ಲಿ ಎಷ್ಟೋ ಜನರು ಎಂದು ತಮ್ಮ ಬಿಡುಗಡೆಯಾಗು ವದು ಎಂಬ ಚಿಂತೆಯಲ್ಲಿಯೆ ಮುಳುಗಿರುತ್ತಾರೆ. ಶಸ್ತ್ರಾಸ್ತ್ರದಿಂದ ಮಾಡ ಲ್ಪಡುವ ಯುದ್ಧಗಳಲ್ಲಿ ೭-೮ ಕೋಟಿ ಜನಸಂಖ್ಯೆಗಳಿದ್ದ ದೇಶದಲ್ಲಿ ಸಹ ೫೦-೬೦ ಲಕ್ಷ ಸೈನ್ಯ ಬೇಕಾದಾಗ ನಿಲ್ಲಿಸುತ್ತಾರೆ. ಅದರಂತೆ ಈ ಅಹಿಂಸಾ ತ್ಮಕ ಯುದ್ಧದಲ್ಲಿ ಮೂವತ್ತೈದು ಕೋಟಿ ಜನರೊಳಗಿಂದ ಕನಿಷ್ಟ ಎರಡು ಕೋಟಿ ಜನರು ಸಾಯಲಿಕ್ಕೆ ಸಿದ್ಧರಾದರೆ ಮಾತ್ರ ಈ ಪ್ರಯೋಗದ ಸೋಲು ಗೆಲವು ನಿರ್ಣಯಿಸಬಹುದು.

ಹಿಂಸೆಯ ಪ್ರಯೋಗಕ್ಕೆ ಹತ್ತು ಸಾವಿರ ವರ್ಷ ಲಕ್ಷಾವಧಿ ಸೈನ್ಯ ಮಾನವ ಜಾತಿಯವರು ಒದಗಿಸಿ ಕೊಡುತ್ತಿದ್ದಾರೆ! ಆದರೆ ಅಹಿಂಸಾತ್ಮಕ ಚಳವಳಿಗೆ ಮಾತ್ರ ಆರು ತಿಂಗಳು ೫೦-೬೦ ಸಾವಿರ ಜನ ಸೆರೆಮನೆಗೆ ಹೋಗಲು ಸಿದ್ಧರು. ಮತ್ತು ಇಷ್ಟರ ಮೇಲಿಂದ ಅಹಿಂಸೆ ಸೋತಿತೆಂದು ಸಾರುತ್ತಾರೆ. ಎಂಥ ಬುದ್ಧಿ ಇದು !!!

ಸೈನಿಕರಂತೆ ಅಹಿಂಸಾತ್ಮಕ ಚಳವಳಿ ಹೂಡುವವರಿಗೂ ಹತ್ತಿಪ್ಪತ್ತು ವರುಷ ಸಿದ್ಧತೆ ಬೇಕು. ಅವರೂ ತರಬೇತಿ ಹೊಂದಬೇಕಾಗುತ್ತದೆ. ಇಂಥ ಹೊಸ ಸೈನಿಕರ ಶಾಲೆಯನ್ನು ಮಹಾತ್ಮಾಜಿಯವರು ತೆರೆದಿದ್ದಾರೆ. ಜಗತ್ತಿನಲ್ಲಿ ಇದೊಂದು ಹೊಸ ಪ್ರಯೋಗವು. ಇದು ಬೆಳೆಯುತ್ತ ಹೋಗುವದು. ಇಂಥ ಪ್ರಯೋಗಗಳು ನಾಶವಾಗುವದಿಲ್ಲ. ಇವು ಮಾನವ ಜಾತಿಯನ್ನೇ ಮುಂದರಿಸುತ್ತವೆ. ಇವು ತಾರಕ ಪ್ರಯೋಗಗಳು. ಅಹಿಂಸೆ ಎಂದರೆ ಹೇಡಿತನವಲ್ಲ. ಓಡಿಹೋಗುವದೆಂದರೆ ಅಹಿಂಸೆಯಲ್ಲ. "ನಿಃಶಸ್ತ್ರ ರಾಗಿ ಶತ್ರುವನ್ನು ಎದುರಿಸಲು ಬರದಿದ್ದರೆ ಅವನಿಗೆ ಎರಡು ಏಟು ಕೊಡಿರಿ, ಆದರೆ ಓಡಿಹೋಗಬೇಡಿರಿ'' ಎಂದು ಮಹಾತ್ಮರು ನೂರಾರು ಸಾರೆ ಹೇಳಿದಾರೆ. "ಶಸ್ತ್ರದಿಂದ ಸ್ವರಾಜ್ಯವು ಸಿಕ್ಕುತ್ತಿದ್ದರೆ ಗಳಿಸಿರಿ,

ನಾನು ನಿಮಗೆ ಅಡ್ಡಿ ಮಾಡುವದಿಲ್ಲ. ದೂರ ಸರಿದು ನಿಲ್ಲುತ್ತೇನೆ. ಶಸ್ತ್ರದಿಂದ ಸಾಧ್ಯವಿಲ್ಲೆಂದು ಕಂಡರೆ ಅಹಿಂಸೆಯಿಂದ ದೊರಕಿಸಲು ನನ್ನನ್ನು ಹಿಂಬಾಲಿಸಿರಿ. ಸ್ವಾತಂತ್ರ್ಯಕ್ಕಾಗಿ ನಾವು ಅಹಿಂಸಾತ್ಮಕ ಯುದ್ಧ ಹೂಡಲೇಬೇಕು. ದಾಸ್ಯದಲ್ಲಿ ಕೊಳೆಯುವದು ಮಾನವನಿಗೆ ಶೋಭಿಸುವದಿಲ್ಲ'' ಎಂದು ಮಹಾತ್ಮರು ಹೇಳಿದ್ದಾರೆ.

ಜಗತ್ತಿನಲ್ಲಿದ್ದ ಸೈನ್ಯಗಳು ಒಂದು ನಿಮಿಷದಲ್ಲಿ ಇಲ್ಲದಂತೆ ಆಗುವವೆಂದು ಮಹಾತ್ಮಾಜಿಯವರು ಎಂದಿಗೂ ಅಂದಿಲ್ಲ. ಭಾರತಕ್ಕೆ ಸೈನ್ಯಬೇಕು, ನೌಕಾ ಸೈನ್ಯ ಬೇಕು, ಶಸ್ತ್ರಾಸ್ತ್ರಗಳ ಮೇಲಿದ್ದ ನಿರ್ಬಂಧಗಳೆಲ್ಲ ತೆಗೆದೊಗೆಯಬೇಕು ಎಂದು ಅವರು ಅನೇಕ ಸಾರೆ ಹೇಳಿದ್ದಾರೆ. ಜಗತ್ತಿನ ಇಂದಿನ ಸ್ವರೂಪವನ್ನು ಅವರು ಅರಿಯುತ್ತಾರೆ. ಆದರೆ ಸಂತರು ಆರಂಭಿಸಿದ ಪ್ರಯೋಗಗಳನ್ನು ಯಾರಾದರೂ ಮುಂದರಿಸಲೀ ಬೇಕು. ಹೊಸ ಹಾದಿಯನ್ನು ಹಿಡಿಯಬೇಕು. ಅಹಿಂಸೆಯ ಪ್ರಯೋಗಗಳನ್ನು ಮುಂದರಿಸಬೇಕು. ಭಾರತೀಯ ಪೂರ್ವಜರ ಈ ಹಿರಿದಾದ ಪ್ರಯೋಗಗಳನ್ನು ಮಹಾತ್ಮಾಜಿಯವರು ಕೈಕೊಂಡು ಮುಂದರಿಸುತ್ತಿದ್ದಾರೆ. ಇಂಥವರನ್ನು ಅಪಹಾಸ್ಯಕ್ಕೆ ಗುರಿಮಾಡುವದು ಬುದ್ಧಿ ಹೃದಯವುಳ್ಳವರ ಲಕ್ಷಣವಲ್ಲ.

ಭಕ್ಷಣೆಗಾಗಿ ಮತ್ತು ರಕ್ಷಣೆಗಾಗಿ ಮಾಡಲಾಗುವ ಹಿಂಸೆ ಇವೆರಡನ್ನೂ ಎದುರಿಸುವ ಅಹಿಂಸೆಯ ಪ್ರಯೋಗಗಳನ್ನು ಮಹಾತ್ಮರು ನಡೆಯಿಸಿದ್ದಾರೆ. ಹಾಲು ಕುಡಿಯುವದು ಮಾಂಸಾಶನವೆ ಸರಿ. ಹಾಲು ವನಸ್ಪತಿ ಆಹಾರವಲ್ಲ. ಹಾಲು ಪ್ರಾಣಿಗಳಿಂದ ಉತ್ಪನ್ನವಾಗುವ ವಸ್ತುವು. ಅಹಿಂಸೆ ಪಾಲಿಸುವವನಿಗೆ ಒಂದಿಲ್ಲೊಂದು ದಿನ ಹಾಲು ಬಿಡಬೇಕಾಗುವದು ನಿಶ್ಚಿತ. ವೈಲಿ ಚುಚ್ಚಿಸಿಕೊಳ್ಳುವದೂ ಒಂದು ರೀತಿ ಹಿಂಸೆಯೇ. ಹೀಗೆ ವಿಚಾರಮಾಡಿ ನಮ್ಮ ಆಚಾರದ ಕಡೆಗೆ ನೋಡಿದರೆ ಮೈಮೇಲೆ ಮುಳ್ಳು ಬರುತ್ತವೆ. ಹೀಗೆ ಅಂದೊಡನೆ ಎಲ್ಲರೂ ಹಾಲು ಬಿಡಬೇಕು, ವೈಲಿ ಚುಚ್ಚಿಸಿಕೊಳ್ಳಬಾರದು ಎಂದು ಯಾವ ಅಹಿಂಸೆಯ ಉಪಾಸಕನೂ ಹೇಳುವದಿಲ್ಲ. ಹಾಲಿನಂಥ ಎರಡನೇ ವಸ್ತುವು ಸಿಕ್ಕುವ ವರೆಗೆ ಹಾಲು ಕುಡಿಯಲು ಅಡ್ಡಿಯಿಲ್ಲ. ಆದರೆ ಅಹಿಂಸೆಯ ಉಪಾಸಕನು ಬೇರೆ ಪದಾರ್ಥವನ್ನು ಹುಡುಕಲು ಯತ್ನಿಸುವನು; ವೈಲಿ ಚುಚ್ಚದೆ ವೈಲಿ ಬರದಂಥ ಪ್ರಯೋಗಗಳನ್ನು ಮಾಡುವನು.

ಅಹಿಂಸೆ ಅನಂತವಾದದ್ದು. ಮಹಾತ್ಮರು ತಮ್ಮ ಜೀವನದಲ್ಲಿ

ಅತ್ಯುತ್ಕಟವಾಗಿ ಅದನ್ನು ಆಚರಿಸಿದರೆ ಮಾತ್ರ ಇತರರು ಸ್ವಲ್ಪ ಮಟ್ಟಿ ಗಾದರೂ ಅದನ್ನು ತಮ್ಮ ನಿತ್ಯಜೀವನದಲ್ಲಿ ಆಚರಿಸಲು ಸಾಹಸಪಡು ವರು. ಲಕ್ಷಾವಧಿ ಅಂಶದ ಉಷ್ಣತೆಯಿಂದ ಸೂರ್ಯನು ಆಕಾಶದಲ್ಲಿ ಯಾವಾಗಲೂ ಉರಿಯುತ್ತಿರುವದರಿಂದ ನಮ್ಮ ಮೈಯಲ್ಲಿ ೯೮ ಅಂಶ ವಾದರೂ ಉಷ್ಣತೆ ನೆಲೆಸಿದೆ.

ಮಹಾತ್ಮಾಜಿಯವರ ಹೊರತು ಮತ್ತಾರು ಅಹಿಂಸೆಯ ಉಪಾಸಕರು ಇದ್ದಾರೆ? ಆದರೆ ಅವರಿಗೂ ಆಶ್ರಮದಲ್ಲಿಯ ಮಂಗಗಳನ್ನು ಕೊಲ್ಲಲು ಅಪ್ಪಣೆಕೊಡುವ ಪ್ರಸಂಗ ಒದಗಿತು. ಹುಚ್ಚ ನಾಯಿ ಕೊಲ್ಲಿಸಬೇಕಾ ಯಿತು. ಪ್ಲೇಗದ ಹಾವಳಿ ಎದ್ದಾಗ ಬೋರಸದ ತಾಲೂಕಿನಲ್ಲಿ ಅತಿ ಕಷ್ಟದಿಂದ ಇಲಿಗಳನ್ನು ಹಿಡಿದು ಕೊಲ್ಲಿರಿ ಎಂದು ಹೇಳಬೇಕಾಯಿತು. ಆಗ ಅವರು ಬರೆದ ಮಾತು ಕರುಳನ್ನು ಕರಗಿಸುವಂತಹವು ಇವೆ. "ಇಲಿ ಚಿಕ್ಕಾಡುಗಳಿಗೆ ನನ್ನಷ್ಟೇ ಬದುಕುವ ಅಧಿಕಾರವಿದೆ. ನನ್ನ ಮರಣ ದಿಂದಾದರೂ ಅವು ಉಳಿಯಬೇಕೆಂದು ನನಗನಿಸುತ್ತದೆ. ನನ್ನ ಹೃದಯವು ಅನಂತ ವೇದನೆಗೊಳಗಾಗಿದೆ." ಎಂತಹ ಕರುಣಾಪೂರಿತ ಉದ್ಗಾರಗಳು!!!

ಹುಚ್ಚುನಾಯಿ, ಪ್ಲೇಗು ಹಬ್ಬಿಸುವ ಇಲಿಗಳನ್ನು ಸಂಹರಿಸಲು ಗಾಂಧೀಜಿಯವರು ಆತಂಕ ಮಾಡಲಿಲ್ಲ. ಅಂದಮೇಲೆ ಸಮಾಜದಲ್ಲಿ ಪ್ಲೇಗಿನಂಥ ಜನರನ್ನು ಇದೇ ಆಧಾರದ ಮೇಲೆ ಏಕೆ ಕೊಲ್ಲಬಾರದೆಂಬು ದಾಗಿ ಕೆಲವರು ಕೇಳುತ್ತಾರೆ. ನಾಯಿಯನ್ನು ಕೊಲ್ಲಿಸುವಾಗ ಗಾಂಧೀಜಿ ಯವರ ಹೃದಯವು ಅನಂತ ವೇದನೆಗೊಳಗಾಗುತ್ತಿತ್ತು. ತಾನು ಸತ್ತಾ ದರೂ ಅದನ್ನು ಬದುಕಿಸಬೇಕೆಂದು ಅವರಿಗೆ ಅನಿಸುತ್ತಿತ್ತು. ನಾಯಿ ಯನ್ನು ಕೊಲ್ಲುವದು ಪುರುಷಾರ್ಥದ ಮಾತು ಎಂದು ಅವರು ತಿಳಿದು ಕೊಂಡಿಲ್ಲ. ಅದು ಮನೋದೌರ್ಬಲ್ಯ, ದೇಹಾಸಕ್ತಿ ಎಂದು ಅವರು ಅರಿಯುತ್ತಾರೆ. ನಮ್ಮ ಮನೋವೃತ್ತಿ ಹೀಗಿಲ್ಲ. ಸಂಹಾರವು ಪೌರುಷದ, ಪರಾಕ್ರಮದ, ಸಾಹಸದ ಮಾತೆಂದು ನಾವು ಗ್ರಹಿಸುತ್ತೇವೆ! ಅದು ಪರಮ ಧರ್ಮವೆಂದು ನಾವು ಹೆಮ್ಮೆಪಡುತ್ತೇವೆ! ಹಿಂಸೆಯ ತತ್ವಜ್ಞಾನವನ್ನೇ ನಾವು ಸಿದ್ಧಗೊಳಿಸುತ್ತೇವೆ! ಹಿಂಸೆಯ ವೇದವನ್ನೇ ತಯಾರಿಸುತ್ತೇವೆ!

ಗೀತೆಯ ೧೮ನೇ ಅಧ್ಯಾಯದಲ್ಲಿ "ಕೊಂದರೂ ಕೊಲ್ಲದಂತೆ ಸರಿ" ಎಂದು ಹೇಳಲಾಗಿದೆ. ಆದರೆ ಎಂಥವರಿಗಾಗಿ? ಯಾರಿಗೆ ಇಡೀ ಜಗತ್ತೆ ತನ್ನದೆಂದು ಅನಿಸುತ್ತದೆಯೋ ಅವರಿಗಾಗಿ. ಇಂಥವರ ಕೊಲ್ಲುವಿಕೆಯ

ಲ್ಲಿಯೂ ಜೀವನವಿದೆ. ತಾಯಿ ತನ್ನ ಮಗುವಿಗೆ ಹೊಡೆಯುತ್ತಾಳೆ; ಆದರೆ ಮಗು ಮತ್ತೆ ತಾಯಿಯ ಉಡಿಯಲ್ಲಿ ಮುಖ ಮುಚ್ಚಿ ಅಳುತ್ತದೆ. ಹೊಡೆಯುವ ತಾಯಿಯನ್ನು ಆ ಮಗು ಬಿಡುವದಿಲ್ಲ. ತಾಯಿಯ ಹೊಡೆತ ಹೊಡೆತವೇ ಅಲ್ಲ.

ಹಿಂಸೆಯನ್ನು ಬಾಯಿ ತುಂಬ ಹೊಗಳುವವರ ಹಿಂಸೆ ಇಂಥದು. ಆದರೆ ಅದು ಹಿಂಸೆಯೆಂದೆನಿಸದೆ ಅಹಿಂಸೆಯೇ ಎಂದು ಗಣಿಸಲ್ಪಡುವದು. ರಾಮನು ರಾವಣನನ್ನು ಕೊಂದನು. ಆದರೆ ಆ ಮರಣದಿಂದ ರಾವಣನ ಉದ್ಧಾರವಾಯಿತು. ಒಮ್ಮೆ ರಾಮನು ದೇವರೆಂದು ನಾವು ಭಾವಿಸಿದ ಮೇಲೆ ಅವನ ಕೈಯಿಂದ ಸಂಭವಿಸುವ ಮರಣವು ತಾರಕವಾದದ್ದು. ಅದು ತಾಯಿಯು ಕೊಟ್ಟ ಪೆಟ್ಟನಂತೆ ಇದೆ. ಅರ್ಜುನನಿಗೆ ಹಿಂಸೆ ಮಾಡಲು ಶ್ರೀ ಕೃಷ್ಣನು ಹೇಳಿದನು. ಯಾಕಂದರೆ ಅದು ಅರ್ಜುನನ ಸ್ವಭಾವವಾಗಿತ್ತು. ಹಿಂಸೆಯೇ ಪರಮಧರ್ಮವೆಂದು ಹೇಳಿಲ್ಲ. ರಣಭೂಮಿಗೆ ಬರುವ ಹಿಂದಿನ ದಿವಸದ ವರೆಗೂ ಹಿಂಸೆಯ ಮಾತನ್ನೇ ಎತ್ತಿ ಬಾಯಿತುಂಬಾ ಅವನ್ನು ಹೊಗಳುವ ಅರ್ಜುನನು ಒಂದು ನಿಮಿಷದಲ್ಲಿ ಅಹಿಂಸಕನಾಗುವದು ಹೇಗೆ? ಅರ್ಜುನನಿಗೆ ಆಗ ಎದುರಾದ ಪ್ರಶ್ನೆ ಹಿಂಸೆ, ಅಹಿಂಸೆ, ಇರದೆ ಆಸಕ್ತಿ ಮತ್ತು ಮೋಹ ಇದ್ದವು. ಶ್ರೀ ಕೃಷ್ಣನಾದರೂ ಅವನಿಗೆ ಮೋಹವನ್ನೇ ತ್ಯಜಿಸು ಎಂದು ಹೇಳಿದನು. "ಸ್ವಜನರೆಂದು ಅವರನ್ನು ಕೊಲ್ಲಬಾರದೆಂದು ನಿನಗೆ ಅನಿಸುತ್ತದೆ. ಅವರು ಬೇರೆಯವರಾಗಿದ್ದರೆ, ಒಂದು ಕ್ಷಣ ಸಹ ವಿಚಾರ ಮಾಡದೆ ಅವರನ್ನು ನೀನು ಸಂಹರಿಸಿ ಬಿಡುತ್ತಿದ್ದಿ. ನಿನಗೆ ಆಕಾರವೇ ಪ್ರಿಯವಾಗಿದೆ. ವಿಶಿಷ್ಟವಾದ ಹೆಸರು ನಿನಗೆ ಪ್ರಿಯವಾಗಿದೆ. ಇದು ಆಸಕ್ತಿ, ಇದು ಮೋಹ, ಇದನ್ನು ಬಿಡು'' ಎಂದು ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿದನು. ಕೊನೆಗೆ ಅರ್ಜುನನಾದರೂ "ನಷ್ಟೋ ಮೋಹಃ'' ಎಂದೇ ಹೇಳಿದ್ದಾನೆ.

ಹಿಂಸೆ ಗೀತೆಯ ಪರಮ ಸಿದ್ಧಾಂತವಲ್ಲ. ಹಿಂಸೆಯ ಮೆಟ್ಟನಿಂದ ಮಾನವನು ಅಹಿಂಸೆಯ ಶಿಖರವನ್ನು ಮುಟ್ಟುವನು. ಅಹಿಂಸೆಯೇ ಈ ಪ್ರಪಂಚದಲ್ಲಿ ಗಳಿಸತಕ್ಕ ಅಂತಿಮ ಧ್ಯೇಯವು. ಈ ಗುರಿ ಮುಟ್ಟುವವರೆಗೆ ಮಾನವನು ತನ್ನ ಮನೋದೌರ್ಬಲ್ಯದ ಮೂಲಕ ಆಗಾಗ್ಗೆ ಹಿಂಸೆ ಅವಲಂಬಿಸುವನು. ಆದರೆ ನಾನು ಹಿಂಸೆ ಮಾಡೇತೀರುವೆನು, ಅದೇ ನಮ್ಮ ಧರ್ಮವೆಂದು ಹೆಮ್ಮೆಪಡಲು ಹತ್ತಿದರೆ ಅದು ಮಾನವ ಜಾತಿಯ

ಅಧಃಪತನವೆಂದು ನಾವು ಭಾವಿಸಬೇಕು.

ಪೆಟ್ಟು ಹಾಕಲು ನಾವು ಯಾವಾಗಲೂ ಸಿದ್ಧರಿರುತ್ತೇವೆ. ಇಂಥ ಅಧಿಕಾರ ಪಡೆಯಲು ಆತುರರಿರುತ್ತೇವೆ. ಆದರೆ ಮೊದಲು ಪ್ರೇಮ ಮಾಡುವ ಅಧಿಕಾರ ಪಡೆಯುವಾ. ತಾಯಿ ಪ್ರೀತಿಮಾಡುತ್ತಾಳೆಂದೇ ಅವಳಿಗೆ ಪೆಟ್ಟು ಹಾಕುವ ಅಧಿಕಾರವಿದೆ. ಸಂಪೂರ್ಣ ಅಹಿಂಸೆ ಮಾನವೀ ಜೀವನದಲ್ಲಿ ಸಾಧ್ಯವಾಗುವದು ಶಕ್ಯವಿಲ್ಲ. ಸಂಪೂರ್ಣತೆ ಯಾವಾಗಲೂ ಧ್ಯೇಯವೆಂದೇ ತಿಳಿಯುವದು. ಭೂಮಿತಿಯ ವ್ಯಾಖ್ಯೆಯಂತೆ ಬಿಂದು ವಾಗಲಿ ರೇಷೆಯಾಗಲಿ ಪ್ರತ್ಯಕ್ಷ ತೋರಿಸುವದು ಸಾಧ್ಯವಿಲ್ಲ. ಅದರಂತೆ ಪೂರ್ಣಜ್ಞಾನ ಅಥವಾ ಪೂರ್ಣಪ್ರೇಮ ಪ್ರಪಂಚದಲ್ಲಿ ಕಾಣುವದು ಶಕ್ಯ ವಿಲ್ಲ, ವಿದ್ಯಾರ್ಥಿಗಳಿಗೆ ಕಲ್ಪನೆ ಬರಬೇಕೆಂದು ಶಿಕ್ಷಕನು ಫಳದಮೇಲೆ ಸಣ್ಣ ಬಿಂದು ರೇಷೆ ತೋರಿಸುತ್ತಾನೆ. ಅದರಂತೆ ಧ್ಯೇಯದ ತೀರ ಹತ್ತರ ಹೋದ ಶುಕಜನಕಾದಿಗಳನ್ನು ನಾವು ತೋರಿಸುತ್ತೇವೆ. ಆದರೆ ಪೂರ್ಣತ್ವದ ತೀರ ಸಮೀಪ ಇರುವದೆಂದರೆ ಪೂರ್ಣತೆ ಅಲ್ಲ.

ಈ ಮಣ್ಣಿನ ಶರೀರದಲ್ಲಿ ಆತ್ಮವು ಸಿಕ್ಕಿದೆ. ಮಣ್ಣಿನ ಈ ಕೊಡ ದಲ್ಲಿ ಸಂಪೂರ್ಣ ಜ್ಞಾನವು ಸಾಲುವದು ಸಾಧ್ಯವಿಲ್ಲ. ಮಣ್ಣಿನ ಕೊಡ ದಲ್ಲಿದ್ದ ನೀರು ತಂಪಿನಿಂದ ಬರ್ಫವಾದರೆ ಅದು ಒಡೆದು ಹೋಗುವಂತೆ, ಶುದ್ಧಜ್ಞಾನವು ಈ ದೇಹದಲ್ಲಿ ಸಾಲದೆ ದೇಹವೆಂಬ ಮಣ್ಣಿನ ಕೊಡವು ಒಡೆದು ಹೋಗುವದು. ಈ ದೇಹವನ್ನು ಬಿಡದೆ ಶುದ್ಧ ಮತ್ತು ಪೂರ್ಣ ಜ್ಞಾನದ ಭೆಟ್ಟಿ ಸಾಧ್ಯವಿಲ್ಲ. ಈ ಹೊದಿಕೆಯು ಬಿದ್ದಮೇಲೆ ಆತ್ಮವು ಪರ ಮಾತ್ಮನಲ್ಲಿ ಕೂಡಿಹೋಗುತ್ತದೆ.

ಸಂಪೂರ್ಣ ಅಹಿಂಸೆ ಸಾಧಿಸುವದಿಲ್ಲೆಂದು ತಿಳಿದು ಅದನ್ನು ಜೀವನ ದಲ್ಲಿ ಆಚರಿಸಬಾರದೆಂದು ತಿಳಿದುಕೊಳ್ಳಬಾರದು. ತಮ್ಮ ತಮ್ಮ ಶಕ್ತಿಗೆ ಅನುಸರಿಸಿ ಅಹಿಂಸೆಯನ್ನು ಆಚರಿಸಲು ಪ್ರಯತ್ನ ಪಡಲೇಬೇಕು. ಒಕ್ಕಲ ತನ ಸಾಗಿಸುವಾಗ ಸಾವಿರಾರು ಹುಳಹುಪ್ಪಡಿ ಸಿಕ್ಕು ಸಾಯುತ್ತವೆ. ನಾವಾಗಿ ತಿಳಿದೂ ತಿಳಿದು ಹಿಂಸೆ ಮಾಡಬಾರದು. ಜೀವನದಲ್ಲಿ ಹೆಚ್ಚೆ ಚ್ಚಾಗಿ ಅಹಿಂಸೆ ತರಲು ಯತ್ನಿಸಬೇಕು. ನಡೆಯುವಾಗ ಜಾಗ್ರತೆ ವಹಿಸ ಬೇಕು. ಮಾತನಾಡುವಾಗ ಯಾರನ್ನೂ ನೋಯಿಸಬಾರದು. ಯಾರ ಅಕಲ್ಯಾಣವನ್ನೂ ಚಿಂತಿಸಬಾರದು. ನೆರೆಹೊರೆಯವರೊಡನೆ ಪಶುಪಕ್ಷಿ ಗಳೊಂದಿಗೆ ಪ್ರೇಮದಿಂದ ನಡೆದುಕೊಳ್ಳಬೇಕು. ಸಹಕಾರ್ಯವನ್ನು

ಬೆಳಿಸಬೇಕು. ಇದು ಜೀವನದಲ್ಲಿ ಅಹಿಂಸೆ ಆಚರಿಸುವ ರೀತಿ. ಇದನ್ನೇ ಹೆಚ್ಚಿಸಬೇಕು. ದಿನಾಲು ಯುದ್ಧಗಳಿಲ್ಲ, ಹೆಜ್ಜೆಹೆಜ್ಜೆಗೆ ಹಾವು ಚೇಳು ಗಳಿಲ್ಲ. ಮೈಮೇಲೆ ಕ್ಷಣಕ್ಷಣಕ್ಕೆ ತೋಳ ಹುಲಿ ಏರಿಬರುವದಿಲ್ಲ. ಇಂಥ ಪ್ರಸಂಗಗಳು ಅಪವಾದಗಳೇ ಸರಿ. ಇಂಥ ಸಂದರ್ಭದಲ್ಲಿ ಹಿಂಸೆ ಅವಲಂಬಿ ಸಬೇಕಾದರೆ ಮನಸ್ಸಿನ ದುರ್ಬಲತೆಯೆಂದು ಹಿಂಸೆ ಮಾಡಬಹುದು. ಆದರೆ ಕೈಲಾದಮಟ್ಟಿಗೆ ನಿತ್ಯಜೀವನದಲ್ಲಿ ಪ್ರೀತಿ, ಸಹಕಾರ, ಸಹಾನು ಭೂತಿ ಇವನ್ನೇ ಅವಲಂಬಿಸುವಾ. ನಮ್ಮ ಜೀವನವು ಸುಖಮಯ ಮತ್ತು ನಿರ್ಭಯವಾಗಲಿ.

ಭಾರತದಲ್ಲಿ ಪ್ರಾಚೀನ ಕಾಲದಲ್ಲಿ ಅಲ್ಲಲ್ಲಿ ಆಶ್ರಮಗಳಿದ್ದವು. ಅಹಿಂಸೆ ಯನ್ನು ಜೀವನದಲ್ಲಿ ಹೆಚ್ಚೆಚ್ಚಾಗಿ ತರಲು ಯತ್ನಿಸುವ ಪ್ರಯೋಗ ಶಾಲೆಗ ಳಾಗಿದ್ದವು. ಪಟ್ಟಣಗಳಲ್ಲಿ ತೋಟಗಳಿರುತ್ತವೆ. ತೋಟಕ್ಕೆ ಹೋದಮೇಲೆ ಮನಸ್ಸಿಗೆ ಆನಂದವೆನಿಸುತ್ತದೆ. ಹಿಂಸಾಮಯ ಪ್ರಪಂಚದಲ್ಲಿ ಈ ಆಶ್ರಮ ಗಳೆಂದರೆ ತೋಟದಂತೆ ಇದ್ದವು. ಸಾಮಾನ್ಯ ಜನರು ಅಲ್ಲಿಗೆ ಹೋಗಿ ಪ್ರೇಮದ ಪಾಠಗಳನ್ನು ಕಲಿಯುತ್ತಿದ್ದರು.

ಕಣ್ವಾಶ್ರಮಕ್ಕೆ ಹೋದಾಗ ದುಷ್ಯಂತನು ನಡೆದುಕೊಂಡ ರೀತಿಯು ವರ್ಣನೆಯನ್ನು ಶಾಕುಂತಲ ನಾಟಕದಲ್ಲಿ ನಾವು ಕಾಣಬಹುದು. ಅವನು ಚಿಗರಿ ಮರಿಯನ್ನು ಕೊಲ್ಲಲಿಲ್ಲ. ಅದನ್ನು ಕೊಲ್ಲಲು ಎಸೆದ ಬಾಣವನ್ನು ತಿರುಗಿ ಬತ್ತಳಿಕೆಯಲ್ಲಿ ಸೇರಿಸಿಬಿಟ್ಟನು.

ಅಲ್ಲಿಲ್ಲಿ ನೆಲೆಸಿದ ಈ ಆಶ್ರಮಗಳು ಭಾರತೀಯ ಸಂಸ್ಕೃತಿಯನ್ನು ಬೆಳೆಯಿಸುತ್ತಿದ್ದವು. ಹಾವು ಮುಂಗಲಿ, ಚಿಗರಿ ಸಿಂಹ ಇಂಥವುಗಳನ್ನು ಒಂದೆಡೆ ಇಟ್ಟು ಪ್ರಯೋಗಗಳನ್ನು ಋಷಿಗಳು ಮಾಡುತ್ತಿದ್ದರು. ಇಂಥ ಆಶ್ರಮಗಳಲ್ಲಿಯ ಈ ದಿವ್ಯ ದೃಶ್ಯವನ್ನು ನೋಡಿ ಸಾಮಾನ್ಯ ಜನರ ಮನಸ್ಸು ಕರಗುತ್ತಿತ್ತು. ನಾವು ನಮ್ಮ ನೆರೆಹೊರೆಯುವರೊಡನೆ ಪ್ರೇಮ ದಿಂದ, ಸಹಕಾರದಿಂದ, ಆನಂದದಿಂದ ಬಾಳಬೇಕೆಂದು ಅವರು ಮನಸ್ಸಿ ನಲ್ಲಿ ನಿಶ್ಚಯ ಮಾಡುತ್ತಿದ್ದರು. ಆಶ್ರಮದಲ್ಲಿ ಕಂಡ ನೋಟದಿಂದ ಪ್ರೀತಿಯ ಪಾಠವನ್ನು ಕಲಿಯುತ್ತಿದ್ದರು. ಮತ್ತು ಅದನ್ನೇ ಪ್ರಪಂಚದಲ್ಲಿ ತೀಡುವ ಪ್ರಯತ್ನ ಮಾಡುತ್ತಿದ್ದರು.

ಇಂದಾದರೂ ನಮ್ಮ ಈ ಭರತ ದೇಶದಲ್ಲಿ ಭಾರತೀಯ ಸಂಸ್ಕೃತಿಗೆ ಒಪ್ಪು ಹಾಕುವ ಆಶ್ರಮಗಳಿವೆ. ವರ್ಧಾಶ್ರಮದಲ್ಲಿ ಹಾವುಗಳನ್ನಾರೂ

ಕೊಲ್ಲುವದಿಲ್ಲ. ಅವನ್ನು ಹಿಡಿದು ದೂರ ಒಯ್ದು ಬಿಡುತ್ತಾರೆ. ಅಲ್ಲಿಯೆ ಸಮೀಪದಲ್ಲಿದ್ದ ಒಂದು ಹಳ್ಳಿಯಲ್ಲಿ ಕಾಲರಾಬೇನೆ ಹಬ್ಬಿತ್ತು. ಕಾಲರಾ ಬೇನೆ ಹೋಗುವದರದೆಶೆಯಿಂದ ಒಂದು ಹೋತವನ್ನು ದೇವರ ಗುಡಿಯ ಇದುರು ಹುಗಿಯಬೇಕೆಂದು ಹಳ್ಳಿಯ ಜನರು ನಿರ್ಧರಿಸಿ ಗುಡಿಯ ಎದುರು ಒಂದು ತಗ್ಗನ್ನು ತೆಗೆದಿದ್ದರು. ಹಳ್ಳಿಯ ಬೀದಿಗಳಲ್ಲಿ ಹೋತವನ್ನು ಮೆರೆಸುತ್ತ ಅವರೆಲ್ಲ ಗುಡಿಗೆ ಬಂದರು. ಆದರೆ ಅವರು ಬಂದೊಡನೆ ಅವರಿಗೆ ರಾಮನಾಮದ ಧ್ವನಿ ಕೇಳಬಂದಿತು. ವರ್ಧಾಶ್ರಮದಲ್ಲಿಯ ಓರ್ವ ಸತ್ಯಾಗ್ರಹಿಯು ರಾಮನಾಮ ಜಪಿಸುತ್ತ ಹೋತ ಹುಗಿಯಲಿಕ್ಕೆ ತೆಗೆದ ತಗ್ಗಿನಲ್ಲಿ ನಿಂತಿದ್ದನು. ಜನರು ಅವನಿಗೆ ಹೊರಗೆ ಬರಲು ಹೇಳಿದರು. ಅವನು ವಿನಯದಿಂದ ಉತ್ತರವನ್ನು ಕೊಟ್ಟನು. "ಹೋತ ಹುಗಿದರೆ ಕಾಲರಾಬೇನೆ ಹೋಗುತ್ತಿದ್ದರೆ ನನ್ನನ್ನೇ ಹುಗಿದು ಬಿಡಿರಿ. ಮನುಷ್ಯನನ್ನು ಹುಗಿದರೆ ನಿಮ್ಮ ದೇವಿಯು ಹೆಚ್ಚಾಗಿ ಸಂತೋಷಗೊಳ್ಳುವಳು, ಮತ್ತು ಕಾಲರಾ ಬೇನೆ ನಿಮ್ಮ ಹಳ್ಳಿಯಲ್ಲಿ ಇಲ್ಲದಂತಾಗುವದು.''

೨೦ನೇ ಶತಮಾನದಲ್ಲಿ ಇಂಥ ದೃಶ್ಯವನ್ನು ನೋಡಿ ಭಗವಾನ್ ಬುದ್ಧನ ಆತ್ಮವು ಸಂತುಷ್ಟವಾಗಿರಬೇಕು.! ಸತ್ಯಾಗ್ರಹಿಯು ಗೆದ್ದನು. ಇದು ಜ್ಞಾನದ ಪ್ರೇಮದ ಗೆಲವು.

ಅಹಿಂಸೆ ಮತ್ತು ಪ್ರೇಮದ ಪಥವನ್ನು ತೋರಿಸುವ ಇಂಥ ಆಶ್ರಮಗಳೇ ಭಾರತದ ಆಶಾಸ್ಥಾನಗಳು. ಈ ಪ್ರೇಮವು ಭರತಖಂಡದ ಪ್ರಪಂಚದಲ್ಲೆಲ್ಲ ಬೀರದೆ ಬೆಳೆಯದೆ ಇರಲಾರದು. ಭಾರತೀಯ ಸಂಸಾರವು ಸಹಾನುಭೂತಿ ಮತ್ತು ಸಹಕಾರದಿಂದ ತುಂಬಿತುಳುಕುವದರಲ್ಲಿ ಸಂದೇಹವಿಲ್ಲ.

ಜಗತ್ತಿನ ಒಂದು ಭಾಗದಲ್ಲಿ ತೋಫುಗಳನ್ನು ಸಿದ್ಧಗೊಳಿಸುತ್ತಿದ್ದಾಗ ಭಾರದಲ್ಲಿ ಪ್ರೇಮದ ತೋಫುಗಳನ್ನು ಬೆಳೆಯಿಸುತ್ತಿದ್ದಾರೆ, ಸರಹದ್ದ ಪ್ರಾಂತದಲ್ಲಿಯ ವೀರ ಪಠಾಣರು ಅಹಿಂಸಕರಾಗಹತ್ತಿದ್ದಾರೆ. ಶೂರ ಶೀಖರು ಅನತ್ಯಾಚಾರಿ ಸತ್ಯಾಗ್ರಹದ ಚಳವಳಿಯನ್ನು ಯಶಸ್ವಿಯಾಗಿ ನಡೆಸಿದ್ದಾರೆ. ಹಾವು ಚೇಳಿನ ಮೇಲೆ ಪ್ರೀತಿಮಾಡುವ ಆಶ್ರಮಗಳಿವೆ. ಸಾವಿರಾರು ಲಕ್ಷಾವಧಿ ಶೂರ ಸತ್ಯಾಗ್ರಹಿಗಳು ಅಹಿಂಸೆಯ ಬಾವುಟದಡಿಯಲ್ಲಿ ಹಿಂಸೆಯನ್ನು ಧೈರ್ಯದಿಂದ ಎದುರಿಸಹತ್ತಿದ್ದಾರೆ. ಭಾರತ ಭೂಮಿಯಲ್ಲಿ ನಡೆದ ಈ ನೋಟ ಕಂಡು ದೇವರು ಸಹ ಕಂಬನಿ

ಸುರಿಸುತ್ತಿರಬೇಕು. ಅಹಿಂಸೆಯ ಕಥೆಗಳನ್ನು ಹಿಂದಾದ ಪ್ರಯೋಗಗಳ ವಿವರಗಳನ್ನು ಕೇಳಲು ಭಗವಂತನ ಕಿವಿ ಆತುರವಾಗಿರಬೇಕು.

"ಅಹಿಂಸಾ ಪರಮೋ ಧರ್ಮಃ" ಎಂದು ಸಾರಿ ಹೇಳುವ ಭಾರತೀಯ ಸಂಸ್ಕೃತಿಯು ಧನ್ಯವಾಪದ್ದು ! ಈ ಪ್ರಾಚೀನ ಪರಂಪರೆಯನ್ನು ಮುಂದರಿಸಲು ಸಾಹಸಪಡುವ ವಿಶ್ವವಂದ್ಯ ಮಹಾತ್ಮಾಜಿಯವರಿಗೆ ಅನಂತ ಧನ್ಯವಾದಗಳು.

---

## ೧೭. ಬಲೋಪಾಸನೆ

ಜ್ಞಾನ ಪ್ರೇಮಗಳನ್ನು ಒಳ್ಳೆ ರೀತಿ ಜೋಪಾನ ಮಾಡಿ, ಅವುಗಳ ಮಹತ್ವವನ್ನು ಒತ್ತಿ ಹೇಳಿದಂತೆ, ಭಾರತೀಯ ಸಂಸ್ಕೃತಿಯು ಬಲದ ಮಹತ್ವವನ್ನೂ ಮನದಟ್ಟಾಗುವಂತೆ ಹೇಳಿದೆ. ಬಲದ ಅಭಾವವಿದ್ದರೆ ಜ್ಞಾನ ಪ್ರೇಮಗಳೆರಡೂ ಮನಸ್ಸಿನಲ್ಲಿಯೇ ಕರಗಿಹೋಗುವವು. ಜ್ಞಾನ ಪ್ರೇಮಗಳೆರಡನ್ನು ಸಂಸಾರದಲ್ಲಿ ಬೆರಿಸಿ ಅದನ್ನು ಸುಖಪೂರಿತವಾಗಿಯೂ, ಸುಂದರವಾಗಿಯೂ ಮಾಡಬೇಕಾದರೆ, ಬಲವು ಅತ್ಯಾವಶ್ಯವಾದ ವಸ್ತುವು. ಸಬಲವಾದ ದೇಹ ನಿರ್ಮಲ ಮತ್ತು ತೇಜಸ್ಸುಳ್ಳ ಬುದ್ಧಿ, ಪ್ರಸಂಗ ಒದಗಿದಾಗ ವಜ್ರದಂತೆ ಕಠೋರವಾಗುವ ಆದರೆ ಪ್ರೇಮದಿಂದ ತುಂಬಿತುಳುಕುವ ಹೃದಯ ಇವೆಲ್ಲವೂ ಜೀವನದ ಅರಳುವಿಕೆಗೆ ಅತ್ಯವಶ್ಯವಾದಂಥವು.

ಶರೀರವೇ ಇಲ್ಲದಿದ್ದರೆ ಬುದ್ಧಿಯು ವಾಸಮಾಡುವದಾದರೂ ಎಲ್ಲಿ? ಈ ಶರೀರದ ಮುಖಾಂತರವೇ ನಮಗೆ ಎಲ್ಲ ಪುರುಷಾರ್ಥಗಳನ್ನು ದೊರಕಿಸುವವದೆ. ನಿರಾಕಾರವಾದ ಆತ್ಮವು, ಸಾಕಾರ ಹೊಂದಿದ ಮೇಲೆಯೇ ಎಲ್ಲವನ್ನು ಮಾಡಬಲ್ಲದು. ಕಾಜಿನ ಆವರಣ (ಹೊದಿಕೆ) ಇರದಿದ್ದರೆ ಒಳಗಿನ ಜ್ಯೋತಿಯ ಬೆಳಕು ಸ್ವಚ್ಛವಾಗಿ ಹಬ್ಬುವದಿಲ್ಲ. ಕಾಜಿನ ಹೊದಿಕೆ ಅಂದವಾದದ್ದೂ ಸ್ವಚ್ಛವಾದದ್ದೂ ಇದ್ದರೆ ಬೆಳಕು ಚನ್ನಾಗಿ ಬೀಳುತ್ತದೆ. ನಮ್ಮ ಆತ್ಮಸೂರ್ಯನ ಪ್ರಕಾಶವು ಈ ಶರೀರದ ಕಾಜಿನೊಳಗಿಂದಲೇ ಹೊರಬೀಳುವದದೆ. ಈ ಶರೀರವನ್ನು ಎಷ್ಟರಮಟ್ಟಿಗೆ ಸ್ವಚ್ಛ, ಸುಂದರ,

ನಿರೋಗಿ ಮತ್ತು ಪವಿತ್ರವಾಗಿ ಇಡುತ್ತೇವೆಯೋ ಅಷ್ಟರಮಟ್ಟಿಗೆ ಆತ್ಮದ ಬೆಳಕು ಹೊರಸೂಸುವದು.

ಬಲದ ಮಹತ್ವವನ್ನು ಉಪನಿಷತ್ತುಗಳಲ್ಲಿ ಬಣ್ಣಿಸಲಾಗಿದೆ. ದುರ್ಬಲನಿಗೆ ಏನೂ ಮಾಡುವದು ಸಾಧ್ಯವಿಲ್ಲ. ಒಬ್ಬ ಬಲವಂತನು ನೂರಾರು ದುರ್ಬಲರನ್ನು ಮಣಿಸುತ್ತಾನೆ. ಕಸುವಿಲ್ಲದೆ ಶರೀರದ ಯಾವ ವ್ಯಾಪಾರಗಳನ್ನು ಮಾಡುವದೂ ಸಾಧ್ಯವಿಲ್ಲ. ಶರೀರದ ವ್ಯಾಪಾರಗಳನ್ನು ಮಾಡದಿದ್ದರೆ ಜ್ಞಾನವು ದೊರೆಯುವದಿಲ್ಲ. ಅನುಭವ ಸಿಕ್ಕುವದಿಲ್ಲ. ದೊಡ್ಡವರ ಸಹವಾಸ ದೊರೆಯುವದಿಲ್ಲ. ಮತ್ತು ಗುರುಜನರ ಸೇವೆ ಮಾಡಲು ಬರುವದಿಲ್ಲ. ಆದ್ದರಿಂದಲೇ ಬಲೋಪಾಸನೆ ಮಾಡಲು ಋಷಿಗಳೆಲ್ಲರು ಹೇಳುತ್ತಾರೆ.

"ನಾಯಮಾತ್ಮಾ ಬಲಹೀನೇನ ಲಭ್ಯಃ" (ಆತ್ಮವು ಬಲಹೀನನಿಗೆ ದೊರೆಯದು) ಎಂಬ ಶ್ರುತಿವಚನವಿದೆ. ದಾಸ್ಯ ದುಃಖ ಇವೇ ದುರ್ಬಲನ ಸೊತ್ತು. ಶಕ್ತಿ ಇದ್ದರೆ ಎಲ್ಲವು, ಇಲ್ಲದಿದ್ದರೆ ಏನೂ ಇಲ್ಲ. ಕಟ್ಟಡಕ್ಕೆ ಆಳವಾದ ಗಟ್ಟಿಯಾದ ಪಾಯವು ಅವಶ್ಯವಾದದ್ದು. ಪಾಯಕ್ಕೆ ಗಟ್ಟಿಯಾದ ಕಲ್ಲುಗಳೇ ಬೇಕು. ಬಂಡೆಗಲ್ಲಿನ ಮೇಲೆ ನಿಂತ ಕಟ್ಟಡವೇ ಉಳಿಯುತ್ತದೆ. ಉಸುಕಿನ ಪಾಯದ ಮೇಲೆ ನಿಂತ ಕಟ್ಟಡವು ಯಾವಾಗ ಕಪ್ಪರಿಸಿಕೊಂಡು ಬೀಳುವದೆಂದು ಹೇಳಲು ಬರುವಂತಿಲ್ಲ. ಶರೀರವೇ ಈ ಪ್ರಪಂಚದ ಪಾಯವು.

"ಶರೀರಮಾದ್ಯಂ ಖಲು ಧರ್ಮಸಾಧನಮ್." ಎಲ್ಲ ಧರ್ಮಗಳ ಮುಖ್ಯ ಸಾಧನವೇ ಶರೀರವು. ಅದನ್ನು ಉಪೇಕ್ಷಿಸುವದೆಂದರೆ ಹುಚ್ಚುತನವು. ಅದು ಪಾಪವು, ಶರೀರದ ಉಪೇಕ್ಷೆಯೆಂದರೆ ಸಮಾಜದ ಮತ್ತು ದೇವರ ಅಪರಾಧ ಮಾಡಿದಂತೆ. ಬಲವುಳ್ಳ ದೇಹವಿದ್ದರೆ ಮಾತ್ರ ನಮ್ಮ ಋಣಗಳನ್ನು ತೀರಿಸಬಲ್ಲೆವು, ಸುಂದರವಾದ ಸಂತತಿಯನ್ನು ಹೆತ್ತು ಪಿತೃಋಣವನ್ನು ತೀರಿಸಬಲ್ಲೆವು. ಸಮಾಜ ಸೇವೆಮಾಡಿ ದೇವರ ಋಣವನ್ನು ತೀರಿಸಬಲ್ಲೆವು, ಜ್ಞಾನವನ್ನು ಗಳಿಸಿ ಋಷಿ ಋಣವನ್ನು ತೀರಿಸಲು ಸಾಧ್ಯವಾಗುವದು. ಈ ಮೂರು ಋಣದೊಂದಿಗೆ ನಾವು ಹುಟ್ಟಿರುತ್ತೇವೆ. ಇವನ್ನು ತೀರಿಸಲಿಕ್ಕೆ ಬಲವುಳ್ಳ ದೇಹವಿದ್ದರೆ ಮಾತ್ರ ಸಾಧ್ಯವು.

ಬ್ರಹ್ಮಚರ್ಯವು ಬಲದ ಅಡಿಗಲ್ಲು. ಬ್ರಹ್ಮಚರ್ಯದ ಮಹತ್ವವನ್ನು ಕುರಿತು ಈಗಾಗಲೇ ಒಂದು ಪ್ರಕರಣದಲ್ಲಿ ಹೇಳಲಾಗಿದೆ. ಗಳಿಸಿದ

ಬಲವನ್ನು ಉಳಿಸುವದೆಂದರೆ ಬ್ರಹ್ಮಚರ್ಯ. ಬಲವನ್ನು ಸಂಪಾದಿಸಿ ಅದನ್ನು ಉಳಿಸಿರಿ.

ವ್ಯಾಯಾಮದಿಂದ ಬಲವನ್ನು ಗಳಿಸುವದು. ಇದು ಬರೀ ಹೊರಗಿನ ಆಡಂಬರದಿಂದ ಸಾಧಿಸುವ ಮಾತಲ್ಲ. ಸೂರ್ಯನಮಸ್ಕಾರದ ವ್ಯಾಯಾಮವನ್ನು ನಮ್ಮ ಸಂಸ್ಕೃತಿಯಲ್ಲಿ ಹೇಳಲಾಗಿದೆ. ಸ್ವಚ್ಛ ಹವೆಯಲ್ಲಿ ಸೂರ್ಯನನ್ನು ಸಾಕ್ಷಿಯಾಗಿಟ್ಟು ಅವನಿಗೆ ನಮಸ್ಕಾರ ಹಾಕಿ ವ್ಯಾಯಾಮವನ್ನು ಮಾಡುವದು. ಪ್ರಾಣಾಯಾಮವನ್ನು ದಿನಾಲು ಮಾಡಬೇಕೆಂದು ಹೇಳಲಾಗಿದೆ. ನಮಸ್ಕಾರ ಮತ್ತು ಪ್ರಾಣಾಯಾಮ ಇವೆರಡೂ ವ್ಯಾಯಾಮಗಳನ್ನು ಜೀವದಿಂದ ಇರುವವರೆಗೆ ಮಾಡತಕ್ಕದ್ದು.

ಎಲ್ಲ ವಿಧದ ವಿದ್ಯೆಗಳಿಗಾಗಿ ನಮ್ಮ ದೇಶವು ಪ್ರಸಿದ್ಧನಾಗಿದೆ. ಎಲ್ಲರು ಎಲ್ಲ ವಿದ್ಯೆಯನ್ನೂ ಕಲಿಯುತ್ತಿದ್ದರು. ವ್ಯಾಯಾಮದ ಅನೇಕ ವಿದ್ಯೆಗಳು ನಮ್ಮಲ್ಲಿ ಗೊತ್ತಿದ್ದವು. ಕೆಲವು ವ್ಯಾಯಾಮಗಳು ಶರೀರ ಸಂಪತ್ತಿಗಾಗಿ ಮತ್ತೆ ಕೆಲವು ಸ್ವಸಂರಕ್ಷಣೆಗಾಗಿ. ಲಾಠಿ, ಕತ್ತಿ, ಬರ್ಚಿ ಮೊದಲಾದವನ್ನು ತಿರುಗಿಸಲಿಕ್ಕೆ ಕಲಿಯುವದು ಆತ್ಮಸಂರಕ್ಷಣೆಗಾಗಿ.

ಬೇರೆ ಬೇರೆ ಸುಲಭವಾದ ಸಾಂಘಿಕ ಆಟಗಳು ನಮ್ಮ ಭರತ ಖಂಡದಲ್ಲಿ ಇದ್ದವು. ಖೋಖೋ, ತಿಳ್ಳಿ ಮೊದಲಾದ ಆಟಗಳು ಈಗ್ಯೂ ಅವೆ. ಶ್ರೀಕೃಷ್ಣನಿಗಂತೂ ಆಟದ ಹುಚ್ಚು. ಬಾಲಗೋಪಾಲರೆಲ್ಲರನ್ನೂ ಯಮುನಾನದಿಯ ದಂಡೆಯ ಮೇಲೆ ಕೂಡಿಸಿ ಬೇರೆ ಬೇರೆ ಆಟಗಳನ್ನು ಅವನು ಆಡುತ್ತಿದ್ದನು. ಆಟದಂಥ ಪವಿತ್ರ ವಸ್ತುವು ಇನ್ನೊಂದಿಲ್ಲ. ಆಟಗಳಿಗೆ ಶ್ರೀಕೃಷ್ಣನು ದಿವ್ಯತೆಯನ್ನು ತಂದುಕೊಟ್ಟನು. (Krishna made play divine) ಎಂದು ನಿವೇದಿತಾ ದೇವಿಯವರು ಹೇಳಿದ್ದಾರೆ. ಕೃಷ್ಣನೊಡನೆ ಕ್ರೀಡೆ ನಮ್ಮ ಕಣ್ಣೆದಿರು ನಿಲ್ಲುತ್ತದೆ. ಕೃಷ್ಣನೆಂದೊಡನೆ ಆಕಳದ ನೆನಹು ಆದಂತೆ ಯಮುನಾನದಿಯ ದಂಡೆಯ ಮೇಲೆ ಅವನಾಡಿದ ಆಟಗಳ ನೆನಪು ಸಹ ಬರುತ್ತದೆ.

ಆಟಗಳು ನಮಗೆ ಅನೇಕ ಪಾಠಗಳನ್ನು ಕಲಿಸುತ್ತವೆ. ಹಿರಿಯರು ಕಿರಿಯರು ಎಂಬ ಭಾವನೆಯನ್ನು ಮರೆಯುತ್ತೇವೆ. ಆಸಕ್ತಿಯು ಅಳಿದು ಹೋಗುತ್ತದೆ. ವಿರುದ್ಧ ಪಕ್ಷದಲ್ಲಿ ನಮ್ಮ ಅಣ್ಣತಮ್ಮಂದಿರಾಗಲಿ, ಮಿತ್ರರಾಗಲಿ ಇದ್ದರೂ ಸಹ, ನಾವು ಆ ಮಾತು ಮರೆತುಬಿಡುತ್ತೇವೆ. ಆಟವೆಂದರೆ ನಿಷ್ಠೆ, ಸತ್ಯತೆ, ತನ್ನನ್ನು ತಾನು ಮರೆತುಬಿಡುವದು.

ಗಂಡುಹುಡುಗರ ಆಟಗಳಿದ್ದಂತೆ ಹೆಣ್ಣುಹುಡುಗರಿಗಾಗಿಯೂ ಬೇರೆ ಬೇರೆ ವಿಧದ ಆಟಗಳಿವೆ. ಆ ಆಟಗಳಿಂದ ಅವರ ಸೌಂದರ್ಯದ ಬೆಳವಣಿಗೆಯಾಗುತ್ತದೆ, ಶರೀರಕ್ಕೆ ಪುಷ್ಟಿ ದೊರೆಯುತ್ತದೆ.

ಇದರಂತೆಯೇ ಆಸನಗಳ ವ್ಯಾಯಾಮವು ಕಲ್ಪಿಸಲಾಗಿದೆ. ಅಲ್ಪಾವಧಿಯಲ್ಲಿ ಹೆಚ್ಚು ವ್ಯಾಯಾಮವಾಗಿ ಪ್ರಕೃತಿಯಲ್ಲಿದ್ದ ದೋಷಗಳು ಲೋಪವಾಗುತ್ತವೆ. ಶೀರ್ಷಾಸನ, ಭುಜಂಗಾಸನ, ಸರ್ವಾಂಗಾಸನ, ಗರುಡಾಸನಗಳನ್ನು ದಿನಾಲು ಹಾಕಿದರೆ ಪ್ರಕೃತಿಯು ಬಹಳ ಉತ್ತಮವಾಗಿ ಉಳಿಯುವದು.

ನಾವು ನಮ್ಮ ಕೆಲಸದಲ್ಲಿ ತೊಡಗಿದಾಗ ಆಗುವ ವ್ಯಾಯಾಮವಂತೂ ಅತ್ಯುತ್ಕೃಷ್ಟವಾದದ್ದು. ವ್ಯಾಯಾಮವು ಉಪಯುಕ್ತವಾಗುವಂತಹದಾಗಬೇಕು. ಶಾಲೆಯಲ್ಲಿಯ ವಿದ್ಯಾರ್ಥಿಗಳು ತೋಟಕ್ಕೆ ನೀರು ಹಾಕಬೇಕು, ಹಣ್ಣುಹಂಪಲಗಳನ್ನು, ಹೂವು ಬಳ್ಳಿಗಳನ್ನು ಸಂವರ್ಧಿಸಬೇಕು. ಕಣ್ವಋಷಿಯ ಆಶ್ರಮದಲ್ಲಿ ಪ್ರಿಯಂವದಾ, ಅನಸೂಯಾ ಮೊದಲಾದವರು ಗಿಡಗಳಿಗೆ ನೀರು ಹಾಕುವ ದೃಶ್ಯವನ್ನು ನಾವು ಶಾಕುಂತಲದಲ್ಲಿ ಕಾಣಬಹುದು. ಸ್ವಾವಲಂಬಿಯಾಗಿ ತಮ್ಮ ಕೆಲಸವನ್ನು ತಾವೇ ಮಾಡಿದರೆ ವ್ಯಾಯಾಮವು ಸಹಜವಾಗಿ ಆಗುತ್ತದೆ. ನಮ್ಮ ಹಿರಿಯರು ಯಾವಾಗಲೂ ದುಡಿಯುವದರಲ್ಲಿ ಆನಂದಪಡುತ್ತಿದ್ದರು. ಅವರು ಸುಮ್ಮನೆ ಕೂತು ತಿನ್ನುವವರಿದ್ದಿಲ್ಲ. ದುಡಿಯುವದು ಕೀಳೆಂದು ಅವರು ಎಂದಿಗೂ ಭಾವಿಸಿದ್ದಿಲ್ಲ.

ಸಾಂದೀಪನಿ ಋಷಿಯ ಆಶ್ರಮದಲ್ಲಿ ಎಲ್ಲ ವಿದ್ಯಾರ್ಥಿಗಳು ನೀರು ತುಂಬುತ್ತಿದ್ದರು, ಕಟ್ಟಿಗೆ ಒಡೆಯುತ್ತಿದ್ದರು. ಸಿರಿಹೀನರು, ಸಿರಿವಂತರು ಎಂಬ ಭೇದವು ಅವರಲ್ಲಿ ಎಂದೂ ಕಂಡುಬರುತ್ತಿರಲಿಲ್ಲ. ಬಡ ಸುದಾಮನೊಡನೆ ಶ್ರೀಕೃಷ್ಣನು ಅಡವಿಗೆ ಹೋಗುತ್ತಿದ್ದನು. ಗುರುವಿನ ಸನ್ನಿಧಿಯಲ್ಲಿ ಎಲ್ಲರೂ ಸಮಾನರು. ಎಲ್ಲರೂ ದುಡಿಯುವದು. ಶ್ರೀಮಂತನಿರಲಿ ಬಡವನಿರಲಿ, ಎಲ್ಲರಿಗೂ ಆರೋಗ್ಯವು ಬೇಕಾದ ವಸ್ತುವು. ನಮ್ಮ ಪ್ರಾಚೀನ ಆಶ್ರಮಗಳಲ್ಲಿದ್ದ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೆ ಗಟ್ಟಿಗರಾಗಿ ಆಗುವಂತೆ ದಿನದ ಅಭ್ಯಾಸಕ್ರಮವನ್ನು ಋಷಿಗಳು ಯೋಜಿಸುತ್ತಿದ್ದರು. ಚಳಿ ಗಾಳಿ ಬಿಸಿಲು ಇವೆಲ್ಲವನ್ನು ಎದುರಿಸುತ್ತಿದ್ದರು. ಮಳೆಯಲ್ಲಿ ಹುಡುಗರಿಗೆ ಆಡಲಿಕ್ಕೆ ಬಿಡಬೇಕೆಂದು ಮನುಸ್ಮೃತಿಯಲ್ಲಿ ಹೇಳಿದೆ. ಬೆಳಗಿನ

ಜಾವದಲ್ಲಿ ವಿದ್ಯಾರ್ಥಿಗಳೆಲ್ಲರೂ ಎದ್ದು ನದೀ ಸ್ನಾನಕ್ಕೆ ಹೊರಡುತ್ತಿದ್ದರು. ಆ ಮೇಲೆ ನಮಸ್ಕಾರಗಳನ್ನು ಹಾಕುತ್ತಿದ್ದರು. ಆ ಮೇಲೆ ಹಾಲು ಕುಡಿಯುತ್ತಿದ್ದರು, ಇದು ಭಾರತೀಯ ಸಂಸ್ಕೃತಿಯ ರೀತಿಯು.

ನಮ್ಮ ಹಿರಿಯರ ಪೀಳಿಗೆಯ ಗಂಡಸರು ಹೆಂಗಸರು ಗಟ್ಟಿಯುಳ್ಳವರಿದ್ದದ್ದನ್ನು ನಾವು ಕಾಣುತ್ತೇವೆ. ಅವರ ಹಲ್ಲು, ಕಿವಿ, ಕಣ್ಣು ಎಲ್ಲವು ಉತ್ತಮವಾಗಿ ಕೆಲಸ ಮಾಡುತ್ತವೆ. ಹತ್ತತ್ತು ಮೈಲು ನಡೆದರೂ ಸಹ ಅವರಿಗೆ ದಣಿವು ಅನಿಸುವದಿಲ್ಲ.

ಆದರೆ ನಾವು ಇಂದಿನ ವಿದ್ಯಾರ್ಥಿ ವರ್ಗದಲ್ಲಿ ಎಂತಹ ಕನಿಕರವೆನಿಸುವ ಚಿತ್ರವನ್ನು ಕಾಣುತ್ತೇವೆ! ಗಲ್ಲ ಪಚ್ಚಾದದ್ದು, ಕಣ್ಣಿಗೆ ಚಾಳೀಸು, ಹಲ್ಲು ಹುಳುಕ, ಕೈಕಾಲು ಕಡ್ಡಿಗಳಂತೆ, ಮಲಬದ್ಧತೆಯ ತಕರಾರು, ಹೊರಗಿನ ಆಡಂಬರವೇ ಹೆಚ್ಚು, ಒಳಗೆ ಪೊಳ್ಳು. ಮಳೆ ಬಂದೊಡನೆ ಇವರಿಗೆ ಚಳಿಜ್ವರ, ಬಿಸಿಲು ಬಡಿದೊಡನೆ ಎಚ್ಚರ ತಪ್ಪಿ ಬೀಳುವದು. ಬಿಳಿಛಾಯೆಯ ಜನರ ಪರಿಸ್ಥಿತಿ ಇಷ್ಟು ಕೆಟ್ಟುಹೋಗಿದೆ ಇಂದು.

ಒಕ್ಕಲಿಗರು ಕೂಲಿಕಾರರು ಏನೋ ಶ್ರಮಪಡುತ್ತಾರೆ, ದುಡಿಯುತ್ತಾರೆ, ಆದರೆ ಅವರಿಗೆ ಹೊಟ್ಟೆತುಂಬ ಕೂಳು ಸಿಗುವದಿಲ್ಲ. ಆದ್ದರಿಂದ ಅವರ ದೇಹಗಳು ಕೂಡ ಸವೆಯುತ್ತ ನಡೆದಿವೆ. ಶ್ರೀಮಂತರು ಮಧ್ಯಮ ವರ್ಗದವರು ದುಡಿಯುವದಿಲ್ಲ. ಮತ್ತು ದುಡಿಯುವವರಿಗೆ ಹೆಚ್ಚು ದುಡಿಯಬೇಕಾಗುತ್ತದೆ. ಇವರಿಗೆ ಸಾಕಷ್ಟು ಬಿಡುವು, ಹೊಟ್ಟೆತುಂಬ ಅನ್ನ ಕೊಡದೆ ಇದ್ದರೆ ಅವರ ಆರೋಗ್ಯವು ಸುಧಾರಿಸುವದು ಸಾಧ್ಯವಿಲ್ಲ. ಅದರಂತೆ ದುಡಿಯದೆ ಇರುವವರ ಆರೋಗ್ಯವು ಸುಧಾರಿಸಬೇಕಾದರೆ ಅವರೂ ದುಡಿಯಬೇಕು.

ಶರೀರಕ್ಕೆ ವ್ಯಾಯಾಮವು ದುಡಿತವು ಬೇಕಾಗುವಂತೆ ಹೊಟ್ಟೆತುಂಬ ಅನ್ನವೂ ಬೇಕು. ಆದರೆ ಯಾವ ಬಗೆಯ ಅನ್ನವನ್ನು ತಿನ್ನಬೇಕು ಇದು ನಮಗೆ ತಿಳಿಯದಂತಾಗಿದೆ. ಜ್ಞಾನದೀಪವನ್ನು ಎಲ್ಲೆಡೆಯಲ್ಲಿಯೂ ನಮ್ಮೊಡನೆ ಒಯ್ಯಬೇಕು. ಯಾವ ಯಾವ ತಿನಿಸಿನ ಪದಾರ್ಥಗಳಲ್ಲಿ ಸತ್ವವಿರುತ್ತದೆ, ಯಾವ ರೀತಿಯಿಂದ ಅವನ್ನು ತಿನ್ನಬೇಕು ಇಂತಹ ನೂರಾರು ವಿಧಗಳನ್ನು ನಾವು ತಿಳಿದುಕೊಳ್ಳಬೇಕಾಗಿದೆ.

ಜೀವನಸತ್ವ (ವ್ಹಿಟಾಮಿನ್ಸ) ದೊಂದು ಹೊಸ ಶಾಸ್ತ್ರವೇ ನಿರ್ಮಾಣವಾಗಿದೆ. ನಾವು ಕಣಕವನ್ನು ಸಾಣಿಸಿ ತವಡು ಚಲ್ಲಿಬಿಡುತ್ತೇವೆ. ಇದು

ತಪ್ಪೆಂದು ಈ ಶಾಸ್ತ್ರವು ನಮಗೆ ತೋರಿಸಿಕೊಡುತ್ತದೆ. ಅದರಂತೆಯೇ ಗಿರಣಿ ಅಕ್ಕಿ ತಿನ್ನುವದು ತಪ್ಪು. ಯಾಕಂದರೆ ಗಿರಣಿಯಲ್ಲಿ ಅಕ್ಕಿಯ ಸತ್ವ ವೆಲ್ಲ ಹೋಗಿಬಿಡುತ್ತದೆ. ಥಳಿಸದೆ ಇದ್ದ ಅಕ್ಕಿಯಲ್ಲಿ ಒಂದು ಬಗೆಯ ಸಕ್ಕರೆ ಇರುತ್ತದೆ. ಅದು ಜೀವನಕ್ಕೆ ಕಲ್ಯಾಣಕರವಾದದ್ದು. ಇದು ನಮ್ಮ ಎಲವುಗಳಿಗೆ ಕಸುವು ಕೊಡುತ್ತದೆ. ಗಿರಣಿ ಅಕ್ಕಿ ತಿನ್ನುವವರಿಗೆ ಬೆರಿ ಬೆರಿ ಎಂಬ ರೋಗವಾಗುತ್ತದೆ. ಇಂಥ ಅಕ್ಕಿ ತಿನ್ನಬಾರದೆಂದು ಕೆಲದೇಶಗಳಲ್ಲಿ ಕಾಯಿದೆ ಸಹ ಮಾಡಿರುತ್ತಾರೆ. ಇದನ್ನೆಲ್ಲ ನಮ್ಮ ದೇಶದಲ್ಲಿ ಮಾಡುವವ ರಾರು ? ಸರಕಾರವಂತೂ ಪರಕೀಯವಿದೆ. ಹೊಸ ಶಿಕ್ಷಣ ಹೊಂದಿದವರು ತಾವು ಸರ್ವಜ್ಞರೆಂದು ಮೆರೆಯುತ್ತಾರೆ. ಆದರೆ ಕೃತಿಯಿಂದ ದೇಶಸೇವೆ ಮಾಡುವವರೇ ಇಲ್ಲ. ಶಾಸ್ತ್ರವು ಹೇಳಿದಂತೆ ನಡೆಯುವವರೂ ಇಲ್ಲ. ಥಳಿಸಿದ ಅಕ್ಕಿ ಮತ್ತು ಥಳಿಸದೆ ಇದ್ದ ಅಕ್ಕಿ ಇಲಿಗಳಿಗೆ ತಿನಿಸಿ ನೋಡಿದಾಗ, ಥಳಿಸದೆ ಇದ್ದ ಅಕ್ಕಿ ತಿಂದ ಇಲಿಗಳು ಹೆಚ್ಚು ಚನ್ನಾಗಿ ಆಗುತ್ತಿವೆಯೆಂದು ಕಂಡುಬಂದಿದೆ.

ಆಕಳ ಹಾಲು ಕುಡಿಯುವದನ್ನು ಬಿಟ್ಟದ್ದರಿಂದ ಮತ್ತು ಅದು ಸಿಗುವದು ಅಸಾಧ್ಯವಾದದ್ದರಿಂದ ನಮ್ಮ ದೇಶದಲ್ಲಿ ಜನರು ಎತ್ತರವಾಗುವದಿಲ್ಲ. ನಮ್ಮ ದೇಶದಲ್ಲಿ ಹಾಲು, ಮಜ್ಜಿಗೆ, ಇವುಗಳಿಗೆ ವಿಶೇಷ ಮಹತ್ವ ಕೊಡಲಾಗಿದೆ. ಜೇನುತುಪ್ಪ ನೀರು ಕುಡಿಯುವ ಪದ್ಧತಿ ಇತ್ತು. ಇದರಿಂದ ಆಯುಷ್ಯವು ಬೆಳೆಯುತ್ತದೆ. ಆಧುನಿಕ ಶಾಸ್ತ್ರವು ಪ್ರಯೋಗದಿಂದ ಈ ಮಾತನ್ನು ಸಿದ್ಧಮಾಡಿದೆ. ಜೇನುತುಪ್ಪ ಆರೋಗ್ಯವನ್ನು ಕೊಡುವಂತಹ ವಸ್ತುವು. ಇತಿಹಾಸಾಚಾರ್ಯ ರಾಜವಾಡೆಯವರು ಜೇನುತುಪ್ಪವನ್ನು ಅನ್ನದ ಮೇಲೆ ಸುರುವಿ ತಿನ್ನುತ್ತಿದ್ದರು. ಮಹಾತ್ಮಾಜಿಯವರ ಆಹಾರದಲ್ಲಿ ಜೇನು ತುಪ್ಪಕ್ಕೆ ಮಹತ್ವದ ಸ್ಥಾನವಿದೆ.

ಇದರಂತೆ ಹಣ್ಣುಹಂಪಲದ ಆಹಾರಕ್ಕೆ ಸಹ ನಮ್ಮಲ್ಲಿ ಗೌರವದ ಸ್ಥಾನವಿದೆ. ಆದ್ದರಿಂದಲೇ ನಮ್ಮ ಸಂಸ್ಕೃತಿಯಲ್ಲಿ ಉಪವಾಸಗಳನ್ನು ಕಲ್ಪಿಸಿದ್ದಾರೆ. ಉಪವಾಸದ ದಿವಸ ಫಲಾಹಾರವನ್ನೇ ಮಾಡತಕ್ಕದ್ದು. ಆದರೆ ಈಗ ಎಲ್ಲವೂ ವಿಪರೀತವಾಗಿದೆ. ಸಾಬುಅಕ್ಕಿಯ ಚಿವಡಾ, ಬಟಾಟೆ ವಡೆ ಇಂತಹ ಕರಿದ ಪದಾರ್ಥಗಳನ್ನೇ ತಿನ್ನುತ್ತಾರೆ! ಚಿವಡಾ ಭಜಿ ತಿನ್ನುವದಕ್ಕಿಂತ ಅಷ್ಟು ರೊಕ್ಕ ಹಣ್ಣಿಗಾಗಿ ಖರ್ಚುಮಾಡಿದರೆ ಇಡೀ ಕುಟುಂಬಕ್ಕೆ ಅವು ಸಾಲುವವು. ಆದರೆ ವಿಚಾರ ದೃಷ್ಟಿಯೇ ಹೋಗಿಬಿಟ್ಟಿದೆ, ಅಂಥಾ

ಚರಣವೇ ನಡೆದಿದೆ.

ನಮ್ಮ ಪೂರ್ವಜರು ತಿನಿಸಿನ ಶಾಸ್ತ್ರವನ್ನೇ ಬೆಳೆಯಿಸಿದ್ದರು. ಯಾವದನ್ನು ಯಾವ ಕಾಲದಲ್ಲಿ ತಿನ್ನಬೇಕು, ಯಾವ ಕಾಲದಲ್ಲಿ ತಿನ್ನಬಾರದು, ಯಾವ ಪದಾರ್ಥಗಳನ್ನು ತಿನ್ನಬಾರದು, ಇದನ್ನೆಲ್ಲಾ ಕುರಿತು ನಿಯಮಗಳನ್ನು ಮಾಡಿದ್ದಾರೆ. ಈ ನಿಯಮಗಳನ್ನು ನಾವು ತಿರಸ್ಕರಿಸದೆ ಹೊಸ ಶಾಸ್ತ್ರದ ಒರೆಗಲ್ಲಿಗೆ ಹಚ್ಚಿ ಅವುಗಳನ್ನು ಪರೀಕ್ಷಿಸಬೇಕು. ಹಳೆಯ ಜನರು ಕೆಂಪು ಪದಾರ್ಥ ತಿನ್ನಬಾರದೆಂದು ಅನ್ನುತ್ತಿದ್ದರು. ಚನ್ನಂಗಿ ಬೇಳೆ ಕೆಂಪದು, ಅದನ್ನು ತಿನ್ನಬಾರದೆಂದು ಹೇಳಲಾಗುತ್ತದೆ. ಇದು ನಿಜವೋ? ಕೆಂಪು ಬಣ್ಣ ಅದೆ, ಇಷ್ಟರಿಂದಲೇ ಈ ಪದಾರ್ಥವು ತ್ಯಾಜ್ಯವೋ? ಚನ್ನಂಗಿ ಬೇಳೆ ತಿಂದರೆ ಬದ್ಧಕೋಷ್ಠತೆ ಹೋಗುತ್ತದೆಂದು ಕಂಡುಹಿಡಿಯಲಾಗಿದೆ. ಅಂದಮೇಲೆ ಅದನ್ನು ಏಕೆ ತಿನ್ನಬಾರದು? ಕೇವಲ ಭಾವನಾವಶರಾಗಬಾರದು ನಾವು. ಅದರಂತೆ ಉಳ್ಳಾಗಡ್ಡಿ. ಉಳ್ಳಾಗಡ್ಡಿಯಲ್ಲಿ ಫಾಸ್ಪರಸ್ ಇದೆ. ಶರೀರದ ಪೋಷಣೆಗೆ ಉತ್ತಮವಾದದ್ದು. ಶ್ರಮಜೀವಿಗಳು ಅದನ್ನು ತಿನ್ನಬಹುದು. ಬುದ್ಧಿಜೀವಿಗಳಿಗೆ ಅಷ್ಟೊಂದು ಚನ್ನಾಗಿಲ್ಲ. ಇಂಥ ನಿಯಮಗಳನ್ನೆಲ್ಲ ನಾವು ವಿಚಾರಿಸಬೇಕು. ಒಂದಾನೊಂದು ಕಾಲದಲ್ಲಿ ಟಾಮೆಟೊ ನಮ್ಮ ದೇಶದಲ್ಲಿ ಉಪಯುಕ್ತವಾಗಿರಲಿಲ್ಲ. ಆದರೆ ಈಗ ಅದಕ್ಕೆ ಒಂದು ಮಹತ್ವದ ಸ್ಥಾನ ಪ್ರಾಪ್ತವಾಗಿದೆ.

ಅಲ್ಲಾ ಮತ್ತು ಲಿಂಬಿ ಹಣ್ಣುಗಳಿಗೆ ನಮ್ಮ ಆಹಾರ ಶಾಸ್ತ್ರದಲ್ಲಿ ಬಹಳ ಮಹತ್ವವಿದೆ. ಇವು ನಮ್ಮ ದೇಹಾರೋಗ್ಯಕ್ಕೆ ಬಹಳ ಹಿತಕರವಾಗುವಂಥ ಪದಾರ್ಥಗಳು. ಲಿಂಬಿಹಣ್ಣಿನ ರಸದಿಂದ ಕೂದಲು ಸಹ ಪಚನವಾಗುವದೆಂದು ಗಾದೆ ಮಾತು ಇದೆ.

ನಮ್ಮ ಆರೋಗ್ಯವು ಆಹಾರ ವಿಹಾರಗಳ ಮೇಲೆ ಅವಲಂಬಿಸಿದೆ. ವಿಹಾರವೆಂದರೆ ವ್ಯಾಯಾಮ. ಯೋಗ್ಯರೀತಿಯ ಆಹಾರ ವಿಹಾರಗಳಿದ್ದರೆ ದೇಹವು ಸುಂದರವಾಗಿಯೂ ತೇಜಸ್ಸುಳ್ಳದ್ದಾಗಿಯೂ ಕಾಣುವದು. ಇಂಥ ದೇಹವಿದ್ದರೆ ಅಖಂಡ ಸೇವೆ ಮಾಡುವದು ಸಾಧ್ಯ.

ಬೇನೆಯಿಂದ ಬಳಲುವದು ಪಾಪವೆಂದೆನಿಸಬೇಕು ನಮ್ಮೆಲ್ಲರಿಗೆ. "ಯಾರಿಗಾದರೂ ಬೇನೆಯಾದರೆ ಅವರನ್ನು ನಾನು ತುರಂಗಕ್ಕೆ ಕಳಿಸುವೆನೆ"ಂಬು ಬರ್ನಾಡ ಶಾ ಅಂದಿದ್ದಾನೆ. ವ್ಯಾಯಾಮ ಮಾಡದಿದ್ದರೆ, ಯೋಗ್ಯ ಆಹಾರವನ್ನು ಸೇವಿಸದಿದ್ದರೆ, ಸಮಯಕ್ಕೆ ಸರಿಯಾಗಿ ಮಲಗ

ದಿದ್ದರೆ, ಸೃಷ್ಟಿ ನಿಯಮಗಳ ವಿರುದ್ಧ ನಡೆದುಕೊಂಡರೆ ಮಾತ್ರ ಬೇನೆ ಯಿಂದ ಬಳಲುವರು. ಬೇನೆ ನಿಸರ್ಗವು ನಮಗೆ ಕೊಡುವ ಶಿಕ್ಷೆ. ಬೇನೆ ಯಿಂದ ಬೀಳುವದೆಂದರೆ ಸೇವೆ ಮಾಡಲಿಕ್ಕೆ ನಮಗಂತೂ ಆಗುವದಿಲ್ಲ. ಮತ್ತು ನಮ್ಮ ಶುಶ್ರೂಷೆ ಮಾಡುವದಕ್ಕೋಸ್ಕರ ಎರಡನೆಯವರ ಅಮೌಲ್ಯ ವಾದ ವೇಳೆ ವೆಚ್ಚವಾಗುತ್ತದೆ. ಮನೆಯಲ್ಲಿ ಎಲ್ಲರಿಗೂ ಚಿಂತೆ. ಆರೋಗ್ಯವೇ ನಿಜವಾದ ಆನಂದ; ಬೇನೆಯೇ ದುಃಖವು. ರೋಗವಿಲ್ಲದ ಶರೀರವು ಅಂದವಾಗಿರುತ್ತದೆ. ರೋಗಿಗೆ ಎಷ್ಟು ಶೃಂಗಾರ ಮಾಡಿದರೂ ಅವನು ಹೆಚ್ಚು ವಿದ್ರೂಪ ಕಾಣುವನು. ತಯಾರಿ ಇದ್ದ ದೇಹಕ್ಕೆ ಹರಕ ಉಡುಪು ಹಾಕಿದರೂ ಅದು ಶೋಭಿಸುತ್ತದೆ. ಆರೋಗ್ಯವೆಂದರೆ ಸೌಂದರ್ಯ, ಸೊಬಗು. ನಿಮಗೆ ಸೌಂದರ್ಯ ಬೇಕಾಗಿದ್ದರೆ ವ್ಯಾಯಾಮ ಮಾಡಿ ದೇಹಾರೋಗ್ಯವನ್ನು ಕಾಯಿರಿ, ಮೈಮುರಿದು ದುಡಿಯಿರಿ. ನಿಮ್ಮ ದೇಹಕ್ಕೆ ಬಿಸಿಲು ಚಳಿ ಗಾಳಿ ಮುಟ್ಟಲಿ, ನಿಸರ್ಗ ಸ್ಪರ್ಶವಾಗಲಿ, ಈ ಸ್ಪರ್ಶವು ನಿಮ್ಮ ದೇಹಕ್ಕೆ ತೇಜಸ್ಸನ್ನೀಯುವದು.

ಸಂಜೆ ಮುಂಜಾನೆ ಎರಡೂ ಹೊತ್ತು ಮಹಾದೇವನ ಗುಡಿಗೆ ಹೋಗುವ ಪರಿಪಾಠವಿದೆ. ಹೊರಗಿನ ಹವೆ, ಸಂಸಾರದಾಚೆಗೆ ಮನಸ್ಸು ಮತ್ತು ಸ್ವತಂತ್ರತೆಯ ಅನುಭವ ಇವೆಲ್ಲವು ಇದರಿಂದ ದೊರೆಯುತ್ತವೆ. ಮನಸ್ಸು ಪ್ರಸನ್ನತೆ ಹೊಂದುತ್ತದೆ. ಅನಂತ ಆಕಾಶವು, ಹಚ್ಚ ಹಸಿರಾದ ಗಿಡಗಳು, ಹರಿಯುವ ಹೊಳೆ ಕಾಣುತ್ತವೆ. ಮನಸ್ಸು ಪ್ರಸನ್ನವಾಗುತ್ತದೆ. ದೇವರಿಗೆ, ತುಲಸಿ ಗಿಡಕ್ಕೆ ಪ್ರದಕ್ಷಿಣೆ ಹಾಕುವದರಲ್ಲಿ ಸಹ ವ್ಯಾಯಾಮದ ಹೇತುವು ಅಡಕವಿರುತ್ತದೆ. ದೇಹಕ್ಕೂ, ಮನಸ್ಸಿಗೂ ಪ್ರಸನ್ನತೆ.

ಭಾರತೀಯ ಮತ್ತು ಮುಸಲ್ಮಾನಿ ಸಂಸ್ಕೃತಿಗಳಲ್ಲಿ ಧರ್ಮದ ಜೋಡು ಆರೋಗ್ಯಕ್ಕೆ ಕೊಟ್ಟಿದೆ. ನಮಾಜದ ಕಾಲಕ್ಕೆ ಮುಸಲ್ಮಾನರು ಏಳುತ್ತಾರೆ, ಬಾಗುತ್ತಾರೆ, ಮತ್ತೆ ಕೂಡ್ರುತ್ತಾರೆ. ಶರೀರದ ಚಲನವಲನದಲ್ಲಿ ಆರೋಗ್ಯದ ತತ್ವಗಳೇ ಅಡಕವಾಗಿವೆ. ದಿನಕ್ಕೆ ಐದಾವರ್ತಿ ನಮಾಜ ಮಾಡುವರು. ಇದರಿಂದ ದೇಹಕ್ಕೆ ವ್ಯಾಯಾಮ ಆರೋಗ್ಯ ಮತ್ತು ಮನಸ್ಸಿಗೆ ಆಲ್ಹಾದ. ನಮಸ್ಕಾರ ಪ್ರದಕ್ಷಿಣೆ ಇವುಗಳಲ್ಲಿ ನಾವು ದೇಹ ಮತ್ತು ಮನಸಿನ ಆರೋಗ್ಯದ ಸಮನ್ವಯವನ್ನೇ ಭಾರತೀಯ ಸಂಸ್ಕೃತಿ ಯಲ್ಲಿ ಕಾಣುತ್ತೇವೆ.

ಸ್ವಚ್ಛತೆಯ ಕಡೆಗೆ ಭಾರತೀಯ ಸಂಸ್ಕೃತಿಯು ವಿಶೇಷವಾಗಿ

ನೋಡುತ್ತದೆ. ನಮ್ಮ ಈ ಉಷ್ಣ ಹವೆಯಲ್ಲಿ ನಿತ್ಯ ಸ್ನಾನವು ಬೇಕೇಬೇಕು. ದಿನಾಲು ಮೂರು ಸ್ನಾನ ಮಾಡಬೇಕೆಂದು ಹೇಳಿದೆ. ಕಾರ್ತಿಕ ಸ್ನಾನ, ಮಾಘ ಸ್ನಾನ, ವೈಶಾಖ ಸ್ನಾನ, ಮೊದಲಾದ ಸ್ನಾನಗಳ ವ್ರತಗಳು ಹೇಳಲಾಗಿವೆ; ಸ್ನಾನಮಾಡದೆ ತಿನ್ನಬಾರದೆಂಬ ನಿಯಮವಿದೆ. ಅದರಂತೆ ಹೊರಗಿನಿಂದ ಬಂದಕೂಡಲೇ ಕೈಕಾಲು ತೊಳೆದುಕೊಳ್ಳುವದು, ಅಡಿಗೆ ಮನೆ, ದೇವರಮನೆ, ಇವೆಲ್ಲವುಗಳನ್ನು ಪವಿತ್ರವನ್ನಾಗಿ ಇಡುವದು, ಸ್ವಚ್ಛತೆಯ ವಿಷಯವನ್ನು ಕುರಿತು ನಮ್ಮ ಸಂಸ್ಕೃತಿಯು ಬಹಳೇ ಜಾಗ್ರತೆ ವಹಿಸಿದೆ. ದಿನಾಲು ಒಗೆದ ವಸ್ತ್ರಗಳನ್ನು ಉಡುವದು, ಊಟಕ್ಕೆ ಕೂಡ್ರುವ ಕಾಲಕ್ಕೆ ರೇಶ್ಮೆ ವಸ್ತ್ರಗಳನ್ನು ಧರಿಸುವದು.

ಇದೇ ರೀತಿ ತಲೆಯಮೇಲಿನ ಕೂದಲು ತೆಗೆಯಬೇಕೆಂದು ನಿಯಮ ವಿದೆ. ಉಷ್ಣ ಪ್ರದೇಶಗಳಲ್ಲಿ ತಲೆಯ ಮೇಲೆ ಕೂದಲು ಹೆಚ್ಚಾಗಿದ್ದರೆ ಅದರಲ್ಲಿ ಬೆವರು ಉಳಿದು ಹೊಲಸು ಬೆಳೆಯುವ ಸಂಭವವೇ ಹೆಚ್ಚು. ಆದ್ದರಿಂದಲೇ ಈ ನಿಯಮವನ್ನು ಮಾಡಿದ್ದಾರೆ. ಸ್ವಚ್ಛತೆಯೇ ಸೌಂದರ್ಯ ವೆಂಬ ಮಾತು ನಮಗೆ ಹೊಳೆದ ದಿನವೇ ಸುದಿನವು.

ಆರೋಗ್ಯವನ್ನು ಗಳಿಸುವದಾದರೂ ಏತಕ್ಕೆ ? ಶರೀರ ಸಂಪತ್ತನ್ನಾದರೂ ಬೆಳಿಸುವದೇತಕ್ಕೆ? ಬಲದ ಉಪಯೋಗವಾದರೂ ಯಾವುದು ? ಇವೆಲ್ಲವೂ ಸ್ವಧರ್ಮಾಚರಣೆಗೆಂದು ಭಾರತೀಯ ಸಂಸ್ಕೃತಿಯು ಸಾರಿ ಹೇಳುತ್ತದೆ. ನಮಗೆ ಮೂರು ಋಣಗಳನ್ನು ತೀರಿಸುವದದೆ. ಅದರಂತೆಯೇ ಪರಪೀಡೆಗಾಗಿ ನಮಗೆ ಶಕ್ತಿ ಬೇಡ; ಶಕ್ತಿಯು, ಬಲವು ಎರಡನೆಯವರನ್ನು ಕಾಪಾಡುವದಕ್ಕಾಗಿ ಇದೆ. "ಆರ್ತತ್ರಾಣಾಯವಃ ಶಸ್ತ್ರಂ ನ ಪ್ರಹರ್ತುಮನಾಗಸಿ'' "ನಿನ್ನ ಶಸ್ತ್ರವು ಆರ್ತರನ್ನು ರಕ್ಷಿಸಲಿ ನಿರಪರಾಧಿ ಜನಗಳನ್ನು ಅದರಿಂದ ಕೊಲ್ಲಬೇಡ."

ದುರ್ಬಲರನ್ನು ಬೆದರಿಸಬೇಡಿರಿ. ದುರ್ಬಲರಿಗೆ ಆಧಾರ ಕೊಡಲಿಕ್ಕೆ ನಿಮ್ಮ ಬಲವಿದೆ. ಅವರನ್ನು ಸಬಲರನ್ನಾಗಿ ಮಾಡಲು ನನ್ನ ಬಲವಿದೆ. ಪಾಶ್ಚಿಮಾತ್ಯ ದೇಶದಲ್ಲಿ ನಿತ್‌ಶೆ ಎಂಬವನು ಹೇಳಿದ ಒಂದು ಬಲದ ತತ್ವಜ್ಞಾನವಿದೆ. "ಬಲವಿದ್ದವನೇ ಉಳಿಯಬೇಕು, ಉಳಿದವರು ಅಳಿಯಬೇಕು" ಎಂದು ಹೇಳುವ ತತ್ವಜ್ಞಾನವಿದು. ಆದರೆ ಇಂಥ ತತ್ವಜ್ಞಾನದ ತಳಹದಿಯ ಮೇಲೆ ಜಗತ್ತು ನಡೆಯುವಂತಿಲ್ಲ. ಹೀಗಾದರೆ ಸಮಾಜವನ್ನು ಕಟ್ಟುವದು ಸಾಧ್ಯವಿಲ್ಲ. ಇದು ನಿಜವಿದ್ದರೆ ದುರ್ಬಲನಾದ ಪರಾವಲಂಬಿಯಾದ

ಬಾಲಕನನ್ನು ತಾಯಿಯು ಯಾಕೆ ಜೋಪಾನ ಮಾಡಬೇಕು? "ನನ್ನ ಅಶಕ್ತನಾದ ಬಾಲಕನು ಇಂದಿಲ್ಲ ನಾಳೆ ಸಶಕ್ತನಾಗುವನು. ಇಂದು ನನ್ನ ಬಟ್ಟೆ ಹಿಡಿದು ನಡೆಯುವನು. ಆದರೆ ನಾಳೆ ಅವನು ಸ್ವಾವಲಂಬಿಯಾಗುವನು. ನನ್ನ ಸಹಾಯದಿಂದ ಸಮರ್ಥನಾಗುವನು. ಅಶಕ್ತ ಮಕ್ಕಳನ್ನು ಜೋಪಾನ ಮಾಡಿ ಸಶಕ್ತ ಮಾಡುವದಕ್ಕಾಗಿಯೇ ನನ್ನ ಶಕ್ತಿ ಇದೆ'' ಹೀಗೆ ಅನ್ನುತ್ತಾಳೆ ತಾಯಿಯು.

ಜಗತ್ತು ಸಹಕಾರ್ಯದಿಂದಲೇ ನಡೆದಿದೆ. ನಾನು ಮತ್ತೊಬ್ಬನಿಗೆ ಕೈಕೊಡುವೆನು, ಅವನು ಏಳುವನು, ಎಲ್ಲರೂ ಏಳಲಿ ಮತ್ತು ಮುಂದರಿಯಲಿ, ಆನಂದದಿಂದ ಕುಣಿಯಲಿ.

ಶರೀರ ಬಲದಂತೆ ಜ್ಞಾನದ ಮತ್ತು ನಲುಮೆಯ ಬಲವು. ಇವು ಒಂದಕ್ಕಿಂತ ಒಂದು ಹೆಚ್ಚಿನ ತರಗತಿಯ ಬಲಗಳು. ಪ್ರೇಮದಿಂದ ನಲುಮೆಯಿಂದ ಕ್ರೂರ ಪಶುಗಳನ್ನು ನಾವು ಸಾದು ಮಾಡಬಲ್ಲೆವು. ಶಾಸ್ತ್ರೀಯ ಜ್ಞಾನದ ಬಲದಿಂದ ರೋಗಗಳನ್ನು ನಾಶಮಾಡಬಲ್ಲೆವು. ದೇಹಶಕ್ತಿಗಿಂತ ಬುದ್ಧಿಯ ಶಕ್ತಿಯು ಹೆಚ್ಚಾದದ್ದು. ಇವೆರಡರಕಿಂತ ಪ್ರೇಮದ, ಪಾವಿತ್ರ್ಯದ, ಚಾರಿತ್ರ್ಯದ, ಶೀಲದ ಬಲವು ಹೆಚ್ಚು! ಈ ಮೂರು ಶಕ್ತಿಗಳನ್ನು ನಾವು ಗಳಿಸಬೇಕು. ನಿರೋಗಿಯಾದ ಶರೀರವು, ಪ್ರೀತಿಯಿಂದ ತುಂಬಿದ ಉದಾರವಾದ ಹೃದಯವು, ಮತ್ತು ಕುಶಾಗ್ರವಾದ (ಹದನವಾದ) ಬುದ್ಧಿಯು-- ಈ ಮೂರು ವಸ್ತುಗಳ ಸಮನ್ವಯದಿಂದ ಉಂಟಾಗುವ ಬಲವು ಅಪೂರ್ವವಾದದ್ದೇ ಸರಿ.

ಗೀತಾಂಜಲಿಯಲ್ಲಿ ರವೀಂದ್ರರು ಹೇಳುತ್ತಾರೆ. "ದೇವರೇ, ದೇಹವೆ ದೇಗುಲವೆಂದು ಅದನ್ನು ನಾನು ಪವಿತ್ರವಾಗಿಡುವೆನು. ನೀನು ನನಗೆ ಕೊಟ್ಟ ಹೃದಯವನ್ನು ಪ್ರೇಮದಿಂದ ತುಂಬಿ ನಿನಗೆ ಅರ್ಪಿಸುವೆನು. ನೀನು ನನಗೆ ಬುದ್ಧಿಯನ್ನು ದಯಪಾಲಿಸಿದ್ದೀ. ಬುದ್ಧಿಯ ದೀಪವನ್ನು ಸದೈವ ನಿರ್ಮಲವಾಗಿ ಮತ್ತೆ ತೇಜಸ್ಸುಳ್ಳದ್ದಾಗಿ ಉರಿಸುವೆನು.'' ಹನುಮಂತನು ಭಾರತೀಯ ಸಂಸ್ಕೃತಿಯ ಬಲದ ಹಿರಿದಾದ ಆದರ್ಶವಾಗಿದ್ದಾನೆ. ಎಲ್ಲ ತರಹದ ಬಲಗಳು ಅವನಲ್ಲಿ ಪುಂಜೀಭೂತವಾಗಿವೆ. ಹನುಮಂತನು ಕೇವಲ ಶಕ್ತಿಯುಳ್ಳವನೇ ಆಗಿದ್ದಿಲ್ಲ. ಅವನು ಮನಸಿನಷ್ಟು ಚಪಲನಿದ್ದಾನೆ. ಚಪಲತೆಯು ಅವಶ್ಯವಾದ ಗುಣವು. ಎಷ್ಟೋ ಪೈಲವಾನರಿಗೆ ತಮ್ಮ ಭಾರವಾದ ಶರೀರವನ್ನು ಅತ್ತಿತ್ತ ಸರಿದಾಡಿಸಲಿಕ್ಕೆ ಬರುವದಿಲ್ಲ.

ಇಂಥವರನ್ನು ಚಪಲರಾದ ಸಂಣ ಹುಡುಗರೂ ಸಹ ಕಾಡಬಹುದು. ಎಲ್ಲವೂ ಒಂದು ಅಳತೆಯಲ್ಲಿರಬೇಕು. ಮಾರುತಿಯ ವೇಗವು ಗಾಳಿಯಂತೆ ಇತ್ತು. ಅವನ ಶರೀರವು ವಜ್ರದಂತೆ ಗಟ್ಟಿಯಾಗಿತ್ತು, ಮತ್ತು ಗಾಳಿಯಂತೆ ಚಪಲ ವಾಗಿತ್ತು. ಶರೀರದ ಬಲದಂತೆ ಮನಸಿನ ಬಲವೂ ಅವನಲ್ಲಿತ್ತು. ಅವನು ಸಂಯಮಿಯೂ, ಜಿತೇಂದ್ರಿಯನೂ ಇದ್ದನು. ಶೀಲವಂತನು, ಚಾರಿತ್ರ್ಯ ವುಳ್ಳವನು, ಪ್ರತಿಯು ಇದ್ದನು. ತಾನು ಗಳಿಸಿದ ಬಲವನ್ನು ಸಿಕ್ಕ ಸಿಕ್ಕಂತೆ ವೆಚ್ಚಮಾಡುತ್ತಿದ್ದಿಲ್ಲ. ಅವನು ತನ್ನ ಶರೀರದ ಮೇಲೆ ಮತ್ತು ಮನಸಿನ ಮೇಲೆ ಪೂರ್ಣ ಸ್ವಾಮಿತ್ವವನ್ನು ಪಡೆದಿದ್ದನು. ಮನಸ್ಸನ್ನು ಗೆದ್ದವನು ಎಲ್ಲವನು ಗೆದ್ದ ಹಾಗೆ.

ಬಲವಾದ ದೇಹ, ಶುದ್ಧ ಮತ್ತು ಪವಿತ್ರವಾದ ಹೃದಯಗಳ ಜೊತೆಗೆ ಅಸಾಮಾನ್ಯ ಬುದ್ಧಿಮತ್ತೆಯು ಹನುಮಂತನಲ್ಲಿ ಇತ್ತು. ಬುದ್ಧಿ ವಂತರ ಅರಸನಾಗಿದ್ದನು ಅವನು. ಬಲವುಳ್ಳವರಿಗೆ ಬುದ್ಧಿ ಇರುವದಿಲ್ಲೆಂಬ ಹುಚ್ಚು ಕಲ್ಪನೆ ನಮ್ಮಲ್ಲಿ ದೃಢವಾಗಿದೆ. ಆದರೆ ಹನುಮಂತನು ಬುದ್ಧಿ ಬಲ ಎರಡೂ ಇರಬೇಕು ಎಂದು ಹೇಳುತ್ತಾನೆ.

ದೇಹ, ಬುದ್ಧಿ ಮತ್ತು ಹೃದಯ ಇವು ಮೂರೂ ವಿಕಾಸ ಹೊಂದಿ ದ್ದರೂ ಇನ್ನೊಂದು ವಸ್ತು ಅವಶ್ಯವಾದದ್ದು; ಅದೆಂದರೆ ಜನ ಸಂಗ್ರಹ ಮಾಡುವ ಕಲೆ, ಸಂಘಟನೆಯ ಚಾತುರ್ಯ. ನಮ್ಮಷ್ಟಕ್ಕೆ ನಾವು ಚನ್ನಾಗಿ ಬಾಳಬಹುದು; ಆದರೆ ಸಮಾಜದೊಡನೆ ಬೆರೆಯದಿದ್ದರೆ ಸಮಾಜ ಕಾರ್ಯವು ಸಾಗುವದಿಲ್ಲ. ತೇಜವು ಹಬ್ಬುವದಿಲ್ಲ. ಹನುಮಂತನು ವಾನರ ಯೂಥದ ಮುಖ್ಯನಾಗಿದ್ದನು. ತರುಣರನ್ನು ಸಂಘಟಿಸಬೇಕು. ಶಾರೀರಿಕ ಮಾನಸಿಕ ಮತ್ತು ಬೌದ್ಧಿಕ ಚಟುವಟಿಕೆಗಳನ್ನು ಕೈಕೊಳ್ಳಬೇಕು. ತರುಣ ರೊಡನೆ ಬೆರೆಯಬೇಕು. ಇಲ್ಲದಿದ್ದರೆ ಕಾರ್ಯವು ಮುಂದರಿಯುವದಿಲ್ಲ.

ಸಮರ್ಥ ರಾಮದಾಸರು, ವಿದ್ಯಾರಣ್ಯರು ಇಂಥ ಸಂಘಟನೆಯನ್ನು ಸಾಧಿಸಿದ್ದರು. ರಾಮದಾಸರು ದೇಶದ ಎಲ್ಲ ಭಾಗಗಳಲ್ಲಿ ಸಾವಿರಾರು ಹನು ಮಂತನ ಗುಡಿಗಳನ್ನು ಸ್ಥಾಪಿಸಿದ್ದರು. ಊರೂರಿಗೆ ಗರಡಿಮನೆಗಳನ್ನು ನಿಲ್ಲಿಸಿದ್ದರು. ಜಾತ್ರೆಗಳಲ್ಲಿ ಕುಸ್ತಿಗಳನ್ನು ಏರ್ಪಡಿಸುತ್ತಿದ್ದರು. ಈ ಗರಡಿ ಮನೆಗಳೊಡನೆ ರಾಮಚರಿತ್ರೆಯು ಕಥೆಗಳು ಕೂಡ ಹಬ್ಬಿದವು. ರಾಮ ಕಥೆಯೆಂದರೆ ಬಲುಮೆಯ ಸಾಮ್ರಾಜ್ಯದ ನಾಶಮಾಡುವ ವಿಚಾರಗಳ ಹಬ್ಬುವಿಕೆ. ಜನರಿಗಾಗಿ ಸ್ವರಾಜ್ಯವನ್ನು ಗಳಿಸುವದಕ್ಕಾಗಿ ಶಕ್ತಿಯ ಉಪ

ಯೋಗ ಮಾಡಲ್ಪಟ್ಟಿತು. "ಮರಾಠಾ ತಿತುಕಾ ಮಿಳವಾವಾ" (ಮರಾಠಾ ದೇಶವನ್ನು ಗಳಿಸಿರಿ)ಎಂಬ ಮಂತ್ರದ ಉಚ್ಚಾರದಿಂದ ಹೃದಯದ ಒಕ್ಕಟ್ಟು ಸಾಧಿಸಿತು. ಎಲ್ಲರೂ ಶ್ರೀ ಶಿವಾಜಿ ಮಹಾರಾಜರ ಬಾವುಟದ ಅಡಿಯಲ್ಲಿ ಸ್ವರಾಜ್ಯಗಳಿಸುವದಕ್ಕಾಗಿ ಟೊಂಕಕಟ್ಟಿ ನಿಂತರು.

ಶರೀರ-ಬಲವಿದೆ, ಪವಿತ್ರ ಹೃದಯವೂ ಇದೆ, ಚುರುಕಾದ ಬುದ್ಧಿಯೂ ಇದೆ. ಇವುಗಳ ಜೊತೆಗೆ ಸಂಘಟನೆ ಇದೆ. ಆದರೆ ಇವೆಲ್ಲವುಗಳ ಉದ್ದೇಶವಾದರೂ ಏನು? ಈ ಎಲ್ಲ ಸಾಧನೆಗಳು ರಾಮಸೇವೆಯಲ್ಲಿಯೇ ಉಪಯೋಗವಾಗತಕ್ಕದ್ದೆಂದು ಹನುಮಂತನು ಭಾವಿಸಿದ್ದನು. ರಾಮದೂತನೆಂದೆನಿಸಿಕೊಳ್ಳುವದರಲ್ಲಿ ಅವನಿಗೆ ಅಭಿಮಾನವೆನಿಸುತ್ತಿತ್ತು. ನನ್ನ ಬಲವು ಎರಡನೆಯವರನ್ನು ದಾಸ್ಯದಿಂದ ಬಿಡಿಸಲು ಉಪಯೋಗವಾಗ ಬೇಕು, ಅಲ್ಲದೆ ದಾಸ್ಯದಲ್ಲಿ ಇಡಲಿಕ್ಕೆ ಅಲ್ಲ ಎಂದು ಅವನು ತಿಳಿಯುತ್ತಿದ್ದನು. ಪರರ ಮೇಲೆ ಸಾಮ್ರಾಜ್ಯವನ್ನು ಹೊರಿಸಲಿಕ್ಕೆ ನನ್ನ ಶಕ್ತಿಯಲ್ಲ. ನನ್ನ ಅಂತರ್ಬಾಹ್ಯ ಶಕ್ತಿ ಎಲ್ಲವೂ ರಾಮನ ಸೇವೆಗಾಗಿಯೇ ಇದೆ. ರಾಮಸೇವೆಯೆಂದರೆ ಮೂವತ್ತು ಮೂರು ಕೋಟಿ ದೇವತೆಗಳನ್ನು ದಾಸ್ಯದಿಂದ ಬಿಡಿಸುವದು.

ಈ ಮೂವತ್ತುಮೂರು ಕೋಟಿ ದೇವತೆಗಳೆಂದರೆ ಯಾರು? ರಾವಣನ ರಾಜಧಾನಿಯಲ್ಲಿ ಇವರೆಲ್ಲರು ಬೀದಿಗಳನ್ನು ಉಡುಗುತ್ತಿದ್ದರು, ಗಿಡಗಳಿಗೆ ನೀರು ಹಾಕುತ್ತಿದ್ದರು. ಸಾಮ್ರಾಜ್ಯಸ್ಥಾಪನೆ ಮಾಡುವವರೆಲ್ಲರೂ ಇಡೀ ಜಗತ್ತನ್ನೇ ತಮ್ಮ ದಾಸರನ್ನಾಗಿ ಮಾಡುತ್ತಾರೆ. ಜನಗಳೆಲ್ಲರೂ ಕೇವಲ ಹಮಾಲರಾಗುತ್ತಾರೆ. ದೇವರಂತೆ ಇರುವ ಜನರು ದಾಸರಾಗುತ್ತಾರೆ. ಶ್ರೀ ರಾಮನಿಗೆ ಮಾನವನ ಹಿರಿಮೆಯನ್ನು, ದಿವ್ಯತೆಯನ್ನು ಸಿದ್ಧಗೊಳಿಸುವದಿತ್ತು; ದೇವರನ್ನು ದಾಸರನ್ನಾಗಿ ಮಾಡುವದಿದ್ದಿಲ್ಲ. ಜಗತ್ತಿನಲ್ಲಿ ಪ್ರತಿಯೊಬ್ಬ ಮನುಷ್ಯನು ದೇವರಂತೆ ಇದ್ದಾನೆ. ಆದರೆ ಅವರಲ್ಲಿರುವ ದಿವ್ಯತೆಯು ಪ್ರಕಟವಾಗಲು ಅನುವು ದೊರೆಯುವದಿಲ್ಲ. ಅಧಿಕಾರವುಳ್ಳವರು ಜನಸಾಮಾನ್ಯರನ್ನೂ ನೀರು ಹೊರುವವರನ್ನಾಗಿ ಮತ್ತು ಕಟ್ಟಿಗೆ ಒಡೆಯುವವರನ್ನಾಗಿ ಮಾಡಿಬಿಡುತ್ತಾರೆ. ಮೂವತ್ತುಮೂರು ಕೋಟಿ ದೇವತೆಗಳೆಂದರೆ ಮೂವತ್ತುಮೂರು ಕೋಟಿ ಮನುಷ್ಯರೆ. ಈ ಮಾನವರನ್ನು ದಾಸ್ಯದಿಂದ ಬಿಡಿಸುವದು ಶ್ರೀ ರಾಮಚಂದ್ರನ ಕರ್ತವ್ಯವಾಗಿತ್ತು.

ಹನುಮಂತನು ತನ್ನ ಎಲ್ಲ ಶಕ್ತಿಯನ್ನು, ಸಂಘಟನೆಯನ್ನು ರಾಮನ

ಕಾರ್ಯಕ್ಕಾಗಿ ಅರ್ಪಿಸಿದನು. ಸಾಮ್ರಾಜ್ಯಶಾಹಿಯನ್ನು ನಾಶಮಾಡುವ ರಾಮನನ್ನು ಕಂಡೊಡನೆ ಹನುಮಂತನು ಎಚ್ಚತ್ತನು. ಅವನೊಂದಿಗೆ ಅವನ ಸಂಗಡಿಗರಾದ ಹದಿನೆಂಟು ಪದ್ಮ ವಾನರರು ಎದ್ದರು. ತಮ್ಮ ಬಾಂಧವರನ್ನು ಮುಕ್ತಗೊಳಿಸಿ ಅವರಿಗೆ ಸ್ವತಂತ್ರತೆ ಮತ್ತು ಸ್ವರಾಜ್ಯವನ್ನು ಗಳಿಸಿಕೊಡುವದೇ ಅವರ ಧ್ಯೇಯವಾಗಿತ್ತು.

ಇದನ್ನೇ ಭಾರತೀಯ ಸಂಸ್ಕೃತಿಯು ಒತ್ತಿ ಹೇಳುತ್ತಲಿದೆ. ಶರೀರ, ಹೃದಯ ಮತ್ತು ಬುದ್ಧಿಯ ಬಲವನ್ನು ಗಳಿಸಿರಿ. ಸಂಘಟನೆಯನ್ನು ಮಾಡಿರಿ, ಸಂಘಗಳನ್ನು ಏರ್ಪಡಿಸಿರಿ. ತೇಜಸ್ಸುಳ್ಳ ವಾತಾವರಣವನ್ನು ಕಲ್ಪಿಸಿರಿ ಮತ್ತು ಇದನ್ನೆಲ್ಲ ಹಿರಿದಾದ ಧ್ಯೇಯ ಒಂದನ್ನು ಸಾಧಿಸಲು ಉಪಯೋಗಿಸಿರಿ. ರಾಮನು ಆರ್ಯ ಅನಾರ್ಯ ಎಂಬ ಭೇದಗಳನ್ನು ಲಕ್ಷಿಸಲಿಲ್ಲ. ಬಲುಮೆಗೆ ಒಳಪಟ್ಟು ಒದ್ದಾಡುವ ಜೀವಗಳನ್ನೇ ಅವನು ಕಾಣುತ್ತಿದ್ದನು. ಅವರನ್ನು ಮುಕ್ತ ಮಾಡಲು ಹಗಲಿರುಳು ಸಾಹಸ ಪಡುತ್ತಿದ್ದನು. ಅಧಿಕಾರ ಮದದಿಂದ ಪರಪೀಡನೆ ಮಾಡುವವರನ್ನು ನಿರ್ನಾಮ ಮಾಡುತ್ತಿದ್ದನು. ಜುಲುಮೆ ಮಾಡುವವರು ಯಾರೇ ಇರಲಿ. ಅವರು ಹಿಂದುಗಳಿರಲಿ, ಮುಸಲ್ಮಾನರಿರಲಿ, ಇಂಗ್ಲೀಷರಿರಲಿ. ಜಪಾನಿಗಳಾಗಲಿ, ಜರ್ಮನರಾಗಲಿ ಯಾರಿದ್ದಾರೆಂಬ ಕಡೆಗೆ ಲಕ್ಷ ಕೊಡಬೇಡಿರಿ. ರಾಮನಂಥ ವ್ಯಕ್ತಿಗಳು ಜಗತ್ತಿನಲ್ಲಿ ಎರಡೇ ಭೇದಗಳನ್ನು ಮಾಡುತ್ತಾರೆ-ಪದದಲಿತರು ಮತ್ತು ಕಾಲ್ಕೆಳಗೆ ತುಳಿಯುವವರು. ಮತ್ತು ಇವರು ಯಾವಾಗಲೂ ಪದದಲಿತರಿಗಾಗಿಯೇ ಹೆಣಗಾಡುವರು.

ಭಾರತೀಯ ಸಂಸ್ಕೃತಿಯು ಆರ್ಯ ಅನಾರ್ಯ ಶಬ್ದಗಳೆರಡನ್ನು ವಂಶವೆಂಬರ್ಥದಲ್ಲಿ ಉಪಯೋಗಿಸುವದಿಲ್ಲ. ಆರ್ಯನೆಂದರೆ ಶ್ರೇಷ್ಠನು. ಆರ್ಯನೆಂದರೆ ಉದಾರ ಹೃದಯವುಳ್ಳವನು. ಆರ್ಯನೆಂದರೆ ಅನಾಸಕ್ತಿಯಿಂದ ಕಾರ್ಯ ಮಾಡುವವನು, ಮೋಹರಹಿತನು, ಮತ್ತು ವಿಶಾಲ ದೃಷ್ಟಿಯಿಂದ ನೋಡುವವನು. ತನ್ನ ಆಪ್ತರನ್ನು ಕೌರವ ಸೇನೆಯಲ್ಲಿ ನೋಡಿ ಅರ್ಜುನನು ತನ್ನ ಕೈಯಲ್ಲಿಯ ಗಾಂಡೀವ ಧನುಸ್ಸನ್ನು ಕೆಳಗೆ ಇಟ್ಟನು. ಅದನ್ನು ನೋಡಿ ಆ ಕರ್ಮಕ್ಕೆ ಶ್ರೀ ಕೃಷ್ಣನು "ಅನಾರ್ಯ ಜುಷ್ಟ" ಎಂದೆಂದನು. ಅನ್ಯಾಯ ಮಾಡುವವನು ಯಾವನಿದ್ದರೂ ಅವನನ್ನು ಶಿಕ್ಷಿಸತಕ್ಕದ್ದು ಆರ್ಯರ ಧರ್ಮ. ಅನ್ಯಾಯ ಮಾಡಿದವನು ನಮ್ಮವನೆಂದು ಅವನನ್ನು ಬಿಡುವದೆಂದರೆ ಮೋಹಗ್ರಸ್ತರ, ಮೂಢರ,

ಆಸಕ್ತಿಯುಳ್ಳವರ ಲಕ್ಷಣವು.

"ಕೃಣ್ವಂತೊ ವಿಶ್ವಮಾರ್ಯಮ್'' ಎಂದೊಡನೆ ಇಡೀ ಜಗತ್ತನ್ನು ಹಿಂದುಗಳನ್ನಾಗಿ ಮಾಡುವದಲ್ಲ. ಎಲ್ಲರಿಗೂ ಜನಿವಾರ ಚಂಡಿಕೆ ಇಡಲು ಹೇಳುವದೂ ಅಲ್ಲ. ಜಗತ್ತಿಗೆ ಔದಾರ್ಯವನ್ನು ಕಲಿಸುವದು. ವಿಶಾಲ ದೃಷ್ಟಿಯನ್ನು ಕೊಡುವದು, ಮಾನವತೆಯನ್ನರಿಯಲು ಅನುವು ಮಾಡಿ ಕೊಡುವದು. ನಾವೆಲ್ಲರು ನಿಜವಾದ ಮಾನವರಾಗುವಾ ಎಂದು ಕಲಿಸು ವದೇ ಇದರ ನಿಜವಾದ ಅರ್ಥವು.

ನಾವು ಉದಾರರಾಗದೆ ಜಗತ್ತಿಗೆ ಉದಾರರಾಗಲು ಹೇಳುವದು ಸಾಧ್ಯವಿಲ್ಲ. ನಾವು ಮೋಹವನ್ನು ಬಿಡದಿದ್ದರೆ, ನಮ್ಮದೇ ಆದ ಚಿಕ್ಕ ಗುಂಡಿಯನ್ನು ಬಿಡದೆ ಆರ್ಯರಾಗುವದು ಶಕ್ಯವಿಲ್ಲ. ನಮ್ಮ ಸಂಸ್ಕೃತಿ ಯಲ್ಲಿ ಮಾನವತೆಯ ಮಹಿಮೆಯನ್ನೆ ಕಾಣುವೆವು. ಸಂಕುಚಿತ ದೃಷ್ಟಿಯು ಅದಕ್ಕೆ ಬೇಡಾದ ವಸ್ತುವು. ಸತ್ ಮತ್ತು ಅಸತ್, ಸಟೆ ಮತ್ತು ದಿಟ ಇವೆರಡೇ ಭೇದಗಳನ್ನು ನಮ್ಮ ಸಂಸ್ಕೃತಿಯು ಅರಿಯುತ್ತಿದೆ. ಜಗತ್ತಿನಲ್ಲಿ ನಡೆವ ತಾಕಲಾಟವು ಸಟೆ ಮತ್ತು ದಿಟ ಇವೆರಡರಲ್ಲಿಯೇ ಅದೆ. ಹಿಂದೂ ಮುಸಲ್ಮಾನರಲ್ಲಿಲ್ಲ. ಭಾರತೀಯ ಸಂಸ್ಕೃತಿಯಲ್ಲಿ ಹಿಂದು ಎಂಬ ಶಬ್ದವನ್ನು ನೀವು ಕಾಣಲಾರಿರಿ. ಹೊರಗಿನವರು ಬಂದು ಹಿಂದು ಎಂಬ ಸಂಕುಚಿತ ಭೇದವನ್ನುಂಟುಮಾಡಿದ್ದಾರೆ. ನಮಗೂ ಕಾಲಾಂತರದಲ್ಲಿ ಈ ಸಂಕುಚಿತ ಕ್ಷೇತ್ರದಲ್ಲಿಯೇ ಆನಂದವೆನಿಸಹತ್ತಿದೆ.

ಸಟೆ ಇದ್ದದ್ದನ್ನೆಲ್ಲ ಸದೆಬಡೆಯಲು ಹೊರಟ ಎಲ್ಲ ಸಂಘಟನೆಯು ಭಾರತೀಯ ಸಂಸ್ಕೃತಿಯ ಸಂಘಟನೆ ಎಂಮ ತಿಳಿದುಕೊಳ್ಳಬೇಕು. ಇದೇ ಗೀತೆಯಲ್ಲಿ ಹೇಳಲಾದ ಆರ್ಯಜುಷ್ಟ ಸಂಘಟನೆಯು. ರಾಷ್ಟ್ರೀಯ ಸಭೆಯು ಅಂತಹದೊಂದು ಸಂಘಟನೆಯನ್ನು ಭರತಖಂಡದಲ್ಲೆಲ್ಲ ಮಾಡಲು ಟೊಂಕಕಟ್ಟಿ ನಿಂತಿದೆ. ಕಾಲ್ಕೆಳಗೆ ತುಳಿಯಲ್ಪಡುವ ಜನರನ್ನು ಉಳಿಸಲು ಯತ್ನಿಸುತ್ತದೆ. ಜವಾಹರರು, ಶೌಕತ ಅಲ್ಲಿ, ಜಿನ್ನಾ ಇವರನ್ನು ಕಟುತರ ವಾಗಿ ಟೀಕಿಸುವಂತೆ ಜಾತೀಯತೆಯನ್ನು ಹಬ್ಬಿಸಲು ಉದ್ಯುಕ್ತರಾದ ಹಿಂದುಗಳನ್ನು ಉಳಿಸುವದಿಲ್ಲ. ಬಡವರನ್ನು ಬಡಿಯುವವರನ್ನು, ಕಾಲ್ಪನಿಕ ಭೇದಗಳನ್ನು ಹುಟ್ಟಿಸುವವರನ್ನು ಮತ್ತು ಅವುಗಳಿಂದ ತಮ್ಮ ಸ್ವಾರ್ಥ ವನ್ನು ಸಾಧಿಸುವವರನ್ನೆಲ್ಲರನ್ನೂ ನರವೀರ ಜವಾಹರರು ಸದೆಬಡೆಯು ತ್ತಾರೆ. ಸಜ್ಜನರನ್ನು ಕಾಪಾಡುವರು; ಸಟೆಯನ್ನು ಓಡಿಸುವರು. ಅಂಥ

ಸಂಗತಿಯನ್ನು ಮುಂದರಿಸಲು ನನ್ನ ಆಪ್ತರು ಪ್ರಯತ್ನಿಸಿದರೂ ಸಹ ಅವರೊಂದಿಗೆ ನಾನು ಬಡಿದಾಡುವೆನು. ಯಾಕಂದರೆ ಅವರನ್ನು ಎತ್ತಿ ಹಿಡಿಯುವವರು ಯಾರಿದ್ದರೂ "ನನ್ನನ್ನು ಹಿಂಬಾಲಿಸಿ (ಮಾಮನುಸ್ಮರ ಯುಧ್ಯ ಚ) ಅವರೊಡನೆ ಯುದ್ಧಮಾಡು'' ಎಂದು ಶ್ರೀ ಕೃಷ್ಣನು ಗೀತೆ ಯಲ್ಲಿ ಹೇಳಿದ್ದಾನೆ.

ಇದೇ ಆರ್ಯ ಧರ್ಮವು. ಅನಾಸಕ್ತ ಆರ್ಯ ಕರ್ಮವೆಂದು ಇದಕ್ಕೆ ಅನ್ನುತ್ತಾರೆ. ಇದೇ ಗೀತೆಯ ಸಂದೇಶವು. ಇದು ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯವು. ರಾಮುಚರಿತೆಯ ಗುಟ್ಟು.

ಈ ಧ್ಯೇಯಕ್ಕಾಗಿ "ಸುಳ್ಳಿಗೆ ಸಾವನ್ನು" ಎರೆಯುವದಕ್ಕಾಗಿ ಭಾರತ ದಲ್ಲಿ ಬಲೋಪಾಸನೆಯು ಪ್ರಾರಂಭವಾಗಲಿ. ಈಗಾಗಲೇ ಪ್ರಾರಂಭವಾ ಗಿದೆ. ಈ ಧ್ಯೇಯವು ಇಂದಿನ ಯುಗಧರ್ಮವು. ಸ್ಪೇನದಲ್ಲಿಯ ಪದದಲಿತ ರಿಗಾಗಿ ಅಂತರರಾಷ್ಟ್ರೀಯ ಸ್ವಯಂಸೇವಕರು ತಮ್ಮ ಪ್ರಾಣದ ಧಾರೆಯೆರೆ ಯಲು ಮುಂದಾಗಿದ್ದಾರೆ. ಜಗತ್ತಿನಲ್ಲಿ ನ್ಯಾಯದ ಮತ್ತು ಅನ್ಯಾಯದ ಪಕ್ಷಗಳೆರಡೇ ಉಳಿಯುವವು. ರಾಮ ರಾವಣವೆಂಬೆರಡು ಪಕ್ಷಗಳಿವು. ಹಿಂದು ಮುಸಲ್ಮಾನ ಎಂಬುವದು ಹಳೇ ಮಾತಾಯಿತು. ಈಗ ಜಗತ್ತು ವೇಗದಿಂದ ಮುಂದರಿಯುತ್ತದೆ. ನಿಜವಾಗಿ ಈ ಯುಗಧರ್ಮವನ್ನು ಭಾರ ತೀಯ ಸಂಸ್ಕೃತಿಯ ಉಪಾಸಕರೇ ಕಂಡುಹಿಡಿಯಬೇಕು.

ಭಾರತೀಯ ಸಂಸ್ಕೃತಿಯ ಹಿರಿದಾದ ಧ್ಯೇಯವನ್ನು ಪೂಜಿಸುವ ರಾಷ್ಟ್ರೀಯ ಮಹಾಸಭೆಯೆ ನಿನಗೆ ಅನಂತ ಧನ್ಯವಾದಗಳು! ಅನಂತ ಉಪಕಾರಗಳು ನಿನ್ನವು! ನೀನು ಅಪಹಾಸ್ಯಕ್ಕೆ ಗುರಿಯಾಗುವಿ. ಜಾತ್ಯಂಧ ಹಿಂದು ಮುಸಲ್ಮಾನರಿಬ್ಬರೂ ನಿನ್ನ ಮೇಲೆ ಕಲ್ಲೆಸೆಯುವರು. ಹುತಾತ್ಮತೆ ನಿನಗೆ ಸ್ವೀಕರಿಸಬೇಕಾಗುವದು. ಬೀಸುವ ಕಲ್ಲು ಎರಡು ಇರುತ್ತವೆ. ಮುತ್ತಿನಂಥ ಜೋಳ ಬೀಸುವದು ಎರಡೂ ಕಲ್ಲಿನ ಕೆಲಸ. ಸನಾತನಿ ಹಿಂದು, ಸನಾತನಿ ಮುಸಲ್ಮಾನ, ಆದರಂತೆ ಜಾತ್ಯಂಧ ಹಿಂದು ಮುಸ ಲ್ಮಾನರಿಬ್ಬರೂ ನಿನ್ನನ್ನು ಬೀಸುವರು. ಆದರೆ ನಿನ್ನನ್ನು ಬೀಸಿ ಕೆಳಗೆ ಬಿದ್ದ ಹಿಟ್ಟು ಅವರಿಬ್ಬರಿಗೂ ಪುಷ್ಟಿಯನ್ನು ಕೊಡುವದು!

ದಿವ್ಯ ಸ್ತವ್ಯ ರಾಷ್ಟ್ರೀಯ ಸಭೆ! ನೀನು ಕಲಿಸುವ ಬಲೋಪಾಸನೆ ಒಮ್ಮೆಲೆ ಬೆಳೆಯುವಂತಿಲ್ಲ. ಜಾತೀಯ ಕೆಸರಿನಲ್ಲಿ ನೀನು ಇದರ ಬೀಜ ವನ್ನು ಊರಿದ್ದೀ. ನೀನು ಊರಿದ ಈ ಬೀಜವು ತುಳಿಯಲ್ಪಡುವದು.

ಆದರೆ ಈ ಬೀಜವು ನಾಶಹೊಂದುವದಿಲ್ಲ. ಬರ್ಫದ ರಾಶಿಯಲ್ಲಿ ಓಕವೃಕ್ಷದ ಬೀಜಗಳು ಬಿದ್ದಿರುತ್ತವೆ. ಅವು ಸಾಯುವದಿಲ್ಲ. ಪ್ರಚಂಡವಾದ ಓಕ ಮರಗಳು ಹುಟ್ಟುತ್ತವೆ, ಬೆಳೆಯುತ್ತವೆ. ಅದರಂತೆ ನೀನೂರಿದ ಈ ಬೀಜಗಳು ಒಂದು ದಿನ ಮೇಲಕ್ಕೇಳುವವು, ಚಿಗುರುವವು, ಬೆಳೆಯುವವು. ಮತ್ತು ಭಾರತಕ್ಕೆ ಶಾಂತಿಯನ್ನು ಕೊಡುವವು! ಭಾರತದ ಮುಖದಿಂದ ಜಗತ್ತೂ ಶಾಂತಿಯನ್ನು ಪಡೆಯುವದು.

ಈ ದೃಶ್ಯವನ್ನು ನನ್ನ ಕಣ್ಣು ಕಾಣುತ್ತದೆ. "ಹಿಂಡಿಹಿಪ್ಪಿಯಾಗುವ ಅಭಾಗಿ ಮಾನವರೇ ಒಂದಾಗಿರಿ" ಎಂಬ ಕೂಗು ಕೇಳಬರುತ್ತದೆ. ಜಾಗತಿಕ ಸಂಘಟನೆಯ ಮಂಗಲ ಮಂದಮಾರುತವಿದು. ಈ ಮಾರುತವು ಭಾರತೀಯ ಸಂಸ್ಕೃತಿಯದು. ಭಾರತವು ಈ ಮಾರುತವನ್ನು ಸ್ವಾಗತಿಸುವದು. ಈ ಮಾರುತಕ್ಕೆ ಭಾರತವು ತವರೂರನಿಸುವದು. ಸಂಕುಚಿತ ದೃಷ್ಟಿಯವರಾಗಿ ಉಳಿಯದೆ ವಿಶಾಲ ದೃಷ್ಟಿಯ ಮಾನವತೆಯನ್ನು ಅರಿಯಲು ನಮ್ಮ ಹಿರಿಯರು ನಮಗೆ ಕಲಿಸಿದ್ದಾರೆ. ಕ್ರಾಂತಿಕಾರರ ಮುಗುಟ ಮಣಿಯಂತೆನಿಸುವ ಲೆನಿನ್ನನು ಹೊರಗಿನವನೆಂದು ನನಗೆಂದೂ ಅನಿಸುವದಿಲ್ಲ. ನವಿಲಗರಿ ಪೀತಾಂಬರವನ್ನು ಬಿಟ್ಟು, ಬೂಟು ಸೂಟು ಹಾಕಿಕೊಂಡು ನನ್ನ ಭಗವಾನ ಶ್ರೀ ಕೃಷ್ಣನೇ ಲೆನಿನ್ನನ ರೂಪದಲ್ಲಿ ನನ್ನೆದುರು ನಿಂತಂತೆ ನನಗೆ ಅನಿಸುತ್ತದೆ. ಅನ್ಯಾಯದ ಪಕ್ಷವನ್ನು ಕಟ್ಟಿದವರು ನಿನ್ನ ಅಣ್ಣ ತಮ್ಮಂದಿರಿದ್ದರೂ ಅವರೊಡನೆ ಯುದ್ಧ ಹೂಡು ಎಂದು ಹೇಳುವ ಕೃಷ್ಣನನ್ನೇ ಲೆನಿನ್ನನಲ್ಲಿ ನಾನು ಕಾಣುತ್ತೇನೆ. ಆ ಕಾಲದಲ್ಲಿ ರೂಢವಾಗಿದ್ದ ತ್ರೈಗುಣ್ಯ ವಿಷಯಕ ವೇದದ ವಿರುದ್ಧ ಬಂಡಾಯ ಹೂಡಿದ "ಸ್ತ್ರಿಯೊ ವೈಶ್ಯಾಸ್ತಥಾ ಶೂದ್ರಾ ತೇಪಿ ಯಾಂತಿ ಪರಾಂಗತಿಮ್" ಎಂದು ಹೇಳಿ ಎಲ್ಲರಿಗೂ ಮೋಕ್ಷದ ದ್ವಾರವನ್ನು ತೆರೆದಿಡುವ, ಸ್ವರ್ಗದಲ್ಲಿ ನಿಮಗೆ ಅಪ್ಸರೆಯರು ಸಿಕ್ಕುವರು, ಅಮೃತವೂ ದೊರೆಯುವದೆಂದು ಹೇಳುವ ವೇದವಾದದಲ್ಲಿ ಮಗ್ನರಾಗಿದ್ದವರನ್ನು ತೂರಿ ಒಗೆಯುವ "ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ" ಹೀಗೆಂದು ದುಡಿತದ ದೊಡ್ಡಿಸ್ತನವನ್ನು ಸ್ಥಾಪಿಸಿ, ಯಜ್ಞಯಾಗಾದಿ ಧರ್ಮವನ್ನು ಕಿತ್ತೊಗೆಯುವ "ಯಥೇಚ್ಛಸಿ ತಥಾ ಕುರು" ಎಂದು ಹೇಳಿ ಬುದ್ಧಿ ಸ್ವಾತಂತ್ರ್ಯದ ಮಹತ್ವವನ್ನು ಹೆಚ್ಚಿಸುವ, ಆ ಮಹಾನ್ ಕ್ರಾಂತಿಕಾರಕನಾದ ಶ್ರೀ ಕೃಷ್ಣನನ್ನು ಲೆನಿನ್ನನಲ್ಲಿ ನಾನು ಕಾಣುತ್ತೇನೆ.

ಶ್ರೀ ಕೃಷ್ಣನು ತನ್ನೆದುರು ಇಟ್ಟ ಈ ಹೆಗ್ಗುರಿಗಳನ್ನು, ಮಾನವತೆ ಯನ್ನು ಅರಿಯುವ ಭಾರತೀಯ ಸಂತರ ಅವೇ ಹೆಗ್ಗುರಿಗಳನ್ನು, ನಾವು ಇಂದಿನ ಜಗತ್ತಿನಲ್ಲಿ ಭಾರತದಲ್ಲಿ ಮತ್ತೆ ಕಾಣುತ್ತೇವೆ. ಧ್ರುವತಾರೆಗಳಂತೆ ಮಿನುಗುತ್ತವೆ. ಹೃದಯವು ವಿಶಾಲವೂ ಶುದ್ಧವೂ ಆಗುತ್ತಿದೆ. ಬುದ್ಧಿಯ ದೀಪ ಹಚ್ಚಲಾಗುತ್ತಿದೆ. ಗಾಯತ್ರೀ ಮಂತ್ರದ ಉಪಾಸನೆಯು ಮತ್ತೆ ತಲೆದೋರಹತ್ತಿದೆ. ಮತ್ತು ನಡುವಿನ ಕಾಲದಲ್ಲಿ ಲುಪ್ತವಾದ, ಈಗ ಮತ್ತೆ ಪ್ರಕಟವಾಗುವ ಭಾರತೀಯ ಗುರಿಗಳಿಗಾಗಿ ದುಡಿಯಲು, ಸವೆಯಲು, ಸಾಯಲು ಹೊಸ ಸಂಘಟನೆಯೊಂದು ಪ್ರಕಟವಾಗಹತ್ತಿದೆ. ಹೊಸ ಬಲೋಪಾಸನೆಯೊಂದು ತಲೆ ಎತ್ತಹತ್ತಿದೆ. ಧನ್ಯವಾದುದು ಈ ದೃಶ್ಯವು. ಭಾರತೀಯ ಸಂಸ್ಕೃತಿಯ ನಿಜವಾದ ಅಭಿಮಾನಿಯು, ಅನಾಸಕ್ತ ಮತ್ತು ಆರ್ಯಜುಷ್ಟ ಕರ್ಮ ಧರ್ಮವನ್ನು ಕಲಿಸುವ ಗೋಪಾಲಕೃಷ್ಣನ ನಿಜ ವಾದ ಭಕ್ತನು ರಾಷ್ಟ್ರೀಯ ಸಭೆಯ ಈ ಬಲ ಸಂಘಟನೆಯಲ್ಲಿ ಸೇರದೆ ಇರಲಾರನು.

---

## ೧೮. ಗುರಿಯ ಪರಮಾವಧಿ

ಭಾರತೀಯ ಸಂಸ್ಕೃತಿಯಲ್ಲಿ, ಒಂದೊಂದು ಸದ್ಗುಣವನ್ನು ಗಳಿಸುವ ದಕ್ಕಾಗಿ, ಒಂದೊಂದು ಗುರಿ ಸಾಧಿಸುವದಕ್ಕಾಗಿ, ತಮ್ಮ ಸರ್ವಸ್ವವನ್ನೇ ಅರ್ಪಿಸುವ ಅನೇಕ ಹಿರಿದಾದ ವಿಭೂತಿಗಳನ್ನು ನಾವು ಕಾಣಬಹುದು. ಇಂಥ ವಿಭೂತಿಗಳ ಇತಿಹಾಸವೇ ಭಾರತೀಯ ಸಂಸ್ಕೃತಿಯು. "ದೊಡ್ಡ ವ್ಯಕ್ತಿಗಳ ಚರಿತ್ರೆಯೆಂದರೆ ಇತಿಹಾಸ"ವೆಂಬ ವಚನವಿದೆ. ಭಾರತೀಯ ಸಂಸ್ಕೃತಿಯ ಇತಿಹಾಸವೆಂದರೆ, ಭಾರತೀಯ ಸಂತರ, ವೀರರ ಚರಿತ್ರೆ.

ಸತ್ಯಕ್ಕಾಗಿ ರಾಮಚಂದ್ರನು ವನಕ್ಕೆ ತೆರಳಿದನು. ತನ್ನ ತಂದೆಯ ಮಾತು ಸುಳ್ಳಾಗಬಾರದೆಂದು ಹನ್ನೆರಡು ವರುಷ ವನವಾಸವನ್ನನುಭವಿ ಸಲು ಆನಂದದಿಂದ ಸಿದ್ಧನಾದನು. ಮತ್ತೆ ಹನ್ನೆರಡು ವರುಷ ವನವಾಸದ ನಂತರ, ಅಯೋಧ್ಯೆಯ ಪಟ್ಟವನ್ನೇರಿದರೂ ಕೂಡ ಅವನದು ಎಂಥ ಉದಾತ್ತವರ್ತನೆಯು! ಭಗವತಿ ಸೀತಾದೇವಿಯ ಪಾವಿತ್ರ್ಯವನ್ನು ಕುರಿತು

ಪ್ರಜೆಗಳ ಮನಸ್ಸಿನಲ್ಲಿ ಸಂದೇಹವಿದೆಯೆಂದು ಅರಿತೊಡನೆಯೇ ಪ್ರಭು ರಾಮಚಂದ್ರನು ಗರ್ಭವತಿ ಸೀತೆಯನ್ನು ಬಿಟ್ಟು ಬಿಡುತ್ತಾನೆ. ಪ್ರಜೆಗಳೆದುರು ತನ್ನ ಪಾವಿತ್ರ್ಯವು ಅತ್ಯಂತ ಶುದ್ಧವಿರಲೇಬೇಕು. ಸಂದೇಹಕ್ಕೆ ಎಳ್ಳಷ್ಟು ಆಸ್ಪದವಿರಕೂಡದು. ಯಾವನೋ ಒಬ್ಬ ಕಿಡಿಗೇಡಿ ಆಡಿದ ಏನೋ ಒಂದು ಮಾತಿಗಾಗಿ ರಾಮಚಂದ್ರನು ಅಷ್ಟೊಂದು ಮಹತ್ವ ಕೊಡಬಾರದಿತ್ತೆಂದು ನಾವು ಅನ್ನಬಹುದು. ಆದರೆ ರಾಮನ ಆದರ್ಶವೇ ಬೇರೆಯಾಗಿತ್ತು. ಪ್ರಜೆಗಳ ಪುಂಜೀಭೂತವಾದ ಪಾವಿತ್ರ್ಯದ ಪ್ರತೀಕವೆಂದರೇನೇ ಶ್ರೀರಾಮಚಂದ್ರನಾಗಿದ್ದನು. ಪ್ರಜೆಗಳು ಪವಿತ್ರವಾಗಿರಬೇಕೆಂದು ಹೆಣಗುವ ರಾಜನು ಸಂಶಯಾತೀತನಿರಲೇಬೇಕು. ಪ್ರಜೆಗಳ ಪಾಪ-ಪುಣ್ಯವೆಲ್ಲಾ ತನ್ನ ಹೊಣೆಯೆಂದು ರಾಮಚಂದ್ರನು ತಿಳಿದಿದ್ದನು. (ಯಥಾ ರಾಜಾ ತಥಾ ಪ್ರಜಾ) ಬ್ರಾಹ್ಮಣ ಕುಮಾರನೊಬ್ಬನು ಸತ್ತರೆ, ಅವನ ಅಕಾಲ ಮರಣವು ತನ್ನ ತಪ್ಪಿನಿಂದೆಂದು ಅವನು ಭಾವಿಸಿದನು. ತನ್ನ ರಾಜ್ಯದಲ್ಲಿ ಯಾರೇ ಆಗಲಿ, ಎಲ್ಲಿಯಾದರೂ ತಪ್ಪಿದಲ್ಲಿ ಅದು ತನ್ನ ಹೊಣೆಯೆಂದು ತಿಳಿದುಕೊಳ್ಳುತ್ತಿದ್ದನು.

ತ್ಯಾಗ ಮತ್ತು ಪಾವಿತ್ರ್ಯಗಳಿಗೆ ಭಾರತೀಯ ಸಂಸ್ಕೃತಿಯಲ್ಲಿ ಅತಿ ಮಹತ್ವದ ಸ್ಥಾನವಿದೆ. ಕೇವಲ ದ್ರವ್ಯ, ಅಧಿಕಾರಗಳಿಗೆ ಭಾರತೀಯರು ಮಾನಕೊಡುವದಿಲ್ಲ. ಇವೆರಡರ ಜೊತೆಗೆ ತ್ಯಾಗ, ಪಾವಿತ್ರ್ಯಗಳೆರಡೂ ಇರಲೇಬೇಕು. ಬಡ ಶುಕಾಚಾರ್ಯರನ್ನು ಭಾರತೀಯರು ದೇವರೆಂದು ತಿಳಿಯುವರು. ರಾಜಾಧಿರಾಜರುಗಳ ಪಲ್ಲಕ್ಕಿಗಳನ್ನು ಭಾರತೀಯರು ಆದರದಿಂದ ಹೊರಲಿಲ್ಲ. ಆದರೆ ಸಂತರ ಮಹಂತರ ಪಲ್ಲಕ್ಕಿಗಳನ್ನು ಈಗಲೂ ಲಕ್ಷಾವಧಿ ಜನರು ಆನಂದ ಉತ್ಸಾಹಗಳಿಂದ ಹೊರುತ್ತಾರೆ.

ಜನಕರಾಜನು ರಾಜನೆಂದಲ್ಲ, ಮಹಾಜ್ಞಾನಿ, ಮಹಾವಿರಕ್ತನೆಂದು ನಿತ್ಯ ಪ್ರಾತಃಸ್ಮರಣೆಯಲ್ಲಿ ಅವನ ನೆನಪು. ತ್ಯಾಗವಿಲ್ಲದೆ ಜ್ಞಾನವಿಲ್ಲ, ಆಸಕ್ತಿಯುಳ್ಳವರಿಗೆ ಜ್ಞಾನವೆಲ್ಲಿಂದ ? ಜ್ಞಾನವೆಂದರೆ ಅದ್ವೈತಜ್ಞಾನವು, ಜ್ಞಾನವೆಂದರೆ ಅದ್ವೈತದ ಅನುಭೂತಿಯು ಆ ಅನುಭೂತಿಯು ಹೆಚ್ಚಾದಷ್ಟು ಜೀವನದಲ್ಲಿ ತ್ಯಾಗವು ಹೆಚ್ಚುತ್ತಹೋಗುತ್ತದೆ. ಇದಕ್ಕಾಗಿಯೇ ತ್ಯಾಗವೇ ಅದ್ವೈತದ ಲಕ್ಷಣವೆಂದು ಭಾರತೀಯ ಸಂಸ್ಕೃತಿಯಲ್ಲಿ ಹೇಳಲಾಗಿದೆ. ತ್ಯಾಗದ ಜೊತೆಗೆ ಪಾವಿತ್ರ್ಯವು ಜೀವನದಲ್ಲಿ ಬರುತ್ತದೆ.

[illegible] ತ್ಯಾಗವು ಜೀವನದಲಿ ಪಾವಿತ್ರ್ಯ

ವನ್ನು ತರದೇ ಇರಲಾರದು. ಸ್ತ್ರೀ-ಪುರುಷ ವಿಷಯದಲ್ಲಿ ಭಾರತೀಯರು ಬಹಳ ಜಾಗ್ರತೆವಹಿಸುತ್ತ ಬಂದಿರುವರು. ಕಾಮಪಾವಿತ್ರ್ಯವು ಮೊದಲನೇ ಗುಣವು. ನಿಮ್ಮಲ್ಲಿ ನೂರಾರು ಗುಣಗಳಿದ್ದು ಕಾಮಪಾವಿತ್ರ್ಯ ಒಂದಿಲ್ಲ ದಿದ್ದರೆ ಜನರು ನಿಮ್ಮನ್ನು ಮನ್ನಿಸಲಾರರು. ಜನತೆಯ ಹೃದಯವನ್ನು ನೀವು ಸೆಳೆಯಲಾರಿರಿ.

ಲೋಕಮಾನ್ಯ ಮತ್ತು ಮಹಾತ್ಮಾಜಿಯವರಲ್ಲಿರುವ ಜನರ ಅಪಾರ ಭಕ್ತಿಯ ಕಾರಣವು ಅವರ ನಿಷ್ಕಲಂಕ ಚರಿತೆ, ಅಪರಂಪಾರ ತ್ಯಾಗ ಇವು ಗಳಲ್ಲಿದೆ. ತ್ಯಾಗ ಮತ್ತು ಕಾಮಪಾವಿತ್ರ್ಯ ಇವೆರಡು ಗುಣಗಳ ಒರೆಗಲ್ಲಿನ ಮೇಲೆ ಭಾರತೀಯರು ಎಲ್ಲರನ್ನು ಪರೀಕ್ಷಿಸುತ್ತಾರೆ. ಇವೆರಡು ಒರೆಗಲ್ಲುಗಳ ಪರೀಕ್ಷೆಯಲ್ಲಿ ಉತ್ತೀರ್ಣರಾದವರಲ್ಲಿ ಭಾರತೀಯರಿಗೆ ಹುಚ್ಚು ಭಕ್ತಿ. ಇಂಥವರನ್ನು ತಲೆಯಮೇಲಿಟ್ಟು ಕುಣಿಯುವದು ಭಾರತೀಯ ಜನತೆ.

ಈ ಎರಡೂ ಗುಣಗಳ ಮಹತ್ವವನ್ನು ಮನಗಾಣಿಸಲು ಅಪಾರವಾದ ತ್ಯಾಗವು ಭಾರತ ವರ್ಷದಲ್ಲಿ ಸುರಿದಿದೆ. ಪಾವಿತ್ರ್ಯವನ್ನು ಕುರಿತು ಸಂಶಯಬಂದೊಡನೆ, ರಾಮನು ಸೀತೆಯನ್ನು ಬಿಟ್ಟನು. ಪಾವಿತ್ರ್ಯ-ಭಂಗದ ಅಂಜಿಕೆಯಿಂದ ರಜಪೂತ ರಮಣಿಯರು ಜೋಹಾರವನ್ನು ಕೈಕೊಳ್ಳುತ್ತಿದ್ದರು. ಗಂಡ ಸತ್ತ ಮೇಲೆ ತನುಮನಗಳಿಂದ ತನ್ನ ಪಾವಿತ್ರ್ಯ ವನ್ನು ಕಾಯಲು ಸಾಧ್ಯವಾಗಲಿಕ್ಕಿಲ್ಲೆಂಬ ಸಂಶಯದಿಂದ ಗಂಡನೊಡನೆ ಚಿತೆಯಲ್ಲಿ ಹಾರಿಕೊಳ್ಳುತ್ತಿದ್ದರು, ಆನಂದದಿಂದ ಉರಿಯನ್ನು ಆಲಿಂಗಿ ಸುತ್ತಿದ್ದರು. ಅದು ಉರಿಗೆ ಕೊಟ್ಟ ಆಲಿಂಗನವಲ್ಲ, ಅದು ತಮ್ಮ ಪವಿತ್ರತೆಗೆ ಇತ್ತ ನಿಜಪ್ರೇಮಾಲಿಂಗನ. ಸೂರದಾಸನ ಕಮಲದಂಥ ಸುಂದರವಾದ ಕಮನೀಯ ಕಣ್ಣುಗಳನ್ನು ಕಂಡು ಓರ್ವ ಸ್ತ್ರೀಯ ಮನಸ್ಸಿ ನಲ್ಲಿ ಕಾಮವಾಸನೆಯು ಜಾಗೃತವಾಯಿತು. ಅದನ್ನು ತಿಳಿದೊಡನೆಯೇ ಸೂರದಾಸನು ತನ್ನ ಕಣ್ಣುಗಳನ್ನು ತಾನೇ ಒಡೆದುಕೊಂಡನು. ಆಗ ಪ್ರೇಮವಿಹ್ವಲಳಾದ ಆ ತರುಣಿಯು "ದೇವರು ಕೊಟ್ಟ ಸುಂದರ ನಯನ ಗಳನ್ನು ಹೀಗೆ ಒಡೆದುಕೊಂಡಿರಲ್ಲ" ಎಂದು ಕೇಳಿದಳಂತೆ. ಆಗ ಸೂರ ದಾಸನು "ಈ ಸುಂದರ ನಯನಗಳನ್ನು ಕಂಡು ನಿನಗೆ ಸುಂದರತಮನಾದ ದೇವರ, ಪರಮೇಶ್ವರನ ನೆನಪು ನಿಜವಾಗಿಯೇ ಆಗಿದ್ದರೆ, ಈ ನನ್ನ ನಯನಗಳಿಗೆ ಅನಂತ ಧನ್ಯವಾದಗಳನ್ನು ಅರ್ಪಿಸುತ್ತಿದ್ದೆನು. ಇಂಥ ಅಂದವಾದ ನಯನಗಳನ್ನು ನಿರ್ಮಿಸುವ ಆ ಪ್ರಭುವು ಎಷ್ಟು ಸುಂದರ

ನಿರಬಹುದು ಎಂಬ ವಿಚಾರವು ನಿನ್ನ ಮನಸ್ಸಿನಲ್ಲಿ ಹೊಳೆದಿದ್ದರೆ ಎಷ್ಟು ಒಳ್ಳೆಯದಾಗುತ್ತಿತ್ತು ? ಆಗ ಮಾತ್ರ ನನ್ನ ಕಣ್ಣುಗಳು ಕೃತಾರ್ಥವಾಗುತ್ತಿದ್ದವು. ಆದರೆ ಈ ನನ್ನ ಕಣ್ಣುಗಳು ನಿನ್ನ ಮನಸ್ಸಿನಲ್ಲಿ ಕಾಮವಾಸನೆಯನ್ನು ಹುಟ್ಟಿಸಿ ಕ್ಷುದ್ರವಾದ ಕಾಮ ಭೋಗ ಲಾಲಸೆಯನ್ನು ಹೆಚ್ಚಿಸಿದವಲ್ಲವೇ ? ಇವು ನಿನ್ನನ್ನು ಕೆಸರಿನಲ್ಲಿ ಎಳೆದವು. ಎರಡನೆಯವರ ಅಧಃಪತನಕ್ಕೆ ಕಾರಣವಾದ, ಸುಂದರವಿದ್ದರೂ ವಿಷಮವಾದ ಕಣ್ಣುಗಳನ್ನು ನಾನೇಕೆ ಇಟ್ಟುಕೊಳ್ಳಬೇಕು ? ಅಂಥವುಗಳನ್ನು ನಾಶಮಾಡುವದೇ ಯೋಗ್ಯ” ಅಂದನು.

ರಾಮನು ರಾಜನು, ಅವನು ಪ್ರಜರ ಧ್ಯೇಯಸ್ವರೂಪವಾಗಿದ್ದನು. ಆದರ್ಶನಿದ್ದನು. ರಾಜನಂತೆ ಪ್ರಜೆಗಳು ಎಂಬ ಗಾದೆಯಿದೆ. ಆದ್ದರಿಂದ ರಾಜನ ಮೇಲೆ ಮಹತ್ವದ ಹೊಣೆಯಿದೆ. ಭಾರತದ ಇಂದಿನ ಮುಂದಾಳುಗಳು ರಾಮನನ್ನು ತಮ್ಮ ಆದರ್ಶವನ್ನಾಗಿ ಇಟ್ಟುಕೊಳ್ಳುವದು ಅವಶ್ಯವಿದೆ. ರಾಮನು ಗುರಿಯ ಪರಮಾವಧಿಯನ್ನು ಸಾಧಿಸಿದವನು. ಪಾವಿತ್ರ್ಯದ ವಿಷಯವಾಗಿ ಜನರ ಶ್ರದ್ಧೆಯು ಎಳ್ಳಷ್ಟೂ ಅಲುಗಾಡಬಾರದೆಂದು ಜನರೆದುರು, ಆತ್ಯಂತಿಕ ತ್ಯಾಗವನ್ನು ಆಚರಿಸುವದು ಅತ್ಯವಶ್ಯವೆಂದು ರಾಮನಿಗೆ ಅನಿಸಿತ್ತು. ಈ ರೀತಿ ತ್ಯಾಗಮಾಡಿದರೆ ಮಾತ್ರ, ಪವಿತ್ರತೆಯ ಮಹತ್ವವು ಸ್ವಲ್ಪಮಟ್ಟಿಗಾದರೂ ಜನಸಾಮಾನ್ಯಕ್ಕೆ ಹೊಳೆಯುವದು, ಇಲ್ಲದೇ ಸಾಧ್ಯವಿಲ್ಲ.

ಹಿಮಾಲಯದ ಧವಲಶಿಖರದಂತೆ ತೋರುವ ರಾಮಚಂದ್ರನ ಉದಾತ್ತತೆಯ ಹಿನ್ನೆಲೆಯೆದುರು ಸೀತಾದೇವಿಯ ಸಹನಶೀಲತೆಯು ಎದ್ದು ಕಾಣುತ್ತದೆ. ಪತಿಗೆ ಆಡಿದ ಮಾತುಗಳನ್ನು ಸತಿಯು ಸಹಿಸುವದೆಂತು ? ತನ್ನ ನಿಂದೆಯನ್ನು ಕೇಳಿ ಅವಳಿಗೆ ದುಃಖವಾಗಿತ್ತು ! ಆದರೂ ರಾಮಚಂದ್ರನ ಪವಿತ್ರ ಚಾರಿತ್ರ್ಯಕ್ಕೆ ತಗಲಿದ ನಿಂದೆಯ ಕಲಂಕವು ಅವಳನ್ನು ಆತ್ಯಂತಿಕ ವ್ಯಥೆಗೆ ಈಡು ಮಾಡಿತ್ತು. ಸೀತಾ ರಾಮಚಂದ್ರರು ಭಿನ್ನರೇ ? ಅವರು ಏಕರೂಪರಾಗಿದ್ದರು. ಸೀತೆಯು ರಾಮನಿಂದ ದೂರದಲ್ಲಿದ್ದರೂ ಅವಳ ಜೀವನದ ಸಕಲ ವ್ಯಾಪಾರಗಳಲ್ಲಿ ರಾಮನೇ ತುಂಬಿತುಳುಕುತ್ತಿದ್ದನು. ಅವಳೆಲ್ಲಿಯೇ ಇರಲಿ, ಇತ್ತ ರಾಮನ ಜೀವನದಲ್ಲಿಯೇ ಪೂರ್ಣ ಬೆರೆತು ಹೋಗಿದ್ದಳು. ಸೀತೆಯು ಅಬಲೆಯಲ್ಲ. ಪಾತಿವ್ರತ್ಯದ ಪವಿತ್ರ ಸಾಮರ್ಥ್ಯವು ಅವಳಲ್ಲಿತ್ತು. ಪತಿಪ್ರೇಮದ ಪವಿತ್ರ ಕವಚವನ್ನು ಅವಳು

ತೊಟ್ಟಿದ್ದಳು. ಪತಿಯ ಆಶೆ ಆಕಾಂಕ್ಷೆಗಳು ಅವಳ ಆಶೆ ಆಕಾಂಕ್ಷೆ, ತನ್ನದೆಂಬ ಸ್ವತಂತ್ರ ಬೇಡಿಕೆಯನ್ನೇ ಅವಳು ಇಟ್ಟುಕೊಂಡಿರಲಿಲ್ಲ. ರಾಮನ ಅಪಾರ ಪ್ರೇಮಸಾಗರದಲ್ಲಿ ಮುಳುಗಿದ ಸೀತೆಯು ತನ್ನತನವನ್ನೇ ಮರೆತು, ರಾಮನಲ್ಲಿ ಏಕರೂಪಳಾಗಿದ್ದಳು; ರಾಮ ಸೀತಾರೂಪನಾಗಿದ್ದನು. ಅವನು ಸೀತೆಯನ್ನು ವನಕ್ಕಟ್ಟಲಿಲ್ಲ! ತನ್ನ ದೇಹದಲ್ಲಿಯ ಅರ್ಧ ಭಾಗವನ್ನೇ ಕೊಯ್ದು ಒಗೆದಂತಾಗಿತ್ತು ಅವನಿಗೆ. ಪ್ರೇಮವೆಂದರೆ, ತನ್ನ ಪ್ರೇಮದ ವಸ್ತುವಿನಲ್ಲಿ ಅಥವಾ ವ್ಯಕ್ತಿಯಲ್ಲಿ ತನ್ಮಯನಾಗಿ ತನ್ನನ್ನೇ ಮರೆತು ಬಿಡುವದು. ಅಂದರೆ "ನನ್ನ ಸಾವನ್ನು ನಾನು ಕಂಡೆ'' ಎನ್ನುವಷ್ಟು ಪ್ರೇಮದ ಪರಾಕಾಷ್ಠೆಯನ್ನು ಮುಟ್ಟುವದು. ಇದೇ ಪ್ರೇಮದ ಗುರಿಯು ಸಿದ್ಧಿ. ಸೀತೆಯು ನಲುಮೆಯು ಈ ಪರಾಕೋಟಿಯ ಮೆಟ್ಟಲು ಮುಟ್ಟಿತ್ತು. ಅವಳು ನಲುಮೆಯ ಕೊನೆಯ ಮುಟ್ಟವಾಗಿದ್ದಳು; ಆದುದರಿಂದಲೇ ಸೀತೆಯು ಭಾರತೀಯ ಸ್ತ್ರೀಯರ ಹಿರಿಯ ಧರ್ಮವಾಗಿದ್ದಾಳೆ. ಭಾರತೀಯ ಆದರ್ಶ ಸ್ತ್ರೀ ಧರ್ಮವೆಂದರೆ ಸೀತಾದೇವಿ ಎಂದು ಅಂದರೆ ಅತಿಶಯೋಕ್ತಿಯಾಗಲಾರದು. ಸೀತೆಯ ಮಹಿಮೆಯನ್ನು ಬಣ್ಣಿಸುವ ಸಾವಿರಾರು ಪದಗಳನ್ನು ಈಗಲೂ ಹೆಣ್ಣುಮಕ್ಕಳು ಹಾಡುತ್ತಲಿದ್ದಾರೆ. ಭಾರತೀಯ ಬಂಧುಪ್ರೇಮವನ್ನು ಬಣ್ಣಿಸಲೇ ?

ಆ ಭರತನ ಬಂಧುಪ್ರೇಮವು! "ನನ್ನ ರಾಮನು ಅಡವಿಯಲ್ಲಿ, ನಾನು ಗದ್ದುಗೆಯನ್ನೇರಲಿಯಾ ? ರಾಮನು ಕಂದಮೂಲಗಳಿಂದ ಜೀವಿಸಲಿ, ನಾನು ಪಂಚ ಪಕ್ವಾನ್ನಗಳನ್ನು ಸವಿಯಲೇ ?" ಅದಾಗದು. ಭರತನು ನಂದಿಗ್ರಾಮದಲ್ಲಿಯೇ ಉಳಿದನು, ವಲ್ಕಲಗಳನ್ನೇ ಧರಿಸಿದನು. ಕಂದಮೂಲಗಳನ್ನೇ ತಿಂದನು, ಜಟೆಗಳನ್ನು ಧರಿಸಿದನು. ಮತ್ತು ರಾಮನ ಕ್ಷೇಮ ಚಿಂತನೆಯಲ್ಲಿಯೇ ಇದ್ದು ಹನ್ನೆರಡು ವರ್ಷ ಅವನು ಬರುವದನ್ನೇ ಕಾಯ್ದನು.

ಲಕ್ಷ್ಮಣನಂತೂ ರಾಮನೊಡನೆ ಅಡವಿಯಲ್ಲಿ ಆತನ ಪಡಿನೆಳಲಾಗಿದ್ದನು. ಭರತನು ರಾಮಚಿಂತನೆಯಿಂದ ಜೀವಿಸಿದರೆ, ಲಕ್ಷ್ಮಣನು ರಾಮಮುಖದರ್ಶನ ಮಾತ್ರದಿಂದಲೇ ಜೀವಿಸಿದನು. ತುಲಸೀದಾಸನು ತನ್ನ ರಾಮಾಯಣದಲ್ಲಿ ಈ ಪ್ರಸಂಗವನ್ನು ಒಳ್ಳೇ ರಸವತ್ತಾಗಿ ವರ್ಣಿಸಿದ್ದಾನೆ. ಲಕ್ಷ್ಮಣ—"ರಾಮಚಂದ್ರಾ, ನೀರಿಲ್ಲದೆ ಮೀನವು ಬದುಕಬಲ್ಲುದೇ, ತಾಯಿ ಇಲ್ಲದೆ ಶಿಶುವು ಇರುವುದೆಂತು? ನೀನಿಲ್ಲದೆ ನಾನು ಅದೆಂತು ಬಾಳಿ ಬದು

ಕಲಿ? ಬಾವುಟವು ಕೋಲಿನ ಆಧಾರದ ಮೇಲೆ ಹಾರುತ್ತದೆ. ರಾಮ ಚಂದ್ರಾ, ನಿನ್ನ ನಾಮದ ಆ ಯಶೋಧ್ವಜಕ್ಕೆ ನಾನೇ (ಲಕ್ಷ್ಮಣನೇ) ಕೋಲು ಆಗಲಿ. ನಿನಗಾಗಿ ನಾನಲ್ಲವೇ? ನೀನಿಲ್ಲದಿದ್ದರೆ ಲಕ್ಷ್ಮಣನಿಗೆ ಅರ್ಥವೇ ಇಲ್ಲ.''

ರಾಮ-ಸೀತಾ-ಭರತ-ಲಕ್ಷ್ಮಣ ಇಂಥ ವಿಭೂತಿಗಳಿಂದ ಬಾಳಿ ಬೆಳಿದಿದೆ, ನಮ್ಮೀ ಭಾರತೀಯ ಸಂಸ್ಕೃತಿಯು. ಭಾರತೀಯರ ನರಗಳಲ್ಲಿ ಇಂದಿಗೂ ಆ ಪವಿತ್ರಚಾರಿತ್ರ್ಯಗಳ ತಿರುಳು ಪೂರ್ಣವಾಗಿ ತುಂಬಿಕೊಂಡಿದೆ. ಇಂಥ ಮಹತ್ತರವಾದ ಆದರ್ಶಗಳು ಭಾರತೀಯರ ಕಣ್ಣೆದುರು ಚಿತ್ರಿಸಲ್ಪಟ್ಟಿವೆ.

ತೆರತೆರನಾದ ಆದರ್ಶಗಳಿಗೆ ನಮ್ಮ ಸಂಸ್ಕೃತಿಯಲ್ಲಿ ಕೊರತೆಯೇ ಇಲ್ಲ. ಬ್ರಹ್ಮಚರ್ಯವನ್ನು ಸಾಧಿಸಿದ ಭಾರತೀಯ ಉಪಾಸಕರ ಜೀವನ ಚಿತ್ರಗಳನ್ನು ತೋರಿಸಲಾ? ಹನುಮಂತನು ಸೀತಾಶೋಧಕ್ಕಾಗಿ ಲಂಕೆಯನ್ನೆಲ್ಲಾ ಸುತ್ತಿದರೂ ಸ್ತ್ರೀ ನಿವಾಸವಿದ್ದೆಡೆಗೆ ಹೊರಳಿನೋಡಲಿಲ್ಲವಂತೆ. ಒಂದೆಡೆ ಮಾತ್ರ ರಾಮನಾಮ ಧ್ಯಾನವನ್ನು ಕೇಳಿ ಹೊರಳಿನೋಡಿದನಂತೆ. ಅಲ್ಲಿ ತ್ರಿಜಟೆಯಿದ್ದಳು. ಇದರಂತೆ ಇಚ್ಛಾಮರಣಿಗಳಾದ ಭೀಷ್ಮಾಚಾರ್ಯರು, ವೈರಾಗ್ಯ ಸಂಪೂರ್ಣರಾದ ಶುಕರು!

ಜಗತ್ತಿನ ವಾಙ್ಮಯದಲ್ಲಿ ಎಲ್ಲಿಯೂ ಕಾಣದ ಕೆಲ ಸನ್ನಿವೇಶಗಳನ್ನು ನಾವು ಭಾರತೀಯ ಸಾಹಿತ್ಯದಲ್ಲಿ ಕಾಣಬಹುದು. ಶುಕಪರೀಕ್ಷೆಯ ಪ್ರಸಂಗವು ಇಂತಹದೇ ಒಂದಾಗಿದೆ. ವಸಂತ ಋತುವು ತನ್ನ ಉನ್ಮಾದಕ ವೈಭವವನ್ನು ಎಲ್ಲೆಡೆಯಲ್ಲಿಯೂ ಹರಹಿದೆ. ಕೋಗಿಲೆಯ ಪ್ರೇಮೋತ್ಕಟತೆಯ ಕುವೂ ಕುವೂ ಎಂಬ ಕೂಗು ಎಲ್ಲ ಜೀವಿಗಳ ಪ್ರೇಮವನ್ನು ಎಚ್ಚರಿಸುತ್ತಲಿದೆ. ಪಾತರಗಿತ್ತಿಗಳು ಪ್ರೀತಿಯಿಂದ ತಮ್ಮ ಅಂದವಾದ ಪಕ್ಕಗಳಿಂದ ಪರಸ್ಪರರನ್ನು ಆಲಿಂಗಿಸಿ ಕಟ್ಟಾಡಿಸುತ್ತಲಿವೆ. ಹೂವಿನ ಕಂಪು ಹರಡಿದೆ. ಪ್ರಸನ್ನನಾದ ಮಾರುತನು ಅದನ್ನೆಲ್ಲ ಹೊತ್ತುಕೊಂಡು ಮಂದವಾಗಿ ಸುಳಿಯುತ್ತಿದ್ದಾನೆ. ವೃಕ್ಷಗಳೆಲ್ಲ ಹೊಸ ಚಿಗುರಿನಿಂದ ಶೋಭಿಸುತ್ತಲಿವೆ. ವಾತಾವರಣವೆಲ್ಲ ಮಾದಕವಾಗಿದೆ. ನವಮೋಹನ ರೂಪವುಳ್ಳವಳಾದ ರಂಭೆ ಹಾವಭಾವದಿಂದ ಅಭಿನಯಿಸುತ್ತಿದ್ದಾಳೆ. ಸುಳಿಗಾಳಿ ಅವಳ ಸೆರಗನ್ನೆಳೆಯುತ್ತಲಿದೆ. ರಂಭೆ ಶುಕನನ್ನು ಅಪ್ಪುತ್ತಾಳೆ. ಆದರೆ! ಆದರೇನು? ಆತನ ಒಂದು ರೋಮಕೂಡ ಬಾಗಲಿಲ್ಲ! ಧನ್ಯನಾ

ಶುಕನು! ಅಂತಹನನ್ನು ಹೆತ್ತ ಭಾರತಾಂಬೆಯೇ ಧನ್ಯಳು! ಅಂತಹ ಶುಕನನ್ನು ಬಣ್ಣಿಸುವ ಕವಿಯ ಪ್ರತಿಭೆಯೇ ಧನ್ಯ!

ತ್ಯಾಗಮೂರ್ತಿ ಶುಕನೊಡದೆ, ನಿಶ್ಚಯ ಮೂರ್ತಿ ಧ್ರುವನು ಕಣ್ಣೆದುರು ನಿಲ್ಲುತ್ತಾನೆ. ತಂದೆ ತೊಡೆಯಿಂದ ನೂಕಿದ ಅಪಮಾನವನ್ನು ಅವನಿಂದ ಸಹಿಸುವದಾಗಲಿಲ್ಲ. ಯಾರೂ ಎಂದಿಗೂ ತನ್ನನ್ನು ನೂಕಿಸದಂಥ ಪಟ್ಟವನ್ನು ದೊರಕಿಸುವದಕ್ಕಾಗಿ, ಆ ತೇಜಸ್ವಿ ಬಾಲಕನು ಅರಮನೆಯನ್ನು ಬಿಟ್ಟು ತೆರಳಿದನು. ತಂದೆ ನಾಚಿ 'ಬಾ, ಮಗು ನಿನಗೆ ಎರಡು ಊರುಗಳನ್ನು ಕೊಡುವೆ', ಎಂದರೆ ಹೊರಳಿ ನೋಡಲಿಲ್ಲ ಸಹ. ಸಕಲ ರಾಜ್ಯವನ್ನು ಕೊಡುತ್ತೇನೆಂದರೂ ತಿರುಗಿದನೇ? ಆತನ ನಿಶ್ಚಯದಲ್ಲಿ ಸ್ವಲ್ಪಾದರೂ ವ್ಯತ್ಯಯವೇ? ಇಲ್ಲ. ಇಂದು ಭಾರತೀಯರು ಆ ಧ್ರುವನನ್ನು ಮರೆತಿದ್ದಾರೆ. ಅಲ್ಲದಿದ್ದರೆ ಪರಕೀಯರು ಅನಾದರದಿಂದ ಅತ್ತಿತ್ತ ಒಗೆದ ತುಣುಕುಗಳನ್ನು ಆರಿಸಲು ಧಾವಿಸುತ್ತಿದ್ದಿಲ್ಲ.

"ಏನೇ ಆಗಲಿ, ನನ್ನ ಧ್ಯೇಯವನ್ನು ನಾನು ಸಾಧಿಸಿಯೇ ತೀರುವೆನೆಂದು" ಧ್ರುವನ ರಕ್ತದವರಾದ ಭಾರತೀಯರು ನಾವು, ಎದೆತಟ್ಟಿ ಹೇಳಬೇಕು. ಆಗ ಮಾತ್ರ ನಮ್ಮ ಧ್ಯೇಯದ ದಾರಿಯಲ್ಲಿ ಪಸರಿಸಿದ ಅನೇಕ ತುಣುಕುಗಳ ವೋಹವು ನಮ್ಮನ್ನು ತಡೆಯಲಾರದು. ಇನ್ನು ಆ ಬಾಲಭಕ್ತನಾದ ಪ್ರಲ್ಹಾದ. ಒಮ್ಮೆ ಅಲ್ಲ ಎಂದವೇಲೆ ಮುಗಿಯಿತು. ಪಿತನು ಪರ್ವತದ ಮೇಲಿಂದ ಉರುಳಿಸಲಿ, ಬೆಂಕಿಯಲ್ಲಿ ದೂಡಲಿ, ಶೂಲಕ್ಕೇರಿಸಲಿ, ವಿಷವನ್ನು ಕುಡಿಸಲಿ, ಅನೇಕ ಚಿತ್ರಹಿಂಸೆಯನ್ನು ಮಾಡಲಿ, ನಾರಾಯಣನ ನಾಮಸ್ಮರಣೆಯನ್ನು ಬಿಡಲಿಲ್ಲ. ಇಂಥ ಧ್ಯೇಯವಾದೀ ಪ್ರಲ್ಹಾದನು ಭಾರತಕ್ಕೆ ಅಖಂಡ ಸ್ಫೂರ್ತಿಯನ್ನು ಕೊಡಲಾರನೇ? "ಇನ್‌ಕಿಲಾಬ್ ಜಿಂದಾಬಾದ, ವಂದೇ ಮಾತರಂ, ಸ್ವರಾಜ್ಯವು ನನ್ನ ಜನ್ಮಸಿದ್ಧ ಅಧಿಕಾರ" ಎಂದು ನಾನು ಅಂದೇ ತೀರುವೆನು! ನನ್ನ ದೇಹವನ್ನು ಅದೆಷ್ಟು ಕಷ್ಟನಷ್ಟಗಳಿಗೆ ಗುರಿಮಾಡಿದರೂ, ನನ್ನ ಧ್ಯೇಯವು ನನ್ನ ಜೀವನದಲ್ಲಿ ಒಡೆದು ಮೂಡದೇ ಇರಲಾರದು. ಇಂತಹ ನಿಶ್ಚಯ ಬೇಕು. "ಒಡಲಲ್ಲಿ ಇದ್ದುದೇ ನುಡಿಯಲ್ಲಿ." ನಾರಾಯಣನ ಸ್ಮರಣವೆಂದರೆ ಇಡೀ ಮಾನವ ಜನಾಂಗದ ನೆನಹು. ಎಲ್ಲ ನರರ ಅಯನವೆಂದರೇನೇ ನಾರಾಯಣನ ವಿರಾಟ ರೂಪವು. ಇಡೀ ಮಾನವ ಜನಾಂಗದ ಹಿತವನ್ನು ಸಾಧಿಸಿದರೇನೇ ನಾರಾಯಣನ ಧ್ವಜವನ್ನು ಎತ್ತಿ ಹಾರಿಸಿದಂತೆ!

ಮತ್ತೆ ಆ ಸತ್ಯಸಾಗರ ಹರಿಶ್ಚಂದ್ರರಾಜನು! ಸ್ವಪ್ನದಲ್ಲಿ ಕೊಟ್ಟ ವಚನವನ್ನು ಪಾಲಿಸುವದಕ್ಕಾಗಿ ಮಾಡಿದ ತ್ಯಾಗವೆಂತಹದು! ಎಷ್ಟು ಕಷ್ಟಪರಂಪರೆಗಳು! ಸ್ವಪ್ನದಲ್ಲಿ ಕೂಡ ಬೇಡ ಆ ಸುಳ್ಳಿನ ಸ್ಪರ್ಶ! ಜೀವನದಲ್ಲಿ ಅದೆಂತಹ ಜಾಗ್ರತೆ ಇದು! ಆ ತಾರಾಮತಿ, ರೋಹಿದಾಸ, ಆ ಹರಿಶ್ಚಂದ್ರ! ತ್ರಿಭುವನದ ಬೆಲೆ ಈ ಮೂರು ಹೆಸರುಗಳಿಗಿಂತ ಕಿರಿದು! ಅರವಟ್ಟಿಗೆಯಲ್ಲಿಟ್ಟ ಪುಕ್ಕಟೆಯಾದ ನೀರನ್ನು ಸಹ ರೋಹಿದಾಸನು ಕುಡಿಯಲಿಲ್ಲ. ಆದರೆ ಈಗಿನ ಈ ಭಾರತದಲ್ಲಿ ಸಿರಿವಂತರ ಮಕ್ಕಳು ಶಾಲೆಗಳಲ್ಲಿ ಪುಕ್ಕಟೆ ಶಿಕ್ಷಣಕ್ಕಾಗಿ ನಾದಾರಿ (ದಾರಿದ್ರ್ಯ) ಅರ್ಜಿಮಾಡುತ್ತಾರೆ. ಇನ್ನು ಸಿರಿವಂತರೋ ದರಿದ್ರರೆಂದು ಹೇಳಿ, ಧರ್ಮಾರ್ಥ ಔಷಧಾಲಯ (ದವಾಖಾನೆ)ಗಳಲ್ಲಿ ಪುಕ್ಕಟೆ ಔಷಧಗಳನ್ನು ಪಡೆದುಕೊಳ್ಳುತ್ತಾರೆ! ಎಲ್ಲಿದೆ ಆ ಸ್ವಾಭಿಮಾನ? ಭಾರತವರ್ಷವು ಸ್ವಾಭಿಮಾನ, ಸತ್ವಗಳ ಪೂಜೆ ಮಾಡುತ್ತಿತ್ತು. ಬಾಯಿ ತೆಗೆದು ಕೇಳುವದೆಂದರೆ ನಾಚಿಕೆಯ ಮಾತಾಗಿತ್ತು ಭಾರತೀಯರಿಗೆ.

ಹರಿಶ್ಚಂದ್ರನು ಹೊಲೆಯನ ಆಳಾಗಿ ದುಡಿಯುವಾಗ ಎಂಥ ಎದೆ ಕರಗುವ ಪ್ರಸಂಗಗಳು! ತನ್ನ ಮಗನಿಗೆ ಅಗ್ನಿಕೊಡಲು ಬರುವಂತಿಲ್ಲ. ಹೆಂಡತಿಯ ರುಂಡ ಕಡಿಯುವ ಪ್ರಸಂಗ! ಹೂವಿಗಿಂತಲೂ ಕೋಮಲ! ವಜ್ರಕ್ಕಿಂತಲೂ ಕಠಿಣ! ಅದೆಂತಹ ಹೃದಯುವದು!

ಧ್ಯೇಯ ಚ್ಯುತಿಗೆ, ಅದು ಎಷ್ಟೇ ಅಲ್ಪವಿರಲಿ, ಪ್ರಾಯಶ್ಚಿತ್ತ ಸಿಕ್ಕದೇ ಹೋಗುವಂತಿಲ್ಲ. ಧ್ಯೇಯವೆಂದರೆ ಧ್ಯೇಯವು. ಕರ್ಪುರದ ರಾಶಿಗೆ ಒಂದು ಕಿಡಿ ತಾಕಿದರೆ ಸಾಕು, ಅದು ಸರ್ವಸ್ವವನ್ನು ಸುಟ್ಟು ಬೂದಿ ಮಾಡುತ್ತದೆ. ಯುಧಿಷ್ಠಿರನು "ನರೋ ವಾ ಕುಂಜರೋ ವಾ'' ಎಂದೊಡನೆ ಭೂಮಿಯಿಂದ ನಾಲ್ಕು ಅಂಗುಲ ಅಂತರದಲ್ಲಿ ಚಲಿಸುವ ಆತನ ರಥವು ಭೂಮಿಗಿಳಿಯಿತಂತೆ. ನಳರಾಜನು ಒಂದು ಬೊಟ್ಟನ್ನು ಸ್ವಚ್ಛವಾಗಿ ತೊಳೆದಿದ್ದಿಲ್ಲವಂತೆ. ಅಷ್ಟು ಹೊಲಸಿನಲ್ಲಿಯೇ ಕಲಿ ಸೇರಿದನಂತೆ! ಈ ಪ್ರಸಂಗದಲ್ಲಿ ಒಂದು ಸತ್ಯವು ಅಡಕವಾಗಿದೆ. ಪಾಪವು ಇದೇ ರೀತಿ ಮೆಲ್ಲನೇ ನಮ್ಮ ಜೀವನದಲ್ಲಿ ಸೇರಿ ಅದ್ಯಂತವಾಗಿ ವ್ಯಾಪಿಸುತ್ತದೆ. ಆದ ಕಾರಣ ಮೊದಲನೆ ಹೆಜ್ಜೆ ತಪ್ಪಬಾರದು. ಆಗ ಜಾಗ್ರತೆ ವಹಿಸಬೇಕು. ಇದೇ ಸತ್ಯವನ್ನು ತಿಳಿಸಿ ಹೇಳುವ ಒಂದು ಸುಂದರ ಗೀತವು ರವೀಂದ್ರರ ಗೀತಾಂಜಲಿಯಲ್ಲಿದೆ. " ನನಗೆ ಒಂದು ಮೂಲೆಯಲ್ಲಿ ಕೊಂಚ ಸ್ಥಳಕೊಡಿ, ನಾನು ಗದ್ದಲ

ಮಾಡುವದಿಲ್ಲ, ಎಂದು ಅಭಯ ವಚನ ಕೊಟ್ಟನು. ಆದರೇನು? ರಾತ್ರಿ ಬಂಡಾಯವೆಬ್ಬಿಸಿ ನನ್ನ ಹೃದಯವನ್ನೇರಿ ಕುಳಿತು, ನನ್ನ ಹೃದಯಸಿಂಹಾಸನದ ಮೇಲಿರುವ ಸುಂದರ ಮೂರ್ತಿಯನ್ನು ಕಿತ್ತೊಗೆದನು.'' ಇದೇ ಭಾವವು ಆ ಗೀತೆಯಲ್ಲಿದೆ. ಸೈತಾನದ ನಮ್ರ ಆಗಮನವು ನಮ್ಮನ್ನು ಮೋಸಗೊಳಿಸುತ್ತದೆ. ರೋಗ ಜಂತುಗಳು ಸಾವಧಾನವಾಗಿ ದೇಹದಲ್ಲಿ ಸೇರಿ ದೇಹಾದ್ಯಂತ ವ್ಯಾಪಿಸುತ್ತವೆ. ಅದರಂತೆ ಪರಕೀಯ ಸತ್ತೆಯು ಕೂಡ ಸದ್ದಿಲ್ಲದೇ ಒಳಸೇರಿ ಇಡೀ ದೇಶವನ್ನೇ ವ್ಯಾಪಿಸುತ್ತಿದೆ. ಆದ್ದರಿಂದ ಪ್ರಾರಂಭದಿಂದಲೇ ಜಾಗ್ರತೆಯಿಂದ ದಕ್ಷತೆಯಿಂದ ನಡೆದುಕೊಳ್ಳಬೇಕು.

ಮಹಾದಾನಿ ಕರ್ಣ, ಮತ್ತು ಬಲಿಚಕ್ರವರ್ತಿ ಇವರು ದಾತೃತ್ವದ ಕೊನೆಯ ಮಟ್ಟವನ್ನು ಮುಟ್ಟಿದ್ದಾರೆ. ತನ್ನ ಮರಣವು ತನಗೆ ಗೊತ್ತಿದ್ದರೂ ಕರ್ಣನು ತನ್ನ ಕವಚಕುಂಡಲಗಳನ್ನು ಕೊಟ್ಟುಬಿಡುತ್ತಾನೆ. ಬಾಯಿಯಿಂದ ಇಲ್ಲವೆಂಬ ಶಬ್ದ ಬರುವದಕ್ಕಿಂತ ಸಾಯುವದು ಲೇಸೆಂಬುದೇ ಅವನ ವೃತ್ತಿ. ಅವನು ತನ್ನ ತಾತನಾದ ಸೂರ್ಯನಿಗೆ ಹೇಳುತ್ತಾನೆ. "ತಾತಾ ನಿನ್ನ ಮಗನಾದ ನಾನು ಮೂರ್ಖನಲ್ಲ, ವ್ಯವಹಾರಿಯಿರುವೆ. ಅಲ್ಪವನ್ನು ಕೊಟ್ಟು ಶಾಶ್ವತವನ್ನು ಗಳಿಸುವವನು ವ್ಯವಹಾರ ಚತುರನೆಂದು ಶಾಸ್ತ್ರ ಹೇಳುವದಿಲ್ಲವೇ? ನಾನು ಮರ್ತ್ಯ ಶರೀರವನ್ನು ಕೊಟ್ಟು ಅಮರ ಕೀರ್ತಿಯನ್ನು ಗಳಿಸುತ್ತೇನೆ. ಈ ಮಣ್ಣನ್ನು ಕೊಟ್ಟು ಅಮರ ಕೀರ್ತಿಯನ್ನು ಗಳಿಸುತ್ತೇನೆ. ಈ ಮಣ್ಣನ್ನು ಕೊಟ್ಟು ಅದರ ಬದಲು, ನೀನು ಇರುವ ವರೆಗೆ, ಜಗತ್ತು ಬಾಳುವ ವರೆಗೆ ಉಳಿಯುವ ಅಮರ ಕೀರ್ತಿ ಗಳಿಸಿದೆನಲ್ಲವೇ ? ಹೇಗಿದೆ ಈ ವ್ಯವಹಾರ ?''

ಅದೇ ರೀತಿ ಬಲಿಚಕ್ರವರ್ತಿಯು ವಾಮನನಿಗೆ ಮೂರನೇ ಪಾದ ಇಡಲು ಅನುವು ಇಲ್ಲದಾಗ ತನ್ನ ತಲೆಯನ್ನೇ ಚಾಚಿದನಂತೆ. ಆಗ ಬಲಿಯ ಫಜೀತಿಯಾಯಿತೆಂದು ಮತ್ಸರಗ್ರಸ್ತರಾದ ದೇವತೆಗಳು ದುಂದುಭಿಗಳನ್ನು ಬಾರಿಸಿದರಂತೆ. ಆಗ ಧಿರೋದಾತ್ತ ಬಲಿಚಕ್ರವರ್ತಿಯು ಉತ್ತರ ಕೊಟ್ಟದ್ದೇನು? "ಎಲೋ ದೇವತೆಗಳೇ, ನಿಮ್ಮ ಜಯನಿನಾದಕ್ಕೆ ನಾನು ಅಂಜೆನು. ನಾನು ಕೇವಲ ಅಪಕೀರ್ತಿಗಾಗಿ ಅಂಜುವೆನು. ನನಗೆ ಬೇಕಾದುದು ಧವಲಕೀರ್ತಿ.'' ಚಾರುದತ್ತನ ನುಡಿಯೂ ಅದರಂತೆಯೇ. "ನ ಭೀತೋ ಮರಣಾದಸ್ಮಿ ಕೇವಲಂ ದೂಷಿತಂ ಯಶಃ। ವಿಶುದ್ಧಸ್ಯಹಿ ಮೇ ಮೃತ್ಯುಃ ಪುತ್ರಜನ್ಮಸಮಃ ಕಿಲ ॥" ಇದೇ ಭಾರತೀಯ ಸಂಸ್ಕೃತಿಯ ಉಚ್ಚಧ್ವನಿಯು.

ಶಿಬಿಚಕ್ರವರ್ತಿಯು ಕಪೋತ-ಪ್ರಾಣರಕ್ಷಣೆಗಾಗಿ ತನ್ನ ತೊಡೆಯ ಮಾಂಸವನ್ನೇ ಕೊಯ್ದು ಕೊಟ್ಟನು. ಮಯೂರಧ್ವಜನು ತನ್ನ ಬಲ ಭಾಗದ ಅರ್ಧ ದೇಹವನ್ನು ಕೊಯ್ದು ಕೊಡುವಾಗ ಆತನ ಎಡಗಣ್ಣಿನಲ್ಲಿ ನೀರು ಇಳಿಯಿತಂತೆ ಅದನ್ನು ಕಂಡು ತಿರುಗಿಹೊರಟ ಅತಿಥಿಯನ್ನು ವಿನಯದಿಂದ ತಡೆದು ಮಯೂರಧ್ವಜನು "ಈ ನನ್ನ ಎಡಗಣ್ಣಿನ ನೀರು ದೇಹವನ್ನು ಕೊಯ್ದ ವ್ಯಥೆಯಿಂದಲ್ಲ ಪ್ರಭೋ. ಈ ಬಲಭಾಗದಂತೆ ಸಾರ್ಥಕವಾಗುವ ಭಾಗ್ಯ ತನಗೆ ಲಭಿಸಲಿಲ್ಲ ಎಂದು ಈ ಎಡಭಾಗದ ವ್ಯಥೆ. ಅದಕ್ಕಾಗಿ ಈ ಕಂಬನಿ ಸುರಿಯುತ್ತಲಿದೆ'' ಅಂದನು.

ಒಬ್ಬನೇ ಒಬ್ಬ ಮಗನನ್ನು ಕೊಯ್ದು ಬೇಯಿಸಿ ಅತಿಥಿಗೆ ಆ ಊಟವನ್ನು ಬಡಿಸುವ ಚಾಂಗುಣಾದೇವಿಯು, ತನ್ನ ಮಗನ ರುಂಡವನ್ನು ಒರಳಿನಲ್ಲಿ ಕುಟ್ಟುವಾಗ್ಗೆ ಹಾಡುತ್ತಿದ್ದಳು. ಅದೆಂಥ ಧೈರ್ಯ ! ಅದೆಷ್ಟು ಲೋಕೋತ್ತರ ತ್ಯಾಗ ಮತ್ತು ಧೈರ್ಯೋತ್ಕಟತೆ ! ಇದೆಲ್ಲವೂ ಆದ ಮೇಲೆ, ಅತಿಥಿಯು ಶ್ರೀಯಾಳನನ್ನು ತನ್ನ ಜೊತೆಗೆ ಊಟಮಾಡಲು ಆಗ್ರಹ ಮಾಡುತ್ತಾನೆ. ಆಗ ಅನುಮಾನಿಸುವ ಶ್ರೀಯಾಳನಿಗೆ ಚಾಂಗುಣಾ ದೇವಿಯು ಹೇಳುತ್ತಾಳೆ —"ನನ್ನ ಉದರದಲ್ಲಿ ಆತನನ್ನು ಒಂಭತ್ತು ತಿಂಗಳು ಹೊತ್ತೆ, ನೀವು ಒಂದೆರಡು ಪ್ರಹರ ಹೊರಲಾರಿರಾ ?

ಯುದ್ಧಕ್ಕಾಗಿ ಎಲ್ಲರೂ ಹೊರಬೀಳಲೇಬೇಕು. ತಡಮಾಡಿದವರಿಗೆ ಕುದಿಯುವ ಎಣ್ಣೆ ಕೊಪ್ಪರಿಗೆಯಲ್ಲಿ ಒಗೆಯುವ ಶಿಕ್ಷೆಯೆಂದು ಡಂಗುರಸಾರಿಸುತ್ತಾನೆ. ಆದರೆ ಆತನ ಮಗ ಸುಧನ್ವನೇ ಮನೆಯಿಂದ ತಡಮಾಡಿ ರಣರಂಗಕ್ಕೆ ಬರುತ್ತಾನೆ. ಆಗ ನ್ಯಾಯಪ್ರಿಯನಾದ ಹಂಸಧ್ವಜನು, "ಮಗನಾದರೇನು, ಎಲ್ಲರಿಗಾಗಿ ಸಾರಿದ ಶಿಕ್ಷೆ ಮಗನಿಗೂ ಆಗಲೇಬೇಕು.'' ಎಂದು ಮಗನೆಂಬ ಮೋಹಕ್ಕೆ ಹಿಂಜರಿಯದೇ ಸ್ಪಷ್ಟವಾಗಿ ಹೇಳಿಬಿಡುತ್ತಾನೆ. ಆದರಂತೆ ಅವನನ್ನು ಕಾದ ಎಣ್ಣೆಯಲ್ಲಿ ಒಗೆದು ಬಿಡುತ್ತಾರೆ.

ಸಾವಿತ್ರಿಯಂತೂ ಪತಿಗಾಗಿ ಪ್ರತ್ಯಕ್ಷ ಮೃತ್ಯು ದೇವತೆಯನ್ನು ಹಿಂಬಾಲಿಸುತ್ತಾಳೆ. ಆ ಘೋರವಾದ ಅಡವಿ ! ರಾತ್ರಿಸಮಯ ! ಎದುರು ಪ್ರತ್ಯಕ್ಷ ಮೃತ್ಯು ! ಆದರೇನು, ಆ ಮಹಾಸತಿಗೆ ಭಯವೆಲ್ಲಿಂದ ! ಆವಳು ಮೃತ್ಯುವನ್ನೇ ಒಲಿಸುವವಳು.

ಆ ಗಾಂಧಾರಿದೇವಿ ? ಪತಿಗೆ ಕಣ್ಣಿನ ಸುಖವಿಲ್ಲ, ನನಗೇಕೆ ಆ ಸುಖ ಎಂದು ತನ್ನ ಜನ್ಮವಿರುವವರೆಗೆ ತನ್ನ ಕಣ್ಣುಗಳನ್ನು ಕೂಡ

ಕಟ್ಟಿಬಿಟ್ಟಳು! ಈಗ ಇಂಥ ತ್ಯಾಗದ ಕಲ್ಪನೆ ಮಾಡುವದು ಕೂಡ ಅಸಾಧ್ಯ. ಸಮಾನ ಹಕ್ಕುಗಳಿಗಾಗಿ ಬಡಿದಾಡುವ ಭಾರತೀಯ ಸ್ತ್ರೀಯರೇ, ಗಾಂಧಾರಿಯತ್ತ ಸ್ವಲ್ಪ ನಿಮ್ಮ ದೃಷ್ಟಿ ಹೊರಳಿಸಿರಿ. ಹೇಗಿದೆ ಗಾಂಧಾರಿಯ ಸಮಾನ ಹಕ್ಕುಗಳ ಕಲ್ಪನೆ? ಗಾಂಧಾರಿಯೆಂದರೆ ಶ್ರೀ ಕೃಷ್ಣನು ಸಹ ಅಂಜುತ್ತಿದ್ದನು. ಇಂಥ ಭಾರತೀಯ ಪತಿವ್ರತೆಯರಿಗೆ ಅನಂತ ವಂದನೆಗಳು.

ಜಗತ್ತನ್ನೇ ಪ್ರೀತಿಸುವ ಭಗವಾನ್ ಬುದ್ಧನು ವೃದ್ಧ ಹುಲಿಯ ಬಾಯಲ್ಲಿ ತನ್ನ ತೊಡೆಯನ್ನೇ ಕೊಟ್ಟನು. ಒಣ ಹೋಳಿಗೆಯನ್ನು ಹೇಗೆ ತಿಂದೀತೆಂದು ಚಿಂತಿಸಿ ಸಂತ ನಾಮದೇವನು ತುಪ್ಪವನ್ನು ಕೈಯಲ್ಲಿ ಹಿಡಿದು, ಹೋಳಿಗೆಯನ್ನು ಒಯ್ಯುವ ನಾಯಿಯ ಬೆನ್ನುಹತ್ತಿದನಂತೆ!

ಮರ ಕಡಿಯುವವನ ಇದಿರು ತುಲಸೀದಾಸನು ತನ್ನ ಗೋಣು ಮುಂದೆ ಮಾಡಿ "ಅಪ್ಪಾ, ಸುಂದರವಾದ ಆ ಮರವನ್ನು ಕಡಿಯಬೇಡ, ನನ್ನ ಗೋಣು ಕತ್ತರಿಸು" ಅಂದನು! ಅಡವಿಯಲ್ಲಿ ಹುಲ್ಲು ಕೊಯ್ದು ತರಲು ಕಮಾಲನಿಗೆ ಕಬೀರನು ಹೇಳಲು, ಹುಲ್ಲು ಕೊಯ್ಯಲು ಬಂದ ಆ ಕಮಾಲನಿಗೆ, ಗಾಳಿಯಿಂದ ಅಲುಗಾಡುತ್ತ ಇರುವ ಆ ಹುಲ್ಲು "ಬೇಡ, ನಮ್ಮನ್ನು ಕೊಯ್ಯಬೇಡ" ಎಂದಂತೆ ಅನಿಸಿತು, ಕೈಯಲ್ಲಿಯ ಕುಡುಗೋಲು ಕಳಚಿತು. ಕಣ್ಣೊಳಗೆ ಪ್ರೇಮಾಶ್ರುಗಳು ಸೂಸಹತ್ತಿದವು. ಅವನು ಹಾಗೆಯೇ ಮನೆಗೆ ತಿರುಗಿದ. ಆಗ ಕಬೀರನು ಕಮಾಲನಿಗೆ ನಮಸ್ಕರಿಸಿದ.

ಜಗನ್ನಾಥಪುರಿಯ ಎದುರು ತೋರುವ ಆ ನೀಲಸಾಗರವನ್ನು ಕಂಡು, ನನ್ನ ಮೇಘಶ್ಯಾಮ ಕೃಷ್ಣನು ಪಸರಿಸಿದ್ದಾನೆಂದು ತನ್ನೆರಡೂ ಕೈಗಳನ್ನು ಚಾಚಿ ಕೃಷ್ಣನ ಗಾಯನ ಮಾಡುತ್ತ ಸಮುದ್ರದಲ್ಲಿ ಕುಣಿಯುವ ಆ ವಂಗದೇಶದ ಮಹಾವೈಷ್ಣವ ವೀರಚೈತನ್ಯ! ವಿಷಪಾತ್ರೆಯನ್ನು ಕುಡಿಯುವ, ಕೃಷ್ಣಸರ್ಪವೇ ಶಾಲಿಗ್ರಾಮವೆಂದು ಭಾವಿಸುವ, ಭಕ್ತಿ ಪ್ರೇಮಗಳಿಂದ ತುಂಬಿತುಳುಕುವ ಸಾಧ್ವಿ ಮೀರಾಬಾಯಿಯು! ಸ್ವಾಮಿಕಾರ್ಯಕ್ಕಾಗಿ ತನ್ನ ಮಗನನ್ನೇ ಬಲಿಕೊಟ್ಟ ಆ ವೀರ ಪನ್ನಾದಾಸಿ!

ಇಪ್ಪತ್ತೈದು ತಾಸಿನ ದಿನವಿದ್ದರೆ ಇನ್ನೂ ಹೆಚ್ಚು ಸೇವೆಯನ್ನು ಪ್ರಜೆಗಳಿಗೆ ಸಲ್ಲಿಸುತ್ತಿದ್ದೆನಲ್ಲ ಎನ್ನುವ ವಿಶ್ವಭೂಷಣ ಸಮ್ರಾಟ ಅಶೋಕ! ಪ್ರತಿ ಐದು ವರ್ಷಕ್ಕೊಮ್ಮೆ ರಾಜಬೊಕ್ಕಸವನ್ನು ಬರಿದು ಮಾಡಿ ಸರ್ವ

ರಿಗೂ ದುಡ್ಡು ಹಂಚಿ, ಬಡತನವನ್ನು ಬರಮಾಡಿಕೊಳ್ಳುವ ರಾಜಾ ಹರ್ಷ ವರ್ಧನ! ಅಡವಿಯಲ್ಲಿ ಕಂದಮೂಲಗಳನ್ನು ತಿಂದು ಹುಲ್ಲ ಹಾಸಿಗೆಯಲ್ಲಿ ಮಲಗಿದ ರಾಣಾ ಪ್ರತಾಪಸಿಂಗ! ಪ್ರಜೆಗಳು ಹಚ್ಚಿದ ಗಿಡಕ್ಕೆ ಕೂಡ ಕೈ ಹಚ್ಚಬಾರದು, ಎಂದು ಆಜ್ಞಾತ ಪತ್ರವನ್ನು ಹೊರಡಿಸುವ, ಪರಸ್ತ್ರೀಯ ರನ್ನು ತನ್ನ ತಾಯಿಯೆಂದು ತಿಳಿಯುವ ಶ್ರೀ ಶಿವಛತ್ರಪತಿ! ಸ್ವಾಮಿಯ ಗಿಡದ ಮೇಲಿನ ಒಂದು ಹಣ್ಣನ್ನು ಕೈಯಿಂದ ತಕ್ಕೊಂಡದ್ದಕ್ಕಾಗಿ ಆ ಕೈಯನ್ನೇ ಕಡಿಯಲು ಹೋದ ದಾದಾಜಿ ಕೊಂಡದೇವ!

ಐದು ತೋಫುಗಳ ಸಪ್ಪಳವನ್ನು ಕೇಳಿದೆ, ಇನ್ನು ಸುಖದಿಂದ ಸಾಯುವೆನು ಎಂದೆನ್ನುವ ಬಾಜಿ! "ಮೊದಲು ಕೋಂಡಾಣಾ, ಆ ಮೇಲೆ ನನ್ನ ಮಗ ರಾಯಬಾನ ಲಗ್ನ"ವೆಂದು ಹೇಳಿ ಮಗನ ಲಗ್ನ ಬಿಟ್ಟು ಸ್ವಾಮಿಕಾರ್ಯಕ್ಕಾಗಿ ದೇಹ ತೆತ್ತ ನರವೀರಮಣಿ ತಾನಾಜಿ! ಧರ್ಮ ಕ್ಕಾಗಿ ಶರೀರವನ್ನು ಚೂರು ಚೂರು ಮಾಡಿಸಿಕೊಂಡ ಶೌರ್ಯಮೂರ್ತಿ ಆ ಸಂಭಾಜಿ!

"ನಿಮಗೆ ದೇಹಾಂತ ಪ್ರಾಯಶ್ಚಿತ್ತವೇ ಯೋಗ್ಯ" ಎಂದು ರಘೋ ಬಾದಾದಾನಿಗೆ ಹೇಳುವ ನ್ಯಾಯಮೂರ್ತಿ ರಾಮಶಾಸ್ತ್ರಿ!

ಪ್ರಜೆಗಳನ್ನು ಕಾಡುವ ಮಗನನ್ನೇ ತ್ಯಜಿಸುವ ಮಾತೆ ಅಹಲ್ಯಾ ಬಾಯಿ! "ಪರಕೀಯರಿಂದ ನನ್ನ ಮೃತದೇಹವನ್ನು ಕೂಡ ಮುಟ್ಟಗೊಡ ಬೇಡಿರಿ"ಂದು ಹೇಳುವ ರಣರಾಗಿಣಿ ಝಾಂಸಿ ಲಕ್ಷ್ಮೀಬಾಯಿ!

"ನಾನು ಮಾಡಿದ್ದೇ ಯೋಗ್ಯವಿತ್ತು, ನೀವು ಬೇಕಾದರೆ ನನ್ನನ್ನು ಗಲ್ಲಿಗೇರಿಸಬಹುದು" ಎಂದು ಗರ್ಜಿಸುವ ತಾತ್ಯಾ ಟೋಪಿ!

ಹೀಗಿದೆ ಈ ಭಾರತ ಪರಂಪರೆಯು! ಹೀಗಿದೆ ಈ ಭಾರತೀಯ ಧ್ಯೇಯ ಪೂಜೆಯು! ಆಸೇತು ಹಿಮಾಚಲದ ವರೆಗೆ ಭಾರತದ ಮೂಲೆ ಮೂಲೆಗಳಲ್ಲಿ ಇಂಥ ಅಸಂಖ್ಯ ನರನಾರೀ ರತ್ನಗಳು ಹುಟ್ಟಿ ಬಾಳಿ ಬೆಳೆ ದಿವೆ; ಧ್ಯೇಯಕ್ಕಾಗಿ ಮಡಿದಿವೆ. ಇಂದಾದರೂ ನಮ್ಮ ಭಾರತಾಂಬೆಯು ಬಂಜೆಯಾಗಿಲ್ಲ. ಪಾರತಂತ್ರ್ಯದ ಸರ್ವಭಕ್ಷಕವಾದ ಈ ಕಾಲದಲ್ಲಿ ಯಾವಾ ಗಲೂ ನಮ್ಮ ಹೃದಯ ಸಿಂಹಾಸನದಲ್ಲಿ ಕೂಡ್ರಿಸಲು ಯೋಗ್ಯರಾದ ಧ್ಯೇಯನಿಷ್ಠರು ಆಗಿದ್ದಾರೆ, ಆಗುತ್ತಲಿದ್ದಾರೆ.

"ನನ್ನನ್ನು ಗಲ್ಲಿಗೇರಿಸಿದರೂ ಚಿಂತೆಯಿಲ್ಲ. ಬಂಡಾಯ ಹೂಡಿದ ಫಡಕೆಯವರ ವಕೀಲಿ ಸ್ವೀಕರಿಸುವೆನು" ಎಂದು ಅನ್ನುವ ಸ್ವದೇಶೀಯ

ಆದ್ಯ ಆಚಾರ್ಯರಾದ ಸಾರ್ವಜನಿಕ ಕಾಕಾ ! ಮಗು ಪ್ಲೇಗಿನಿಂದ ಬಳಲು ತ್ತಿದ್ದರೂ ಶಾಂತರೀತಿಯಿಂದ ಕೇಸರೀ ಅಗ್ರಲೇಖ ಬರೆಯುತ್ತ ಕೂಡುವ ಲೋಕಮಾನ್ಯರು ! ಎರಡು ತಪಗಳ ವರೆಗೆ ಧ್ಯಾನಸ್ಥರಾದ ಅರವಿಂದರು ! "ಸರಕಾರೀ ಧೋರಣಕ್ಕನುಸರಿಸಿ ನಿಮ್ಮ ದಿನಪತ್ರಿಕೆಯನ್ನು ನಡಿಸಿರಿ, ಅಂದರೆ ನಿಮಗೆ ಸಹಾಯ ನೀಡುವೆವು'' ಎಂದು ಬಂಗಾಲ ಗವ್ಹರ್ನರರು ಹೇಳಿದಾಗ, "ದೇಶದಲ್ಲಿ ಒಬ್ಬನಾದರೂ ಪ್ರಾಮಾಣಿಕ ಸಂಪಾದಕನು ಬೇಡವೇ?'' ಎಂದು ನುಡಿದು ಹೊರಟುಹೋಗುವ ಅಮೃತ ಬಝಾರ ಪತ್ರಿಕೆಯ ಆದ್ಯ ಸಂಪಾದಕರಾದ ಶಿಶಿರಕುಮಾರ ಘೋಷ !

ನಾಗಪೂರ ಕಾಂಗ್ರೆಸ್ಸು ನಡೆದಾಗ ಅಸಹಕಾರದ ಸೂಚನೆಯನ್ನು ಚಿತ್ತರಂಜನದಾಸರು ಮಂಡಿಸಿದರು. ಆಗ "ಏನಿದು, ನೀವಿನ್ನೂ ವಕೀಲಿ ಕೆಲಸ ನಡಿಸುತ್ತಿರುವಿರಲ್ಲ'' ಎಂಬ ಕೂಗು ಸಭೆಯಲ್ಲಿ ಕೇಳಬಂತು. ಆ ಕ್ಷಣಕ್ಕೆ "ಚಿತ್ತರಂಜನನು ಆಡಿದಂತೆ ಮಾಡುತ್ತಾನೆ'' ಎಂದು ಗರ್ಜಿಸಿ ಮರುದಿನವೇ ಸರ್ವಸ್ವ ತ್ಯಾಗಮಾಡಿದ ಆ ದೇಶಬಂಧು ದಾಸರು !

ಮನದೊಳಗೆ ವಿಷಯವಾಸನೆ ಮೂಡಿದೊಡನೆ ರೊಚ್ಚಿಗೆದ್ದು ಕಾದ ಹಂಚಿನ ಮೇಲೆ ಕುಳಿತ ವಿವೇಕಾನಂದರು ! ತಾಯಿ ಕರೆಸಿದ್ದಾಳೆ, ಮೇಲಧಿಕಾರಿಯಾದ ಸಾಹೇಬರು ರಜೆ ಕೊಡಲಿಲ್ಲ. ಕೂಡಲೇ ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟು, ದಾರಿಯಲ್ಲಿ ನದಿಗೆ ಪ್ರಚಂಡ ನೆರೆ ಬಂದಿದ್ದರೂ ಅಂಜದೇ, ಈಸಿ ತಾಯಿಯ ದರ್ಶನಕ್ಕಾಗಿ ಧಾವಿಸಿದ ಪಂಡಿತ ಈಶ್ವರ ಚಂದ್ರ ವಿದ್ಯಾಸಾಗರ ! "ಈಗ ಇಪ್ಪತ್ತು ವರುಷಗಳ ವರೆಗೆ ನನ್ನ ಪತ್ನಿಯ ಕಡೆಗೆ ತಾಯಿಯಂತೆ ನೋಡುತ್ತಿರುವೆ" ಎಂದು ಸಿಲೋನದಲ್ಲಿ ಸಾರಿ ಹೇಳಿದ ಮಹಾತ್ಮಾಜಿ ! "ಚಲಾವ್ ತೇರಿ ಗೋಲಿ'' ಎಂದು ಗುಂಡಿಗೆ ಎದೆ ಆನಿಸಿನಿಂತ ಸ್ವಾಮಿ ಶ್ರದ್ಧಾನಂದ ! "ಗಾಂಧೀ ಟೊಪ್ಪಿಗೆ ತೆಗೆ, ಇಲ್ಲದಿದ್ದರೆ ನೋಡಿದು'' ಎಂದು ಎದೆಯಮೇಲೆ ಪಿಸ್ತೂಲ ಇಟ್ಟರೂ ಅವಿಚಲನಾಗಿ ನಿಂತ ಸೊಲ್ಲಾಪುರದ ತುಲಸೀರಾಮ ಜಾಧವ ! ಪರದೇಶಿ ಬಟ್ಟೆಯ ಮೋಟರಿನ ಕೆಳಗೆ ಸಿಕ್ಕು ಮಡಿದ ವೀರ ಬಾಬೂಗೇನು! ಗೀತೆಯ ನೆನಪಾದೊಡನೆ, ರಾಮನಾಮ ಕೇಳಿದೊಡನೆಯೇ, ಭಕ್ತಿಯ ಉತ್ಕಟ ಭಾವನೆಯಿಂದ ತನು ಪುಲಕಿತವಾಗಿ ಕಣ್ಣೊಳಗಿಂದ ಅಶ್ರುಧಾರೆಗಳು ಸುರಿಯುತ್ತವೆಯಲ್ಲ ! ಅಂತಹ ಭಕ್ತಿ, ಜ್ಞಾನ, ಕರ್ಮಗಳ ಮೂರ್ತಿಯಾದ ವರ್ಧಾ ಆಶ್ರಮವಾಸಿಯಾದ ವಿನೋಬಾಜೀ ಭಾವೆ ! "ಜಗತ್ತಿನಲ್ಲಿ ಯಾವ

ಶಕ್ತಿಯು ನನ್ನ ಮೋಟರಿನ ಮೇಲಿರುವ ರಾಷ್ಟ್ರೀಯಬಾವುಟವನ್ನು ತೆಗೆಯುತ್ತದೆ ನೋಡುವಾ” ಎಂದು ಗರ್ಜಿಸುವ ನಿರ್ಭಯಮೂರ್ತಿ ಜವಾಹರಲಾಲ !

ಇನ್ನೂ ನಮ್ಮ ಕಿವಿಗಳಿಗೆ ಬೀಳದ, ಕಾಣದ, ವೀರಮೂರ್ತಿಗಳು ಭಾರತದ ಮೂಲೆ ಮೂಲೆಗಳಲ್ಲಿ ತುಂಬಿರುತ್ತಾರೆ. ಭಾರತೀಯ ಸಂಸ್ಕೃತಿ ಇನ್ನೂ ಸತ್ತಿರುವದಿಲ್ಲ.

ಸ್ವಾತಂತ್ರ್ಯ, ಪಾರತಂತ್ರ್ಯಗಳೆರಡೂ ತೆರೆಗಳು. ಒಂದೊಂದು ಸಲ ಈ ತೆರೆಗಳ ನಡುವೆ ಸೋಲುಗೆಲವುಗಳುಂಟು. ಆದರೂ ರಾಷ್ಟ್ರದ ಉಜ್ವಲ ಚಾರಿತ್ರ್ಯವು ಅಳಿಯಬಾರದು. ಪೂರ್ವಜರು ಗಳಿಸಿದ ಈ ಚಾರಿತ್ರ್ಯ ಧನವನ್ನು ನಾವೆಂದಿಗೂ ಕಳೆದುಕೊಳ್ಳಬಾರದು. ಈ ಪರಂಪರೆಯನ್ನು ಇನ್ನಿಷ್ಟು ಉಜ್ವಲಗೊಳಿಸಲು ಹೆಣಗಬೇಕು. ಎಲ್ಲಿಯ ವರೆಗೆ ನಮ್ಮ ಬಾಳಿನಲ್ಲಿ ಈ ಚಾರಿತ್ರ್ಯವನ್ನು ಉಳಿಸಲು ಯತ್ನಿಸುವೆವೊ ಅಲ್ಲಿಯ ವರೆಗೆ ನಮ್ಮೀ ಭಾರತವು ಜೀವಂತವಿದೆ. ಈ ಚಾರಿತ್ರ್ಯವು ಬೆಳೆಯುವ ವರೆಗೆ, ಬಾಳುವ ವರೆಗೆ ನಮ್ಮೀ ಭಾರತೀಯ ಸಂಸ್ಕೃತಿಯು ಜೀವಂತವಿರುವದು.

---

# ೧೯. ಅವತಾರ ಕಲ್ಪನೆ

ವೇದಗಳ ಅಪೌರುಷೇಯವಾದ, ಮತ್ತು ಅವತಾರವಾದಗಳೆರಡೂ ನಮ್ಮೀ ಭಾರತೀಯರ ಅಧಃಪತನಕ್ಕೆ ಕಾರಣಗಳೆಂದು ಇತ್ತೀಚೆಗೆ ಹೇಳಲಾಗುತ್ತಿದೆ. ವೇದಗಳ ಅಪೌರುಷೇಯವಾದವನ್ನಂತೂ ಈಗ ಯಾರೂ ಮನ್ನಿಸುವದಿಲ್ಲ. ವೇದಗಳು ಮಾನವರಿಂದ ರಚಿಸಲ್ಪಡದೆ ಕೇವಲ ಆಕಾಶದಿಂದ ಬಿದ್ದವೆಂದು ಹೇಳಿದರೆ, ಈ ಇಪ್ಪತ್ತನೇ ಶತಮಾನದಲ್ಲಿಯಂತೂ ಯಾರೂ ಈ ಮಾತನ್ನು ಒಪ್ಪುವದಿಲ್ಲ. “ಇಂದು ನಾನು ಹೊಸ ಸ್ತೋತ್ರವನ್ನು ರಚಿಸಿದ್ದೇನೆ” ಎಂಬ ಉದ್ಗಾರಗಳನ್ನು ನಾವು ವೇದಗಳಲ್ಲಿ ಅಲ್ಲಲ್ಲಿ ಕಾಣಬಹುದು. ವೇದಗಳೆಂದರೆ, ಜ್ಞಾನ, ವಿಚಾರ, ಅನುಭವಗಳ ಸಂಪತ್ಸಮೂಹವೆಂದೇ ನಾವು ತಿಳಿದುಕೊಳ್ಳಬೇಕು. ವೇದಗಳ ಆಧಾರಗಳಮೇಲೆ ನಿಂತ ಧರ್ಮವೆಂದರೆ, ಜ್ಞಾನ ಅನುಭವಗಳ ಅಡಿಗಲ್ಲಿನ ಮೇಲೆ ನಿಂತ ಧರ್ಮ. ಜ್ಞಾನ ಅನುಭವಗಳು ಬೆಳೆ ಬೆಳೆದಂತೆ

ಅವತಾರವು ಬೇಕು. ಆ ಅವತಾರವು ಆಗಿಯೇ ತೀರುತ್ತದೆ. ಅವತಾರವು ಸಾಮಾಜಿಕ ಅವಶ್ಯಕತೆಯು. ಅವತಾರವು ಅಕಸ್ಮಾತ್ತಾಗಿ ಆಗುವದಿಲ್ಲ, ಆಗಿಲ್ಲ. ಅದು ಧೂಮಕೇತುವಿನಂತೆ ಎಲ್ಲಿಯಾದರೂ ಒಮ್ಮೆಲೆ ಮೂಡುವ ದಿಲ್ಲ. ಲಕ್ಷಾವಧಿ ಜನಗಳ ಅಸ್ಪಷ್ಟ ಪ್ರಯತ್ನಗಳಿಗೆ ಸ್ಪಷ್ಟ ಧ್ಯೇಯವನ್ನು ತೋರುವದಕ್ಕಾಗಿ ಅವತಾರವು ಸೃಷ್ಟಿಯ ನಿಯಮದಂತೆ ಆಗುತ್ತದೆ.

ಅತ್ತಿತ್ತ ಹರಿದಾಡುವ ಅಣುರೇಣುಗಳು ಸ್ಥಿರವಾಗುವಂತೆ, ಅತ್ತಿತ್ತ ಓಡಾಡುವ ಸಾಮಾನ್ಯ ಜೀವಗಳು, ಸ್ಪಷ್ಟವಾದ ಧ್ಯೇಯವನ್ನು ತೋರುವ ಅವತಾರಪುರುಷನ ಸುತ್ತು ಕೂಡಿಬಿಡುವವು. ಕಬ್ಬಿಣದ ಕಣಗಳು ಲೋಹ ಚುಂಬಕದ ಸುತ್ತು ಬಂದು ನಿಲ್ಲುತ್ತವೆ. ಗ್ರಹಗಳೆಲ್ಲವು ಸೂರ್ಯನ ಸುತ್ತು ತಿರುಗುತ್ತವೆ. ಅದರಂತೆ ಸಾಹಸಪಡುವ, ಹೆಣಗಾಡುವ, ಜೀವಗಳು ಧ್ಯೆಯವನ್ನು ತೋರುವ ಮಹಾಪುರುಷನ ಸುತ್ತ ಕೂಡುವವು.

ಶ್ರೀ ರಾಮಚಂದ್ರನು ಜನ್ಮವೆತ್ತುವ ಮೊದಲು ವಾನರರೆಲ್ಲರೂ ತಪಿ ಸುತ್ತಿದ್ದರು, ಸಾಹಸಪಡುತ್ತಿದ್ದರು. ಅವರ ಆ ಸಾಹಸದಲ್ಲಿ, ಆ ತಪದಲ್ಲಿ ರಾಮ ಜನ್ಮದ ಬೀಜವಿದೆ. ಗೋಕುಲದ ಗೋಪಾಲಕರ ಕಳಕಳಿಯಲ್ಲಿ, ಅವರ ಪ್ರಯತ್ನದ ಶಕ್ತಿಯಲ್ಲಿ ಶ್ರೀ ಕೃಷ್ಣ ಜನನದ ರಹಸ್ಯವನ್ನು ಕಾಣು ವೆವು. ಆ ಗೋಪಾಲಕರೆಲ್ಲರ ಕೈಗಳಲ್ಲಿ ಕೋಲುಗಳಿದ್ದವು. ಆ ಕೋಲುಗಳ ಶಕ್ತಿಯನ್ನೆಲ್ಲಾ ಕೇಂದ್ರೀಕರಿಸುವದಕ್ಕೇನೇ ಶ್ರೀ ಕೃಷ್ಣನ ಅವತಾರದ ಆವಶ್ಯಕತೆ ಇತ್ತು. ಗೋವರ್ಧನ ಪರ್ವತವನ್ನು ಎತ್ತುವ ಪ್ರಸಂಗದಲ್ಲಿ ಕೃಷ್ಣನು ಎಲ್ಲ ಗೋಪಾಲಕರನ್ನು ಒಂದೆಡೆಗೆ ಕರೆಯುತ್ತಾನೆ. "ಬನ್ನಿ, ಎಲ್ಲರೂ ಒಂದೆಡೆ ಬನ್ನಿ, ಇಂದ್ರನ ಜಲುಮೆಯನ್ನು ದೂರ ಮಾಡುವದದೆ ಯಲ್ಲವೇ ನಿಮಗೆ ? ಏಳಿ, ಎಲ್ಲರೂ ಕೂಡಿ ಈ ಗೋವರ್ಧನವನ್ನೇ ಎತ್ತುವಾ. ಒಂದೇ ಧ್ಯೇಯಕ್ಕಾಗಿ ಎಲ್ಲರೂ ಒಂದಾಗಿ ಏಳಿ, ನಿಮ್ಮ ಕೋಲುಗಳ ಆಧಾರವನ್ನು ಕೊಡಿರಿ'' ಎಂದು ಶ್ರೀ ಕೃಷ್ಣ ಹೇಳಿದನು. ಗೋಪಾಲರೆಲ್ಲರೂ ಕೋಲಿನಿಂದ ಗೋವರ್ಧನವನ್ನೆತ್ತಿದರು. ಶ್ರೀ ಕೃಷ್ಣನು ಮಾಡಿದ್ದೇನು ? ಕೇವಲ ಅಂಗುಲಿ ತೋರಿಸಿದನು. ಪರ್ವತಕ್ಕೆ ಕೋಲುಗಳ ಆಧಾರ ಕೊಡಲು ಸರಿಯಾದ ದಿಗ್ದರ್ಶನ ಮಾಡಿದನು. ಅವತಾರೀ ಪುರು ಷರು ಜನರ ಸುಪ್ತಶಕ್ತಿಗೆ ಚೇತನಕೊಟ್ಟು ನಿಜವಾದ ಮಾರ್ಗ ತೋರಿಸು ತ್ತಾರೆ. ಶಕ್ತಿ ಯಾವಾಗಲೂ ಜನರದೇ ಇರುತ್ತದೆ. ಆ ಶಕ್ತಿಯನ್ನು ಕೇಂದ್ರೀ ಕರಿಸುವ ಕೆಲಸವನ್ನು ಅವತಾರೀ ಪುರುಷರು ಮಾಡುತ್ತಾರೆ. ಅತ್ತಿತ್ತ

ಹರಿದುಹಂಚಿಹೋದ ಶಕ್ತಿಗೆ ವ್ಯವಸ್ಥಿತ ರೂಪುಕೊಟ್ಟರೆ, ಅದೇ ವಿಭಕ್ತತೆ ಯಿಂದ ಕುಂದಿಹೋದ ಶಕ್ತಿಯು ಒಂದೆಡೆಗೆ ಕೂಡಿ ಅಮೋಘವಾಗುತ್ತದೆ, ತೇಜಸ್ವಿಯಾಗುತ್ತದೆ, ಅಜೇಯವಾಗುತ್ತದೆ, ಬಂದ ಎಲ್ಲ ಸಂಕಟಗಳನ್ನು ನುಚ್ಚುನೂರು ಮಾಡುತ್ತದೆ.

ವಿದ್ಯಾರಣ್ಯರು, ಶಿವಛತ್ರಪತಿ ಇವರೆಲ್ಲರು ಜನರ ಶಕ್ತಿಯನ್ನು ಧ್ಯೇಯಕ್ಕಾಗಿ ಕ್ರೋಢೀಕರಿಸಿ ದಾರಿತೋರಿದ ಅವತಾರಿ ಪುರುಷರು. ಬಲವಾನ್ ಮೂರುತಿಯೊಂದು ಕಣ್ಣೆದುರು ನಿಂತೊಡನೆಯೇ ಜನಸಾಮಾನ್ಯರೆಲ್ಲರೂ ಅವನ ಸುತ್ತು ನೆರೆಯುತ್ತಾರೆ ಆ ವ್ಯಕ್ತಿಯ ಸಂದೇಶವನ್ನು ಬೀರಲು, ಆತನ ಆದೇಶವನ್ನು ಪಾಲಿಸಲು, ಮುಂದುವರಿಯುತ್ತಾರೆ. ಧ್ಯೇಯದಲ್ಲಿ ಅಚಲ ದೃಷ್ಟಿಯನ್ನಿಟ್ಟು ಸ್ಥಿರನಾಗಿ ನಿಂತಕೊಳ್ಳುವ ವಿಭೂತಿಯೆಂದರೇನೇ ಅವತಾರ. ನಾವೆಲ್ಲರೂ ಧ್ಯೇಯಪೂಜಕರು. ಆದರೆ ನಮ್ಮ ಮೇಲೆ ಬೇಕಾದಂಥ ಪ್ರಸಂಗ ಬರಲಿ, ಆಕಾಶವೇ ಕಡಿದುಕೊಂಡು ಬೀಳಲಿ, ಭೂ ನುಂಗಲಿ, ನನ್ನ ಧ್ಯೇಯದಿಂದ ವಿಚಲನಾಗುವದಿಲ್ಲವೆಂಬ ದೃಢನಿಶ್ಚಯವು ನಮ್ಮಲ್ಲಿರುವದಿಲ್ಲ. ನಾವು ಮೋಹದ ಬಲೆಯಲ್ಲಿ ಸಿಕ್ಕಿ ಬಿದ್ದಿರುತ್ತೇವೆ, ಸ್ವಾರ್ಥ ಸುಖವನ್ನು ಒಂಬಾಲಿಸುತ್ತೇವೆ, ಕಷ್ಟನಷ್ಟಗಳಿಗೆ ಬೇಸರಿಯುತ್ತೇವೆ, ಯಾರನ್ನೂ ಬಿಡದ ಈ ಮರಣಕ್ಕಾಗಿ ಅಂಜಿ ಹಿಂಜರಿಯುತ್ತೇವೆ. ಧ್ಯೇಯಕ್ಕಾಗಿ ಹೆಣಗಾಡುವದೇನೋ ನಿಜ, ಆದರೆ ಈ ಸಾಹಸವು ಎಂದು, ಎಲ್ಲಿ, ನಿಲ್ಲುವದೆಂಬುದನ್ನು ಹೇಳಲು ಬರುವಂತಿಲ್ಲ.

ಚಂಚಲ ಹೃದಯದ ಜನಸಾಮಾನ್ಯರ ಧ್ಯೇಯಶ್ರದ್ಧೆಯನ್ನು ಮಹಾಪುರುಷನು ಸ್ಥಿರಗೊಳಿಸುತ್ತಾನೆ. ಇಂಥ ಮಹಾಪುರುಷರ ಸಾಮರ್ಥ್ಯ ಪರೀಕ್ಷೆಯನ್ನು ಜಗತ್ತು ಮಾಡುತ್ತದೆ. ಸಾಕ್ರೆಟೀಸನ ಪರೀಕ್ಷೆಯಾಯಿತು. ಏಸುಕ್ರಿಸ್ತನ ಪರೀಕ್ಷೆಯಾಯಿತು. ಇಂಥ ಮಹಾಪುರುಷರು ಎಂತಹ ಅಗ್ನಿ ಪರೀಕ್ಷೆಯಲ್ಲಿಯೂ ಅವಿಚಲರಾಗಿ ನಿಲ್ಲುತ್ತಾರೆ. ಜಗತ್ತಿನಲ್ಲಿಯ ಶ್ರದ್ಧೆಯನ್ನೆಲ್ಲ ಒಂದೆಡೆ ಹೀರಿ, ಅಲ್ಲಲ್ಲಿ ನಡೆದ ವಿರಲ ಪ್ರಯತ್ನಗಳಿಗೆ ಅವಿಚಲತೆಯನ್ನು ತಂದು, ತಮ್ಮ ದಿವ್ಯ, ಭವ್ಯ, ಧೈರ್ಯದಿಂದ ಆತ್ಮತ್ಯಾಗದಿಂದ ಯೋಗ್ಯವಾದ ದಾರಿ ತೋರಿಸುತ್ತಾರೆ.

ಮಹಾತ್ಮಾಜಿಯವರ ಬೆಂಬಲವಾಗಿ ಕೋಟ್ಯವಧಿ ಹಿಂದೀ ಜನತೆಯು ನಿಲ್ಲುವ ಕಾರಣವಾದರೂ ಇದೇ. ಕೋಟ್ಯವಧಿ ಹಿಂದೀಯರು ಇಲ್ಲಿಯವರೆಗೆ ಸ್ವಾತಂತ್ರ್ಯಕ್ಕಾಗಿ ಮಾಡಿದ ಹಲವಾರು ಚಿಕ್ಕ ಚಿಕ್ಕ ಪ್ರಯತ್ನಗಳ

ಲ್ಲಿಯೇ ಅವರ ಜನ್ಮದ ರಹಸ್ಯವಿದೆ. ಭಾರತೀಯರೆಲ್ಲೂ ಈ ಮಹಾ ಪುರುಷನ ಹೃದಯದಲ್ಲಿ ತಮ್ಮವೇ ಆದ ಆಶೆ ಆಕಾಂಕ್ಷೆಗಳ, ಧ್ಯೇಯಗಳ, ಪೂರ್ಣತೆಯನ್ನು ಕಾಣುತ್ತಾರೆ. ತಮ್ಮ ಹೃದಯಗಳಲ್ಲಿ ನೆಲೆಗೊಂಡ ಧ್ಯೇಯಗಳೇ ಮಹಾತ್ಮರಲ್ಲಿ ಪ್ರಖರ ಮತ್ತು ಉತ್ಕಟ ರೂಪದಲ್ಲಿ ಪ್ರಕಟ ವಾಗುತ್ತಿವೆ. ಅಂತೆಯೇ ಭಾರತೀಯರಿಗೆ ಮಹಾತ್ಮಾ ಗಾಂಧೀಜಿಯವರು ಅವತಾರ ಪುರುಷರಂತೆ ತೋರುತ್ತಾರೆ.

ಅವತಾರವೆಂದರೇನು? ಅವತಾರವೆಂದರೆ ನಿಷ್ಠೆಯಿಂದ ಪ್ರಯತ್ನ ಮಾಡುವದು. ಚಿಕ್ಕದಾದ ಪ್ರಯತ್ನದಲ್ಲಿ ಚಿಕ್ಕ ಅವತಾರವಾಗಬಹುದು. ದೊಡ್ಡದಾದ ಪ್ರಯತ್ನದಲ್ಲಿ ದೊಡ್ಡ ಅವತಾರವಾಗಬಹುದು. ಏಕನಿಷ್ಠೆಯ ಪ್ರಯತ್ನದ ವಿಶಾಲತೆಯೇ ಅವತಾರದ ವಿಶಾಲತೆಯನ್ನು ಹೆಚ್ಚಿಸುತ್ತದೆ. ಶ್ರೀ ರಾಮಚಂದ್ರನ ಅವತಾರಶಕ್ತಿ ಆತನ ಸತ್ಯವಚನಗಳ ಹಿರಿಮೆಗೆ, ಆತನ ಭಕ್ತರಾದ ಆ ವಾನರರ ಪ್ರಯತ್ನಗಳೇ ಕಾರಣವಲ್ಲವೇ? ಹಿಂದಕ್ಕೆ ಮಹಾತ್ಮರು ಇಂಗ್ಲಂಡಿಗೆ ಹೊರಟಾಗ ಭಾರತೀಯರ ಪ್ರಶ್ನೆಗೆ, "ಅಲ್ಲಿಂದ ನಾನು ತರುವದಾದರೂ ಏನು? ತರುವವನು ನಾನ್ಯಾರು? ನೀವು ಕೊಟ್ಟುದನ್ನೇ ನಾನು ತರುವವನು. ನಾನೇಂದರೇನು? ನಿಮ್ಮಗಳೆಲ್ಲರ ಶಕ್ತಿ" ಅಂದರಂತೆ. ಮಹಾಪುರುಷರ ಶಕ್ತಿಯು ಬಹುಜನ ಸಮಾಜದ ಶಕ್ತಿಯಿಂದ ಮರ್ಯಾದಿತವಾಗಿರುತ್ತದೆ. ಎಷ್ಟರಮಟ್ಟಿಗೆ ಬಹುಜನ ಸಮಾಜವು ಹೆಣಗುತ್ತದೆ, ಕಷ್ಟಪಡುತ್ತದೆ, ಅಷ್ಟರಮಟ್ಟಿಗೆ ಅವತಾರ ಪುರುಷರ ಬೆಳಕು ಬೀರುವದು.

ನಿಮಗೆ ಅವತಾರ ಬೇಕಾಗಿದೆಯೇ? ಭಾರತೀಯ ಸಂಸ್ಕೃತಿಯು ಅದನ್ನು ನಿಮಗೆ ಸಾರಿ ಹೇಳುತ್ತದೆ. "ನಿಮ್ಮಲ್ಲಿದ್ದ ಶಕ್ತಿ ಸರ್ವಸ್ವವನ್ನು ಧ್ಯೇಯ ಸಾಧನೆಯಲ್ಲಿಯೇ ಉಪಯೋಗಿಸಿರಿ. ಸ್ತ್ರೀಯರು, ಪುರುಷರು, ಹಿರಿ-ಕಿರಿಯರು, ರಾಯರು-ರೈತರು, ಧನಿಕರು—ದರಿದ್ರರು ಎಂಬ ಭೇದ ಭಾವನೆಗೆ ಎಡೆಗೊಡದೆ, ಉಚ್ಚನೀಚ ಭಾವನೆಗಳನ್ನು ಮರೆತು ಸತತ ಪ್ರಯತ್ನ ಮಾಡಿರಿ. ಹೃದಯದಲ್ಲಿ ಕಳಕಳಿಯಿರಲಿ, ಸದ್ಭಾವನೆಗಳು ಉಕ್ಕೇರಲಿ." ಕೋಟ್ಯವಧಿ ಜನರ ಹೃತ್ಪೂರ್ವಕ ಚಟುವಟಿಕೆಗಳಲ್ಲಿಯೇ ಮಹಾಪುರುಷನೊಬ್ಬನು ಪ್ರಕಟವಾಗುವನು. ಆಗ ಅವರ ಪ್ರಯತ್ನಕ್ಕೆ ತಕ್ಕ ಫಲ ದೊರೆತೇ ತೀರುವದು.

"ಮಹಾಪುರುಷನೆಂದರೆ ತೆರೆಯಮೇಲಿನ ನೊರೆ" ಎಂದು ಅಮೇ

ರಿಕೆಯ ಸುಪ್ರಸಿದ್ಧ ಗ್ರಂಥಕರ್ತನಾದ ಇಮರ್ಸನ್‌ನು ಅಂದಿದ್ದಾನೆ. ಎಷ್ಟು ಅಂದವಾದ ಉಪಮೆ ! ಅನಂತವಾದ ಈ ಸಾಗರದಲ್ಲಿ ಒಂದೆಡೆಗೆ ಹುಟ್ಟಿ ಏಳುತ್ತ, ಬೀಳುತ್ತ, ಉನ್ನತವಾಗಿ ಏರುತ್ತ ಬರುತ್ತಿರುವ ಆ ಮಹಾತೆರೆಯ ತಲೆಯಮೇಲೆ ನಿರ್ಮಲವಾದ ಧವಳನೊರೆಯು ಕಾಣ ಬರುತ್ತದೆ. ನೊರೆಯೆಂದರೆ, ಉನ್ನತವಾದ ಆ ತೆರೆಯೊಳಗಿಂದ ಉಕ್ಕಿ ಹೊರಸೂಸುವ ನಿರ್ಮಲ ಅಂತರಂಗವು. ಅದರಂತೆ ಸಮಾಜದಲ್ಲಿ ಎಷ್ಟೋ ವರುಷಗಳಿಂದ ಉನ್ನತ ಆಶಯಕ್ಕಾಗಿ ನಡೆದು ಬರುತ್ತಿರುವ ಚಟುವಟಿಕೆ, ಪ್ರಯತ್ನ; ಆ ಪ್ರಯತ್ನಗಳಲ್ಲಿ ಸಮಾಜದ ಹೆಜ್ಜೆ ಮುಂದೆ, ಮುಂದೆ ಬೀಳುತ್ತ, ಅದರಲ್ಲಿ ತೋರಿಬರುತ್ತಿರುವ ಚೈತನ್ಯವೇ ಬೆಳೆ ಬೆಳೆದು ಒಂದು ಮಹಾಪ್ರಚಂಡ ತೆರೆಯ ರೂಪ ತಾಳುತ್ತದೆ. ಆ ಪ್ರಚಂಡ ತೆರೆಯ ಮೇಲೆ ಧವಲ ನೊರೆಯಂತೆ ಆಯಾ ಕಾಲದ ಮಹಾಪುರುಷನು ತಲೆದೋರುತ್ತಾನೆ ! ಆ ತೆರೆಯೊಳಗಿನ ತಿಳಿಯೆಂದರೇನೆ ಆ ಮಹಾಪುರುಷನು! ಅವತಾರವೆಂದರೂ ಅದೇ ! ಎಡೆಬಿಡದೆ ನಡೆದ ಜನತೆಯ ಆಂದೋಲನದಲ್ಲಿಯ ನ್ಯೂನತೆಗಳೆಂಬ ಹೊಲಸು ತನ್ನಿಂದ ತಾನೇ ಸರಿದು ಸ್ವಚ್ಛವಾಗಿ ಮನೋಹರವಾಗಿ, ಎದ್ದುನಿಲ್ಲುವ ರೂಪವೆಂದರೇನೇ ಅವತಾರವು ! ಅದೇ ಅಖಂಡ ಸಮಾಜ ಪ್ರಯತ್ನದ ತೀವ್ರತೆ ! ಅದೇ ಮಾನವ ಸಮಾಜದ ಪವಿತ್ರ ಮಾಂಗಲ್ಯ ! ಅದೇ ನಿರ್ದೋಷವಾದ ವಿಶಾಲತೆ ! ಇದೆಲ್ಲವನ್ನೂ ಜಗತ್ತು ಆ ಅವತಾರ ಪುರುಷನ ಮುಖಾಂತರವೆ ಕಾಣಬೇಕಲ್ಲವೇ? ಮಾನವ ಪ್ರಯತ್ನದಲ್ಲಿ ಜನ್ಮವೆತ್ತ ಸುಂದರ ಅಪತ್ಯವೆಂದರೆ ಈ ಮಹಾ ವಿಭೂತಿಯು !

ಸತ್ಪುತ್ರರು ಸತ್ಕುಲದಲ್ಲಿಯೇ ಹುಟ್ಟುವರೆಂಬ ಮಾತಿನ ನಿಜವಾದ ಅರ್ಥವಾದರೂ ಇದೇ ! ಸದಂಕುರಗಳು ತಪಸ್ಸಿನ ಉದರದಲ್ಲಿಯೇ ಮೂಡುವವು. ಯಾವ ಸಮಾಜದಲ್ಲಿ ತಪಸ್ಸು ಇದೆ? ಕಳಕಳಿ ಇದೆ ? ಸಂತತ ಹೋರಾಟವಿದೆ ? ಧ್ಯೇಯವನ್ನು ಕಾಣುವ ತೀವ್ರತೆ ಇದೆ ? ಅಂಥ ಸಮಾಜದಲ್ಲಿಯೇ ಮಹಾಪುರುಷರ ಉಗಮವು. ಭಗವಾನ್ ಬುದ್ಧನು ಜನ್ಮವೆತ್ತುವ ಮೊದಲು ನಮ್ಮೀ ಭಾರತವರ್ಷದಲ್ಲಿ ಒಂದು ಪ್ರಚಂಡ ವಿಚಾರ ಕ್ರಾಂತಿಯು ನಡೆದಿತ್ತು. ಅಖಂಡವಾಗಿ ಸತ್ಯದ ಶೋಧ ನಡೆದೇ ಇತ್ತು. ಆ ಸತ್ಯಶೋಧಕ್ಕಾಗಿ ಅಲ್ಲಲ್ಲಿ ಅನೇಕ ಅಭ್ಯಾಸಕೂಟಗಳು ಸತತ ಕೆಲಸ ನಡೆಸಿದ್ದವು. ಅಂತಹ ಪ್ರಚಂಡವಾದ ವಿಚಾರ ಕ್ರಾಂತಿಯು

ಕಾಲದಲ್ಲಿ ಭಗವಾನ್ ಬುದ್ಧನು ಅವತರಿಸಿ ತಪ್ತಹೃದಯದ ಆಗಿನ ಆ ಸಮಾಜಕ್ಕೆ ಅನಂತ ಸಮಾಧಾನವನ್ನು ನೀಡಿದನು. ಆಗಿನ ವಿಚಾರ ಕ್ರಾಂತಿಯ ಮಹಾತೆರೆಯ ನೊರೆಯೆಂದರೆ ಭಗವಾನ್ ಬುದ್ಧದೇವನು.

ಮಾನವರ ಅನಂತ ಪ್ರಯತ್ನಗಳಿಗೆ ಮಾರ್ಗವನ್ನು ಕಲ್ಪಿಸಿ ಅವುಗಳಿಗೆಲ್ಲ ಸರಿಯಾದ ಒಂದು ಅರ್ಥವನ್ನು ತಿಳಿಸುವ ಮಹಾಪುರುಷನನ್ನು ಕಂಡೊಡನೆಯೇ, ನಮ್ಮ ಹೃದಯವು ಉಕ್ಕೇರಿಬರುತ್ತದೆ. ಒಂಬತ್ತು ತಿಂಗಳು ತನ್ನ ಹೊಟ್ಟೆಯಲ್ಲಿ ಹೊತ್ತು, ಹೆರಿಗೆಯ ವೇದನೆಗಳನ್ನೆಲ್ಲ ಸಹಿಸಿ, ಹೆರಿಗೆಯಾದೊಡನೆ ಆ ಮಗುವಿನ ಮುಖ ನೋಡಿ ತಾಯಿಯ ಪ್ರೇಮವು ಹೃದಯದಲ್ಲಿ ಉಕ್ಕೇರಿಬರುವಂತೆ, ಮಹಾಪುರುಷನನ್ನು ಕಂಡೊಡನೆ ಮಾನವ ಹೃದಯವು ಪ್ರೇಮಭರದಿಂದ ಉಕ್ಕುತ್ತದೆ! ಈ ಮಹಾ ಮಾನವ ಸಮಾಜವು ಆ ಮಹಾಪುರುಷನ ಜನನಿಯಂತೆ. ಅಂತೆಯೇ ಅಂತಹನ ನಾಮೋಚ್ಚಾರ ಮಾತ್ರದಿಂದಲೇನೇ ಸಮಾಜಕ್ಕೆ ಸ್ಫೂರ್ತಿ ಬರುತ್ತದೆ.

ನಾಮಸ್ಮರಣೆಯಲ್ಲಿ ಏನು ಅರ್ಥವಿದೆ ಎಂದು ನಾವು ಸಹಜ ಅಂದು ಬಿಡುತ್ತೇವೆ. ಹಾಗಲ್ಲ, ಆ ನಾಮಜಪದಲ್ಲಿಯೂ ಅರ್ಥವಿದೆ. ಈಗಿನ ಆಂದೋಲನದಲ್ಲಿಯೇ ನಾವು ಅದನ್ನು ಪ್ರತ್ಯಕ್ಷ ಕಂಡಿದ್ದೇವೆ. 'ವಂದೇ ಮಾತರಂ' ಮಂತ್ರವನ್ನು ಜಪಿಸುತ್ತಲೇನೆ ಚಿಕ್ಕ ಚಿಕ್ಕ ಬಾಲಕರೂ ಕೂಡ ಯಾತನಾಮಯವಾದ ಬೆತ್ತದ ಏಟುಗಳನ್ನು (ಫಟಕಿ ಶಿಕ್ಷೆ) ಸಹ ಆನಂದ ದಿಂದ ಸಹಿಸಲಿಲ್ಲವೇ? "ಭಾರತಮಾತಾಕೀ ಜಯ" ಎಂಬ ನಾಮವನ್ನು ಕೂಗುತ್ತ ಎಷ್ಟು ಜನ ಹುತಾತ್ಮರು ಮರಣಪಾಶವನ್ನು ಅಪ್ಪಿಕೊಳ್ಳಲಿಲ್ಲ? "ಮಹಾತ್ಮಾ ಗಾಂಧೀಕಿ ಜಯ" ಎಂಬ ಕೂಗನ್ನು ಕೂಗುತ್ತ ಎಷ್ಟು ಜನ ಸ್ತ್ರೀಯರೂ ಸಹ ಲಾಠೀಪ್ರಹಾರವನ್ನು ಸಹಿಸಲಿಲ್ಲ? "ಇನ್ಕಿಲಾಬ ಜಿಂದಾ ಬಾದ" ಎಂಬ ನಾಮವನ್ನು ಜಪಿಸುತ್ತಲೇ ಎಷ್ಟು ಜನ ಕ್ರಾಂತಿಕಾರರು ಗುಂಡಿಗೆ ಎದೆಗೊಡಲಿಲ್ಲ? ಇದನ್ನು ಅಲ್ಲಗಳೆಯಬಹುದೇ!

ನಾಮಜಪವೆಂದರೆ ಧ್ಯೇಯದ ಧ್ಯಾನ ಮಾಡುವದು. ಮಹಾತ್ಮಾಜಿಯೆಂದರೆ ಭಾರತೀಯ ಸ್ವಾತಂತ್ರ್ಯ! ರಾಮನಾಮವೆಂದರೆ ರಾವಣನ ಅಳಿಗಾಲ! ಆ ರಾಮನ ಪದತಲದಲ್ಲಿ ಮಾನವರ ಉಳಿಗಾಲ! ಉದ್ಧಾರ! ಕೃಷ್ಣನೆಂದರೆ ಶುಷ್ಕ ವೇದವಾದದ ವಿರುದ್ಧ ಹೂಡಿದ ಬಂಡಾಯ! ಆತನೇ ಶುದ್ಧ ಕರ್ಮಯೋಗದ ಪೂರ್ಣ ಮಹಿಮೆ! ಆ ಕೃಷ್ಣನೆಂದರೆ ಭೇದರಹಿತ ಪರಿಶುದ್ಧ ಪ್ರೇಮಮೂರ್ತಿ! ಆತನ ಪ್ರೇಮದಲ್ಲಿ ಸ್ತ್ರೀ, ಶೂದ್ರ,

ವೈಶ್ಯ ಎಂಬ ಭೇದಕ್ಕೆ ಎಡೆ ಇತ್ತೇ? ಎಲ್ಲರಲ್ಲಿಯೂ ಅಖಂಡ ಸಮಾನ ಪ್ರೇಮ! ಅದೇ ಕೃಷ್ಣ ನಾಮಜಪದ ಸಂಪತ್ತು! ಕಾರ್ಲಮಾರ್ಕ್ಸ್, ಹಾಗೂ, ಲೆನಿನ್ನ ಪ್ರಭೃತಿಗಳಿಗೆ ಜಯವಾಗಲಿ ಎಂಬುದರಲ್ಲಿ ನಿತ್ಯ ಶ್ರಮ ಜೀವಿಗಳಾದ ದುಡಿವ ದರಿದ್ರರೆಲ್ಲರಿಗೆ ಮಹಾ ವೈಭವವಾಗಲಿ ಎಂಬ ಅರ್ಥ ಅಡಕವಾಗಿಲ್ಲವೇ? ಇಂತಹ ಒಂದೊಂದೇ ನಾಮಗಳಲ್ಲಿ ಅನಂತವಾದ ಅರ್ಥಗಳು ಅಡಕವಾಗಿವೆ. ಅಂತೆ ಕನ್ನಡ ದಾಸರುಗಳು ಕೂಡ "ಒಂದೇ ನಾಮದಲಿ ಅಡಗಿದವೋ ಸಕಲನಾಮಂಗಳೆಲ್ಲಾ" ಎಂದು ಆ ಕೃಷ್ಣಪರ ಮಾತ್ಮನನ್ನು ಹೊಗಳಿದ್ದಾರೆ. ಅದೊಂದು ನಾಮದಲ್ಲಿ ಇಡೀ ವಿಶ್ವವನ್ನು ಕಂಡಿದ್ದಾರೆ! ಇಂತಹ ನಾಮೋಚ್ಚಾರಗಳಲ್ಲಿ ಅನಂತವಾದ ಸ್ಫೂರ್ತಿ ಇದೆ! ನಾಮಸ್ಮರಣೆಯೆಂದರೇನೆ ನಮ್ಮ ಧ್ಯೇಯದ ಮೂರ್ತಿಮಂತ ನೆನಹು. ಈ ಸ್ಮರಣವು ನಮ್ಮ ಮರಣದ ಮೇಲೆ ಅಧಿಕಾರಾರೂಢವಾ ಗುತ್ತದೆ.

ಅವತಾರ ಪುರುಷರಲ್ಲಿ ಭಯವೆಂಬುದು ಏಕೆ ಇರುವದಿಲ್ಲ? ವಜ್ರ ಕ್ಕಿಂತ ಕಠಿಣವಾದುದನ್ನು ಮಣಿಸುವ ಶಕ್ತಿ ಎಲ್ಲಿಂದ ಬರುತ್ತದೆ? ತಾನು ಒಬ್ಬಂಟಿಗನಲ್ಲವೆಂಬ ಅರಿವು ಅವನಲ್ಲಿ ತುಂಬಿರುತ್ತದೆ. ಸುತ್ತಲಿನ ಲಕ್ಷಾವಧಿ ಜನ ಸಮಾಜವು ನನ್ನೊಡನೆ ಇಲ್ಲವೇ? ಅವರೆಲ್ಲರ ಪ್ರತೀಕವೇ ನಾನಲ್ಲವೇ? ನನ್ನ ಮೈಮೇಲೆ ಏರಿಬಂದರೆ ಆ ನನ್ನ ಸಮಾಜದ ಮೇಲೆ ಏರಿಬಂದಂತೇ ಅಲ್ಲವೇ! ನನ್ನ ಅಪಮಾನವೆಂದರೆ ಅವರೆಲ್ಲರ ಅಪಮಾನವಲ್ಲವೇ, ಅವರ ಅಪಮಾನವೆಂದರೆ ನನ್ನ ಅಪಮಾನವಲ್ಲವೇ? ಎಂಬ ತನ್ಮಯತೆಯ ಅರಿವು ಅವರ ವಜ್ರಕವಚವಾಗಿರುತ್ತದೆ.

ಅಂತೆಯೇ ಮಹಾತ್ಮಾಜಿಯವರಾದರೂ ಒಬ್ಬಂಟಿಗರೇ? ಅನೇಕ ಲಕ್ಷ ರಾಟೆಗಳಲ್ಲಿ ನೂಲು ತೆಗೆಯುವ ಹಳ್ಳಿಯ ಸಾಮಾನ್ಯರೊಡನೆ ಅವರು ಸೂತ್ರಬದ್ಧರಾಗಿದ್ದಾರೆ! ಹಳ್ಳಿಯ ಸೇವೆ ಮಾಡುವ ಅನೇಕ ಸಾವಿರ ಕಾರ್ಯಕರ್ತರೊಡನೆ ಬೆರೆತು ಒಂದಾಗಿದ್ದಾರೆ! ಹರಿಜನ ಸೇವೆ ಮಾಡುವ ನೂರಾರು ಜನರೊಡನೆ ಕೂಡಿ ತಮ್ಮನ್ನೆ ಮರೆತಿದ್ದಾರೆ! ಹಿಂದು ಮುಸ ಲ್ಮಾನರುಗಳಲ್ಲಿಯ ವೈಮನಸ್ಯವನ್ನು ಹೋಗಲಾಡಿಸಿ ಐಕ್ಯಸಾಧನೆಗಾಗಿ ದುಡಿಯುವ ಅನೇಕ ಮಹನೀಯರುಗಳು ಈ ಭಾರತದಲ್ಲಿ ಹರಿ ಹಂಚಾದ ಅನೇಕ ಜಾತಿಜಾತಿಗಳನ್ನು ಸಮಾನ ಸೌಹಾರ್ದ ಸ್ಥಾನದಲ್ಲಿ ಒಂದೆಡೆಗೆ ತರಬೇಕೆಂದು ಹೆಣಗುವ ಅನೇಕ ಸಾಧಕರುಗಳು! ಹಾಗೂ ಭಾರತದ

ಸರ್ವತೋಮುಖ ಅವನತಿಗೆ ಕಾರಣಗಳಾದ ಮದ್ಯಪಾನಾದಿ ನೀಚ ಚಟಗಳಿಂದ ಜನತೆಯನ್ನು ಮುಕ್ತಮಾಡಲು ಬದ್ಧ ಕಂಕಣರಾದವರೆಷ್ಟೋ ಜನ! ಹೀಗೆ ಎಲ್ಲ ಕಾರ್ಯರಂಗಗಳಲ್ಲಿಯ ಜನರೊಡನೆ ಮಹಾತ್ಮಾಜಿಯವರು ತಾದಾತ್ಮ್ಯರಾಗಿದ್ದಾರೆ. ಅಂತೆಯೇ ಇದೆಲ್ಲ ಭಾರತೀಯ ಜನ ಅವರ ಬೆನ್ನುಹಿಂದೆ ಸದಾ ಸಿದ್ಧವಿದೆ. ಈ ಜನತಾರೂಪ ಜನಾರ್ದನನ ಸುದರ್ಶನವು ಮಹಾತ್ಮರ ಸುತ್ತಲೂ ಹಗಲಿರುಳೆನ್ನದೆ ತಿರುಗುತ್ತಿದೆ.

ಅದರಂತೆ ಜವಾಹರಲಾಲರು. ಅವರೇನು ಒಬ್ಬಂಟಿಗರೇ! ಸರ್ವವಿಧದಿಂದ ಕಾಲ್ಕೆಳಗೆ ತುಳಿಯಲ್ಪಟ್ಟ ದೀನರಿಗಾಗಿ ದುಡಿಯುವ, ಸುಖಲೋಲುಪತೆಯ ಉನ್ಮತ್ತರನ್ನು ಕುಗ್ಗಿಸುವ, ದುಡಿಮೆಯ ಮಹತಿಯನ್ನು ಭಾರತಕ್ಕೆ ತೋರಿಸುವ, ಒಕ್ಕಲಿಗ-ಕೂಲಿಕಾರರಿಗಾಗಿ ಸರ್ವಸ್ವವನ್ನು ತ್ಯಾಗಮಾಡಿ ಅವರೆಲ್ಲರನ್ನು ಒಂದೆಡೆ ಸೇರಿಸಲು ಪ್ರಯತ್ನಿಸುವ, ಎಲ್ಲ ಡಂಭಾಚಾರಗಳನ್ನು ಬಿಸಾಡಿದ, ಮಾನವ ಧರ್ಮದ ನಿಜವನ್ನು ತಿಳಿದು ತಿಳಿಸುವ ಅನೇಕ ಬಾಂಧವ ಮಹನೀಯರುಗಳು ಅವರ ಸುತ್ತು ಬಳಸಿದ್ದಾರೆ. ಅಂತೆಯೇ ಆ ಜವಾಹರರ ಒಂದೊಂದು ನುಡಿಯಲ್ಲಿ ಓಜಸ್ಸಿದೆ, ತೇಜಸ್ಸಿದೆ, ನಿರ್ಧಾರವಿದೆ! ಅವರ ಕಣ್ಣಿನಲ್ಲಿ ಪ್ರಖರತೆ ಇದೆ! ಈ ವಿರಾಟ್ ಜನತೆಯ ಒಂದೆಡೆಯ ಕೂಡುವಿಕೆಯೆಂದರೇನೆ ಮಹಾಪುರುಷನು! ಅಂತೆಯೇ ಬಲಿಷ್ಠ ಸರಕಾರಗಳು ಕೂಡ ಮಹಾಪುರುಷರಿಗೆ ತಲೆಬಾಗುತ್ತವೆ. ಅಂತಹ ಮಹಾಪುರುಷರ ರಕ್ತ ಸುರಿಸುವದೇನೂ ಹಗುರಾದ ಕೆಲಸವಲ್ಲ. ಸಂಭಾಜಿ ಮಹಾರಾಜನ ರಕ್ತವೇ ಮೊಗಲಸಾಮ್ರಾಜ್ಯದ ನಾಶದ ಬೀಜ. ಗುರುಗೋವಿಂದನ ರಕ್ತವೇ ಶೀಖ ಸಾಮ್ರಾಜ್ಯದ ಅಡಿಗಲ್ಲಾಗಲು ಕಾರಣ.

ವಿರಾಟನ ಅರಮನೆಯಲ್ಲಿ ಧರ್ಮರಾಜನೊಡನೆ ನಡೆದ ಅಕ್ಷಕ್ರೀಡೆ (ಲೆತ್ತದಾಟ)ಯಲ್ಲಿ, ಆಟದ ಭರದಲ್ಲಿ ಸಿಟ್ಟಿಗೆದ್ದ ವಿರಾಟನು ಲೆತ್ತದಿಂದ ಧರ್ಮಜನ ಹಣೆಗೆ ಎಸೆದನು. ಆಗ ಆತನ ಹಣೆಯಿಂದ ಇಳಿಯುವ ರಕ್ತವನ್ನು ಒಂದು ಹನಿ ಕೂಡ ನೆಲದಲ್ಲಿ ಬೀಳದಂತೆ ನಿಶ್ಚಲನಾದ ಧರ್ಮನು ತನ್ನ ಅಂಗೈಯಲ್ಲಿ ತುಂಬಿದನಂತೆ. ಅದನ್ನು ಕಂಡ ಸೈರಂಧ್ರಿ ಧಾವಿಸಿ ಬಂದು ಒಂದು ಪಾತ್ರೆಯಲ್ಲಿ ಅದನ್ನು ಹಿಡಿದಳು. ಆಗ ವಿರಾಟ ಬೆರಗಾಗಿ ರಕ್ತವನ್ನು ಕೆಳಗೆ ಬೀಳಗೊಡದೆ ಕೈಯಲ್ಲಿಯೇ ತಡೆದಿರಲ್ಲ ಎಂದು ಕೇಳಲಾಗಿ, ಆ ರಕ್ತದ ಒಂದು ಹನಿ ನೆಲವನ್ನು ಕಂಡಿತ್ತೆಂದರೆ ನಿಮ್ಮ

ವಂಶ ಸಹಿತವಾಗಿ ರಾಜ್ಯದ ಕಡೆಗಾಲವಾಗುತ್ತಿತ್ತು. ನಿನ್ನನ್ನು ಓಲೈಸಿ ನಿನ್ನ ನಾಶವನ್ನು ನೋಡಬಾರದೆಂದೇ ತಡೆದೆನೆಂದು ಹೇಳಿದನು.

ಅವತಾರ ಪುರುಷರ ರಕ್ತದಲ್ಲಿ ಅಂತಹ ಅದ್ಭುತ ಶಕ್ತಿ ಇರುತ್ತದೆ. ಏಸುವಿನ ರಕ್ತವು ಚೆಲ್ಲಲ್ಪಟ್ಟಿತು. ಅದೇ ರಕ್ತವೇ ಇಡೀ ವಿಶ್ವವನ್ನೇ ಗೆದ್ದು ತನ್ನದಾಗಿಸಿತು. ಅಧಿಕಾರಿ ಲೋಲುಪರು ಅಧಿಕಾರ ಮದದಲ್ಲಿ ಆಯಾ ಕಾಲದ ಅವತಾರ ಪುರುಷರ ಈ ಸಾಮರ್ಥ್ಯವನ್ನು ಮರೆದು ಅವರ ರಕ್ತ ಸುರಿಸುತ್ತಾರೆ. ಅವರ ರಕ್ತ ಸುರಿದೊಡನೆಯೇ, ಆ ರಕ್ತವು ಆಗಾಗಿನ ಸತ್ತಾಧೀಶರನ್ನು ರಸಾತಳಕ್ಕೆ ಎಳೆದುಬಿಡುತ್ತಿದೆ. ಇದು ಐತಿಹಾಸಿಕ ಸತ್ಯ ಸಿದ್ಧಾಂತವು.

ಅತಿಶಯ ಪ್ರಯತ್ನಪಟ್ಟು ಇಂತಹ ಅವತಾರಿ ಪುರುಷರನ್ನು ಕಾಣುವ ಭಾಗ್ಯವುಳ್ಳವರೇ ಧನ್ಯರು. ಅವತಾರ ಪುರುಷರು ಜನ್ಮವೆತ್ತಬೇಕೆಂದು ಹಗಲಿರುಳು ಆಶಿಸುವ ಮಹನೀಯರುಗಳೆಲ್ಲ ಆಗ ಒಂದೆಡೆ ಬಂದು ಸೇರು ವರು. ಒಬ್ಬರೊಡನೊಬ್ಬರು ಸಹಕರಿಸುವರು. ಹಿರಿಯರು, ಕಿರಿಯರು, ಪಾಮರ, ಪಂಡಿತ, ಉಚ್ಚ ನೀಚ ಎಂಬ ಭೇದಭಾವವನ್ನು ಮರೆತು ಮಾಡ ಬೇಕಾದ ಕರ್ಮಯಜ್ಞದಲ್ಲಿ ಒಂದಾಗಿ ಸಹಕರಿಸುವವರೇ ಧನ್ಯರು. ಇದೊಂದು ಹಿರಿದಾದ ವಿಶ್ವಕಾರ್ಯ. ಇಂತಹ ಕಾರ್ಯದಲ್ಲಿ ಎಲ್ಲರೂ ಬನ್ನಿ, ಎಲ್ಲರಿಗೂ ಅನುವು ಇದೆ, ಪತಿತನಿರಲಿ ಪುಣ್ಯವಂತನಿರಲಿ, ದರಿದ್ರ ನಿರಲಿ, ಸಿರಿವಂತನಿರಲಿ ಈ ಕಾರ್ಯದಲ್ಲಿ ಎಲ್ಲರೂ ಸಹಭಾಗಿಗಳಾಗಿರಿ; ಅಂದರೇನೆ ಪರ್ವತ ಪ್ರಾಯವಾದ ಮಹಾಕಾರ್ಯವಾಗುವದು. ಅಣು ರೇಣುಗಳ ಮಹಾ ಸಮೂಹವೇ ಪರ್ವತವಲ್ಲವೇ? ನಮ್ಮೆಲ್ಲರುಗಳ ಅಣು ಪ್ರಯತ್ನವೇ ಮಹಾ ಪರ್ವತವಾಗಿ ನಿಂತು ಮಹಾಪುರುಷ ರೂಪಗಳಾದ ಮೇಘಗಳನ್ನು ಕರೆಕರೆದು ತಂದು ಅವರ ದಿವ್ಯ ಅಂತಃಕರಣರೂಪದ ಮಳೆ ಗರಿಸಿ ಮಾನವ ಸಮಾಜವನ್ನು ಸುಖಸಮೃದ್ಧಿಯಲ್ಲಿ ಮುಳುಗಿಸುವದು.

ಕಾರಣಪುರುಷರನ್ನು ಕಾಣಬೇಕೆಂಬ ಬಯಕೆ ಇದ್ದವರು ಕಾರ್ಯ ಹೀನರಾಗಬೇಕೆ? ಕರ್ಮಹೀನನಾಗಿ ಕ್ಷಣ ಕೂಡಾ ಇರಬೇಡವೆಂದು ನಮ್ಮ ಭಾರತೀಯ ಸಂಸ್ಕೃತಿ ಸಾರಿ ಹೇಳುವದಿಲ್ಲವೇ? ಕೇವಲ ಬಾಯಿಂದ ಹರಿ ಹರಿ ಎಂದು ಯಂತ್ರದಂತೆ ಮಂತ್ರ ಉಚ್ಚರಿಸಿದರೆ ಹರಿಯು ದೊರೆಯು ವನೇ? "ನಹಿ ಶ್ರಾಂತಸ್ಯ ಋತೆ ಸಖ್ಯಾಯ ದೇವಾಃ" ಎಂಬ ಶ್ರುತಿವಚನ ವಿದೆ. ದುಡಿದವನಿಗೆ ದೇವರು. ಆ ದೇವರು ಕೊಟ್ಟ ಕೈ, ಕಾಲು, ಹೃದಯ,

ಬುದ್ಧಿಗಳನ್ನು ಉಪಯೋಗಿಸದ ಅಯೋಗ್ಯ ಕರ್ಮಶೂನ್ಯರಿಗಾಗಿ ದೇವರು ಎಂದೂ ಅವತರಿಸಲಾರ.

ಅವತಾರ ಪುರುಷರನ್ನು ಕಣ್ಮುಟ್ಟಿ ನೋಡುವದಕ್ಕಿಂತ ಹೆಚ್ಚಿನ ಭಾಗ್ಯವಾವುದು ಈ ವಿಶ್ವದಲ್ಲಿ? ಇಂತಹ ಮಹಾಪುರುಷರೆ ಅಖಿಲ ಮಾನವರ ಆಶಾಸ್ಥಾನ. ಇವರೇ ಮಾನವನ ಶಕ್ತಿ. ಇಂತಹರನ್ನು ನೋಡಬೇಕೆಂದೇ ನಮ್ಮ ಬಯಕೆ. ಇವರನ್ನು ಕಾಣಬೇಕೆಂದು ಕಣ್ಣು ಹಾತೊರೆಯುತ್ತವೆ. ಇವರಿಂದ ಅಲ್ಲವೇ ಈ ವಿಶ್ವಚಾಲಕ ಪರಮಾತ್ಮನ ಮಹಿಮೆಯನ್ನು ತಿಳಿದು ಆನಂದದ ಅನುಭವವನ್ನು ಹೊಂದುವದು? ಮಾನವನ ಶಕ್ತಿಯ ಹಿರಿಮೆಯು ಇಂಥವರಿಂದಲೇ ಒಡೆದು ತೋರುತ್ತದೆ. ಮಹಾಪುರುಷರು ಮನುಷ್ಯ ಶಕ್ತಿಯ ಮೇರೆ (ಎಲ್ಲೆ) ಯನ್ನು ತೋರಿಸುತ್ತಾರೆ. ಸಾಮಾನ್ಯ ಮನುಷ್ಯನು ಸಹ ಎಷ್ಟು ಉಚ್ಚನಾಗಬಹುದೆಂಬುವದನ್ನು ತೋರಿಸುತ್ತಾರೆ.

ಭಾರತೀಯ ಸಂಸ್ಕೃತಿಯಲ್ಲಿ, ಆಲಸ್ಯಕ್ಕೆ, ಕರ್ಮಶೂನ್ಯತೆಗೆ, ವೈರಾಗ್ಯಕ್ಕೆ, ಎಳ್ಳಷ್ಟೂ ಎಡೆಯಿಲ್ಲ! ಭಾರತೀಯ ಸಂಸ್ಕೃತಿ ಎಂದರೆ ಸತತ ಪ್ರಯತ್ನವನ್ನು ಬೋಧಿಸುವ ಮಹಾ ಅಮೃತ ಸಮುದ್ರ. ಇದರಲ್ಲಿ ಅಮರತ್ನವನ್ನು ಎಲ್ಲಿ ನೋಡಿದಲ್ಲಿ ಕಾಣಬಹುದು. ಎತ್ತ ಹೊರಳಿದರೂ ದಿವ್ಯ ಆಶೆಯ ಸುಗಂಧವೇ! ಭಾರತೀಯ ಸಂಸ್ಕೃತಿಯೆಂದರೆ ಹಿರಿಕಿರಿಯರ, ಸ್ತ್ರೀಪುರುಷರುಗಳ ಸಾಂಘಿಕ ಸತ್ಕಾರ್ಯಗಳ ಅಮರ ಸುಗಂಧದ ಗುಚ್ಛ. ಅವತಾರ ಕಲ್ಪನೆಗಳಲ್ಲೆಲ್ಲ ಈ ಮಾತುಗಳ ಪಡಿನೆಳಲನ್ನು ಕಾಣಬಹುದು. ಇದು ಪ್ರತಿಯೊಬ್ಬ ಭಾರತೀಯನಿಗೆ ತಿಳಿದ ದಿನವೇ ಸುದಿನ!

---

## ೨೦. ಮೂರ್ತಿಪೂಜೆ

ಭಾರತೀಯ ಸಂಸ್ಕೃತಿಯಲ್ಲಿ ಮೂರ್ತಿಪೂಜೆಯದೊಂದು ಹಿರಿದಾದ ಮಧುರವಾದ ಕಲ್ಪನೆಯಿದೆ. ಮಾನವನು ಕ್ರಮೇಣ ವಿಕಾಸ ಹೊಂದಬೇಕೆಂದು, ನಮ್ಮ ಸಂಸ್ಕೃತಿಯು ಅನೇಕ ಸಾಧನಗಳನ್ನು ಕಲ್ಪಿಸಿದೆ; ಅದರಲ್ಲಿ ಇದೊಂದು ಮಹಾ ಸಾಧನವು. ಮೂರ್ತಿಪೂಜೆಯ ವಿಚಾರವನ್ನು ಮಾಡುತ್ತ ಹೋಗಲು ಅದರಲ್ಲಿದ್ದ ಆಳವಾದ ಭಾವವು ಹೆಚ್ಚೆಚ್ಚು

ಪ್ರಕಟವಾಗಿ ತೋರುವದು.

ಸ್ವಭಾವತಃ ಮನುಷ್ಯನು ವಿಭೂತಿ ಪೂಜಕನು. ನಮಗಿಂತ ದೊಡ್ಡವರಿದ್ದವರ ಕೌತುಕವನ್ನು ನಾವು ಮಾಡುತ್ತೇವೆ. ಬುದ್ಧಿಯಿಂದ ಹೃದಯದಿಂದ ನಮಗಿಂತ ಶ್ರೇಷ್ಠರಾದವರನ್ನು ಪೂಜಿಸಬೇಕೆಂದು ನಮಗೆ ಅನಿಸುವದಿಲ್ಲವೇ ? ವಿಭೂತಿಪೂಜೆ ನಮ್ಮಲ್ಲಿ ಇಲ್ಲದಿದ್ದರೆ ನಮ್ಮ ವಿಕಾಸವೇ ಆಗುತ್ತಿರಲಿಲ್ಲ. ವಿಭೂತಿಪೂಜೆಯು ಮಾನವ ವಿಕಾಸದ ಒಂದು ಬಲವಾದ ಸಾಧನೆ.

ಮೂರ್ತಿಯೆಂದರೆ ಆಕಾರ; ಆ ಆಕಾರ ಪೂಜೆಯೇ ಮೂರ್ತಿ ಪೂಜೆ. ಪ್ರತ್ಯಕ್ಷತೆಯ ಪೂಜೆ ಮಾಡಲು ನಮ್ಮೆದುರು ಆ ಪ್ರತ್ಯಕ್ಷ ವಸ್ತುವು ಬೇಕಲ್ಲವೆ? ಜೀವನದ ಪ್ರಥಮ ಅವಸ್ಥೆಯಲ್ಲಿ ನಾವೆಲ್ಲರೂ ಆಕಾರ ಪೂಜಕರೇ ಇರುತ್ತೇವೆ. ವ್ಯಕ್ತಿ ಇಲ್ಲದೇ ನಡೆಯುವಂತಿಲ್ಲ. ಪ್ರತ್ಯಕ್ಷ ವಾಗಿ ಕಾಣುವ, ನಮಗೆ ಉಪದೇಶವೀಯುವ, ಮಾರ್ಗವನ್ನು ತೋರುವ, ಮೂರ್ತಿಯೊಂದು ಈ ಅವಸ್ಥೆಯಲ್ಲಿ ಅವಶ್ಯವಾದದ್ದು. ಆದ್ದರಿಂದಲೇ ಬುದ್ಧ ಧರ್ಮದಲ್ಲಿ ಸಾಧಕನಿಗೆ ಮೂರು ಅವಸ್ಥೆಗಳನ್ನು ಹೇಳಿದೆ. "ಬುದ್ಧಂ ಶರಣಂ ಗಚ್ಛಾಮಿ, ಸಂಘಂ ಶರಣಂ ಗಚ್ಛಾಮಿ; ಮತ್ತು ಧರ್ಮಂ ಶರಣಂ ಗಚ್ಛಾಮಿ." ಈ ಮೂರು ಅವಸ್ಥೆಗಳೊಳಗಿಂದ ಮನುಷ್ಯನು ಹೋಗಬೇಕಾಗುತ್ತದೆ.

ಮೊದಲು ಮನುಷ್ಯನು ದೊಡ್ಡ ವ್ಯಕ್ತಿಗೆ ಶರಣುಹೋಗುತ್ತಾನೆ. ಅವರವರ ಅಭಿರುಚಿಯಂತೆ ಅವರವರ ದೃಷ್ಟಿಗೆ ತೋರಿದ ಮಹಾತ್ಮರನ್ನು ಅನುಸರಿಸುವದು ಮಾನವನ ಸಹಜಧರ್ಮ. ಕೆಲವರು ಮಹಾತ್ಮಾಜಿ ಯವರ ಸಾಮೀಪ್ಯವನ್ನು ಅಪೇಕ್ಷಿಸಬಹುದು. ಹಲವರು ರವೀಂದ್ರನಾಥರ ಸುತ್ತು ಕೂಡಬಹುದು. ಈ ರೀತಿ ಮಾನವರೆಲ್ಲರೂ ವಿಕಾಸದ ಮಾರ್ಗ ವನ್ನು ದೊರಕಿಸಲು ಹಾತೊರೆಯುತ್ತಾರೆ.

ಆದರೆ ಮಾನವನು ಅನುಸರಿಸಿದ ವ್ಯಕ್ತಿಯು ಕ್ಷಣಭಂಗುರವಾದುದು. ಇಂದಿಲ್ಲ ನಾಳೆ ಹಿಂದುಮುಂದಾಗಿ ಪ್ರತಿಯೊಂದು ವ್ಯಕ್ತಿಯ ಅಳಿವು ತಪ್ಪಿದ್ದಲ್ಲ. ಯಾವ ಮಹಾಪುರುಷನ ದೇಹವನ್ನು ನಾವು ಪ್ರೀತಿಸುವೆವೋ ಆ ದೇಹವು ಅಳಿದು ನಮ್ಮಿಂದ ಅಗಲುವದು ಸತ್ಯ. ಆಗ ಆ ಪ್ರೇಮ ಭರಿತ ನೇತ್ರಗಳು ನಮ್ಮನ್ನು ನೋಡಲಾರದವಾಗಿ ಮುಚ್ಚುವವು. ಸ್ನೇಹಾ ಮೃತದ ಮಳೆಗರೆಯುವ ಆ ಮುಖವು ಬರಿದಾಗುವದು. ಆಶೀರ್ವಾದ

ಮಾಡುವ ಹಸ್ತಗಳು ತಣ್ಣಗಾಗುವವು. ಆ ದಿವ್ಯ ವಿಭೂತಿಯ ದೇಹವು ನಮ್ಮಿಂದ ಅಗಲಿ ಅದೃಶ್ಯವಾಗುವದು. ತಿಳಿದು ನೋಡಿದರೆ ವಿಭೂತಿಯ ಬಾಹ್ಯ ಜಡ ಆಕಾರಕ್ಕೆ ನಿಜವಾಗಿಯೂ ಮಹತ್ವವಿಲ್ಲ. ಆ ಜಡ ಆಕಾರದ ಅಂತರಂಗದಿಂದ ಹೊರಹೊಮ್ಮುತ್ತಿರುವ ಸದ್ಗುಣಪೂರ್ಣವಾದ ಚೈತನ್ಯ ಮಯ ತತ್ವವು ಮಹತ್ವದ್ದಲ್ಲವೇ ? ಅಂತೆಯೇ ಜಗನ್ನಾಥದಾಸರು "ಸಿರಿನಿಲಯನ (ಪರಮಾತ್ಮನ) ಗುಣಗಳ ತಿಳಿದು ಭಜಿಸುವದೇ ಫಲವಿದು ಬಾಳ್ದುದಕೆ'' ಎಂದು ತಮ್ಮ ದಿವ್ಯ ವಾಣಿಯಿಂದ ಹಾಡಿದ್ದಾರೆ. ಆ ತತ್ವ ಯಾವುದು ? ಅದು ಹೇಗಿತ್ತು ?

ಮಹಾಪುರುಷನ ಸುತ್ತಲೂ ಜನಜಂಗುಳಿ ನೆರೆಯುತ್ತದೆ. ಅದೇ ನಿಕಟಸಂಬಂಧದಿಂದ ಕೂಡಿ ಒಂದು ಭ್ರಾತೃ ಸಂಘವಾಗುತ್ತದೆ. ಅವರೆಲ್ಲರು ಆ ಗುರುವಿನ ಪ್ರಿಯತಮ ಶಿಷ್ಯರಾಗುತ್ತಾರೆ. ಗುರುವಿನ ಉಪದೇಶದಂತೆ ನಡೆಯಲು ಎಲ್ಲರೂ ಸಾಹಸಪಡುತ್ತಾರೆ; ಆದರೆ ಕೆಲಕಾಲದ ನಂತರ ಗುರುವು ಅಳಿದ ಮೇಲೆ ಆ ಶಿಷ್ಯವೃಂದದಲ್ಲಿಯೇ ಗುರುವಿನ ಉಪದೇಶದ ಬಗ್ಗೆ ಮತಭೇದಗಳು ಉಂಟಾಗುತ್ತ ಆ ಸಂಘದ ಕಟ್ಟು ಸಡಿಲಾಗಿ ಭಿನ್ನ ಭಿನ್ನವಾಗಿ, ಅದರಲ್ಲಿ ಅನೇಕ ಪಂಥಗಳು ತಲೆದೋರುತ್ತವೆ. ಅಂಥ ಸಮಯದಲ್ಲಿ ಮಾಡುವದೇನು ?

ಪ್ರತ್ಯಕ್ಷವಾಗಿ ಉಪದೇಶಿಸುವ ಗುರುವಿನ ದೇಹವಂತೂ ನಮ್ಮಿಂದ ಮಾಯವಾಯಿತು. ಸಂಘ ಸಡಿಲಾಗಿ ಕರಗುತ್ತ ಬಂತು. ಇನ್ನು ಮಾನವ ನಿಗೆ ಉಳಿದುದೇನು ? ಧರ್ಮ ! ಗುರುವು ಯಾವ ತತ್ವಗಳಿಗಾಗಿ ನಮ್ಮೊಡನೆ ಉಳಿದು ಬಾಳಿ ಬೆಳಗಿ ಅಳಿದನೋ ಅಂಥ ಆತನ ತತ್ವಗಳನ್ನೇ ಶರಣು ಹೋಗಬೇಕು. ನಮಗೆ ಹೊಳೆದಂತೆ ಆ ತತ್ವಗಳ ಜ್ಞಾನೋಪಾಸನೆಯನ್ನೇ ನಾವು ಪ್ರಾರಂಭಿಸುವೆವು. ನಮಗೆ ಮನಸಂದುವಂತೆ ಆ ಮಹಾತ್ಮನ ಸ್ವರೂಪವನ್ನೇ ಮನದ ಗದ್ದುಗೆಯಲ್ಲಿರಿಸಿ ಚಿಂತನ ಧ್ಯಾನಗಳಿಂದ ಪೂಜಿ ಸುತ್ತೇವೆ.

ಈ ಪ್ರಕಾರವಾಗಿ ವ್ಯಕ್ತಿ (ಮೂರ್ತಿ) ಪೂಜೆಯಿಂದ ಪ್ರಾರಂಭಿಸಿದುದು ತತ್ವಪೂಜೆಯಲ್ಲಿ ಕೊನೆಗೊಳ್ಳುವದಿಲ್ಲವೇ ? ಮೂರ್ತದಿಂದ ಅಮೂರ್ತ ದೆಡೆಗೆ ನಾವು ಹೋಗುತ್ತೇವೆ. ಮೂರ್ತಿ ಪೂಜೆಯ ಈ ಅರ್ಥವನ್ನು (ಈ ಮರ್ಯಾದೆಯನ್ನು) ನಾವು ತಿಳಿದು ಮನದಲ್ಲಿ ಅರಗಿಸಬೇಕು. ನಾವೆ ಲ್ಲರೂ ವ್ಯಕ್ತದಿಂದ ಅವ್ಯಕ್ತದೆಡೆಗೆ, ಮೂರ್ತದಿಂದ ಅಮೂರ್ತದೆಡೆಗೆ,

ಆಕಾರದಿಂದ ನಿರಾಕಾರದೆಡೆಗೆ, ಜಡದಿಂದ ಚೈತನ್ಯದೆಡೆಗೆ ಸಾಗಬೇಕಲ್ಲವೆ?

ಗಣೇಶಚತುರ್ಥಿ ದಿನ, ಗಣಪತಿಯ ಮೂರ್ತಿಯನ್ನು ತಂದು ಸ್ಥಾಪಿಸಿ, ಅದರಲ್ಲಿ ಪ್ರಾಣಪ್ರತಿಷ್ಠಾಪನೆ ಮಾಡಿ ವೈಭವದಿಂದ ಪೂಜಿಸಿ, ಕೆಲ ದಿನಗಳ ನಂತರ ಆ ಮೂರ್ತಿಯನ್ನು ವಿಸರ್ಜಿಸುತ್ತೇವೆ. ಇದರ ಅರ್ಥವೇನು? ಆ ಮೂರ್ತಿಯಿಂದ ಅರಿಯತಕ್ಕ ಅಮರತತ್ವವನ್ನು ಅರಿತು ಆ ಮೂರ್ತಿಯನ್ನು ಜಲಾಶಯದಲ್ಲಿ ಮುಳುಗಿಸುತ್ತೇವೆ. ಅಂದರೆ ನೆನಸತಕ್ಕ ಈ ಜಡ ಪ್ರತಿಮೆಯಿಂದ ಹೊರಹೊಮ್ಮುವ ಅಮರ ತತ್ವವನ್ನು ನಮ್ಮಲ್ಲಿ ಅರಗಿಸಿಕೊಂಡು, ಆ ತತ್ವದೊಡನೆ ತನ್ಮಯರಾದ ಮೇಲೆ ಆ ಜಡಕ್ಕೆ ಪ್ರಾಧಾನ್ಯತೆಯಿಲ್ಲ. ಮೂರ್ತಿಪೂಜೆಯೇ ಮಾನವನ ಬಾಳುವೆಯ ಗುರಿಯಲ್ಲ. ಆ ಮೂರ್ತಿಯಿಂದ ಆಚೆಗೆ ಒಳಹೊರಗೂ ವ್ಯಾಪಿಸಿದ ಅಮರ ಚೈತನ್ಯ ತತ್ವದ ಎಡೆಯನ್ನು ಸೇರತಕ್ಕುದೆಂಬುದನ್ನು ಮಾನವನು ಮರೆಯಲಾಗದು. ಅಂತೆಯೇ ಮಾನವ ಜೀವನದ ಅಂತವು ಆ ಅಖಂಡ ಆನಂದಮಯ ಚೈತನ್ಯತತ್ವದಲ್ಲಿ ಬೆರೆತು ಆನಂದಾನುಭವವನ್ನು ಹೊಂದುವದು. ಅದೇ ನಿಜವಾದ ಮಾನವ ಜೀವನದ ಗುರಿ.

ಈ ಮಾನವ ಜೀವನದ ಅರಳುವಿಕೆಗೆ ಮೂರ್ತಿಪೂಜೆಯಷ್ಟೇ, ಆ ಮೂರ್ತಿಯ ವಿಸರ್ಜನೆಯೂ ಅವಶ್ಯವಿದೆ. ನಿನ್ನೆ ಪೂಜಿಸಿದ ಮೂರ್ತಿಯನ್ನು ಇಂದು ಪೂಜಿಸುವೆನೆಂದು ಹೇಳಲು ಬರುವದಿಲ್ಲ. ಮೂರ್ತಿಯು ವಿಕಾಸವನ್ನು ಹೊಂದುತ್ತಲೇ ಇರುವದು. ಮಗುವಿದ್ದಾಗ ತಾಯಿ ತಂದೆಗಳ ಮೂರ್ತಿಯನ್ನು ಪೂಜಿಸುವನು. ಬೆಳೆದು ದೊಡ್ಡವನಾದಾಗ ಆ ಮೂರ್ತಿಗಳ ಸ್ಥಳದಲ್ಲಿ ನಾಡತಾಯಿಯ ( ಭಾರತಾಂಬೆಯ ) ಭವ್ಯ ಮೂರ್ತಿಯು ಸ್ಥಾಪಿಸಲ್ಪಡುವದು. ಆಗ ಜನ್ಮ ಕೊಟ್ಟ ಹೆತ್ತ ತಾಯಿಯ ಸಣ್ಣ ಪ್ರತಿಮೆಯನ್ನು ನಾಡತಾಯಿಯ ಹಿರಿದಾದ ದಿವ್ಯಮೂರ್ತಿಯಲ್ಲಿ ಕಾಣುವದು, ಆ ಮೇಲೆ ಅದು ಮೆಲ್ಲಗೆ ಸರಿಯುತ್ತಾ ವಿಶ್ವಂಭರನಾದ ಆ ಪರಮಾತ್ಮನ ವಿರಾಟರೂಪವನ್ನು ಪೂಜಿಸುವದು. ಆ ವಿರಾಟ ಮೂರ್ತಿಯಲ್ಲಿ ಇಡೀ ಮಾನವ ಜನಾಂಗವನ್ನು ಕಂಡು ಅದನ್ನೇ ಪೂಜಿಸುತ್ತ ಹೋಗುವದು. ಈ ರೀತಿ ಕ್ರಮಶಃ ತಾಯಿ, ನಾಡದೇವಿ, ಮಾನವಜನಾಂಗ, ಮಾನವ ಜನಾಂಗದ ಚೈತನ್ಯದಾಯಕನಾದ ವಿಶ್ವವ್ಯಾಪಿಯಾದ ಪರಮಾತ್ಮ ಹೀಗೆ ಮಾನವನು ಪೂಜಿಸುವ ಮೂರ್ತಿಯು ವಿಶಾಲವಾಗುತ್ತ ಹೋಗುತ್ತದೆ.

ರಾಮಪ್ರತಿಮೆಯ ಪೂಜೆಯು ಮಾತೂ ಹೀಗೆಯೇ. ಹೃದಯದಲ್ಲಿ

ಸ್ಥಾಪಿಸಿದ ಆ ಪ್ರತಿಮೆ ಬೆಳೆಬೆಳೆದು ಅಯೋಧ್ಯಾಪತಿ ರಾಮನು ವಿಶ್ವವ್ಯಾಪಿ ರಾಮನಾಗುತ್ತಾನೆ. ರಾಮನು ಮನುಷ್ಯನೆಂಬ ಕಲ್ಪನೆ ಇಲ್ಲದಾಗಿ ಆತನ ಅತಿಮಾನವತೆ ಕಣ್ಣೆದುರು ನಿಲ್ಲುತ್ತದೆ.

ಹೀಗೆ ಮೂರ್ತಿಪೂಜೆ ವಿಶ್ವಪೂಜೆಯಲ್ಲಿ ಪರಿಣಮಿಸುವದು. ವಟು ವಾಮನನೇ ತ್ರಿವಿಕ್ರಮನಾಗುವನು. ಅಣುಮೂರ್ತಿಯು ಅನಂತಮೂರ್ತಿ ಯಾಗುವದು. ಮೂರ್ತಿಪೂಜೆಯಲ್ಲಿ ಅಡಕವಾಗಿರುವ ಈ ಅರಳುವಿಕೆ ಯನ್ನು ಅರಿಯುವವರು ವಿರಳ. ಮೂರ್ತಿಯಲ್ಲಿರುವ ಅನಂತತೆಯು ನಮ್ಮ ಅನುಭವಕ್ಕೆ ಬರುವದಿಲ್ಲ. ದೇವರ ಗುಡಿಯಿಂದ ಹೊರಬಿದ್ದೊಡನೆ ಮೂರ್ತಿಯ ನೆನಪು ಉಳಿಯುವದಿಲ್ಲ. ಆ ಶಿಲಾಪ್ರತಿಮೆಯನ್ನು ಪೂಜೆ ಮಾಡುತ್ತ ಮಾಡುತ್ತ ಎಲ್ಲೆಡೆಯಲ್ಲಿಯೂ ಆ ವಿಶ್ವಪ್ರಭುವಿನ ಪ್ರತಿಮೆ ಕಾಣುವ ಯೋಗವು ಎಂದೂ ಬರುವದಿಲ್ಲ. ಆ ಶಿಲಾಮಯ ಆಕಾರದಾಚೆಗೆ ನಮ್ಮ ಮನವನ್ನು ಹರಿಬಿಡದ ಹೊರತು ಮೂರ್ತದಿಂದ ಅಮರ ಅಮೂರ್ತ ದೆಡೆಗೆ ನಾವು ಸಾಗಲಾರೆವು. ಆ ಅಮರ ಅಮೂರ್ತ ತತ್ವವನ್ನು ಕಾಣುವ ವರೆಗೆ ಸಮಾಧಾನ ಸಿಗುವಂತಿಲ್ಲ.

ಚಿಕ್ಕ ಮಗುವಿಗೆ ತಾಯಿಯ ಸತತ ಸಾಮೀಪ್ಯವೇ ಪರಮ ರುಚಿಕರ ವಲ್ಲವೇ? ಆ ತಾಯಿ ಸ್ವಲ್ಪ ಸರಿದರೆ ದುಃಖದಿಂದ ಅಳಲು ಪ್ರಾರಂಭಿ ಸುತ್ತದೆ. ತಾಯಿಯ ಸತತ ಸಾಮೀಪ್ಯವು ಸಾಧ್ಯವೇ? ಇಲ್ಲ! ಆ ಮಗುವು ಬೆಳೆಬೆಳೆದಂತೆ ಆ ತಾಯಿತಂದೆಗಳಿಂದ ಅಗಲಿರಲು ಕಲಿಯಲೇ ಬೇಕಾಗುತ್ತದೆ. ಆದರೆ ಈ ಜಗತ್ತಿನ ವ್ಯವಹಾರದಲ್ಲಿ ಓಡಾಡಬೇಕಾದರೆ ಆ ತಾಯಿಯ ಪವಿತ್ರ ಪ್ರೇಮಮಯ ಮೂರ್ತಿಯನ್ನು ಹೃದಯದಲ್ಲಿ ಕಾಣುತ್ತಲೇ ಮುಂದೆ ಸಾಗಬೇಕು. ನಮ್ಮ ಸಕಲ ವ್ಯವಹಾರಗಳಲ್ಲಿ ಆ ಮೂರ್ತಿಯನ್ನು ಕಾಣುತ್ತ ಹೋದೆವೆಂದರೇನೆ ಆ ಕಲ್ಪನೆ ವಿಕಾಸ ವಾಗುತ್ತ ಆ ಚಿಕ್ಕಮೂರ್ತಿ ವಿಶಾಲತೆಯನ್ನು ಹೊಂದುತ್ತ ಹೋಗುವದು. ಆ ನಿರಪೇಕ್ಷ ಸ್ನೇಹಮಯ ನಿಷ್ಕಳಂಕ ಜ್ಞಾನಮಯ ಮೂರ್ತಿಯನ್ನು ಹೃದಯದಲ್ಲಿ ಕಲ್ಪಿಸಿ ನಡೆದಾಗ ತಾಯಿಯ ಸಂತತ ಸಾನ್ನಿಧ್ಯ ನಮಗೆ ದೊರಕಿ ಹೃದಯದಲ್ಲಿ ಆನಂದದ ಅನುಭವವಾಗುವದು. ಆಗ ಮಾತ್ರ ನಾವು ಮೂರ್ತದಿಂದ ಅಮೂರ್ತದೆಡೆಗೆ ಸಾಗುವೆವು.

ಗುಡಿಯಲ್ಲಿ ದೇವರ ಪ್ರತಿಮೆಯ ಎದುರು ನಿಂತಾಗ, ನಮ್ಮ ಹೃದಯ ದಲ್ಲಿ ಭಕ್ತಿಯಿರುತ್ತದೆ. ದೇವರೆದುರು ನಿಂತು ಗಲ್ಲಗಲ್ಲ ಬಡಿದುಕೊಳ್ಳು

ತ್ತೇವೆ, ಕಿವಿಹಿಡಿದುಕೊಳ್ಳುತ್ತೇವೆ, ಸಾಷ್ಟಾಂಗ ನಮಿಸುತ್ತೇವೆ, ಪ್ರದಕ್ಷಿಣೆ ಮಾಡುತ್ತೇವೆ. ಇದರಿಂದ ದೇವರ ಪ್ರತಿಮೆಯನ್ನು ನಮ್ಮ ಹೃದಯದಲ್ಲಿ ಸ್ಥಾಪಿಸಲು ಪ್ರಯತ್ನಿಸುತ್ತೇವೆ. ಆದರೆ ಗುಡಿಬಿಟ್ಟು ಬಂದೊಡನೆ, ನಿತ್ಯದ ವ್ಯವಹಾರಗಳಲ್ಲಿ ತಲ್ಲೀನರಾಗಿ ದೇವರನ್ನು ಮರೆಯುತ್ತೇವೆ. ನಾವು ಗುಡಿಯ ಹೊರಗಿದ್ದರೂ ವ್ಯವಹಾರಗಳಲ್ಲಿ ಸಹ ಆತನ ಪ್ರತಿಮೆ ಸಂತತ ವಾಗಿ ನಮ್ಮ ಸಹಚರನಂತಿದ್ದರೆ ಮಾತ್ರ, ನಮ್ಮ ಮೂರ್ತಿ ಪೂಜೆಯು ಸಾರ್ಥಕವಾದಂತಾಗುವದು. ಆದರೆ ನಿಜಸ್ಥಿತಿ ಹಾಗಾಗುವದಿಲ್ಲ. ದೇವ ರನ್ನು ಆತನ ಗುಡಿಯಲ್ಲಿ ಬಿಟ್ಟು ನಾವು ಹಾಗೆಯೇ ಇದ್ದಕಿದ್ದಂತೆ ಸಾಗು ತ್ತೇವೆ. ಆದ್ದರಿಂದ ಜಗತ್ತಿನಲ್ಲಿ ಎತ್ತ ನೋಡಿದರೂ ವಿಷಮತೆ, ದುಃಖಗಳು ಹೇರಳವಾಗಿ ಕಂಡುಬರುತ್ತವೆ.

ತಾಯಿಯ ಸುಸ್ನೇಹಮಯ ಮೂರ್ತಿಯ ನೆನಪು ಮಾನವನಿಗೆ ಸಂತತವಾಗಿ ಅವಶ್ಯ. ಅದರಂತೆ ಮಂದಿರದಲ್ಲಿರುವ, ಕರುಣಾಮಯ ವಿಶ್ವ ಚಾಲಕನ ಆ ಪ್ರತೀಕ (ಮೂರ್ತಿ) ಹೃದಯಮಂದಿರದಲ್ಲಿ ಸಂತತವಾಗಿ ನಿಲ್ಲ ಬೇಕು. ನಾವು ಆ ಪ್ರತಿಮೆಯನ್ನು ಎಲ್ಲೆಡೆಯಲ್ಲಿ ಕಾಣಬೇಕು.

ಭಾರತೀಯರು ಮೂರ್ತಿಪೂಜೆಯ ವಿಕಾಸವನ್ನು ಈ ರೀತಿ ಮಾಡಿಕೊ ಳ್ಳದಿದ್ದರೂ, 'ಅವಕ್ಕಾಗಿ ವಿಶೇಷ ಲಕ್ಷ ಪೂರೈಸದೇ ಇದ್ದರೂ, ಉಳಿದೆಲ್ಲ ಧರ್ಮದವರಿಗಿಂತ ಹೆಚ್ಚು ವಿಕಾಸವನ್ನು ಕಂಡಿದ್ದಾರೆಂದು ಧಾರಾಳವಾಗಿ ಹೇಳಬಹುದು. ಒಂದು ದೃಷ್ಟಿಯಿಂದ ನೋಡಿದರೆ ಹಿಂದೂ ಧರ್ಮಕ್ಕಿಂತ ಇತರ ಧರ್ಮಗಳಲ್ಲಿಯೇ ಮೂರ್ತಿಪೂಜೆ ಹೆಚ್ಚಿಗೆ ಇದ್ದದ್ದು ಕಂಡುಬರು ತ್ತಿದೆ. ಇತರ ಧರ್ಮೀಯರ ಮೂರ್ತಿಪೂಜೆ, ಹಿಂದೂ ಧರ್ಮದ ಮೂರ್ತಿ ಪೂಜೆಯಷ್ಟು ಉದಾರವಿರುವದಿಲ್ಲ. ಕ್ರಾಸ್ ಅಥವಾ ಕಾಬಾಗಳಲ್ಲಿ ಕೂಡ ಹಿಂದೂ ಜನರು ಪಾವಿತ್ರ್ಯವನ್ನು ಕಾಣುವರು. ತಮ್ಮ ಶಾಲಿಗ್ರಾಮದಂತೆ ಅವುಗಳಲ್ಲಿ ಕೂಡ ಪಾವಿತ್ರ್ಯ ಇದೆ ಎಂಬ ಭಾವನೆ ಅವರಲ್ಲಿ ಬರುವದು. ಜಗತ್ತಿನಲ್ಲಿದ್ದ ಪಾವಿತ್ರ್ಯವೆಲ್ಲವೂ ನನ್ನ ರಾಮನ ಪ್ರತಿಮೆಯಲ್ಲಿ ಮಾತ್ರ ಆದೆ, ಹೊರಗೆಲ್ಲಿಯೂ ಇಲ್ಲವೆಂಬ ಸಂಕುಚಿತ ಭಾವನೆಯು ಯಾವ ಹಿಂದೂ ಮನಸಿನಲ್ಲಿಯೂ ಬರಲಾರದು. ಆದರೆ ಇತರ ಧರ್ಮಗಳಲ್ಲಿ ತದ್ವಿರುದ್ಧ ಭಾವನೆಯನ್ನು ನಾವು ಕಾಣಬಹುದು. ಕ್ರಾಸ ಪೂಜಿಸುವ ಕ್ರಿಶ್ಚನ್ನರಾಗಲಿ, ಕಾಬಾ ಪೂಜಿಸುವ ಮುಸಲ್ಮಾನರಾಗಲೀ, ರಾಮನ ಪ್ರತಿಮೆಯಲ್ಲಿ ಅಥವಾ ಹನುಮಂತನ ಪ್ರತಿಮೆಯಲ್ಲಿ ಪಾವಿತ್ರ್ಯವನ್ನು ಕಾಣುವದೇ ಇಲ್ಲ. ಇಷ್ಟೇ

ಅಲ್ಲದೆ ತಮ್ಮ ಧರ್ಮಗಳನ್ನು ಬಿಟ್ಟು ಇನ್ನುಳಿದ ಧರ್ಮಗಳ ಪ್ರತೀಕಗಳಲ್ಲಿ ಪವಿತ್ರತೆ ಇರಬಹುದೆಂಬ ಕಲ್ಪನೆ ಕೂಡ ಅವರಿಗೆ ಸಹನವಾಗುವದಿಲ್ಲ. ಕ್ರಾಸ ಒಂದೇ ಸತ್ಯ, ಕಾಬಾ ಒಂದೇ ಸತ್ಯವೆಂದು ಅವರು ತಿಳಿಯುತ್ತಾರೆ. ಆಯಾ ಚಿನ್ಹಗಳಾಚೆ ಅವರು ಏನನ್ನೂ ಕಾಣಲಾರರು. ಈ ದೃಷ್ಟಿಯಿಂದ ನೋಡಿದರೆ ಕ್ರಿಶ್ಚಿಯನ್ನರು ಮುಸಲ್ಮಾನರು ಸಂಕುಚಿತ ಆಕಾರದ ಪೂಜಕರೆಂದು ತೋರುತ್ತದೆ. ಹಿಂದುಗಳು ಮಾತ್ರ ತಮ್ಮ ಮೂರ್ತಿಗಳ ಆಚೆಗೆ ಎರಡನೆಯವರ ಮೂರ್ತಿಗಳಲ್ಲಿ ಕೂಡ ಪಾವಿತ್ರ್ಯವನ್ನು ಕಾಣಬಲ್ಲರು.

ಮೂರ್ತಿಪೂಜೆಯು ಆರಂಭವೆಂದು ? ಮನುಷ್ಯನು ಈ ಜಗತ್ತಿನಲ್ಲಿ ಹುಟ್ಟಿದಂದಿನಿಂದ. ಸೂರ್ಯಪೂಜೆ, ಸಮುದ್ರಪೂಜೆ, ಸರ್ಪಪೂಜೆ ಇವೆಲ್ಲವುಗಳೂ ಬನಾದಿಯಿಂದ ನಡೆದುಬಂದಿವೆ. ಆದರೆ ಮಂದಿರದಲ್ಲಿ ಶಿಲಾಪ್ರತಿಮೆಯನ್ನು ಸ್ಥಾಪಿಸಿ ಪೂಜಿಸುವದು ಎಂದಿನಿಂದ ಪ್ರಾರಂಭವಾಯಿತು ? ಈ ಮೂರ್ತಿಪೂಜೆ ಬುದ್ಧನಿರ್ವಾಣದ ತರುವಾಯ ಪ್ರಾರಂಭವಾಯಿತೆಂದು ಬಲ್ಲವರ ಹೇಳಿಕೆ. ಆತನ ನಿರ್ವಾಣದ ತರುವಾಯ ಆ ಬುದ್ಧದೇವನ ನೂರಾರು ಪುತ್ಥಳಿಗಳು ಸಿದ್ಧವಾದವು. ಬೇರೆ ಬೇರೆ ವಿಹಾರಗಳಲ್ಲಿ ಬುದ್ಧ ಪ್ರತಿಮೆಗಳು ಸ್ಥಾಪಿಸಲ್ಪಟ್ಟವು. ಭಾರತವು ಈ ಬುದ್ಧಧರ್ಮವನ್ನು ತನ್ನಲ್ಲಿ ಅರಗಿಸಿಕೊಂಡಮೇಲೆ ಹಿಂದೂಧರ್ಮವು ಈ ರೂಢಿಯನ್ನು ಅನುಸರಿಸಿತು. ಆಗ ಅನೇಕ ಮಂದಿರಗಳು ಕಟ್ಟಲ್ಪಟ್ಟು ಅವುಗಳಲ್ಲಿ ನೂರಾರು ದೇವತೆಗಳ ಮೂರ್ತಿಗಳು ಸ್ಥಾಪಿಸಲ್ಪಟ್ಟವು.

ಈ ಕಲಾಪ್ರತಿಮೆಯ ಪೂಜೆ ಬುದ್ಧನಿರ್ವಾಣದ ತರುವಾಯ ಒಳ್ಳೇ ಪ್ರಚಾರಕ್ಕೆ ಬಂದರೂ ಮೂರ್ತಿಪೂಜೆ ಸನಾತನವೆಂಬುವನ್ನು ನಾವು ಮರೆಯಕೂಡದು. ಶಿಲ್ಪಕಲೆ ವಿಕಾಸ ಹೊಂದಿದಮೇಲೆ ಮಹಾ ವಿಭೂತಿಗಳ ನೆನಹು ಉಳಿಯಬೇಕೆಂದು ಅವರ ಕಲ್ಲುಪ್ರತಿಮೆಗಳನ್ನು ಮಾಡುವದೂ ಪ್ರಾರಂಭವಾಯಿತು. ದೊಡ್ಡವರು ಹೇಗೆ ಇರುತ್ತಾರೆಂಬವನ್ನು ಕಾಣಲು ಸಾಮಾನ್ಯಮಾನವನಲ್ಲಿ ಕುತೂಹಲವು ಇರುತ್ತದೆ. ಅದರಂತೆ ಮಾನವನು ನನ್ನ ದೇವರು ಹೇಗಿರಬಹುದು ಎಂಬ ಕಲ್ಪನೆಯಲ್ಲಿ ತೊಡಗಿ, ತನಗೇ ಎರಡು ಕೈ, ಅಂದಮೇಲೆ ದೇವರಿಗೆ ನಾಲ್ಕು ಕೈ ಇರಬಹುದು. ಎಂದು ಕಲ್ಪಿಸಹತ್ತಿ ಅವರಂತೆ ಪ್ರತಿಮೆಗಳನ್ನು ಮಾಡಿದರು. ಆದರೆ ಇದರಿಂದ ಮಾನವನಿಗೆ ಸಮಾಧಾನವಾಗುವದೆಂತು? ವಿಶ್ವಚಾಲಕನಾದ ಆ ಪರಮೇಶ್ವರನ ನಿಜ ಸ್ವರೂಪವನ್ನು ಚಿತ್ರಿಸಲಾರದೇ, ಕಲ್ಪಿಸಲಾರದೇ

ಕೊನೆಗೆ ಕೆಳಗೆ ಉದಾಹರಿಸಿದ ಶ್ಲೋಕದಂತೆ ಆತನ ರೂಪವಿರಬೇಕೆಂದು ನಿಶ್ಚಯಿಸಲಾಯಿತು.

"ನಮೋಸ್ತ್ವನಂತಾಯ ಸಹಸ್ರ ಮೂರ್ತಯೇ ಸಹಸ್ರಪಾದಾಕ್ಷಿಶಿರೋರುಬಾಹವೇ ||
ಸಹಸ್ರನಾಮ್ನೇ ಪುರುಷಾಯ ಶಾಶ್ವತೇ ಸಹಸ್ರಕೋಟಿ ಯುಗಧಾರಿಣೇ ನಮಃ ।"

ಪರಮೇಶ್ವರನ ರೂಪವನ್ನು ನಾವು ಕಲ್ಪನೆಯಿಂದ ನಿಲುಕುವದಾದರೂ ಹೇಗೆ? ಬಾಯರನ್ ಕವಿ ಅನ್ನುತ್ತಾನೆ. "ದೇವರೇ ಈ ಮಹಾಸಾಗರವು ನಿನ್ನ ಸಿಂಹಾಸನವು." ಈ ಭವ್ಯ ಸಿಂಹಾಸನದ ಮೇಲಿಂದ ಭವ್ಯ ಸಿಂಹಾಸನಾರೂಢನಾದ ವಿಶ್ವಮಯನಾದ, ವಿಶ್ವಚಾಲಕನಾದ, ಪರಮಾತ್ಮನ ರೂಪದ ಕಲ್ಪನೆ ಮಾಡುವದು. ಆತನ ಈ ಸೃಷ್ಟಿಯಲ್ಲಿರುವ ಹಿರಿದಾದ ವಸ್ತುಗಳನ್ನು ಕಂಡಾಗೆಲ್ಲ ಪರಮಾತ್ಮನ ಅಪಾರ ವೈಭವದ ಕಲ್ಪನೆ ಬರುವದರಿಂದ, ನಾವು ಆಯಾ ವಸ್ತುಗಳಲ್ಲಿ ಪರಮಾತ್ಮನನು ಕಂಡು, ಭಾವಿಸಿ ಪೂಜಿಸುತ್ತೇವೆ.

ಅಪಾರ ಸಾಗರವನ್ನು ಕಂಡೊಡನೆ ಪರಮೇಶ್ವರನ ನೆನಪು ಆಗುತ್ತದೆ. ಆಗ ಆ ಸಮುದ್ರದಲ್ಲಿ ಆತನ ರೂಪವನ್ನು ಭಾವಿಸಿ ಕೈಜೋಡಿಸುತ್ತೇವೆ. ಅನಂತವಾದ ಅಲೆಗಳಿಂದ ಹಗಲಿರುಳು ಉಕ್ಕುತ್ತಿರುವ ಸಂತತವಾಗಿ ಘೋರೆಂದು ಗರ್ಜಿಸುತ್ತಿರುವ ಆ ಮಹಾಸಾಗರಕ್ಕೆ ಪ್ರಣಾಮ ಮಾಡದೇ ಮತ್ತಾರಿಗೆ ಕೈ ಮುಗಿಯಬೇಕು? ನಿತ್ಯ ಆಕಾಶದಲ್ಲಿ ಮೂಡುವ ನಮಗೆ ತೇಜಸ್ಸನ್ನು ಕೊಡುವ ಆ ಸೂರ್ಯನಲ್ಲಿ ಪರಮಾತ್ಮನ ಪ್ರತೀಕವನ್ನು ಕಾಣದೇ ಮತ್ತೆಲ್ಲಿ ಕಾಣಬೇಕು? ಸತತ ಉರಿಯುವ, ಕತ್ತಲೆಯನ್ನು ದೂರ ಓಡಿಸಿ ಇಡೀ ವಿಶ್ವಜೀವನವನ್ನೇ ಬೆಳಗಿಸುವ ಆ ತೇಜೋಗೋಲವಲ್ಲದೆ ಮತ್ತಾರು ದೇವರೆಂದು ನಂಬಬೇಕು, ಮನ್ನಿಸಬೇಕು?

ಸಾವಿರಾರು ಭೂಮಿಗಳನ್ನು ಪಚ್ಚ ಪೈರುಗಳಿಂದ ತುಂಬಿತುಳುಕಿಸುವ ಗಂಗಾದಿ ಮಹಾನದಿಗಳು, ಆಕಾಶವನ್ನೇ ಮುದ್ದಿಸುವಂತೆ ತೋರುವ ಹಿಮಾಚ್ಛಾದಿತವಾದ ಹಿಮಾಲಯದಂಥ ಉನ್ನತ ಪರ್ವತಗಳು, ಗಗನವನ್ನು ತಮ್ಮ ಕೈಚಾಚಿ ಅಪ್ಪುವಂತೆ ಕಾಣುವ ಆಲ, ಅರಳೆಯ ಮರಗಳು, ಅರಣ್ಯದಲ್ಲಿ ಗಂಭೀರವಾಗಿ ನಿಂತು ಅರಸನಂತೆ ಕಾಣುವ ಆ ಸಿಂಹ, ತನ್ನ ಚಿತ್ರವಿಚಿತ್ರವಾದ ಸುಂದರ ಗರಿಗಳ ವಿಸ್ತಾರವನ್ನು ಹರಹಿ ಕುಣಿಯುತ್ತಿರುವ ಸೌಂದರ್ಯ ಮೂರ್ತಿ ಆ ನವಿಲು, ಇಂತಹ ವಸ್ತುಗಳಲ್ಲಿ ದೇವರ ವೈಭವವನ್ನು ಕಂಡು ಮನ್ನಿಸದೇ, ಮತ್ತೆಲ್ಲಿ ಅದನ್ನು ಕಾಣಲಿ?

ತನ್ನೆದುರಿಗೆ ತನ್ನ ನೂರು ಮಕ್ಕಳನ್ನು ವಿಶ್ವಾಮಿತ್ರನು ಕೊಲೆ ಮಾಡುವದನ್ನು ಕಂಡರೂ ಶಾಂತಿಯನ್ನು ಕಾಯ್ದುಕೊಂಡ ಆ ವಸಿಷ್ಠ ! ಸತ್ಯಕ್ಕಾಗಿ ರಾಜ್ಯಸಿರಿಯನ್ನೇ ತ್ಯಜಿಸಿದ ಶ್ರೀ ರಾಮಚಂದ್ರ ಪ್ರಭು ! ಅಲ್ಪ ವಯಸ್ಸಿನಲ್ಲಿಯೇ ಅಡವಿಯನ್ನು ಸೇರಿದ ನಿಶ್ಚಲನಾದ ಬಾಲಧ್ರುವ ! ಮಹಾಭಾರತದಂಥ ಗ್ರಂಥದ್ವಾರಾ ಜಗತ್ತಿಗೆ ಅಮೃತವನ್ನುಣಿಸಿದ ವ್ಯಾಸ ಮಹರ್ಷಿ ! ಇವರೆಲ್ಲರೂ ಈಶ್ವರನ ವಿಭೂತಿಗಳೇ ಅಲ್ಲವೇ ?

ಮಗುವನ್ನು ಪೋಷಿಸುವಾಗ, ಅದಕ್ಕೆ ಕಿಂಚಿತ್ ದುಃಖವಾದರೂ ಕಳವಳಗೊಳ್ಳುವ, ಅದಕ್ಕೆ ಬಂದ ಆಪತ್ತಿನಲ್ಲಿ ತನ್ನ ಜೀವನವನ್ನೇ ಮುಡಿಪಾಗಿಟ್ಟು ಅದರ ಪ್ರಾಣವನ್ನುಳಿಸಲು ಹಾತೊರೆಯುವ, ತಾನು ದುಃಖದಾರಿದ್ರ್ಯವನ್ನು ಅನುಭವಿಸಿದರೂ ಮಗುವಿಗೆ ಅವನ್ನು ತೋರದೆ ಎಲ್ಲಿಯಾದರೂ ಏನಾದರೂ ರುಚಿಪದಾರ್ಥ, ಸುಂದರ ಪದಾರ್ಥ, ದೊರೆ ತರೆ ಮೊದಲು ಮಗುವಿಗೆ ತಂದುಕೊಡುವ, ಉಡಿಗೆ, ತೊಡಿಗೆ, ಅಲಂಕಾರ, ಆಭರಣ ಏನೇ ಇರಲಿ ಮಗುವಿಗೆ ಮೊದಲು ಒದಗಿಸುವ, ಈ ಪ್ರಕಾರ ತನ್ನನ್ನೆ ಮರೆತು ತನ್ನ ಜೀವನದ ತುಂಬ ಪುತ್ರನನ್ನೇ ಕಾಣುವ, ಪ್ರೇಮ ಸಾಗರಳಾದ ತಾಯಿಗೆ ದೇವರೆನ್ನದೇ ಮತ್ತಾರಿಗೆ ದೇವರೆಂದೆನ್ನಲಿ ? ಮತ್ತಾರಲ್ಲಿ ದೇವರನ್ನು ಕಾಣಲಿ? ಆದ್ದರಿಂದಲೆ ಮಾತೃದೇವೋಭವ ಎಂಬ ಶ್ರುತಿಯ ಆಜ್ಞೆಯಿದೆ. ನೀನು ದೇವರನ್ನು ಪೂಜಿಸಲು ಇಚ್ಛಿಸು ತ್ತಿದ್ದರೆ ಮೊದಲು ತಾಯಿಯನ್ನು ಪೂಜಿಸು. ಅಂದರೆ ಆ ಮಾತೃಪೂಜೆ ದೇವರಿಗೆ ಮುಟ್ಟುವದು. ಈಶ್ವರನ ಅಪಾರವಾದ ಪ್ರೇಮದ ಕಲ್ಪನೆಯು ನಮಗೆ ತಾಯಿಯ ನಲುಮೆಯಿಂದ ತಿಳಿಯುವದು.

ಪಶುವಿನಂತಿದ್ದ ಮಾನವಪ್ರಾಣಿಗೆ ಮನದ ಅರಿಕೆ ಮಾಡಿಕೊಟ್ಟು ಮಾನವನನ್ನಾಗಿ ಮಾಡುವ ಆ ಸದ್ಗುರುವು–ಅವನೂ ಈಶ್ವರನ ಪ್ರತೀಕವೇ. ಮಾತಾಪಿತರುಗಳು ನಮಗೆ ಈ ದೇಹ ಕೊಟ್ಟವರು; ಆದರೆ ಗುರುವು ಜ್ಞಾನಚಕ್ಷುಗಳನ್ನು ಕೊಟ್ಟವನು; ಮನುಷ್ಯ ಜನ್ಮದ ಸಾರ್ಥಕತೆಯನ್ನು ಸಾಧಿಸಲು ಕಲಿಸಿದವನು. ಆ ಗುರುವು ದೇವರಲ್ಲವೇ ?

ಜಗತ್ತೆಲ್ಲ ಈಶ್ವರ ಪ್ರತಿಮೆಗಳಿಂದ ತುಂಬಿದೆ. ಜಗತ್ತಿನಲ್ಲಿ ದೊಡ್ಡ ದೊಡ್ಡ ಮಂದಿರಗಳಿವೆ. ಪುತ್ಥಳಿಗಳಿವೆ, ಸ್ಮಾರಕಗಳಿವೆ. ಯುರೋಪ ಖಂಡದಲ್ಲಿ ಎಲ್ಲೆಡೆಯಲ್ಲಿಯೂ ವಿಭೂತಿ ಪೂಜೆಯೆ ತುಂಬಿದೆ. ಈಶ್ವರನ ಪೂಜೆ ಅನಂತ ಸ್ವರೂಪದಲ್ಲಿ ನಡೆದಿದೆ ಅಲ್ಲಿ.

ಸಂತರಲ್ಲಿ ಅಡಕವಾದ ದಿವ್ಯತೆಯ ಅರಿವು ಭಾರತೀಯ ಸಂಸ್ಕೃತಿಗೆ ಇದೆ. ಆದರೆ ಐರೋಪ್ಯ ಸಂಸ್ಕೃತಿಯು ಕವಿ, ತತ್ವವೇತ್ತ, ವೀರ, ಮುತ್ಸದ್ದಿ, ಸಂಗೀತಜ್ಞ, ಚಿತ್ರಕಾರ, ಶಿಲ್ಪಿ, ಅಭಿನಯ ವಿಶಾರದ ಮೊದಲಾದವರನ್ನು ಗೌರವಿಸಿ ಪರಮಾತ್ಮನ ವಿವಿಧ ವಿಭೂತಿಮತ್ವದ ಪೂಜೆಯನ್ನು ಮಾಡುತ್ತಿದೆ.

ಭಾರತೀಯ ಮೂರ್ತಿಪೂಜೆಯ ಕೊನೆಯ ಸಂದೇಶವಾವುದು ? ಭಗವದ್ಗೀತೆಯ ೧೦ನೇ ಅಧ್ಯಾಯದಲ್ಲಿ ಮೂರ್ತಿಪೂಜೆಯ ಈ ಸಂದೇಶ ವನ್ನು ಹೇಳಲಾಗಿದೆ. "ಈ ವಿಶ್ವದಲ್ಲಿ ಎಲ್ಲೆಲ್ಲಿ ವಿಭೂತಿಮತ್ವವನ್ನು ಕಾಣುವೆಯೋ ಅಲ್ಲಲ್ಲಿ ನನ್ನ ಅಂಶವಿದೆಯೆಂದು ತಿಳಿ"ಎಂದು ಶ್ರೀ ಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ.

ಗೀತೆಯಲ್ಲಿ ಇದರಾಚೆಗೆ ಹೋಗಿ ಮತ್ತೆ ಹೀಗೆ ಹೇಳಿದೆ. "ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ । ವಿಷ್ಟಭ್ಯಾಹಮಿದಂ ಕೃತ್ಸ್ನ ಮೇಕಾಂಶೇನ ಸ್ಥಿತೋ ಜಗತ್'' ॥ ಈ ಅಖಿಲ ಚರಾಚರ ವಸ್ತುಗಳಲ್ಲಿ ನಾನು ವಾಸವಾಗಿದ್ದೇನೆ. ಮೊದಲು ಮಹಾವಿಭೂತಿಗಳಲ್ಲಿ ನನ್ನನ್ನು ಕಾಣಲು ಪ್ರಯತ್ನಮಾಡು. ಮಾನವನು ಇಲ್ಲಿಗೇ ನಿಲ್ಲುವಂತಿಲ್ಲ. ಮೊದಲು ಸರಳ ಅಕ್ಷರಗಳನ್ನು ಕಲಿಯುವದು. ಅವುಗಳನ್ನು ಕಲಿತೊಡನೇ ವಾಙ್ಮಯ ಪ್ರವೇಶ ಸಾಧ್ಯವಾಗುವದಿಲ್ಲ. ದೊಡ್ಡ ಆಕಾರದಲ್ಲಿ ತಾನು ಕಲಿತ ಅಕ್ಷರ, ಸಣ್ಣ ಆಕಾರದಲ್ಲಿ ತೋರಿದಾಗ ಅವೆರಡೂ ಒಂದೇ ಎಂಬದನ್ನು ತಿಳಿಯ ಬೇಕು; ಆ ಮೇಲೆ ಒತ್ತಕ್ಷರಗಳನ್ನು ಕಲಿಯಬೇಕು; ಅಂದರೆ ವಾಙ್ಮಯ ಪ್ರವೇಶ ಸರಳ ಸಾಧ್ಯ.

ಅದರಂತೆ ತಾಯಿಯೆಂಬ ಮಾತು ಸರಳವಾದದ್ದು; ಬಾಲಕರಿಗೂ ತಿಳಿಯುವಂತಹದು. ತಾಯಿಯೆಂದರೆ ದೇವರೆಂಬ ಮಾತು ತಿಳಿಯಿತು. ಆ ಮೇಲೆ ರಾಮ, ಕೃಷ್ಣ, ಸಾಗರ, ವಟವೃಕ್ಷ, ಇವೆಲ್ಲವುಗಳಲ್ಲಿ ದೇವರನ್ನು ಕಂಡೆವು. ಆದರೆ ರಾವಣ, ಕಂಸ, ನಮ್ಮನ್ನು ಕಚ್ಚಲು ಬರುವ ಹಾವು, ಹುಲಿ ಇವುಗಳೆಲ್ಲ ಯಾರ ಪ್ರತೀಕಗಳು? ಇಲ್ಲಿ ಯಾರ ರೂಪವನ್ನು ಕಾಣುವದು ?

ಇವೂ ದೇವರ ಪ್ರತೀಕಗಳೇ ಅಲ್ಲವೆ ? ಇಲ್ಲಿಯೂ ದೇವರ ರೂಪ ವನ್ನೇ ಕಾಣಬೇಕಲ್ಲವೇ ? ಇವೆಲ್ಲ ಒತ್ತಕ್ಷರಗಳಂತೆ ಕಠಿಣ; ತಿಳಿಯಲು ಸುಲಭವಲ್ಲ. ಈ ತಿಳುವಳಿಕೆ ಬಾರದಿದ್ದರೆ ನಾವು ಜೀವನದಲ್ಲಿ ಆನಂದ ವನ್ನೂ ಮೋಕ್ಷವನ್ನೂ ಕಳೆದುಕೊಳ್ಳಬೇಕಾಗುತ್ತದೆ. ಪಾವ್ಹರಿ ಬಾಬಾ

ಇವರಿಗೆ ಒಮ್ಮೆ ಹಾವು ಕಡಿಯಿತು. ಆಗ್ಗೆ ಅವರು "ದೇವರು ನನಗೆ ಮುದ್ದಿಟ್ಟನು" ಅಂದರು.

ಕೊನೆಗೆ ನಾವು ಅಖಿಲ ಚರಾಚರ ವಸ್ತುಗಳಲ್ಲಿ ಪರಮೇಶ್ವರನನ್ನೇ ಕಾಣಬೇಕು. ಇದೇ ಮೂರ್ತಿಪೂಜೆಯ ಅಂತಿಮ ಗುರಿ. ಎಲ್ಲಿ ನೋಡಿ ದಲ್ಲಿ ಅವನೇ, ಅವನ ಮೂರ್ತಿಗಳೇ ಕಾಣುತ್ತಾ ಇರಬೇಕು. ಮಾನವ ಮನವು ಅಷ್ಟು ತಿಳಿಯಾಗಬೇಕು. ಪ್ರತಿಯೊಂದು ವ್ಯಕ್ತಿ, ಪ್ರತಿಯೊಂದು ವಸ್ತು ಆ ಚಿದಂಬರನ, ದಿಗಂಬರನ, ವಿಶ್ವಚಾಲಕನ, ಮಂಗಲ ಮಂದಿರ ಗಳೇ ಅಹುದು! ಆತನ ನಿಜವಾದ ಭಕ್ತನಿಗೆ ಪ್ರತಿಯೊಂದು ವಸ್ತುವಿನಲ್ಲಿ ಆ ಚಿನ್ಮಯನ ದರ್ಶನವೇ ಆಗುತ್ತದೆ. ಅವನು ಈ ಸೃಷ್ಟಿಯನ್ನೇ ಭಕ್ತಿ ಪ್ರೇಮಗಳಿಂದ ನೋಡುತ್ತಾನೆ. ಆಗ ಆತನ ಕಣ್ಣುಗಳು ಆನಂದದ ಕಂಬನಿಯಿಂದ ತುಂಬಿತುಳುಕುತ್ತವೆ!

ಮೂರ್ತಿಪೂಜೆ ಮಾಡುತ್ತ ಮಾಡುತ್ತ ವಿಶ್ವವೇ ಒಂದು ಮೂರ್ತಿ ಯಾಗಿ ತೋರಬೇಕು. ಅಖಿಲ ಚರಾಚರ ಸೃಷ್ಟಿಯು ಮಂಗಲವಾದದ್ದು, ಪವಿತ್ರವಾದದ್ದು ಎಂದೆನಿಸುವದು ಬಹುಕಷ್ಟ, ಅದಿರಲಿ. ಮಾನವಪ್ರಾಣಿ ಯನ್ನಾದರೂ ಪವಿತ್ರವೆಂದು ಭಾವಿಸಬೇಡವೇ ? ಮೂರ್ತಿಪೂಜೆಯ ಈ ಮೊದಲನೇ ಪಾಠವನ್ನಾದರೂ ಕಲಿಯೋಣ. ಇಲ್ಲಿಯವರೆಗೆ ಮಾನವನು ಈ ಪಾಠವನ್ನೇ ಚೆನ್ನಾಗಿ ಇನ್ನೂ ಕಲಿತಿಲ್ಲ.

ನಮಗೆ ಯಾಂತ್ರಿಕ ಧರ್ಮದ ಸೇರುವಿಕೆ ಹೆಚ್ಚು. ಆದರೆ ಧರ್ಮ ವೆಂದರೆ ಸಂಸ್ಕಾರ. ಅದರ ಪ್ರತಿಯೊಂದು ಕೃತಿಯ ಪರಿಣಾಮ ಜೀವನದ ಮೇಲೆ ಆಗಬೇಕು. ದಿನಾಲು ನಾವು ಮಾಡುವ ಮೂರ್ತಿ ಪೂಜೆಯು ಜೀವನದ ಮೇಲೆ ಪರಿಣಾಮ ಮಾಡುತ್ತದೆಯೋ? ಪೂಜೆ ಮಾಡುವ ಕಾಲಕ್ಕೆ ಇಂತಹ ವಿಚಾರಗಳು ಮನದಲ್ಲಿ ಸುಳಿಯುತ್ತವೆಯೋ?"ದೇವರೇ, ಇವತ್ತಿನಕಿಂತ ನಾಳೆ ನನ್ನ ಕೈಗಳು ಪವಿತ್ರವಾಗಲಿ, ಕಣ್ಣುಗಳು ಹೆಚ್ಚು ಪ್ರಾಮಾಣಿಕವಾಗಲಿ, ಪ್ರೀತಿಪೂರಿತಗಳಾಗಲಿ, ಹೃದಯವು ಹೆಚ್ಚೆಚ್ಚು ವಿಶಾಲವೂ ಶುದ್ಧವೂ ಆಗಲಿ. ಬುದ್ಧಿ ಇದಕ್ಕೂ ತೇಜಸ್ಸುಳ್ಳದ್ದೂ, ನಿರ್ಮಲವೂ ಆಗಲಿ.'' ಎಂಬೀ ವಿಚಾರಗಳು ಮನದಲ್ಲಿ ಬರುವವೇ? ಇಪ್ಪತ್ತು ಮೂವತ್ತು ವರುಷ ಪೂಜೆಮಾಡಿದರೂ ನಮ್ಮ ಬುದ್ಧಿ, ಕೈ, ಕಾಲು, ಕಣ್ಣು, ಮನಸ್ಸು ಎಂದಿನಂತೆ ಅಷ್ಟೇ ಅಪವಿತ್ರವಾಗಿವೆ. ಅವುಗ ಳಲ್ಲಿ ವಿಕಾಸವು ಇಲ್ಲ, ಪಾವಿತ್ರ್ಯತೆ ಇಲ್ಲ, ಪ್ರೇಮವಿಲ್ಲ, ಭೇದ ಅಳಿದಿಲ್ಲ,

ಅಹಂಕಾರ ಕಳಚಿಹೋಗಿಲ್ಲ. ಇಂತಹ ತಾಂತ್ರಿಕ ಪೂಜೆಯ ಉಪಯೋಗ ವೇನು ?

ಮೂರ್ತಿಪೂಜೆಯಲ್ಲಿ ಕೃತಜ್ಞತೆಯದೊಂದು ಸುಂದರ ಕಲ್ಪನೆ ಇದೆ. ಕೃತಜ್ಞತೆಯಷ್ಟು ಸುಂದರ ವಸ್ತು ಜಗತ್ತಿನಲ್ಲಿ ಬೇರೊಂದಿಲ್ಲ. ದೇವರು ನಮಗೆ ಎಲ್ಲವನ್ನು ದಯಪಾಲಿಸಿದ್ದಾನೆ. ಅದಕ್ಕಾಗಿ ನಾವು ಆತನಿಗೆ ಕೃತಜ್ಞರಾಗಿದ್ದೇವೆ. ಆತನ ಈ ಅನಂತ ಉಪಕಾರಗಳನ್ನು ತೀರಿಸುವ ದಾವದರೂ ಹೇಗೆ ಎಂಬ ಭಾವವು, ವಿಚಾರವು, ನಮ್ಮೆಲ್ಲರ ಮನಸ್ಸಿನಲ್ಲಿ ಇರುತ್ತದೆ. ಈ ವಿಶ್ವಮಂದಿರದಲ್ಲಿ ತನ್ನ ಅನಂತ ಶಕ್ತಿಯಿಂದ ಸೂರ್ಯ, ಚಂದ್ರ, ತಾರೆಗಳನ್ನು ಬೆಳಗಿಸುವ ಆ ಈಶ್ವರನಿಗೆ ನೀರಾಂಜನದಿಂದ ಆರತಿ ಬೆಳಗುವೆವು. ಅಸಂಖ್ಯ ಪುಷ್ಪಗಳ ಸುಗಂಧವನ್ನು ವಿಶ್ವದಲ್ಲಿಯೇ ಹರುಹುವ ದೇವನಿಗೆ ಊದುಬತ್ತಿಯ ವಾಸನೆಯನ್ನು ಅರ್ಪಿಸುವೆವು. ಭಿನ್ನ ಭಿನ್ನ ರೀತಿಯ ರುಚಿಕರವಾದ ಹಣ್ಣುಹಂಪಲ, ಕಂದಮೂಲ, ದವಸ ಧಾನ್ಯಗಳನ್ನು ಜೀವನಕೋಟಿಗಳಿಗೆ ಒದಗಿಸುತ್ತಿರುವ ಆತನಿಗೆ ಬಟ್ಟಲು ಹಾಲಿನ ನೈವೇದ್ಯ ನೀಡುವೆವು. ಸಮುದ್ರವನ್ನು ಉಕ್ಕೇರಿಸುವ, ನದಿ, ಕೆರೆಗಳನ್ನು ತುಂಬಿತುಳುಕಿಸುವ, ಮೋಘಗಳನ್ನು ಹುಟ್ಟಿಸುವ ದೇವನಿಗೆ ಒಂದು ಗಿಂಡಿ ನೀರನ್ನು ಅಭಿಷೇಕ ಮಾಡುತ್ತೇವೆ. ಇದೆಲ್ಲವೂ ಆ ಪರಮಾತ್ಮನನ್ನು ಹಾಸಕ್ಕೀಡು ಮಾಡುವದಕ್ಕಾಗಿಯೇ ? ಅಲ್ಲ, ಅಲ್ಲ.

ಹೋದ ಶತಮಾನದಲ್ಲಿ ಮಹಾರಾಷ್ಟ್ರದಲ್ಲಿ ಓರ್ವ ಸಮಾಜ ಸುಧಾರಣಾವಾದಿಗಳಾದ, 'ಲೋಕಹಿತವಾದಿ' ಎಂಬುವವರು ಇದೆಲ್ಲ ಮಂಕು ತನವೆಂದೂ ಮಂದಮತಿಗಳ ಲಕ್ಷಣವೆಂದೂ ಅಂದಿದ್ದಾರೆ. ಆದರೆ ಇದು ಮಂಪತನವಲ್ಲ, ಕೃತಜ್ಞತೆಯ ಕುರುಹು. ವಿರಾಟ ಸ್ವರೂಪಿಯಾದ ದೇವರನ್ನು ನಮ್ಮ ಕೈಯಲ್ಲಿ ಹಿಡಿಯುವದು ಹೇಗೆ? ಅವನನ್ನು ಯಾವ ಮಂದಿರದಲ್ಲಿ ಇಡುವದು ? ಅದುಕಾರಣ ನನ್ನ ಮನಸ್ಸಿನ ಸಮಾಧಾನ ಕ್ಕಾಗಿ ನಾನೊಂದು ಈ ಜಗದೀಶ್ವರನ ಸಣ್ಣ ಪ್ರತಿಮೆಯನ್ನು ಮಾಡಿ ಕೊಂಡು, ನನಗೆ ತಿಳಿದ ರೂಪವೊಂದನ್ನು ಕಲ್ಪಿಸಿ, ಹೂವು, ಸುಗಂಧ ಧೂಪ ದೀಪಗಳಿಂದ ಆ ಮೂರ್ತಿಯನ್ನು ಅರ್ಚಿಸುವೆನು. ಈ ರೀತಿ ನನ್ನ ಹೃದಯದಲ್ಲಿ ತುಂಬಿರುವ ಕೃತಜ್ಞತೆಯನ್ನು ಆತನಿಗೆ ತೋರಿಸುವೆನು. ಈ ಪೂಜೆಯು ವಿಶ್ವವ್ಯಾಪಿಯಾದ ಆ ದೇವನಿಗೆ ಸಲ್ಲುವದಲ್ಲವೇ ?

ತಂದೆಯು ತಾಟನಲ್ಲಿಯ ಅನ್ನವನ್ನು ತನ್ನ ಕೈಯಲ್ಲಿ ತೆಗೆದುಕೊಂಡು

ತನ್ನ ಪುಟ್ಟ ಕೈಗಳಿಂದ ತಂದೆಗೆ ಉಣಿಸಲು ಬರುವ ಪುಟ್ಟ ಬಾಲಕನನ್ನು ಕಂಡು ತಂದೆಗೆ ಅದು ಅಪಮಾನವೆನಿಸುವದೇ? ಇಲ್ಲ, ಪ್ರತಿಯಾಗಿ ಅಂತಃಕರಣವು ಹೆಚ್ಚಿ ಬಾಯಿ ತೆರೆದು ಬಾಲಕನ ತುತ್ತನ್ನು ಸ್ವೀಕರಿಸುತ್ತಾನೆ ತಂದೆ. ಅದರಂತೆ ಜಗತ್‌ಪಿತನು ಭಕ್ತನ ಪೂಜೆಗೆ ಎಂದೂ ಸಿಟ್ಟಾಗಲಾರ. ದೇವರು ಕೊಟ್ಟದ್ದನ್ನೇ ಆತನಿಗೆ ಅರ್ಪಿಸುವೆವು. ಗಂಗೆಯ ನೀರೇ ಗಂಗೆಗೆ ಅರ್ಘ್ಯರೂಪವಾಗಿ ಸಲ್ಲಿಸುವೆವು. ಯಾವ ರೀತಿಯಲ್ಲಿ ಆದರೇನು, ಕೃತಜ್ಞತೆಯನ್ನು ಪ್ರಕಟಿಸಲು ಬಂದರಾಯಿತು.

ಮಂದಿರದಲ್ಲಿದ್ದ ಮೂರ್ತಿಯ ಎದುರು ನಾವು ಏನನ್ನಾದರೂ ಅರ್ಪಿಸುವೆವು; ಆದರೆ ಅದರ ಉಪಯೋಗವೇನು? ದೇವರಂತೂ ಅದನ್ನು ಮುಟ್ಟುವದಿಲ್ಲ. ಪೂಜಾರಿಯಾಗಲೀ ಅಥವಾ ಮಂದಿರದ ಒಡೆಯನಾಗಲೀ ಆ ವಸ್ತುಗಳನ್ನು ತಕ್ಕೊಳ್ಳುತ್ತಾನೆ. ಮಂದಿರದಲ್ಲಿ ವ್ಯಭಿಚಾರ ಪೂಜೆಗೆ ಆರಂಭವಾಗಿ ಬಿಡುತ್ತದೆ. ರಾಮದೇವರಿಗೆಂದು ಇತ್ತ ಶಾಲು ಪೂಜಾರಿಯ ವೇಶ್ಯೆಯ ಮೈಮೇಲೆ ತೋರುವದು. ಆತನಿಗೆಂದು ಅರ್ಪಿಸಿದ ವಜ್ರದ ಆಭರಣಾದಿಗಳು ವಾರಾಂಗನೆಯರ ಮೈಮೇಲೆ ಹೊಳೆಯುವವು.

ನಾವೇನೋ ದೇವರ ಪೂಜೆಯೆಂದು ಮಾಡುತ್ತೇವೆ. ಆದರೆ ಅತ್ತ ಸಮಾಜದಲ್ಲಿ ಹೊಲಸು ಕೊಳಚೆ ಹಬ್ಬುತ್ತ ಹೋಗುತ್ತದೆ; ಇದಾದರೂ ತಪ್ಪುವದು ಹೇಗೆ? ಬಡವರನ್ನು ಹಿಂಡಿ ಹಿಪ್ಪಿಮಾಡಿ ತಂದ ಮುತ್ತು ಮಾಣಿಕಗಳು, ಶಾಲುಗಳು ಆ ದೇವನಿಗೆ ಹೇಗೆ ಸಹನವಾದಾವು? ಬಡವರ ಗೋಳೆಂಬ ಹೊಲಸಿನಲ್ಲಿ ಹುಟ್ಟಿದ ಆ ವಸ್ತುಗಳು ಮತ್ತೆ ಹೊಲಸನ್ನೇ ಕಾಣುವವು. ದೇವರಿಗೆ ಅರ್ಪಿಸುವಷ್ಟು ವಜ್ರ ವೈಡೂರ್ಯಾದಿಗಳು ನಮ್ಮ ಕಡೆಗೆ ಬಂದದ್ದಾದರೂ ಹೇಗೆ? ನಮಗಾಗಿ ( ಮಾನವ ಸಮಾಜಕ್ಕಾಗಿ ) ಹಗಲಿರುಳು ದುಡಿದು ಬೆವರು ಸುರಿಸಿ ಏನೂ ಕಾಣದೆ ಸವೆಯುತ್ತಿರುವ ದರಿದ್ರ ಸಮಾಜವು ಒಂದೆಡೆಗೆ ಎದ್ದು ಕಾಣುತ್ತಿದೆ. ಅದಕ್ಕಾಗಿ ನಾವು ಏನೂ ಮಾಡಿಲ್ಲ. ಅದರ ಕೊರತೆಯನ್ನು ತುಂಬಲು ಎಳ್ಳಷ್ಟೂ ಪ್ರಯತ್ನ ಮಾಡಿಲ್ಲ. ಆ ಕಾರಣದಿಂದಲೆ ನಮ್ಮಲ್ಲಿ ದ್ರವ್ಯ ಬೆಳೆಯುತ್ತ ಹೋಗಿದೆ. ಆದರೇನು ಮನಸ್ಸು ( ವಿವೇಕ ) ಯಾವಾಗಲೂ ಕಟಿಯುತ್ತಿರುತ್ತದೆ. ಕಾರಣ ಅದನ್ನು ಸಮಾಧಾನಗೊಳಿಸುವದಕ್ಕಾಗಿ, ಹಾಗು ನಮ್ಮ ಈ ಕುಂದು ಮುಚ್ಚಿಕೊಳ್ಳಬೇಕೆಂದು, ಜನರಲ್ಲಿ ದೊಡ್ಡವರು ಎಂದು ಎನಿಸಿಕೊಳ್ಳಬೇಕೆಂದು, ದೇವರಿಗೆ ಮುತ್ತು ಮಾಣಿಕಗಳನ್ನು ಅರ್ಪಿಸುತ್ತೇವೆ.

ಅನ್ಯಾಯದಿಂದ ಗಳಿಸಿದ ನಮ್ಮ ಲಕ್ಷಾಂತರದ ಆಸ್ತಿಯೊಳಗಿನ ಒಂದು ತುಣುಕು ಕಸವನ್ನು ದೇವರೆದುರು ಚೆಲ್ಲುತ್ತೇವೆ. ಅಷ್ಟರಿಂದಲೇ ಸ್ತುತಿ ಪಾಠಕರು, ಇಂಥವರನ್ನು ಧಾರ್ಮಿಕರು, ದಯಾವಂತರು, ಮಹಾನು ಭಾವರು ಎಂದು ಸಂಬೋಧಿಸುತ್ತಾರೆ, ಪತ್ರಿಕೆಗಳಲ್ಲಿ ಕೂಡ ಇಂಥವರ ಗೌರವವಾಗುತ್ತದೆ. ಇದೆಲ್ಲವೂ ಸಿರಿವಂತರ ಅಧೀನವಿರುವ ಪತ್ರಿಕೆಗಳಲ್ಲಿ! ಬಡವರ ವರ್ತಮಾನಪತ್ರಗಳಿದ್ದರೆ ಇಂಥವರನ್ನು ಕುರಿತು ಏನು ಬರೆಯು ತ್ತಿದ್ದರೋ ಏನೋ ?

ಮಂದಿರದಲ್ಲಿ ದೇವರ ಹೆಸರಿನಲ್ಲಿ ನಡೆದ, ಧರ್ಮದ ಮುಸುಕಿನಲ್ಲಿ ಹೊರಟ ಈ ವ್ಯಭಿಚಾರಕ್ಕೆ ಅಲ್ಲಿ ದ್ರವ್ಯವನ್ನು ಸುರಿಸುವವರೇ ಹೊಣೆಗಾ ರರು. ನಾವು ಮಾಡಿದ ಕೃತಿಯ ಪರಿಣಾಮವು ಏನಾದೀತೆಂಬದನ್ನು ವಿಚಾ ರಿಸದೆ ಇರುವದು ಒಂದು ಘೋರ ಅಧರ್ಮ! ದೇವರು ನಮಗೆ ಇತ್ತ ಬುದ್ಧಿಯ ಅಪಮಾನವಿದು. ಪರಮಾತ್ಮನು ನಮಗೆ ಇತ್ತ ಶ್ರೇಷ್ಠ ಕಾಣಿ ಕೆಯ ದುರುಪಯೋಗವಿದು!

ದ್ವಾರಕೆಯಂಥ ಪವಿತ್ರ ದೇವಸ್ಥಾನಗಳ ಲಿಲಾವು ಮಾಡುತ್ತಾರೆ- ಕೆರೆ ಸಿಂದಿ ಅಂಗಡಿಗಳ ಲಿಲಾವಿನಂತೆ! ಆ ಮೇಲೆ ಲಿಲಾವಿನಲ್ಲಿ ಒಡಿದ ಮಕ್ತೆದಾರನು ಅಲ್ಲಿ ಅರಸನಿದ್ದಂತೆ! ಛತ್ರ ಚಾಮರಗಳನ್ನು ಹಿಡಿಸಿಕೊಂಡು ಆತನು ವೈಭವದಿಂದ ಮೆರೆಯುತ್ತಾನೆ! ತಾನೇ ದೇವರೆಂದು ಭಾವಿಸು ತ್ತಾನೋ ಏನೋ ?

ಹೀಗೆ ಮೂರ್ತಿಪೂಜೆಯಲ್ಲಿ ನಾನಾರೀತಿಯಿಂದ ಹೊಲಸು ಸೇರಿ ಕೊಂಡಿದೆ. ಕಣ್ಣುತೆರೆದು ಮೂರ್ತಿಪೂಜೆ ಸುರುವು ಆಗಬೇಕಾಗಿದೆ. ಮೂರ್ತಿಯ ಎದುರು ದುಡ್ಡು ತೂರುವದನ್ನು ನಿಲ್ಲಿಸಬೇಕು. ಎಲ್ಲರೂ ನಮ್ರಭಾವದಿಂದ ಬರಬೇಕಾದ ಸ್ಥಾನವೆಂದರೇನೆ ದೇವಮಂದಿರ. ಅದನ್ನು ಅಚ್ಚುಕಟ್ಟಾಗಿ ಸ್ವಚ್ಛವಾಗಿ ಇಡುವ ಹೊಣೆ ಸರಕಾರದ್ದಿರಬೇಕು. ಅಲ್ಲಿ ಬಂದೊಡನೆ ಮಂಗಲ ಮತ್ತು ಪವಿತ್ರ ವಿಚಾರಗಳೇ ಮನಸ್ಸಿನಲ್ಲಿ ಬರುವಂತೆ ವಾತಾವರಣವನ್ನು ಕಲ್ಪಿಸಬೇಕು. ಪವಿತ್ರ ಮಂದಿರಕ್ಕೆ ಬಂದು ಪವಿತ್ರ ನಾಗಿ ಹೊರಬಿದ್ದು ಜಗತ್ತಿನ ಪ್ರತಿನಿತ್ಯದ ವ್ಯವಹಾರಗಳಲ್ಲಿ ಪಾವಿತ್ರ್ಯವನ್ನು ಮಾನವನು ಹರಡಬೇಕೆಂಬುವದೇ ಮೂರ್ತಿಪೂಜೆಯ ಪ್ರಧಾನ ಹೇತುವಾ ಗಿದೆ. ಮೂರ್ತಿಪೂಜೆಯ ಮಹಿಮೆ ಭಾರತೀಯ ಸಂಸ್ಕೃತಿಯಲ್ಲಿ ಹಿರಿದಾ ಗಿದೆ. ವಾಸ್ತವಿಕವಾಗಿ ಮೂರ್ತಿಪೂಜೆಯಿದ್ದ ಸಮಾಜಗಳಲ್ಲಿ ಪ್ರೇಮ,

ಸ್ನೇಹ, ದಯೆ ಇವೆಲ್ಲವುಗಳ ಸೂರೆಯಾಗಬೇಕು. ಆದರೆ ಉಚ್ಚನೀಚ ಭಾವನೆಗಳ ದೆವ್ವ ನಮ್ಮ ಮಂದಿರಗಳಲ್ಲಿ ಹೊಕ್ಕದ್ದು ಅತ್ಯಂತ ಖೇದದ ಮಾತಾಗಿದೆ. ನಮ್ಮ ದೇವರ ಪ್ರತಿಮೆಗಳು ಕೂಡ ಕುಲಗೆಡುತ್ತವೆ. ಎಲ್ಲಿ ಆ ಮೂರ್ತಿ ಪತಿತವೂ ಭ್ರಷ್ಟವೂ ಆಗುತ್ತದೆಯೋ, ಅಲ್ಲಿ ಶುದ್ಧಿ ಕಾರ್ಯ ವನ್ನು ಮಾಡುವವರಾದರೂ ಯಾರು? ಭೂದೇವರೇ, ಬ್ರಾಹ್ಮಣರೇ!

ನಿಜವಾಗಿ ಮಂದಿರಗಳು ಬೇಕಾಗಿಲ್ಲ. ಈ ವಿಶ್ವಮಂದಿರದಲ್ಲಿ ಅನೇಕ ಮೂರ್ತಿಗಳಿವೆ. ಈ ವಿಶ್ವದಲ್ಲಿಯ ಪ್ರತಿಯೊಂದು ಅಣುರೇಣುವಿ ನಲ್ಲಿ ಆ ವಿಶ್ವದ ಬೆನ್ನ ಹಿಂದೆ ಇದ್ದ ಆ ಶಕ್ತಿಯನ್ನು ಕಾಣಬಹುದು. ಓರ್ವ ಕ್ರಿಶ್ಚನ್ ಪಾದ್ರಿಯು ಒಬ್ಬ ಅರಬನನ್ನು ಕೇಳಿದನಂತೆ. "ದೇವ ರಿದ್ದಾನೆಂದು ನಿನಗೆ ಯಾರು ಕಲಿಸಿದರು?" ಆಗ ಆ ಅರಬನು ಅವನಿಗೆ ಹೇಳಿದನು. "ಈ ಮರುಪ್ರದೇಶದಲ್ಲಿ ಅಲ್ಲಲ್ಲಿ ಹರಿಯುವ ಝರಿಗಳಿಂದ, ಈ ಮರುಭೂಮಿಯಲ್ಲಿ ಬೆಳೆದು ಸವಿಯಾದ ಹಣ್ಣುಗಳನ್ನು ಕೊಡುವ ಖರ್ಜೂರ ಗಿಡಗಳಿಂದ, ಇರುಳಿನಲ್ಲಿ ಮಿನುಗುವ ತಾರೆಗಳಿಂದ ಕಲಿತು ಕೊಂಡೆನು."ಇದನ್ನು ಕೇಳಿ ಪಾದ್ರಿಯು ತಲೆಬಾಗಿ ಹೊರಟುಹೋದನಂತೆ.

ದೇವರ ಮೂರ್ತಿ ಎಲ್ಲಿ ಇಲ್ಲ? ತಾರೆಗಳನ್ನು ಕಂಡರೆ ಕೈಮುಗಿಯ ಬೇಕೆಂದು ಎನಿಸುವದು. ಸುಂದರ ಸುವಾಸಿಕ ಕುಸುಮಗಳು, ಸದ್ಗುಣ ಮಂಡಿತ ಮಹಾವ್ಯಕ್ತಿಗಳು, ಭವ್ಯವಾದ ದೃಶ್ಯಗಳು ಇವೆಲ್ಲವುಗಳನ್ನು ಕಂಡೊಡನೆ ಕೈಮುಗಿಯುವೆವು. ಅನಂತವಾದ ಈ ವಿಶ್ವದಲ್ಲಿ ಅನಂತ ಮೂರ್ತಿಗಳೂ ಅನಂತ ಮಂದಿರಗಳೂ ಇವೆ. ಆದರೆ ನೋಡುವವರು, ಕಾಣುವವರಾರು?

ವಿವೇಕಾನಂದರ ಒಂದು ವಾಕ್ಯವನ್ನು ಇಲ್ಲಿ ಉದಾಹರಿಸುವೆನು. "ಯಾವ ಮೂರ್ತಿಪೂಜೆಯು ಜಗತ್ತಿಗೆ ಶ್ರೀ ರಾಮಕೃಷ್ಣ ಪರಮಹಂಸ ರನ್ನು ದಯಪಾಲಿಸಿದೆಯೋ, ಆ ಮೂರ್ತಿಪೂಜೆಯಲ್ಲಿ ಸಾವಿರ ದೋಷ ಗಳಿದ್ದರೂ ನಾನು ಅದನ್ನು ಅಪ್ಪಿಕೊಳ್ಳುವೆ." ಇದರಿಂದ ಒಂದು ಮಾತನ್ನು ನಿರ್ದಾಕ್ಷಿಣ್ಯದಿಂದ ಹೇಳಬೇಕಾಗಿದೆ. ಸಾಧನಗಳು ಯಾವಾ ಗಲೂ ಪವಿತ್ರವೇ ಇರುತ್ತವೆ. ಆದರೆ ಸಾಧಕನು ಸ್ವಾರ್ಥಿಯಾದೊಡನೆ ಅದರ ರೂಪವನ್ನು ಆತನು ತನ್ನ ಮಟ್ಟಿಗೆ ಕೆಡಿಸಿಕೊಳ್ಳುತ್ತಾನೆ. ಗಂಗಾ ಜಲವು ಪವಿತ್ರವಲ್ಲವೇ? ಆ ಉದಕವನ್ನು ಕೆಡಿಸುವವರು ಇದ್ದರೆ ಅದು ಗಂಗಾನದಿಯ ತಪ್ಪೇ?

# ೨೧. ಸಂಕೇತಗಳು

ಪ್ರತಿಯೊಂದು ಸಂಸ್ಕೃತಿಯು ಕೆಲವೊಂದು ಸಂಕೇತಗಳನ್ನು ನಿರ್ಮಿಸುತ್ತದೆ. ಇಡೀ ಮರವು ತನ್ನಲ್ಲಿದ್ದ ವಿಸ್ತಾರದ ಸಾರವನ್ನು ಹಣ್ಣಿನಲ್ಲಿ ಸಂಗ್ರಹಿಸಿದಂತೆ ಸಂಕೇತಗಳಲ್ಲಿ ಅನಂತವಾದ ಅರ್ಥವು ಅಡಕವಾಗಿರುತ್ತದೆ. ಸೂತ್ರಗ್ರಂಥಗಳ ರಚನೆ ನಮ್ಮಲ್ಲಿ ಪ್ರಸಿದ್ಧವಿದೆ. ಪ್ರತಿಯೊಂದು ಶಾಸ್ತ್ರಕ್ಕೂ ಒಂದು ಸೂತ್ರಗ್ರಂಥವಿದೆ. ಸಂಗ್ರಹವಾಗಿ ಆಯಾ ಶಾಸ್ತ್ರಗಳ ಸಿದ್ಧಾಂತಗಳನ್ನು ಸೂತ್ರದಲ್ಲಿ ಹೇಳಿದ್ದು ತೋರುತ್ತದೆ. ಅದರಂತೆ ಸಂಕೇತಗಳು ಸಂಸ್ಕೃತಿಯ ಸೂತ್ರಗಳು ಇದ್ದಂತೆ. ನಾವು ಮಾಡುವ ಪ್ರತಿಯೊಂದು ಕೃತಿಯು ನಮ್ಮ ಒಳವಿಚಾರದ ಸಂಕೇತವೇ. ನಮ್ಮ ನೂರಾರು ಕೃತಿಗಳಲ್ಲಿ ನಮ್ಮ ಮನಸ್ಸು ಒಡೆದು ಕಾಣುತ್ತದೆ. ಮೊದಲು ಬಾಗುವದು ನಮ್ಮ ಮನಸ್ಸು, ಆ ಮೇಲೆ ನಮ್ಮ ಶಿರಸ್ಸು. ಮೊದಲು ತುಂಬಿ ಬರುವದು ಹೃದಯ, ಆ ಮೇಲೆ ಕಣ್ಣು. ಮೊದಲು ಮನಸ್ಸಿನಲ್ಲಿ ಸಿಟ್ಟು, ಆ ಮೇಲೆ ಕೈ ಬಾಯಿಗಳಲ್ಲಿ. ಕೃತಿಗಳೆಂದರೆ ಮನಸಿಗೆ ಮೂಡಿದ ಮೊಳಕೆಗಳು.

ಭಾರತೀಯ ಸಂಸ್ಕೃತಿಯಲ್ಲಿ ನೂರಾರು ಪ್ರತೀಕಗಳು ಇವೆ. ನಾವು ಅದರಲ್ಲಿ ಇದ್ದ ಅರ್ಥ ತಿಳಿದುಕೊಳ್ಳಲು ಪ್ರಯತ್ನಿಸಬೇಕು. ಅರ್ಥಹೀನ ಸಂಕೇತಗಳ ಪೂಜೆಗೆ ಪ್ರಾರಂಭವಾದೊಡನೇ ಧರ್ಮವು ಯಂತ್ರಮಯವಾಗುತ್ತದೆ. ಇಂತಹ ಸಂಕೇತಗಳ ಪೂಜೆಯ ಪರಿಣಾಮವು ಜೀವನದ ಮೇಲೆ ಆಗುವದಿಲ್ಲ. ನಿರ್ಜೀವ ಪ್ರತೀಕಗಳು ಬೇಡಾಗುತ್ತವೆ. ಹೊಸ ಹುಮ್ಮಸ್ಸಿನ ಯುವಕರು ಅವುಗಳನ್ನು ಎಸೆದೊಗೆಯುತ್ತಾರೆ. ಈ ಸಂಕೇತಗಳ ಅರ್ಥವನ್ನು ನಮಗೆ ತಿಳಿಸಿ ಹೇಳಿರೆಂದು ಅವರ ಬೇಡಿಕೆ. ಅರ್ಥವಿದೆ ಎಂದು ಕಂಡೊಡನೆಯೇ ಅವೇ ನಿರ್ಜೀವವೆನಿಸಿದ ಪ್ರತೀಕಗಳು ಜೀವಕಳೆ ತುಂಬಿ ಎದ್ದು ಕಾಣುವವು. ಆ ಸಂಕೇತಗಳಲ್ಲಿ ನವಚೈತನ್ಯವು ಉಂಟಾಗುವದು.

ಅರ್ಥಪೂರ್ಣ ದೃಷ್ಟಿಯಿಂದ ಸಂಕೇತಗಳನ್ನು ನೋಡುವ ಒಂದು ಚಟವು ನನಗಿದೆ. ನನಗೆ ಅವುಗಳಲ್ಲಿ ಕಂಡ ಅರ್ಥ ಒಂದು ವೇಳೆ ನಿಜವಿರಲಿಕ್ಕಿಲ್ಲ. ಆಯಾ ಸಂಕೇತಗಳು ಕಲ್ಪಿಸಲ್ಪಟ್ಟಾಗ ಇದೇ ಅರ್ಥವಿತ್ತೆಂದು ಹೇಳಲು ಬರಲಿಕ್ಕಿಲ್ಲ. ಆದರೆ ಹೊಸದೊಂದು ಅರ್ಥವನ್ನು ಹಳೇ ಸಂಕೇತದಲ್ಲಿ ಕಂಡರೆ ಅದೂ ತಪ್ಪಲ್ಲ. ಅರ್ಥವು ಬೆಳೆಯುತ್ತ ನಡೆದದೆ.

ಭಾರತೀಯ ಸಂಸ್ಕೃತಿಯ ಪ್ರಧಾನ ಸಂಕೇತ (ಪ್ರತೀಕ) ಎಂದರೆ ಕಮಲ. ಇದು ಎಲ್ಲ ಸಂಕೇತಗಳ ಅರಸನೆಂದರೂ ಅಡ್ಡಿ ಇಲ್ಲ. ಭಾರತೀಯ ಸಂಸ್ಕೃತಿಯಲ್ಲಿ ತಾವರೆಯ ಪರಿಮಳವು ಚೆನ್ನಾಗಿ ಹಬ್ಬಿದೆ. ಇಂತಹ ಈ ಕಮಲ ಪುಷ್ಪದಲ್ಲಿ ಯಾವ ಅರ್ಥವು ಅಡಕವಾಗಿದೆ?

ಈಶ್ವರನ ಎಲ್ಲ ಅವಯವಗಳನ್ನು ನಾವು ಕಮಲಕ್ಕೆ ಹೋಲಿಸುತ್ತೇವೆ. ಕಮಲನಯನ, ಕಮಲವದನ, ಕರಕಮಲ, ಪದಕಮಲ, ಹೃದಯಕಮಲ, ಹೀಗೆ ಅನ್ನುವದರಲ್ಲಿ ಯಾವ ಸ್ವಾರಸ್ಯವಿದೆ?- ಅಲಿಪ್ತತೆಯು ಕಮಲದ ವೈಶಿಷ್ಟ್ಯ. ನೀರಿನಲ್ಲಿದ್ದರೂ ನೀರಿನ ಮೇಲೆಯೇ ಅರಳುವದು. ಕೆಸರಿನಲ್ಲಿ ಹುಟ್ಟಿದರೂ ಕೆಸರಿನ ಮೇಲೆ ಬೆಳೆಯುವದು. ತಾವರೆಯಲ್ಲಿ ಅನಾಸಕ್ತಿ ಇದೆ. ಈಶ್ವರನು ಎಲ್ಲವನ್ನೂ ಮಾಡಿ, ಮಾಡಿಸಿ, ಮಾಡದವನಂತೆ ಇದ್ದಾನೆಂದು ನಾವು ಅವನನ್ನು ಬಣ್ಣಿಸುತ್ತೇವೆ. ಜಗತ್ತಿನ ವಿಸ್ತಾರ ವ್ಯಾಪಾರವನ್ನೆಲ್ಲ ಅವನೇ ನಡಿಸುತ್ತಾನಾದರೂ, ಅದನ್ನೆಲ್ಲ ಅನಾಸಕ್ತಿಯಿಂದ ನಡೆಯಿಸುತ್ತಾನೆ.

ಅದರಂತೆ ಕಮಲವಲ್ಲಿ ಅಲಿಪ್ತತೆ ಇದೆ. ಅದು ಕೆಸರಿನಲ್ಲಿ ಹುಟ್ಟಿದರೂ ಅದರಲ್ಲಿದ್ದ ಗುಣಗಳನ್ನಷ್ಟೇ ಸ್ವೀಕರಿಸುತ್ತದೆ. ಕೆಸರಲ್ಲಿದ್ದ ರಮಣೀಯತೆಯನ್ನಷ್ಟೇ ಆಯ್ದುಕೊಳ್ಳುತ್ತದೆ. ಹಗಲಿರುಳು ತಪಸ್ಸನ್ನು ಮಾಡಿ ತನ್ನ ಹೃದಯವನ್ನು ಮಕರಂದದಿಂದ ತುಂಬಿಕೊಳ್ಳುತ್ತದೆ. ಪರಿಮಳವನ್ನು ಬೀರುತ್ತದೆ. ತಾವರೆಯ ಮುಖವು ಯಾವಾಗಲೂ ಸೂರ್ಯನತ್ತ ಇರುತ್ತದೆ. ಬೆಳಕಿನೊಡನೆ ಅರಳುವದು, ಬೆಳಕು ಇಲ್ಲದೊಡನೆ ಮುಚ್ಚಿಕೊಳ್ಳುವದು ಅದರ ಗುಣ. ಬೆಳಕೇ ಕಮಲದ ಉಸಿರು; ಅದೇ ಅದರ ಅಸುವು. ಭಾರತೀಯ ಸಂಸ್ಕೃತಿಯಾದರೂ ಬೆಳಕಿನ ಉಪಾಸನೆಯನ್ನೇ ಮಾಡುವಂತಹದು. "ತಮಸೋಮಾ ಜ್ಯೋತಿರ್ಗಮಯ"- ಇದೇ ನಮ್ಮ ಭಾರತೀಯ ಸಂಸ್ಕೃತಿಯ ಜ್ಯೋತಿರ್ಮಯ ಆರತಿಯು.

ತಾವರೆಯಲ್ಲಿ ಶತಪತ್ರ, ಸಹಸ್ರ ಪತ್ರಗಳೆಂದು ತರಗಳಿವೆ. ಅವುಗಳಿಗೆ ನೂರು ಸಹಸ್ರ ಹೀಗೆ ಪಕಳೆಗಳು ಇರುತ್ತವೆ. ಅದರಂತೆ ನಮ್ಮೀ ಭಾರತೀಯ ಸಂಸ್ಕೃತಿಗೂ ಶತಪತ್ರಗಳಿವೆ. ನೂರಾರು ಜಾತಿ ಸಂಘಗಳು, ಅನೇಕ ವಂಶ, ಧರ್ಮ, ಪಂಥ ಇವುಗಳಲ್ಲಿಯ ಸಾರವನ್ನು ಸೆಳೆದು ಬೆಳೆಯುತ್ತಿದೆ, ನಮ್ಮೀ ಸಂಸ್ಕೃತಿಯ ಕಮಲ. ನಿತ್ಯ ನಿತ್ಯವಾಗಿ ಹೊಸ ಹೊಸ ಪಕಳೆಗಳನ್ನು ತನ್ನಲ್ಲಿ ಜೋಡಿಸಿಕೊಳ್ಳುತ್ತಿದೆ. ಭಾರತೀಯ ಸಂಸ್ಕೃತಿ

ಕಮಲವು ಇನ್ನೂ ಪೂರ್ಣ ಅರಳಿಲ್ಲ! ಅರಳುತ್ತಲಿದೆ! ವಿಶ್ವದ ಅಂತ್ಯದ ವರೆಗೆ ಅರಳುತ್ತಲೇ ಇರುವದು; ತನ್ನ ಮಕರಂದವನ್ನು ಹರಡುತ್ತ ಅನಂತ ಪಕಳೆಗಳ ಕಮಲಪುಷ್ಪವಾಗಿ ಮೆರೆಯುವದು. ಪೃಥ್ವಿಯೂ ಅನಂತವಲ್ಲವೇ? ಕಾಲವೂ ಅನಂತ! ಜ್ಞಾನವೂ ಅನಂತ! ಅಂತೆಯೇ ಅದರೊಡನೆ ಹೊಂದಿದ ನಮ್ಮೀ ಸಂಸ್ಕೃತಿಯೂ ಅನಂತವಾಗಿ ಬೆಳೆಯುವದು!

ಪವಿತ್ರ ಮನೋಹರತೆಯಿಂದ ತುಂಬಿ ತುಳುಕುತ್ತಿರುವ ಕಮಲದ ಸುತ್ತು, ಅದರ ಗುಣಗಾನಮಾಡುತ್ತ ನೂರಾರು ತುಂಬಿಗಳು ನೆರೆಯುವವು. ಆದರೆ ತಾವರೆಗೆ ಅದರ ಕಡೆಗೆ ಲಕ್ಷವೇ? ಅದರಂತೆ ಭಾರತೀಯ ಸಂಸ್ಕೃತಿಯು ಕೂಡ ಆತ್ಮಸ್ತುತಿಯತ್ತ ಲಕ್ಷಕೊಡಲಾರದು. ಜಗತ್ತು ಅದನ್ನು ತೆಗಳಲಿ, ಅಥವಾ ಹೊಗಳಲಿ, ಭಾರತೀಯ ಸಂಸ್ಕೃತಿಯು ಮಾತ್ರ ಯಾವ ಆಡಂಬರವನ್ನೂ ತೋರದೆ ಅರಳುತ್ತ ಹೋಗುವದು. ಜಗತ್ತು ಗೀತೆಯನ್ನು ಎತ್ತಿ ಹಿಡಿಯಲಿ, ಬುದ್ಧನ ಮಹತಿಯನ್ನು ಹೊಗಳಲಿ, ಗಾಂಧಿಯವರನ್ನು ಮಹಾತ್ಮರೆಂದು ಸಂಬೋಧಿಸಲಿ, ರವೀಂದ್ರರನ್ನು ಮಹರ್ಷಿಯೆಂದು ಕರೆಯಲಿ, ಭಾರತೀಯ ಸಂಸ್ಕೃತಿಯು ತನ್ನ ಮಕ್ಕಳಿಗೆ ಹೇಳುವ ಮಾತು ಒಂದೇ. ನೀವು ನಿಮ್ಮ ನಿಮ್ಮ ಕರ್ತವ್ಯ ಕರ್ಮಗಳಲ್ಲಿ ನಿರತರಾಗಿರಿ; ನಿಂದೆ, ಸ್ತುತಿಗಳನ್ನು ಲೆಕ್ಕಿಸದೆ ಧ್ಯೇಯ ಸಾಗರದಲ್ಲಿ ಈಸಿ, ಸ್ವಕರ್ಮಗಳಲ್ಲಿ ಮಗ್ನರಾದಿರೆಂದರೆ ಕೀರ್ತಿ ತಾನೇ ನಿಮ್ಮ ಬೆನ್ನು ಹತ್ತುವದ ರಲ್ಲಿ ಸಂದೇಹವಿಲ್ಲ. ಆಗ ತಾನೇ ಜಗತ್ತು ನಿಮ್ಮ ಪವಾಡಗಳನ್ನು ಹಾಡುವದು.

ಕಮಲದ ಸಂದೇಶವೂ ಇಷ್ಟೇ. "ಅನಾಸಕ್ತರಾಗಿರಿ, ಬೆಳಕನ್ನು ಪೂಜಿಸಿರಿ, ಅಮಂಗಲದಲ್ಲಿ ಮಂಗಲವನ್ನು ಕಾಣಿರಿ, ತಪವನ್ನು ಆಚರಿಸಿರಿ, ಸತ್ಕರ್ಮವನ್ನೇ ಮಾಡಿರಿ. ನಿತ್ಯ ನಿತ್ಯ ಹೊಸ ಪಾಠವನ್ನು ಕಲಿಯಿರಿ." ಭಾರತೀಯ ಸಂಸ್ಕೃತಿ ಎಂದರೆ ತಾವರೆಯು.

ಯಜ್ಞವು ಇನ್ನೊಂದು ಸಂಕೇತ. ಭಾರತೀಯ ಸಂಸ್ಕೃತಿಯ ಆದೇಶವೆಂದರೆ ತ್ಯಾಗವು. ಈ ಮಾನವ ಸಮಾಜದಲ್ಲಿ ನಾವೆಲ್ಲರೂ ಪರ ಸ್ಪರರು ಕೂಡಿ ನಡೆಯಬೇಕಾಗಿದೆ. ಅದುಕಾರಣ ಒಬ್ಬರಿಗಾಗಿ ಇನ್ನೊ ಬ್ಬರು ಸವೆಯಲೇಬೇಕು; ತ್ಯಾಗಮಾಡಬೇಕು; ಪರಸ್ಪರರ ಜೀವನವು ಸಮ ರಸವಾಗಿ ಸಾಗಬೇಕಾಗಿದೆ. ಅದುಕಾರಣ ಸಂಸ್ಕಾರವು ಧಾರ್ಮಿಕವಿರಲಿ, ಸಾಮಾಜಿಕವಿರಲಿ, ಹೋಮವು ಅವಶ್ಯವಾಗಿ ಇದ್ದೇ ಇದೆ ನೀವು ಯಾವದೇ

ಧ್ಯೇಯದತ್ತ ಸಾಗಲಿ, ಅಥವಾ ಯಾವದೇ ಸಾಮಾಜಿಕ ಕಾರ್ಯ ಕೈಕೊಳ್ಳಲಿ, ಹೋಮವು ಅಗತ್ಯವೇ ಆಹುದು. ಆ ಕಾರ್ಯವನ್ನು ಸಾಧಿಸುವಾಗ ಗುರಿಯನ್ನು ಮುಟ್ಟುವಾಗ ಕ್ರಮೇಣ ತ್ಯಾಗದ (ಹೋಮದ) ಪ್ರಮಾಣವನ್ನು ಬೆಳೆಯಿಸಬೇಕಾಗುವದು.

ಉಪನಯನದ ಕಾಲಕ್ಕೆ ಹೋಮಮಾಡಲೇ ಬೇಕಾಗುತ್ತದೆ. ಉಪನಯನವು ಮಾನವನ ಜ್ಞಾನಾರ್ಜನೆಯ ಮೊದಲ ಮೆಟ್ಟಲು. ಆ ಜ್ಞಾನವನ್ನು ಗಳಿಸುವದಕ್ಕಾಗಿ ಇತರ ಸುಖಗಳ ಹೋಮ ಮಾಡಬೇಕಲ್ಲವೇ? "ಸುಖಾರ್ಥಿನಃ ಕುತೋ ವಿದ್ಯಾ, ಕುತೋ ವಿದ್ಯಾರ್ಥಿನಃ ಸುಖಂ'' ಎಂಬ ವಾಕ್ಯವು ಸದಾ ನೆನಪಿನಲ್ಲಿರಬೇಕು.

ವಿವಾಹ ಸಮಯಕ್ಕೆ ಹೋಮವಿದೆ. ನಿಮ್ಮಿಬ್ಬರಿಗೆ ಪ್ರಪಂಚದಲ್ಲಿ ಸುಖದೊರೆಯಬೇಕೆಂಬ ಇಚ್ಛೆ ಇದ್ದರೆ ನಿಮ್ಮಿಬ್ಬರ ವೈಯಕ್ತಿಕ ಇಚ್ಛೆಗಳ ಹೋಮ ಮಾಡಲೇಬೇಕು, ಅಂದರೆ ಮಾತ್ರ ನಿಮ್ಮ ಗೃಹಸ್ಥಾಶ್ರಮವು ಸುಖಕರವಾಗುವದು. ಗಂಡನು ತನ್ನದೇ ನಡೆಯಬೇಕು, ತನಗೆ ಸುಖ ಸಿಗಬೇಕೆಂಬ ಹಟತೊಟ್ಟರೆ ಅಂತಹ ಮನೆಯಲ್ಲಿ ಆನಂದವು ನಿಲ್ಲುವದಾದರೂ ಹೇಗೆ? ಸಂಸಾರವೆಂದರೆ ಸಹಕಾರದಿಂದ ಹುಟ್ಟಿದ ಸುಖಸಾರ. ಪರಸ್ಪರರು ಸುಖಕೊಟ್ಟು ತೆಗೆದುಕೊಳ್ಳಬೇಕು. ನಿಮ್ಮೆಲ್ಲರ ಗೃಹಸ್ಥಾಶ್ರಮವಾದರೂ ಸಾಮಾಜಿಕ ಸೌಖ್ಯಕ್ಕಾಗಿಯೇ ಅಲ್ಲವೇ! ಸಮಾಜವು ಬೇಡಿದಾಗ ನೀವು ನಿಮ್ಮ ಸರ್ವಸ್ವವನ್ನೂ ಆಸ್ತಿಪಾಸ್ತಿ ಮಕ್ಕಳು ಮರಿಗಳನ್ನೂ ಸಮಾಜಕ್ಕೆ ಅರ್ಪಿಸಲು ಸಿದ್ಧರಿರಬೇಕು. ಈ ಸೇವೆ, ತ್ಯಾಗಪೂರ್ವಕ ಸೇವೆ ಅಂದರೇನೇ ಹೋಮವು, ಯಜ್ಞವು.

ಪಾವಿತ್ರ್ಯವು ಚಿರಯಜ್ಞದ ಪೂರ್ಣಫಲವು, ಈ ಜೀವನದಲ್ಲಿ ಪಾವಿತ್ರ್ಯವನ್ನು ಕ್ರಮೇಣ ಗಳಿಸಿ ಬೆಳೆಯಿಸಲು, ಕ್ಷುದ್ರ ವಸ್ತುಗಳನ್ನೆಲ್ಲ, ಕ್ಷುದ್ರ ಆಶೆ ಆಕಾಂಕ್ಷೆಗಳನ್ನೆಲ್ಲ ಹೋಮ ಮಾಡಲೇ ಬೇಕಾಗುತ್ತದೆ. ಸರ್ವಸ್ವ ತ್ಯಾಗವೇ ನಿರ್ವಾಣವು. ಅದೇ ಮೋಕ್ಷವು. ನಮ್ಮ ಸಾವನ್ನು ಕೂಡ ಆದರದಿಂದ ಸ್ವಾಗತಿಸುವದೇ ತ್ಯಾಗದ (ಹೋಮದ) ಪರಾಕಾಷ್ಠೆ, ಅದುವೇ ಪಾವಿತ್ರ್ಯದ ಪೂರ್ಣತೆ.

ಭಸ್ಮ ಪ್ರತೀಕವು ಯಜ್ಞ ಪ್ರತೀಕದ ರೂಪಾಂತರವು. ಸಂಧ್ಯಾವಂದನೆ ಮಾಡುವಾಗ, ದೇವಪೂಜೆಮಾಡುವಾಗ ನಾವು ಭಸ್ಮ ಹಚ್ಚುತ್ತೇವೆ. ಸರ್ವಾಂಗಕ್ಕೆ ಭಸ್ಮ ಹಚ್ಚುವದು, ದೇವರನ್ನು ಹೊಂದುವದು,

ಧ್ಯೇಯಪೂರ್ಣತೆಯನ್ನು ಪಡೆಯುವದು, ಅದೇನು ಹಗುರಾದ ಮಾತಲ್ಲ. ಅದಕ್ಕಾಗಿ ಅಗ್ನಿಯನ್ನು ಪ್ರಜ್ವಲಿಸಿ, ಅದರಲ್ಲಿ ಸ್ವಾರ್ಥ ಸುಖವಿಲಾಸಗಳನ್ನು ಸುಟ್ಟು ಭಸ್ಮಮಾಡಬೇಕಾಗುತ್ತದೆ. ಸರ್ವೇಂದ್ರಿಯ ವಾಸನೆಗಳು ಕೂಡ ಅದರಲ್ಲಿ ಸುಟ್ಟು ಬೂದಿಯಾಗಬೇಕು; ದೇವರ ಮನೆಯನ್ನು ಸೇರಬೇಕಾದರೆ ಇಂತಹ ಭಸ್ಮವನ್ನೇ ಪೂಸಿಕೊಂಡು ಸೇರಬೇಕು. ಧ್ಯೇಯದ ಪೂಜೆಗೈಯುವದಿದ್ದರೆ ತನ್ನದೆಂಬ ಸ್ವಾರ್ಥ ಸರ್ವಸ್ವದ ಮೇಲೆ ಕೆಂಡವನ್ನು ಇಡಬೇಕಾಗುತ್ತದೆ.

"ಈ ಸ್ವಾರ್ಥ ಸಂಸಾರಕ್ಕೆ ಬೆಂಕಿ ಕೊಟ್ಟಮೇಲೆ ಮತ್ತೆ ಹಿಂದೆ ನೋಡಬೇಡ'' ಎಂದು ತುಕಾರಾಮ ಮಹಾರಾಜರು ಹೇಳಿದ್ದಾರೆ. ಆ ಮೇಲೆ ಹಿಂದಿನವರ ಗೊಡವೆ ನಿನಗೇಕೆ? ಮುಂದೆ ನಿನ್ನ ಧ್ಯೇಯ ಮತ್ತು ನೀನು. ಅಮಳನೇರದ ಸಂತರಾದ ಸಖಾರಾಮ ಮಹಾರಾಜರವರು ಪ್ರತಿವರ್ಷ ಪಂಢರಪುರಕ್ಕೆ ಹೊರಡುವಾಗ ತಮ್ಮ ಗುಡಿಸಲಿಗೆ ಬೆಂಕಿ ಹಚ್ಚಿ ಹೋಗುತ್ತಾರೆ. ದೇವರ ದರ್ಶನಕ್ಕೆ ಹೋಗುವಾಗ ಬೇಡ ಈ ಮಾಯಾ ಮೋಹಗಳು! ದೇವರನ್ನು ದೊರಕಿಸುವದು, ಧ್ಯೇಯವನ್ನು ಸಾಧಿಸುವದು ಇವೆಲ್ಲವುಗಳು ಸತಿಯ ವ್ರತಗಳಿದ್ದಂತೆ!

ನಾವು ನಮ್ಮ ಹಣೆಗೆ ಗಂಧವನ್ನು ಹಚ್ಚುವದಾದರೂ ಏತಕ್ಕೆ? ದೇವರಿಗೆ ಮೊದಲು ಆ ಗಂಧವನ್ನು ಹಚ್ಚಿ ಆ ಮೇಲೆ ನಾವು ಹಚ್ಚಿಕೊಳ್ಳುತ್ತೇವೆ. ದೇವರ ಪೂಜೆಯನ್ನು ಮುಗಿಸಿ ಆತನ ಅಡಿಯಲ್ಲಿ ನಮ್ಮ ಶಿರಸ್ಸನ್ನು ಇಡುತ್ತೇವೆ. ಆಗ ಆತನ ಅಡಿಯಲ್ಲಿ ಸಮರ್ಪಿಸಿದ ಗಂಧವೇ ನಮ್ಮ ಮಸ್ತಕಕ್ಕೆ ಗಂಧ. "ಇನ್ನು ಮೇಲೆ ಈ ಮಸ್ತಕವು ನನ್ನದಲ್ಲ, ಆ ಪರಮಾತ್ಮನದು" ಎಂಬ ಈ ಭಾವನೆಯೇ ಇದರಲ್ಲಿ ಅಡಕವಾಗಿದೆ. ಈ ಮಸ್ತಕದಲ್ಲಿ ದೇವರಿಗೆ ಪ್ರಿಯವಾದಂಥ ವಿಚಾರಗಳು ಪ್ರಾರಂಭವಾಗುವವು. ಇದರಲ್ಲಿದ್ದ ಹೊಲಸು ಸ್ವಾರ್ಥದ, ಮಂಗತನದ, ಮಂಕು ವಿಚಾರಗಳೆಲ್ಲ ಓಡಿಹೋಗುವವು. ಇಂಥ ಪವಿತ್ರ ದೇವರ ಅಡಿಯಲ್ಲಿ ಇಡುವ ಮಸ್ತಕವನ್ನು ನಾವು ಪೂಜಿಸಬೇಕು. ಈ ಭಾವನೆಯಿಂದ ನಾವು ಹಣೆಗೆ ಗಂಧವನ್ನು ಹಚ್ಚುತ್ತೇವೆ. ಹೀಗೆ ಇದೆ ಗಂಧವನ್ನು ಹಚ್ಚುವ ರೀತಿಯ ಹಿನ್ನೆಲೆಯು.

ಕೆಲಕೆಲವು ಪಂಥದ ಗುರುಗಳು ತಮಗೂ ತಮ್ಮ ಶಿಷ್ಯರುಗಳಿಗೂ ಭುಜಗಳ ಮೇಲೆ, ಹೊಟ್ಟೆ, ಎದೆ ಇವುಗಳ ಮೇಲೆ ಮುದ್ರೆಗಳನ್ನು ಕಾಸಿ

ಹಾಕುತ್ತಾರೆ. ಅದರಲ್ಲಿಯಾದರೂ ಇದೇ ಬಗೆಯ ಅರ್ಥವು ಅಡಕವಾಗಿದೆ. ಈ ಶರೀರ, ಕೈ, ಕಾಲು, ಹಣೆ ಇವು ನನ್ನವಲ್ಲ, ದೇವರವು. ಅಂದಮೇಲೆ ಈ ದೇಹವು, ಆ ದೇವರ ಸೇವೆಯಲ್ಲಿ, ಜನತಾಜನಾರ್ದನ ಸೇವೆಯಲ್ಲಿ ಸವೆಯತಕ್ಕದ್ದು. ಪ್ರಪಂಚವು ಸುಖಮಯವಾಗಬೇಕೆಂದು ಈ ದೇಹದಲ್ಲಿಯ ಅವಯವಗಳೆಲ್ಲವೂ ಚಂದನದಂತೆ ಅದಕ್ಕಾಗಿ ಸವೆಯಬೇಕೆಂದು ಕೈಕೊಳ್ಳುವ ಪ್ರತಿಜ್ಞೆಯನ್ನು ಈ ಮುದ್ರಾಧಾರಣದ ಪ್ರತೀಕದಲ್ಲಿ ನಾವು ಕಾಣಬೇಕು.

ಜನಿವಾರವನ್ನು ನಾವು ಹಾಕುವದರಲ್ಲಿ ಇದರಂತೆ ಗಂಭೀರ ಅರ್ಥವಿರುವದೆಂದು ನನಗೆ ಅನಿಸಿದೆ. ನಾನೊಂದು ದಿನ ವಿಚಾರಮಾಡುತ್ತ ಕೂತಾಗ್ಗೆ ಈ ವಿಚಾರವು ನನ್ನಲ್ಲಿ ದೃಢವಾಗಿದೆ. ಅದರ ಅರ್ಥವು ಯಾವುವೇ ಇರಲಿ. ಜನಿವಾರ ಧಾರಣೆಯಲ್ಲಿ ನನ್ನ ಅರ್ಥ ನಿಜವೆಂದು ನನ್ನ ಮನವರಿಕೆ. ಜನಿವಾರದ ಮೂರು ಎಳೆಗಳೆಂದರೆ ಕರ್ಮ, ಜ್ಞಾನ, ಭಕ್ತಿ. ಈ ಮೂರು ಎಳೆಗಳನ್ನು ಕೂಡಿಸಿ ಕಟ್ಟಿದ ಗಂಟು, ಅದೇ ಬ್ರಹ್ಮ ಗಂಟು. ಕರ್ಮ, ಜ್ಞಾನ, ಭಕ್ತಿ ಈ ಮೂರೂ ಗುಣಗಳನ್ನು ನಾವು ಒಂದರಲ್ಲೊಂದು ಬೆರಿಸಿ ಆಚರಿಸಲು ಬಂದಾಗ ಮಾತ್ರ ಆ ಪರಬ್ರಹ್ಮನ ಗಂಟು ಬೀಳುವದು ಸಾಧ್ಯ. ಅದಲ್ಲದೇ ಕೇವಲ ಕರ್ಮದಿಂದ, ಕೇವಲ ಜ್ಞಾನದಿಂದ, ಕೇವಲ ಭಕ್ತಿಯಿಂದ ಬ್ರಹ್ಮ ಸಿಕ್ಕಲಾರದು. ಪಕಳೆ-ಬಣ್ಣ-ವಾಸನೆ ಇವು ಮೂರೂ ಇದ್ದರೇನೆ ಕುಸುಮಕ್ಕೆ ಸೊಗಸು. ಹಾಲು, ಸಕ್ಕರೆ, ಕೇಶರಗಳ ಮಿಶ್ರಣವೇ ನಾಲಿಗೆಗೆ ರುಚಿ. ಅದರಂತೆಯೇ ಕರ್ಮ, ಜ್ಞಾನ, ಶಕ್ತಿ, ಇವುಗಳು ಒಂದಾಗಬೇಕು. ಆಗ ಮಾತ್ರ ಜೀವನವು ನಿಜವಾಗಿ ಸೌಂದರ್ಯಮಯವಾಗುವದು.

ನಾವು ದೇವರಿಗೆ ಹೂವುಗಳನ್ನು ಅರ್ಪಿಸುವಾಗ ಅವುಗಳ ವಾಸನೆಯನ್ನು ತಕ್ಕೊಳ್ಳುವದಿಲ್ಲ. ಆತನಲ್ಲಿ ಅರ್ಪಿಸಿದ ಬಳಿಕ ಅದರ ವಾಸನೆಯನ್ನು ನೋಡುತ್ತೇವೆ. ಇದರಲ್ಲಿ ಅಡಗಿದ ಅರ್ಥವಾದರೂ ಏನು? ಹೂವು ಎಂದರೆ ನಮ್ಮಗಳ ಹೃದಯ ಕುಸುಮ. ಹೂವಿನ ರೂಪದಿಂದ ನಮ್ಮ ಹೃದಯವನ್ನೇ ಆ ದೇವರಿಗೆ ಅರ್ಪಿಸುತ್ತೇವೆ. ಅಂತೆಯೇ ಅನ್ಯ ವಿಷಯ ವಾಸನೆಗಳು ಮೂಸದ, ನಿರ್ಮಲ ಹೃದಯ ಪುಷ್ಪವನ್ನೇ ದೇವರಿಗೆ ಅರ್ಪಿಸಿರಿ. ಎರಡನೆಯವರ ಅಂಕಿತವಲ್ಲದ, ಎರಡನೆಯವರಿಂದ ಮೂಸಿಸಲ್ಪಡದ, ಅನ್ಯರ ಉಪಭೋಗಕ್ಕೆ ಒಳಗಾಗದ, ನಿರ್ವಿಕಾರ

ಸುಗಂಧ ಹೃದಯ ಕುಸುಮವನ್ನು ಆತನ ಪಾದ ತಳದಲ್ಲಿ ಇಡಿರಿ. ಭಕ್ತಿಯು ವ್ಯಭಿಚಾರಿಣಿಯಲ್ಲ. (Love is jealous)ಪ್ರೀತಿಯು ಸವತಿಯನ್ನು ಸಹಿಸಲಾರದು. ನಿಮ್ಮ ಹೃದಯವನ್ನು ಅರ್ಪಿಸುವದಿದ್ದರೆ ಒಂದೆಡೆಗೆ ಅರ್ಪಿಸು. ದೇವರಿಗೆ ಅರ್ಪಿಸುವದಿದ್ದಲ್ಲಿ ಸಂಪೂರ್ಣವಾಗಿ ಅರ್ಪಿಸು. ನಿರ್ದೋಷ, ರಸಪೂರಿತ, ಪೂರ್ಣವಾಗಿ ಅರಳಿದ, ಪರಿಮಳಯುಕ್ತವಾದಂಥ ಹೃದಯಕುಸುಮವನ್ನು ಸೇವಾಕರ್ಮದಲ್ಲಿ ಅರ್ಪಣಮಾಡು.

ನೈವೇದ್ಯ. ದೇವರಿಗೆ ಬೇಕಾದ ನಿಜವಾದ ನೈವೇದ್ಯವೆಂದರೆ ನಮ್ಮ ನಿರ್ಮಲಕರ್ಮಗಳು. ಬಟ್ಟಲದಲ್ಲಿ ಇಟ್ಟ ನಿರ್ಮಲವಾದ ಹಾಲು ಅಂದರೇನೆ ನಮ್ಮ ನಿರ್ದೋಷ ಕ್ರಿಯೆಗಳ ಕುರುಹು. ನಮ್ಮ ಕರ್ಮಗಳ ನೈವೇದ್ಯವನ್ನೇ ದೇವರಿಗೆ ಸಮರ್ಪಿಸುವದು ಅದೆ. ನಾವು ಮಾಡಿದ ಕರ್ಮಗಳೆಲ್ಲವನ್ನು ಅವನ ಅಡಿದಾವರೆಗಳಲ್ಲಿ ಇಡುವದು. "ಓಂ ತತ್ಸತ್ ಬ್ರಹ್ಮಾರ್ಪಣಮಸ್ತು'' ಇದು ಎಲ್ಲ ಕರ್ಮಗಳ ಅಂತಿಮ ಮಂತ್ರವು.

ಈ ಕಲ್ಪನೆಯು ನನ್ನ ಮನಸ್ಸಿನಲ್ಲಿ ಮೂಡಿದ ದಿನವೇ ನನಗೆ ದೇವರನ್ನು ಕುರಿತು ಕನಿಕರವೆನಿಸಿತು. ಈಗ ಅನಂತ ಕಾಲಗಳ ವರೆಗೆ ದೇವರು ನೈವೇದ್ಯವನ್ನು ಸ್ವೀಕರಿಸದೇ ಇದ್ದಿರಬಹುದಲ್ಲವೇ ಎಂದು ಎನಿಸಿತು ಮನೆಯಲ್ಲಿ ಒಬ್ಬ ವೃದ್ಧಳಾದ ಸಾಧ್ವಿ ತಾಯಿ ಇರುತ್ತಾಳೆ. ಆವಳ ಕೇವಲ ಸಾತ್ವಿಕ ಆಹಾರವನ್ನಷ್ಟೇ ಸೇವಿಸುತ್ತಿರುವಾಗ, ಅವಳ ಮಕ್ಕಳು ಅವಳೆದುರು ನೀರುಳ್ಳಿ, ಬಳ್ಳೊಳ್ಳಿ, ಮೊದಲಾದವುಗಳಿಂದ ಸಿದ್ಧಮಾಡಿದ್ದ ಪದಾರ್ಥಗಳನ್ನು ಒಯ್ದು ಆಹಾರವೆಂದು ಕೊಟ್ಟರೆ, ಅವಳು ಏನನ್ನಬಹುದು? "ಮಕ್ಕಳೇ, ನನ್ನನ್ನು ಉಪಹಾಸಕ್ಕೆ ಈಡುಮಾಡಬೇಡಿ, ಇಂಥ ಪದಾರ್ಥಗಳನ್ನು ನಾನೆಂದೂ ಸೇವಿಸಲಾರೆ, ಕೊಡಬೇಕೆಂದು ಮನಸ್ಸಿದ್ದರೆ, ಸಾತ್ವಿಕ ಆಹಾರ ನೀಡಿರಿ, ಇಲ್ಲದಿದ್ದಲ್ಲಿ ನಿಮ್ಮಿಂದ ನನಗೆ ಏನೂ ಬೇಡ, ಇಂಥ ಅಸಾಧು ಆಹಾರಗಳನ್ನು ನನ್ನೆದುರು ತರಬೇಡಿ,'' ಎಂದು ಸ್ವಚ್ಛವಾಗಿ ಹೇಳಿಬಿಡುವಳಲ್ಲವೇ? ದೇವರೂ ಕೂಡ ಹೀಗೆ ಅನ್ನುತ್ತಿರಬೇಕಲ್ಲ ಎಂದು ನನಗೆ ಅನಿಸುತ್ತದೆ. ಈಗ ಅನೇಕ ಶತಮಾನಗಳ ವರೆಗೆ ಮಾನವನು ಮಾಡುತ್ತಿರುವ ಅಂತರ್ಬಾಹ್ಯ ಕ್ರಿಯೆಗಳು ರಾಶಿ ರಾಶಿಯಾಗಿ ಆತನ ಅಡಿಯಲ್ಲಿ ಬಿದ್ದಿರಬಹುದು ಮತ್ತು ಬೀಳುತ್ತಲೂ ಇರಬಹುದಲ್ಲವೇ? ಈ ತರದ ಕರ್ಮ ನೈವೇದ್ಯದ ರಾಶಿ ಅವನೆದುರು ಬಿದ್ದಿದ್ದರೂ ಆ ರಾಶಿಯಲ್ಲಿಯ ಒಂದು ತುತ್ತನ್ನಾದರೂ ಆತನು ಸ್ವೀಕರಿ

ಸಿರಬಹುದೇ ? ಎಂಬೀ ವಿಚಾರವನ್ನು ನನ್ನ ಮೊದಲ್ಗೊಂಡು ದೇವರಿಗೆ ನೈವೇದ್ಯ ತೋರಿಸುವ ಪ್ರತಿಯೊಂದು ವ್ಯಕ್ತಿಯೂ ಮಾಡಬೇಕು.

ಇನ್ನು ದೇವರಿಗೆ ಅಭಿಷೇಕ ಮಾಡುತ್ತೇವೆ, ಅಭಿಷೇಕವೆಂದರೆ ನಿರ್ಮಲವಾದ ನೀರಿನ ಸಂತತ ಧಾರೆಯಿಂದ ದೇವರನ್ನು ಎರೆಯುವದು. ಈ ಅಭಿಷೇಕವು ಒಂದು ಸಂಕೇತ. ಒಂದು ಕೊಡ ನೀರು ತಂದು ಒಮ್ಮೆಲೇ ದೇವರಮೇಲೆ ಸುರುವಿದರೆ ಅದು ಅಭಿಷೇಕವಲ್ಲ. ಸಂತತ ನೀರಧಾರೆಯಿಂದ ಆ ಪರಮಾತ್ಮನ ಅಭಿಷೇಕ ಮಾಡುತ್ತ ಹೋದಂತೆ, ನಮ್ಮ ಬುದ್ಧಿಯು ಆ ಪರಮೇಶ್ವರ ರೂಪಗುಣಗಳಲ್ಲಿ ತೈಲ ಧಾರೆಯಂತೆ ಅಂಟಿಕೊಳ್ಳುತ್ತ ಹೋಗಬೇಕು, ಎಂಬೀ ಅರ್ಥವೇ ಅಭಿಷೇಕದಲ್ಲಿ ಅಡಕವಾಗಿದೆ. ಆ ಪರಮೇಶ್ವರನಿಗೆ ಮಾಡತಕ್ಕ ಜಲಧಾರೆಯಿಂದ ರೇನೇ ನಮ್ಮ ನಿರ್ಮಲ ಅರಿವಿನ ಧಾರೆಯಲ್ಲವೇ ? ನಾವು ದಕ್ಷಿಣೆ ಕೊಡುವಾಗ ದುಡ್ಡನ್ನು ನೀರಿನಲ್ಲಿ ಎದ್ದಿ ಕೊಡುತ್ತೇವೆ, ಅದಾದರೂ ಏನನ್ನು ಸೂಚಿಸುತ್ತದೆ ? ಸಮಾಜಕ್ಕೆ ನೀವು ಕೊಡುವ ಪ್ರತಿಯೊಂದು ದಾನವೂ ಹೃದಯದ ಆರ್ದ್ರತೆಯಿಂದ ತುಂಬಿದ್ದಿರಲಿ. ಹೃದಯದ ನಿರ್ಮಲ ರಸ ಸುರಿಸಿ ಮಾಡಿದ ಪ್ರತಿಯೊಂದು ಕರ್ಮವೂ, ಅದು ಸಣ್ಣದಿದ್ದರೂ ಸರಿ, ಅದು ಅಮೂಲ್ಯವಾದದ್ದೇ. ಒಣಮಾತಿನ ಸಹಾನುಭೂತಿ ಬೇಡ. ನೀವು ಮಾಡತಕ್ಕ ಎಲ್ಲ ಕರ್ಮಗಳಲ್ಲಿ ಹೃದಯರಸವು ತೋರಲಿ. ಒತ್ತಾಯದ ನಮಸ್ಕಾರ ಬೇಡ.

ಅದರಂತೆ ದಕ್ಷಿಣೆಯ ದುಡ್ಡಿನ ಮೇಲೆ ತುಲಸೀ ಪತ್ರವನ್ನು ಇಡುತ್ತೇವೆ. ಇದು ರುಕ್ಮಿಣಿಯ ತುಲಸೀ ಪತ್ರವಿದ್ದಂತೆ. ದಕ್ಷಿಣೆಯು ದುಡ್ಡಿರಬಹುದು. ಸಾವಿರ ರೂಪಾಯಿಗಳು ಇರಬಹುದು. ಅದರಮೇಲೆ ಇಟ್ಟ ಆ ತುಲಸೀ ಪತ್ರವು ಭಕ್ತಿಭಾವದಿಂದ ತುಂಬಿರುತ್ತದಲ್ಲವೇ? ಅಂದಮೇಲೆ ಇಲ್ಲಿ ರೊಕ್ಕದ ಪ್ರಶ್ನೆಯೇ ಇಲ್ಲ. ಹೃದಯ ಭಾವನೆಯ ಪ್ರಶ್ನೆ ಆದೆ. ದೇವರಿಗೆ ಬೇಕಾದದ್ದು ಹೃದಯದ ನಿರ್ಮಲ ಭಾವನೆ. ಭಕ್ತಿಭಾವದ ತುಲಸೀಪತ್ರ ವಿಲ್ಲದ ದಾನವು ಮರ್ಯಾದಿತವಾದದ್ದು. ಅದೇ ಪ್ರೇಮದಿಂದ ಹೃತ್ಪೂರ್ವಕ ಕೊಟ್ಟ ಒಂದೇ ಒಂದು ದುಡ್ಡು ಕುಬೇರನ ಸಂಪತ್ತಿಗಿಂತ ಹಿರಿದಾದದ್ದು.

ದೇವರಿಗೆ ಪತ್ರಿ ಪ್ರಿಯವಾದದ್ದು. ತುಲಸಿ, ಬಿಲ್ವ, ಕರಿಕೆ ಇವು ದೇವರಿಗೆ ಬೇಕಾದ ವಸ್ತುಗಳು. ಸಾಮಾನ್ಯ ಜನರ ಕರ್ಮಗಳು ಸಾದಾ ಇರುತ್ತವೆ. ಅವುಗಳಿಗೆ ವಿಶೇಷ ಬಣ್ಣ ಅಥವಾ ಪರಿಮಲವಿರುವದಿಲ್ಲ.

ಆದರೂ ನಿರ್ಮಲವಿರುವದರಿಂದ ಅವು ಆ ಪರಮಾತ್ಮನಿಗೆ ಪ್ರಿಯವು. ಪರಿಮಲಯುಕ್ತ ರಸಮಯವಾದ ಕರ್ಮಗಳನ್ನು ಕೆಲವೊಂದು ಮಹಾತ್ಮರು ಮಾತ್ರ ದೇವರಿಗೆ ಅರ್ಪಿಸಬಹುದು. ನಾವೆಲ್ಲರು ದುರ್ಬಲರು. ನಮ್ಮ ಕರ್ಮಗಳು ಕೂಡ ಸಾದಾ. ಆದರೇನು ? ಅವುಗಳು ಆ ಪರಮೇಶ್ವರನಿಗೆ ಮಹಾತ್ಮರ ಕರ್ಮಗಳಿಗಿಂತ ಅಧಿಕತರ ಪ್ರಿಯವಾಗುವವು. ಗಾಯನಬಲ್ಲ ಪ್ರೌಢಮಗನ ಸಂಗೀತಕ್ಕಿಂತ ಪುಟ್ಟ ಮಗುವಿನ ತೊದಲ್ನುಡಿಯೆ ತಾಯಿಗೆ ಹೆಚ್ಚು ಪ್ರಿಯಕರವಲ್ಲವೇ ?

ಸ್ವಸ್ತಿಕ ಚಿನ್ಹಕ್ಕೆ ಭಾರತೀಯ ಸಂಸ್ಕೃತಿಯಲ್ಲಿ ಒಂದು ವಿಶೇಷ ಅರ್ಥವಿದೆ. ಗೋಡೆಯಮೇಲೆ ಸ್ವಸ್ತಿಕ ಚಿನ್ಹಗಳನ್ನು ಅಲ್ಲಲ್ಲಿ ಕಾಣಬಹುದು. ಸ್ವಸ್ತಿಕವೆಂದರೆ ಕಲ್ಯಾಣ, ಎಲ್ಲರಿಗೂ ಶುಭವಾಗಲಿ, ಎಲ್ಲರೂ ಸುಖದಿಂದಿರಲಿ ಎಂಬುದೇ ಈ ಚಿನ್ಹದ ಭಾವವು.

ಉಪನಯನದ ಕಾಲಕ್ಕೆ ಉಪಯೋಗಿಸುವ ವಸ್ತುಗಳಲ್ಲಿ ಕೂಡ ಪವಿತ್ರವಾದ ಅರ್ಥವಿದೆ. ಲಂಗೋಟಿ, ಮೌಂಜೀಬಂಧನ ಇವುಗಳಲ್ಲಿ. ಲಂಗೋಟಿಯನ್ನು ಹಾಕುವದೆಂದರೆ ಇಂದ್ರಿಯಗಳ ಮೇಲೆ ಅಂಕಿತ ಪಡೆಯುವದು. ಸ್ವೇಚ್ಛಾಚಾರಿಯಾಗಿ ನಡೆಯುವಂತಿಲ್ಲ. ಜ್ಞಾನವನ್ನು ಗಳಿಸಬೇಕಾದರೆ ಮನಸ್ಸಿನಮೇಲೆ ವರ್ಚಸ್ಸನ್ನು ಸ್ಥಾಪಿಸಲೇಬೇಕಲ್ಲವೇ ? ಮುಂಜಿವಿಯ ಕಾಲಕ್ಕೆ ತೊಡೆಯ ಮೇಲೆ ಮತ್ತು ಭುಜಗಳ ಮೇಲೆ ದರ್ಭೆಗಳನ್ನು ಇಟ್ಟು ಕೊಳ್ಳುತ್ತಾರೆ. ಇನ್ನುಮೇಲೆ ಈ ನಿನ್ನ ಕೈಕಾಲುಗಳು ಗುರುಸೇವೆಯಲ್ಲಿ ಸವೆಯಬೇಕು, ವಿದ್ಯೆಗಾಗಿ ತ್ಯಾಗಮಾಡಬೇಕು! ನಿನ್ನ ಬುದ್ಧಿ ದರ್ಭೆಯಂತೆ ಚುರುಕಾಗಬೇಕು. ಮಾತೃ ಭೋಜನದಲ್ಲಿ ವಟುವು ತಾಯಿಯ ಎಲೆಯಲ್ಲಿ ಕುಳಿತು ಊಟಮಾಡುತ್ತಾನೆ. ಇದು ಕೊನೆಯ ಊಟ. ಇನ್ನು ಮುಂದೆ ತಾಯಿಯಿಂದ ಅಗಲಬೇಕಾಗಿದೆ. ಇಷ್ಟು ದಿನ ತಾಯಿಯ ಸಗುಣ ಭಕ್ತಿ ಇತ್ತು, ಇನ್ನು ತಾಯಿಯ ನಿರ್ಗುಣ ಭಕ್ತಿಯ ಆರಂಭವಾಗಬೇಕು. ಇನ್ನು ಗುರುಗೃಹದಲ್ಲಿ ಆ ಗುರುವೇ ತಾಯಿ, ಜ್ಞಾನವನ್ನು ಕೊಡುವ ತಾಯಿ.

ಬ್ರಹ್ಮಚಾರಿ, ಪರಿವ್ರಾಜಕ, ಸನ್ಯಾಸಿ ಇವರ ಕೈಯಲ್ಲಿ ದಂಡವಿರುತ್ತದೆ. ದಂಡಧಾರಿ ಎಂಬದರಲ್ಲಿ ಆಳವಾದ ಅರ್ಥವಿದೆ. ದಂಡವು ಸರಳವಿರುತ್ತದೆ. ಆದರಂತೆ ಇವರು ಯಾರೆದುರೂ ಬಾಗುವಂತಿಲ್ಲ. ಕಾಮ, ಕ್ರೋಧ, ಮೋಹ, ಲೋಭಗಳನ್ನು ಓಡಿಸುವದು, ವಿಕಾರದ ಸೊಕ್ಕನ್ನು ಅಡಗಿಸು

ವದು, ಅವರ ಧ್ಯೇಯ. ಬ್ರಹ್ಮಚಾರಿ, ಸಂನ್ಯಾಸಿಗಳು ಯಾರಿಗೂ ಜೀಯಾ, ಜೀಯಾ, ಅನ್ನುವದಿಲ್ಲ. ಅವನು ಯಾವಾಗಲೂ ಧ್ಯೇಯ ನಿಷ್ಠನಾಗಿ ಉಳಿಯುವನು. ಧ್ಯೇಯ ಮತ್ತು ಸತ್ಯಗಳಿಗೆ ಒಪ್ಪಂದ ಸಮ್ಮತವಿರುವದಿಲ್ಲ. ಗೃಹಸ್ಥಾಶ್ರಮದಲ್ಲಿ ಮಾತ್ರ ಒಪ್ಪಂದ, ತೋಡ ಜೋಡುಗಳಿಗೆ ಅನುವು ಇರುತ್ತದೆ. ಗೃಹಸ್ಥಾಶ್ರಮದಲ್ಲಿ ಒಬ್ಬರಿಗೊಬ್ಬರು ಸಹಾಯಮಾಡುವರು. ಬ್ರಹ್ಮಚರ್ಯ, ಸಂನ್ಯಾಸ ಎಂದರೆ ಪ್ರಖರತೆ; ಅಲ್ಲಿ ನಿನಗರ್ಧ, ನನಗರ್ಧ ಎಂಬ ಮಾತೇ ಇಲ್ಲ. ಇವರು ತಮ್ಮ ಧ್ಯೇಯದ ಎದುರು ಮಾತ್ರ ತಲೆ ಬಾಗಿಸುವರು. ಗುರುವೇ ಅವರ ಧ್ಯೇಯ ಮೂರ್ತಿ. ಇವರಲ್ಲಿ ಇದ್ದ ತೇಜಸ್ಸು ಪ್ರಖರವಾದದ್ದು. ಜಗತ್ತೇ ಈ ತೇಜಸ್ಸಿನ ಎದುರು ತಲೆಬಾಗಿ ಸುತ್ತದೆ. ಯಾವನ ಎದುರು ವಾಸನಾ, ವಿಕಾರಾದಿಗಳು ಉರುಳುತ್ತ ವೆಯೋ ಅಂಥವನನ್ನು ಯಾರು ವಂದಿಸಲಿಕ್ಕಿಲ್ಲ ?

ವಿವಾಹಕಾಲದಲ್ಲಿ ಅಂತಃಪಟವನ್ನು ಹಿಡಿದಿರುತ್ತಾರೆ. ಕೊನೆಗೆ ಚಪ್ಪಾಳೆ ಹೊಡೆದಕೂಡಲೇ ಅದನ್ನು ಬದಿಗೆ ಸರಿಸುತ್ತಾರೆ. ಇನ್ನು ವಧೂವರರಲ್ಲಿ ಅಂತರಬೇಡ, ಈ ಕ್ಷಣದ ವರೆಗೆ ಅವರಲ್ಲಿ ಅಂತರವಿತ್ತು. ಇನ್ನು ಆ ಮರೆ ಬೇಡ, ಇವರ ಜೀವನ ಒಂದು ಆಗಿದೆ. ಏಕರೂಪವಾಗಿದೆ. ನಾನು ನಿನ್ನವಳು. ನೀನು ನನ್ನವನು. ನಿನ್ನ ಕೈಯಲ್ಲಿ ನನ್ನ ಕೈ, ನನ್ನ ಕೈಯಲ್ಲಿ ನಿನ್ನ ಕೈ. ನನ್ನ ಮಾಲೆ ನಿನ್ನ ಕೊರಳಲ್ಲಿ, ನಿನ್ನ ಮಾಲೆ ನನ್ನ ಕೊರಳಲ್ಲಿ. ಇನ್ನು ಒಬ್ಬರನ್ನೊಬ್ಬರು ಸಂತೋಷಿಸಿ ಶೋಭಿಸೋಣ.

ಸಪ್ತಪದಿಯು ಬಹುಮಹತ್ವದ ವಿಧಿಯು ಏಳು ಹೆಜ್ಜೆ ಕೂಡಿ ನಡೆ ಯುವಾ ! ಏಳೇ ಹೆಜ್ಜೆಯೇಕೆ ! ಸಂತತವಾಗಿ ಕೂಡಿಯೇ ನಡೆಯುವದು; ಕೂಡಿಯೇ ಸುಖದುಃಖವನ್ನು ಅನುಭವಿಸುವಾ. ಸಾಧುವಿನೊಡನೆ ನಾಲ್ಕು ಹೆಜ್ಜೆ ನಡೆದರೆ ಅವನು ನಿನ್ನವನೇ, ಎಂದು ಸಂತರು ಹೇಳುತ್ತಾರೆ. ಏಳು ಹೆಜ್ಜೆ ನಡೆಯುವದೆಂದರೆ ಯಾವಾಗಲೂ ಕೂಡಿ ನಡೆಯುವದೇ. ಒಂದು ವಾರವೆಂದರೆ ಏಳು ದಿನಗಳು. ಈ ಏಳು ದಿನ ಕೂಡಿಯೇ ಇರುವದು. ದಿನಾಲು ನಮ್ಮ ಹೆಜ್ಜೆ ಕೂಡಿಯೇ ಮುಂದುವರಿಯುವವು. ಸಪ್ತಪದಿ ಎಂದರೆ ಈ ಜೀವನ ಯಾತ್ರೆಯಲ್ಲಿ ಇಬ್ಬರೂ ಕೂಡಿ ಇರುವದು ಬಾಳಿನ ಏಳುಬೀಳುಗಳಲ್ಲಿ, ಸುಖದುಃಖಗಳಲ್ಲಿ ಏಕರೂಪವಾಗುವದು ಎಂಬೀ ಭಾವವು ಸಪ್ತಪದಿಯಲ್ಲಿದೆ. ವಧೂವರರು ಅಗ್ನಿಯನ್ನು ಸುತ್ತುತ್ತಿರುವಾಗ ಅವರ ಸುತ್ತಲೂ ನೂಲಿನ ಎಳೆಯನ್ನು ಸುತ್ತುತ್ತಾರೆ. ಇನ್ನುಮುಂದೆ

ವಧೂವರರ ಜೀವನಪಟವು ಒಂದೇ ಮಗ್ಗದಲ್ಲಿ ನೇಯಲ್ಪಡುತ್ತದೆ. ಇನ್ನು ಅವರ ಜೀವನಪಟದಲ್ಲಿ ಬೇರೆ ಎಂಬುದಿಲ್ಲ. ಈ ಸೂತ್ರವು ಸಂಸಾರದಲ್ಲಿ ಏಕಸೂತ್ರರಾಗಿರಬೇಕೆಂದು ಸುಚಿಸುತ್ತದೆ. ಇವರಿಬ್ಬರ ಸುಖ ದುಃಖಗಳೂ ಒಂದೇ. ಇನ್ನು ಈ ಜೀವಗಳಲ್ಲಿ ಎರಡೆಂಬ ಭೇದಕ್ಕೆ ಎಡೆಯೇ ಇಲ್ಲ. ವರನ ಗೃಹಕ್ಕೆ ವಧುವು ಮೆರವಣಿಗೆಯಿಂದ ಬಂದ ಬಳಿಕ ಹದಿನಾರು ದೀಪಗಳಿಂದ ಅವಳಿಗೆ ಆರತಿಯನ್ನು ಮಾಡುತ್ತಾರೆ. ಆ ಮೇಲೆ ಆ ದೀಪಗಳನ್ನಿಟ್ಟ ಬೆಳ್ಳಿಯ ತಾಟನ್ನು ಎಲ್ಲರ ಹಣೆಗೆ ಹಚ್ಚುತ್ತಾರೆ. ಈ ಹದಿನಾರು ದೀಪಗಳಲ್ಲಿ ತೋರುವ ಅರ್ಥವಾದರೂ ಏನು? ಇವು ಚಂದ್ರನ ಷೋಡಶ ಕಲೆಗಳು. ಚಂದ್ರನು ಮನಸ್ಸಿನ ದೇವತೆ. "ಚಂದ್ರಮಾ ಮನಸೋ ಜಾತಃ" ಎಂಬ ಶ್ರುತಿವಚನವಿದೆ. ಈ ಮಾತಿನಲ್ಲಿ ಮಹಾಕಾವ್ಯವಿದೆ. ಚಂದ್ರನು ಸತತವಾಗಿ ಶುಕ್ಲಪಕ್ಷ, ಕೃಷ್ಣಪಕ್ಷಗಳಲ್ಲಿ ಅರ್ಧ, ಮುಕ್ಕಾಲು, ಕಾಲುಭಾಗ ತೋರುತ್ತ ಹೇಗೆ ಒಮ್ಮೆ ಕಾಣದಾಗುವನೋ ಒಮ್ಮೆ ಪೂರ್ಣನಾಗಿ ಪ್ರಫುಲ್ಲನಾಗುವನೋ ಅದರಂತೆ ನಮ್ಮ ಮನಸ್ಸು ಕೂಡ ಹೀಗೆಯೇ ಒಂದು ಘಳಿಗೆಯಲ್ಲಿ ಉತ್ಸಾಹದಿಂದ ಪೂರ್ಣ ಪ್ರಫುಲ್ಲಿತವಾಗುವದು, ಇನ್ನೊಂದು ಘಳಿಗೆಯಲ್ಲಿ ನಿರಾಶೆಯಿಂದ ಔದಾಸೀನ್ಯದಿಂದ ಕುಂದಿಹೋಗುವದು. ಈ ಮನಸ್ಸು ಕ್ಷಣದಲ್ಲಿ ಪ್ರಕಾಶಮಯ, ಕ್ಷಣದಲ್ಲಿ ಅಂಧಕಾರಮಯ. ಕ್ಷಣದಲ್ಲಿ ಪ್ರೇಮರಸಮಯವಾದದ್ದು, ಮರುಗಳಿಗೆಯಲ್ಲಿ ಎಲ್ಲಿಂದಲೋ ಇಣಿಕಿ ನೋಡುವ ದ್ವೇಷ, ಮಾತ್ಸರ್ಯಗಳಿಗೆ ಇಂಬುಗೊಡುತ್ತದೆ. ಮುಗಿಲಿನ ಉಪ್ಪರದಲ್ಲಿ ಸಂತೋಷದಿಂದ ವಿಹರಿಸುವ ಮನಸ್ಸು ಕ್ಷಣಾರ್ಧದಲ್ಲಿ ದುಃಖದ ಆಳವಾದ ಕಂದರದಲ್ಲಿ ಕೆಡೆದು ಬೀಳುತ್ತದೆ. ಇಂಥ ಈ ಚಂಚಲ ಮನವು ನಿಮ್ಮ (ವಧುವರರ) ಪರಸ್ಪರರ ಪ್ರೇಮಸಂಬಂಧದಲ್ಲಿ ವಿಕಾಸ ಹೊಂದಲಿ ಎಂದು, ಮನಸ್ಸಿನ ಷೋಡಶ (ಹದಿನಾರು) ಸತ್ಕಲೆಗಳನ್ನು ಈ ನಿವಾಳಿಸುವ ಹದಿನಾರು ದೀಪ ಜ್ಯೋತಿಗಳಲ್ಲಿ ತೋರಿಸಿರಬೇಕು ಎಂದೆನಿಸುತ್ತದೆ. ವಿವಾಹವಾದರೂ ಏತಕ್ಕಾಗಿ? ಇಬ್ಬರ ಜೀವನದ ಅರಳುವಿಕೆಗಾಗಿಯೇ! ಒಬ್ಬರಿಗೊಬ್ಬರು ಕೈಕೊಟ್ಟು, ಕಲಿಸುತ್ತ, ಸಂಭಾಳಿಸುತ್ತ, ಕ್ರಮೇಣ ಹೆಚ್ಚೆಚ್ಚು ವಿಕಾಸಹೊಂದುವದೇ ಅಲ್ಲವೇ! ಕೇವಲ ಪುರುಷ ಮಾತ್ರನು ಅಪೂರ್ಣನು, ಅದರಂತೆ ಸ್ತ್ರೀಯೂ ಅಪೂರ್ಣಳು. ಈ ಇಬ್ಬರ ಅಪೂರ್ಣತ್ವಕ್ಕೆ ವಿವಾಹ ಬಂಧನದಿಂದ ಪೂರ್ಣತ್ವವನ್ನು ತರುವದೇ ವಿವಾಹದ ಉದ್ದೇಶ. ಇಂಥ ಭಾವವನ್ನು ನಾವು ಬೇರೆ ಬೇರೆ

ವಿವಾಹದ ಸಂಕೇತಗಳಲ್ಲಿ ಯಥೇಚ್ಛವಾಗಿ ಕಾಣಬಹುದು. ಈ ಹದಿನಾರು ದೀಪಗಳಿಂದ ಸಿಪಾಳಿಸುವ ಈ ದೃಶ್ಯವು ಮಂಗಲವೂ ಸುಂದರವೂ ಆಗಿರುತ್ತದೆ. ರಾತ್ರಿಸಮಯ ವಧುವು ವರನ ಗೃಹ ಪ್ರವೇಶಿಸುತ್ತಾಳೆ. ಅಂದು ಹೊಸ ಜೀವನದ ಆರಂಭ. ವಧುವಿನ ಹೆಸರನ್ನು ಬದಲಾಯಿಸುತ್ತಾರೆ. ಅಂದು ಮೊದಲ್ಗೊಂಡು ಇನ್ನು ತನ್ನ ಪೂರ್ವ ಆಯುಷ್ಯದ ಸಂನ್ಯಾಸವನ್ನು ಅವಳು ತಕ್ಕೊಂಡಂತೆ. ಸಂನ್ಯಾಸ ಆಶ್ರಮದಲ್ಲಿ ಮೊದಲಿನ ಹೆಸರನ್ನು ಬಿಟ್ಟು ಇನ್ನೊಂದು ಹೆಸರನ್ನು ಇಟ್ಟುಕೊಳ್ಳುವದಿಲ್ಲವೇ ? ಅದರಂತೆ ಆ ವಧುವು ಇನ್ನು ಹೊಸ ಜೀವನವನ್ನು ಪ್ರವೇಶಿಸಿ ಪತಿಯ ಮನೆಯನ್ನು ಬೆಳಗಬೇಕಾಗಿದೆ. ತನ್ನ ಮೊದಲ ಜೀವನದ ಆಸಕ್ತಿಯನ್ನು ಬಿಟ್ಟು ಬಿಡಬೇಕಾಗಿದೆ. ಅಂದು ಅವಳ ಮನಸ್ಸಿನಲ್ಲಿ ಅದೆಂತಹ ಆಂದೋಲನವು ಇರಬಹುದು ! ಇಂಥ ಸಮಯದಲ್ಲಿ ಆ ಷೋಡಶ ದೀಪಗಳ ದರ್ಶನ, ಈ ದೀಪಗಳು ಪ್ರಕಾಶವನ್ನು ಬೀರುವಂತೆ ನಿಮ್ಮಗಳ ಆತ್ಮಚಂದ್ರನೂ ಪ್ರಕಾಶಿಸಲಿ !

"ನಜರ, ನ ಆವೆ ಆತ್ಮಜ್ಯೋತಿ, ತೈಲನ, ಬತ್ತಿ ಬುಝು ನಹಿಜಾತೀ, ಜೈಸೆ ಮಾಣಿಕ ಮೋತಿ, ಝಿಲ ಮಿಲ ಝಿಲ ಮಿಲ, ನಿಶಿದಿನಿ ಚಮಕೆ ಜೈಸೆ ನಿರ್ಮಲ ಜ್ಯೋತಿ ‖ ಕಹತ ಕಬೀರ ಸುನೋ ಭಾಯಿ ಸಾಧೋ ಘರ ಘರ ವಾಚತ ಪೋಥಿ ‖"

ಹಗಲಿರುಳು ಒಳಹೊರಗೂ ಹೊಳೆಯುವ ಆ ದಿವ್ಯ ಸ್ವರೂಪವನ್ನು ಅರಿತುಕೊಳ್ಳಿರಿ. ಮನೆಮನೆಗೂ ಪುರಾಣ ,ಪುಸ್ತಕಗಳನ್ನು ಓದುತ್ತಾರೆ. ಆವರೇನು ? ಮುತ್ತು ಮಾಣಿಕಗಳಂತೆ ಅಖಂಡವಾಗಿ ಪ್ರಕಾಶಿಸುವ, ಬತ್ತಿ ಎಣ್ಣೆಗಳು ಇಲ್ಲದಿದ್ದರೆ ನಂದದಿರುವ, ಸಂತತ ಪ್ರಕಾಶಮಯವಾಗಿರುವ ಆ ಆತ್ಮತತ್ವವನ್ನು ಕಾಣುವವರು ಯಾರು? ಯಾರೂ ಇಲ್ಲ. ವಧೂವರರೇ, ನೀವು ಅಂತಹದನ್ನು ಅರಿತುಕೊಳ್ಳಿರಿ. ಕ್ರಮೇಣ ವಿಷಯವನ್ನು ಸಂತೈಸಿ, ಮನಸ್ಸಿನ ಪ್ರಸನ್ನತೆಯನ್ನು, ಸಂಪೂರ್ಣ ಪ್ರಸನ್ನತೆಯನ್ನು ಗಳಿಸಿರಿ. ಅಮರ ಆನಂದವನ್ನು ಹೊಂದಿರಿ.

ಭಾರತೀಯ ಸಂಸ್ಕೃತಿಯಲ್ಲಿ ಹೇಳಲಾದ ಮಾನವನ ಚೌಲ ಉಪನಯನ ಸಂಸ್ಕಾರಗಳಿಂದ ಹಿಡಿದು ಅವನ ಅಂತ್ಯ ಸಂಸ್ಕಾರದವರೆವಿಗೂ ಇಂತಹ ಸಂಕೇತಗಳು ಇರುತ್ತವೆ. ಮಾನವನ ಶವಸಂಸ್ಕಾರ ಮಾಡುವಾಗ ಅದರ ಮುಂದೆ ಒಂದು ಗಡಿಗೆಯನ್ನು ಹಿಡಿಯುತ್ತಾರೆ. ಇವನ ದೇಹವು

ಕೂಡ ಇದರಂತೆ ಮಣ್ಣಿನದಿತ್ತು, ಅದು ಒಡೆಯಿತು, ಇದರಲ್ಲಿ ಅಳುವಂತ ಹದಿಲ್ಲ, ಇದೆಲ್ಲವೂ ನೈಸರ್ಗಿಕ ಎಂದು ಸೂಚಿಸಲಾಗಿದೆ. ಆ ಶವಕ್ಕೆ ಸ್ನಾನ ಮಾಡಿಸಿ, ಹೊಸ ವಸ್ತ್ರ ಹೊದಿಸಿ, ಭಸ್ಮಾದಿಗಳನ್ನು ಹಚ್ಚಿ, ಅದನ್ನು ಒಯ್ಯುತ್ತಾರೆ. ಇದರಲ್ಲಿಯಾವರೂ ಪವಿತ್ರ ಅರ್ಥವಿದೆ. ಇನ್ನು ಇದು ದೇವರ ಮನೆ ಸೇರಬೇಕಾದ್ದರಿಂದ ಇದು ಪವಿತ್ರವಾಗಿ ಹೋಗಲಿ ಎಂಬದೇ ಉದ್ದೇಶವಲ್ಲವೇ ? ಅಂತ್ಯಕಾಲ ಸಮೀಪಿಸಿದಾಗ ಆ ದೇಹವನ್ನು ಭೂಶಯ್ಯೆಯಲ್ಲಿ ಇಡುತ್ತಾರೆ. ಇನ್ನು ಇಲ್ಲಿಯ ವಿಷಯದಲ್ಲಿ ಆಸಕ್ತಿ ಬೇಡ, ಪೂರ್ಣ ಅನಾಸಕ್ತಿಯಿಂದ ಹೊರಡಲಿ ಎಂದು. ಮರಣವಾದೊಡನೆ ಮುಖದಲ್ಲಿ ತುಳಸೀಪತ್ರವನ್ನು ಇಡುತ್ತಾರೆ. ಅದೆಂದರೆ ದೇವರು ಕೊಟ್ಟ ದೇಹ ಆತನಿಗೆ ಪವಿತ್ರವಾಗಿ ಅರ್ಪಣವಾಗಲಿ ಎಂದು. ಇನ್ನು ಈ ದೇಹ ದೇವರದು.

ಕಿವಿಯಲ್ಲಿ ರುದ್ರಾಕ್ಷಿಯನ್ನು ಇಡುತ್ತಾರೆ. ಕೊರಳಲ್ಲಿ ರುದ್ರಾಕ್ಷಿ ಮಾಲೆಯನ್ನು ಧರಿಸುತ್ತಾರೆ. ಇದು ಏತಕ್ಕೆ ? ಕಿವಿಗಳು ಯಾವಾಗಲೂ ಶುಭವನ್ನೇ ಕೇಳಲಿ ಎಂದು. ಶಂಕರನೆಂದರೆ ಕಲ್ಯಾಣದಾಯಕನು. ಆತನಿಗೆ ಪ್ರಿಯವಾದದ್ದು ಶುಭವೂ, ಕಲ್ಯಾಣದಾಯಕವೂ, ಮಂಗಲವೂ ಇರುತ್ತದೆ. ಬೆರಳಿನಲ್ಲಿ ಪವಿತ್ರಕಗಳನ್ನು ಇಡುತ್ತಾರೆ. ನಮ್ಮ ಬೆರಳುಗಳು ಪವಿತ್ರ ಕಾರ್ಯ ಮಾಡಬೇಕೆಂಬ ಭಾವನೆ ಇದರಲ್ಲಿ ಅಡಕವಾಗಿದೆ.

ವಾರಕರಿ ಪಂಥದವರು, ಭಗವಾಧ್ವಜವನ್ನು ಸದಾ ತಮ್ಮ ಹತ್ತಿರ ಇಟ್ಟುಕೊಳ್ಳುತ್ತಾರೆ. ತಾವು ಎಲ್ಲೇ ಇರಲಿ ಆ ದೇವರ ಸೈನಿಕರು ಎಂಬ ಭಾವನೆ. ಖುದಾಯಿ ಖಿದಮತ್‌ಗಾರರು ಕ್ಯಾವಿ ಬಟ್ಟೆಯನ್ನೇ ಧರಿಸುತ್ತಾರೆ. ಆ ಬಣ್ಣವನ್ನು ಏಕೆ ಆಯ್ದಿದ್ದಾರೆ ? ಆ ಕ್ಯಾವಿ ಬಣ್ಣ ತ್ಯಾಗವನ್ನು ತೋರಿಸುತ್ತದೆ. ಸಂನ್ಯಾಸಿಯ ವಸ್ತ್ರಗಳು ಕ್ಯಾವೀ ಬಣ್ಣದವೇ ಇರುತ್ತವೆ. ಸಂನ್ಯಾಸವೆಂದರೆ ಸಂಪೂರ್ಣ ತ್ಯಾಗದ ಮಹಾ ಯಜ್ಞ. ಯಜ್ಞಕ್ಕೆ ಜ್ವಾಲೆ ಮುಖ್ಯವಲ್ಲವೇ ? ಜ್ವಾಲೆಯು ಬಣ್ಣವಾದರೂ ಕ್ಯಾವಿಯ ಬಣ್ಣವನ್ನೇ ಹೋಲುವದು. ಅದ್ದರಿಂದಲೇ ಆ ಕ್ಯಾವಿ ಬಣ್ಣವನ್ನು ಆರಿಸಿದ್ದು.

ಶಂಕರಾಚಾರ್ಯರು ಜೊತೆಗೆ ಯಾವಾಗಲೂ ಹಿಲಾಲು ಒಯ್ಯುತ್ತಾರೆ. ಯಾವಾಗಲೂ ಬೆಳಕನ್ನು ಪೂಜಿಸುವವರು ಎಂಬ ಅರ್ಥ ಇದರಲ್ಲಿ ಇರಬೇಕು. ಧರ್ಮದ ಅರಿಕೆ ಮಾಡಿಕೊಡುವ ಆಚಾರ್ಯರು ಕತ್ತಲಲ್ಲಿದ್ದು ನಡೆಯುವದಾದರೂ ಹೇಗೆ ? ಜ್ಞಾನ ಯಜ್ಞವು ಸದೈವ ಪ್ರಜ್ವಲಿಸು

ತ್ತಿರಬೇಕು. ಜ್ಞಾನಸೂರ್ಯನು ಸದಾ ಪ್ರಕಾಶಿಸುತ್ತಿರಬೇಕು.

ಯಾತ್ರೆಯಿಂದ ತಿರುಗಿ ಬಂದ ಮೇಲೆ ನಾವು ಯಾವದಾದರೊಂದು ಪದಾರ್ಥವನ್ನು ತಿನ್ನುವದನ್ನು ಬಿಡುತ್ತೇವೆ. ಇದರಲ್ಲಿದ್ದದ್ದರ ರಹಸ್ಯವನ್ನು ಭಗಿನೀ ನಿವೇದಿತಾದೇವಿಯವರು ಒಂದೆಡೆ ಹೇಳಿದ್ದಾರೆ. ಆ ಯಾತ್ರೆಯ ನೆನಪು ನಮಗೆ ಉಳಿಯಬೇಕೆಂದು ನಾವು ನಮಗೆ ಬಹಳ ಪ್ರಿಯವಾದ ವಸ್ತುವನ್ನು ಬಿಡುತ್ತೇವೆ. ಯಾತ್ರೆಯೆಂದರೆ ಪವಿತ್ರ ವಸ್ತುವಿನ, ಸ್ಥಲದ ದರ್ಶನ; ಯಾತ್ರೆಯೆಂದರೆ ಜೀವನಕ್ಕೆ ಪಾವಿತ್ರ್ಯವನ್ನು ತಂದೆರೆಯುವ ಅನುಭವ. ಈ ಅನುಭವವು ಜೀವನದಲ್ಲಿ ಅಮರವಾಗಿ ಉಳಿಯಬೇಕು. ತಾತ್ಪೂರ್ತಿಕವಾಗಿ ಗಂಗಾಸ್ನಾನ ಮಾಡಿದರೆ ಪ್ರಸನ್ನವೆನಿಸುತ್ತದೆ. ಆದರೆ ಮನೆಗೆ ಬಂದ ಕೂಡಲೇ ಈ ಅನುಭವವನ್ನು ಮರೆಯುತ್ತೇವೆ. ಆದ್ದರಿಂದ ಪ್ರಿಯ ಪದಾರ್ಥವನ್ನು ತ್ಯಜಿಸುವ ಸಂಕಲ್ಪ ಮಾಡುವದು. ನೀರುಳ್ಳಿ, ಮೋಸಂಬೆ, ನಿಂಬೆ ಹೀಗೆ ಯಾವದು ನಮಗೆ ಪ್ರಿಯವೋ ಅಂತಹ ಪಲ್ಲೆಯನ್ನಾಗಲೀ ಫಲವನ್ನಾಗಲೀ ಬಿಡುತ್ತೇವೆ. ಅಂದರೆ ಆ ಪದಾರ್ಥ ದೃಷ್ಟಿಗೆ ಬಿದ್ದೊಡನೆ ನಮಗೆ ಈ ಅನುಭವದ ನೆನಪು ಆಗುತ್ತದೆ. ಆಗ ನಾವು ಮಾಡಿದ ಯಾತ್ರೆ ಕಣ್ಣೆದುರು ನಿಲ್ಲುತ್ತದೆ. ಮತ್ತೆ ಗಂಗಾನದಿಯ ನೆನಹು. ಆ ಪರಶಿವನ ನೆನಹು, ಆ ಗಂಗಾನದಿಯಲ್ಲಿ ತಪವನ್ನು ಆಚರಿಸಿದ ಬ್ರಹ್ಮ ಋಷಿ, ರಾಜಋಷಿ, ಮಹಾಋಷಿಗಳ ನೆನಹು. ಹೀಗೆ ನಾವು ಬಿಟ್ಟ ಒಂದು ಪದಾರ್ಥಕ್ಕಾಗಿ ಒಂದು ಹಿರಿದಾದ ಇತಿಹಾಸವೇ ನಮ್ಮೆದುರು ಬಂದು ನಿಲ್ಲುತ್ತದೆ. ಆದುದರಿಂದ ಮತ್ತೆ ಪುನಃ ಆ ಯಾತ್ರೆಯ ರಸವತ್ತಾದ ಅನುಭವವು ಆದಂತಾಗಿ, ಆ ಅನುಭವವು ಜಾಗೃತವಾಗಿ ಜೀವನದಲ್ಲಿ ಆಳವಾಗಿ ನಿಲ್ಲುತ್ತದೆ, ಅದು ನಮ್ಮ ರಕ್ತದಲ್ಲಿ ಸೇರಿಕೊಂಡು ಅಸ್ಥಿಗತವಾಗುತ್ತದೆ.

ಜೀವನದಲ್ಲಿ ದೊರೆತ ಇಂಥ ಅನುಭವಗಳ ಸಂಪತ್ತಿನ ಎಚ್ಚರವೇ ನಮಗೆ ಇರುವದಿಲ್ಲ; ಆದ್ದರಿಂದಲೇ ನಾವು ದರಿದ್ರ ಮಾನಸರಾಗಿದ್ದೇವೆ. ಕೀಳು ಹೃದಯ, ಕೀಳು ಮನಸ್ಸು ಇವುಗಳಿಂದ ನಮ್ಮ ಜೀವನದ ಜೋಳಿಗೆಯು ಮತ್ತೆ ಬರಿದಾಗುತ್ತದೆ. ಯಾಕೆಂದರೆ ವಿಶೇಷ ರಸ ಸನ್ನಿವೇಶಗಳ ಅನುಭವವೆಲ್ಲವೂ ಸೋರಿಹೋಗಿರುತ್ತದೆ. ಮಹಾತ್ಮಾಜಿಯವರ ದರ್ಶನದ ಲಾಭವಾಗಿದ್ದರೆ, ಆ ದರ್ಶನದ ದಿವ್ಯ ಅನುಭವವನ್ನು ನಮ್ಮ ಜೀವಾವಧಿ ಕಾದಿಟ್ಟುಕೊಳ್ಳಬೇಕು. ಪರದೇಶಿ ವಸ್ತ್ರ ಬಹಿಷ್ಕಾರ, ಗ್ರಾಮೋ

ದ್ಯೋಗಕ್ಕೆ ಉತ್ತೇಜನ, ಅಸ್ಪೃಶ್ಯತಾನಿವಾರಣೆ ಇಂಥ ಕಾರ್ಯಗಳಿಂದ ಆ ದರ್ಶನದ ಅನುಭವವು ಅಮರವಾಗಿ ನಮ್ಮ ಜೀವನದಲ್ಲಿ ನಿಲ್ಲುವದು.

ಇಂಥ ಅನುಭವಗಳು ನಮ್ಮ ಜೀವನದಲ್ಲಿ ಎರಡು ವಿಧದಿಂದ ಅಮರವಾಗಿ ನಿಲ್ಲುವವು. ಒಂದು, ಕೆಲವು ವಸ್ತುಗಳ ತ್ಯಾಗದಿಂದ, ಇನ್ನೊಂದು ಕೆಲವು ವಸ್ತುಗಳ ಸ್ವೀಕಾರದಿಂದ. ಅಮಂಗಲದ ತ್ಯಾಗ, ಮತ್ತು ಮಂಗಲದ ಸ್ವೀಕಾರ; ಅಂದರೆ ವಿದೇಶೀಯ ತ್ಯಾಗ, ಸ್ವದೇಶೀಯ ಸ್ವೀಕಾರ. ಖಾದೀ ಧಾರಣ ಮಾಡಿದವನಿಗೆ ಅಖಂಡವಾಗಿ ಮಹಾತ್ಮಾಜಿಯವರ ನೆನಹು, ಖಾದಿಯ ಸ್ಪರ್ಶಮಾತ್ರದಿಂದ ಅವರ ದಿವ್ಯದರ್ಶನ ಪ್ರಸಂಗದ ಆನಂದಾನುಭವವು ಕಣ್ಣೆದುರು ಸುಳಿಯುವವು. ಇಂಥ ಅನುಭವಗಳನ್ನು ನಾವು ಎಂದೂ ಕಳೆದುಕೊಳ್ಳಬಾರದು. ಜೀವನದಲ್ಲಿ ನಾವು ನಿಜವಾಗಿ ಗಳಿಸಬೇಕಾದ ಸೊತ್ತು ಎಂದರೇನೇ ಇಂಥ ಪಾವನ ಪ್ರಸಂಗಗಳು. ಆದರೇನು? ನಾವು ಅವುಗಳನ್ನೇ ಮರೆತು ಚಲ್ಲಿ ಕೊಡುತ್ತೇವೆ.

ಮನೆಯಿಂದ ದೂರ ಪ್ರವಾಸಕ್ಕೆ ತೆರಳುವಾಗ್ಗೆ ಕೈಯಲ್ಲಿ ಮೊಸರು ಹಾಕುತ್ತಾರೆ. ಆ ಅಂಗೈಯಲ್ಲಿ ಹಾಕಿದ ಮೊಸರನ್ನು ಹಾಗೆಯೇ ತಿಂದು ಕೈ ತೊಳೆಯದೇ ಹೋಗಬೇಕೆಂಬ ವಾಡಿಕೆ. ಆರೋಗ್ಯ ದೃಷ್ಟಿಯಿಂದ ಈ ಕಲ್ಪನೆ ಮೂಢತನದ್ದೆಂದು ಅನ್ನಬಹುದು. ಆದರೆ ಭಾವನಾ ದೃಷ್ಟಿಯಿಂದ ನೋಡಿದಲ್ಲಿ ಅದರಲ್ಲಿ ಕೋಮಲತೆಗೆ ಕೊರತೆಯೇ? ಮೊಸರು ರುಚಿರ ಮತ್ತು ಸ್ನಿಗ್ಧ ಪದಾರ್ಥ. ಆದ್ದರಿಂದ ನಮ್ಮಲ್ಲಿಯ ರುಚಿರ ಸ್ನೇಹ ಸ್ನಿಗ್ಧತೆಯನ್ನು ಮರೆಯದಿರು, ಮತ್ತಾವ ಭಾವನೆಯಿಂದಲೂ ಆ ಸ್ನೇಹವನ್ನು ತೊಡೆಯದಿರು, ಎಂಬ ಪವಿತ್ರ ಭಾವನೆ ಅದರಲ್ಲಿ ಅಡಕಿದೆ. ಮನೆಯಿಂದ ಹೊರಡುವಾಗ್ಗೆ ಶುಷ್ಕ ಮನಸ್ಸಿನಿಂದ ಹೊರಡದೆ ಆರ್ದ್ರತೆ, ಪ್ರೇಮ, ಸ್ನೇಹಪೂರಿತ ಮನಸ್ಸಿನಿಂದ ಹೊರಡು. ಅವುಗಳನ್ನು ಎಂದೂ ಮರೆಯದಿರು.

ಅಳಿಯನಿಗೆ ತುಪ್ಪ ಆಪೋಶನವನ್ನು ಹಾಕುವ ಪರಿಪಾಠವು ವಿವಾಹ ಸಮಯದಲ್ಲಿದೆ. ಅದು ವಧುವಿನ ತಾಯಿಯ ಮನೋಭಾವವನ್ನು ತೋರುತ್ತದೆ. ಅವಳು ಅನ್ನುತ್ತಾಳೆ. “ಈ ನಿಮ್ಮ ಅಂಗೈಯಲ್ಲಿ ನೀಡಿದ ಆಪೋಶನವು ಕೇವಲ ತುಪ್ಪವಿರದೆ ಅದು ಪ್ರೇಮದ ದ್ಯೋತಕವು. ನಿಮಗೆ ನನ್ನ ಮಗಳ ಜೀವನವನ್ನು ಅರ್ಪಿಸಿದ್ದೇನೆ. ನಿಮ್ಮ ಕೈ ಕಠೋರವಾಗದಿರಲಿ,

ಅದು ಸದಾ ಸ್ನೇಹಾರ್ದ್ರವಿರಲಿ. ಪ್ರೇಮಪೂರಿತ ಕರದಿಂದ ನನ್ನ ಮಗಳ ಕರವನ್ನು ನಿಮ್ಮ ಕರದಲ್ಲಿ ಹಿಡಿದು ಇಡೀ ಜೀವನವನ್ನು ಸಾಗಿಸಿರಿ.'' ಇಂಥ ಆಪೋಶನವನ್ನು ಸ್ವೀಕರಿಸಿದ ಅಳಿಯಂದಿರು ಎಷ್ಟುಜನ ಪ್ರೀತಿ ಯಿಂದ ನಡೆದುಕೊಳ್ಳುತ್ತಾರೆ? ಇಂಥ ಪ್ರಸಂಗವನ್ನು ನೋಡಿದಾಗೆಲ್ಲ ನನ್ನ ಹೃದಯವು ತುಂಬಿಬರುತ್ತದೆ. ಆ ಅಳಿಯನ ಹೃದಯ ತುಂಬಿಬರು ತ್ತಿದೆಯೋ ಏನೋ ನಾನರಿಯೆ. ನಾನಂತೂ ಈ ಸಂಕೇತದಲ್ಲಿ ಸೌಹಾರ್ದ ತೆಯ ಸಾಗರವನ್ನೇ ಕಾಣುತ್ತೇನೆ.

ವಧೂವರರ ದೇಹಕ್ಕೆ ಅರಿಸಿಣವನ್ನು ಹಚ್ಚುತ್ತಾರೆ. ಅವರು ಉಡುವ ವಸ್ತ್ರಗಳಿಗೂ ಅರಿಸಿಣ ಬಣ್ಣವನ್ನು ತೊಡೆಯುತ್ತಾರೆ. ಈ ಹಳದಿಯ ಬಣ್ಣದ ಅರ್ಥವೇನು? ಆರೋಗ್ಯ ದೃಷ್ಟಿಯಿಂದ ಅರಿಸಿಣವು ಉತ್ತಮ ವೆಂದು ಕೆಲವರು ಅನ್ನುತ್ತಾರೆ. ಅದೂ ನಿಜವು. ಆದರೆ ಇದು ಆರೋಗ್ಯದ ಪ್ರತೀಕವಷ್ಟೇ ಆಗಿರದೆ ಇದರಲ್ಲಿ ಬೇರೆ ಅರ್ಥವು, ಇದಕ್ಕೂ ಶ್ರೇಷ್ಠ ಭಾವನೆಯು ಅಡಕವಾಗಿದೆ. ನಿಮ್ಮ ಸುಖಮಯವಾದ ಸಂಸಾರ ಜೀವನವು ಬಂಗಾರದಂತೆ ಕಾಂತಿಯುಕ್ತವಾಗಲಿ, ಎಂಬ ಮೇಲುಭಾವನೆ ಅದರಲ್ಲಿದೆ. ಮೈಯನ್ನು ಅಲಂಕರಿಸಿಕೊಳ್ಳಲು ಬಂಗಾರದಾಭರಣಗಳು ಇರಲಿ, ಇಲ್ಲ ದಿರಲಿ, ಅದರಿಂದ ಸಂಸಾರದಲ್ಲಿ ಯಾವ ಆತಂಕವೂ ಬರುವಂತಿಲ್ಲ. ಎಂಥ ಪರಿಸ್ಥಿತಿ ಅಥವಾ ಪ್ರಸಂಗ ಬರಲಿ, ನಾವು ಆನಂದದಿಂದ ಶಾಂತಿಯುತ ರಾಗಿ ಬಾಳುವೆವು ಎಂಬ ಭಾವನೆ ಇರಬೇಕು ಅದರಲ್ಲಿ. ಹೃದಯದ ಸಿರಿ ಈ ಅರಿಸಿಣದಲ್ಲಿ ಮೂಡಿ ತೋರುತ್ತದೆ. ಸಹಾನುಭೂತಿ ಎಂಬ ಸುವರ್ಣದ ಕೊರತೆ ಈ ಸಂಸಾರದಲ್ಲಿ ಎಂದೂ ಇಣಿಕಿ ನೋಡಬಾರದೆಂದೂ, ಜೀವ ನವೇ ಬಂಗಾರಮಯವಾಗಲೆಂದೂ ಭಾವನೆಯು ಎದ್ದು ತೋರುತ್ತದೆ. ಇನ್ನು ಸಂಕ್ರಮಣದ ದಿನ ನಾವು ಎಲ್ಲರಿಗೂ ಎಳ್ಳುಬೆಲ್ಲವನ್ನು ಹಂಚು ತ್ತೇವೆ. ಎಳ್ಳು ಅಂದರೆ (ಸ್ನಿಗ್ಧ) ಸ್ನೇಹ, ಈ ಸ್ನೇಹದಲ್ಲಿ ಬೆಲ್ಲ ಅಂದರೆ ಸವಿಯನ್ನು ಬೆರೆಸುವದು. ಅಂದರೆ ಇನ್ನು ಮುಂದೆ ಕೃತ್ರಿಮ ಸ್ನೇಹವನ್ನು, ಒಳಗೆ ತ್ವೇಷ ತುಂಬಿದ ತೋರಿಕೆಯ ಸ್ನೇಹವನ್ನು ಎಂದಿಗೂ ಮಾಡದೇ ಇರೋಣ, ಸದ್ಭಾವನೆಯಿಂದ ತುಂಬಿದ ಒಳ ಹೊರಗೂ ಒಂದೇ ತೆರನಾದ ರುಚಿರ ಸ್ನೇಹದಿಂದ ಕೂಡಿ ನಡೆಯುವಾ, ಹಿಂದಾದ ಅದರಲ್ಲಿಯ ಕೊರತೆ ಗಳನ್ನೆಲ್ಲಾ ಕಳೆದು ವರ್ತಿಸೋಣ. ಇಂದಿನಿಂದ ನಮ್ಮ ನಮ್ಮ ಜೀವನದಲ್ಲಿ ಸಂಕ್ರಮಣವಾಗಲಿ, ಕ್ರಾಂತಿಯಾಗಲಿ, ಮೊದಲಿನ ತ್ವೇಷ, ಮಾತ್ಸರ್ಯ

ಗಳು ಅಳಿದು ಕೇವಲ ಪ್ರೀತಿ, ಸ್ನೇಹಗಳೇ ಇಂದಿನಿಂದ ಬೆಳೆದುಬರಲಿ.

ಹೋಳೀಹುಣ್ಣಿವೆಯ ದಿನ, ಹೋಳಿ ಆಡಿ ಹೊಯ್ಕೊಳ್ಳುವದು. ಈ ಹಬ್ಬವು ಮೊದಲು ೧೫ ದಿನಗಳಿಂದಲೇ ಪ್ರಾರಂಭವಾಗುತ್ತದೆ. ಮಾನವನ ಮನಸ್ಸಿನಲ್ಲಿ ಹುದುಗಿರುವ ವಿಷಯ ವಾಸನಾವೃತ್ತಿಗಳನ್ನೆಲ್ಲ ಹೊರಗೆಡವಿ ಅವುಗಳನ್ನು ಸುಟ್ಟು ಭಸ್ಮಮಾಡುವದೇ ಇವರ ಉದ್ದೇಶ. ಏನಿದೆ ನಿನ್ನ ಮನಸ್ಸಿನಲ್ಲಿ ? ಅದನ್ನೆಲ್ಲ ಈ ಹತ್ತು ದಿನಗಳಲ್ಲಿ ಕಾರಿಕೊಂಡು ಬಿಡು. ಹತ್ತು ದಿನಗಳಲ್ಲಿ ಸಣ್ಣ ಸಣ್ಣ ಹೋಳಿ, ಮುಂದೆ ಪೂರ್ಣಿಮೆಯ ದಿನ ಪ್ರಚಂಡ ಹೋಳಿ, ಅಂದರೆ ಅಂದು ಎಲ್ಲ ದುರ್ವಿಷಯಗಳನ್ನು, ಜೀವನದಲ್ಲಿದ್ದ ಎಲ್ಲ ಹೊಲಸನ್ನೂ ಇಂದು ಸುಟ್ಟು ಸೂರೆಗೊಂಡಿದ್ದೇನೆ ಎಂದು ಬೊಬ್ಬೆಕುಟ್ಟಿ ಜಗತ್ತಿಗೆ ಡಂಗುರ ಸಾರಿ ಹೇಳುವ ದಿನ. ಇದೇ ನೋಡಿರಿ, ನನ್ನಲ್ಲಿದ್ದ ಹೊಲಸೆಲ್ಲವನ್ನೂ ಇಂದು ಸುಟ್ಟು ಭಸ್ಮಮಾಡಿದ್ದೇನೆ. ಇನ್ನು ಈ ಅಂಗಾರದೊಳಗಿಂದ ಹೊಸ ಜೀವನ ಬೆಳೆಯಬೇಕಾಗಿದೆ. ಜೀವನಕ್ಕೆ ಹೊಸ ರಂಗು ಬರಬೇಕಾಗಿದೆ. ಹೋಳಿ ಆಗದೆ ರಂಗಪಂಚಮಿ ಇಲ್ಲ! ಜೀವನದಲ್ಲಿಯ ಹೊಲಸನ್ನು ಸುಟ್ಟಬಳಿಕ ಅಲ್ಲವೇ ಬಣ್ಣದಾಟ ವನ್ನು ಆಡುವದು ? ಆನಂದವನ್ನು ಹೊಂದುವದು ? ಶಂಕರನ ಗುಡಿ ಯಲ್ಲಿ ಭೂಂ, ಭೂಂ ಎಂಬ ಧ್ವನಿ ಮಾಡುವ ಪರಿಪಾಠ ಇರುತ್ತದೆ. ಯಾಕಂದರೆ ಶಿವನೇ ಅಲ್ಲವೇ ಮದನನನ್ನು ಸುಟ್ಟವನು ? ಶಿವಾಲಯದಲ್ಲಿ ಲಿಂಗದೆದುರು ಆವೆಯು ಇರುತ್ತದೆ. ಅದು ಏತರ ದ್ಯೋತಕ ? ನೀವು ಕೂಡ ಆ ಆವೆಯಂತೆ ಇಂದ್ರಿಯಗಳ ಸ್ವಾಮಿಯಾಗಿರಿ. ಆವೆಯು ಇಂದ್ರಿಯದಮನದ ಸಂಕೇತ. ದೇವಾಲಯದಲ್ಲಿ ಸೇರಿದೊಡನೇ ಘಂಟೆ ಬಾರಿಸುವದರಲ್ಲಿ. ಯೋಗದಲ್ಲಿ ಹೇಳಲಾದ ಅನುಹತ ಧ್ವನಿಯ ಕಲ್ಪನೆಯು ಇರುತ್ತದೆ. ಜೀವ, ಶಿವರು ಒಂದಾದರು ! ಸಮಾಧಿಸ್ಥಿತಿ ಪ್ರಾರಂಭ ವಾಗಿದೆ, ಆನಂದ ಗೀತೆಯು ಆರಂಭವಾಗಿದೆ. ಆಗ ಜೀವನ ಮಂದಿರದಲ್ಲಿ ಮಂಗಲವಾದ್ಯ ಧ್ವನಿ, ಅನುಹತ ಧ್ವನಿಯ ಗರ್ಜನೆ ಕೇಳಬರುತ್ತದೆ. ಯೋಗ ಮಾರ್ಗದಲ್ಲಿ ಇರುವ ಸಾಧಕರಿಗೆ ಈ ಅನುಹತ ಧ್ವನಿಯು ಕೇಳ ಬರುತ್ತದೆಂದು ಹೇಳುತ್ತಾರೆ. ಅನುಹತ ಎಂದರೆ ಯಾವಾಗಲೂ ಬೆಳೆಯು ವಂಥ ಸಂತತ ಅಖಂಡ ಧ್ವನಿಯೊಂದು ಕೇಳಬರುತ್ತಿದೆ ಎನ್ನುತ್ತಾರೆ. ಘಂಟಾವಾದನದಲ್ಲಿಯೂ ಇದೇ ಅರ್ಥ ಸೂಚಿತವಿರಬೇಕೆಂದು ಅನಿಸು ತ್ತದೆ. ಅಥವಾ ದೇವನ ದರ್ಶನವಾಯಿತು. ಮಂಗಲವಾದ್ಯ ಬಾರಿಸ

ಬೇಕೆಂಬ ಅರ್ಥವೂ ಇರಬಹುದು. ಇದೂ ಅಲ್ಲದೆ ವಿಶ್ವದ ವಿಸ್ತಾರವನ್ನು ನಡೆಸುವದರಲ್ಲಿ ಮಗ್ನನಾದ ದೇವರನ್ನು ಕರೆಯಲು ಈ ಘಂಟಾನಾದವು ಇರಬಹುದು. "ದೇವರೆ, ಒಂದು ಕ್ಷಣ ನಿನ್ನ ಬಾಗಿಲಲ್ಲಿ ಬಂದಿದ್ದೇನೆ. ಇದೊಂದು ಕ್ಷಣ ಸಂಸಾರದ ಕೆಸರಿನಿಂದ ಕಾಲುಕಿತ್ತುಕೊಂಡು ನಿನ್ನ ದಿವ್ಯ ದರ್ಶನ ಸುಖವನ್ನು ಹೊಂದಿದ್ದೇನೆ." ಎಂದು ಹೇಳುವ ಭಾವವೂ ಇದರಲ್ಲಿ ಅಡಕವಾಗಿರಬೇಕು.

ತುಂಬಿದ ಕೊಡಕ್ಕೂ ಬಹಳ ಮಹತ್ವವಿದೆ. ವಿವಾಹಕ್ಕಾಗಿ ವರನನ್ನು ಕರತರುವಾಗ್ಗೆ, ತುಂಬಿದ ಕೊಡಗಳನ್ನು ಹೊತ್ತು ಸುವಾಸಿನಿಯರು ಅವನೆದುರು ಬರುತ್ತಾರೆ. ಈ ಜೀವನವಾದರೂ ಒಂದು ಕೊಡದಂತಿದೆ. ಆದರೆ ಬರಿ ಕೊಡಕ್ಕೆ ಬೆಲೆಯಿಲ್ಲ, ಅಂತೆಯೇ ಬರಿದಾದ ಜೀವನಕ್ಕೂ ಬೆಲೆ ಇಲ್ಲ. ತುಂಬಿದ ಕೊಡವನ್ನು ಯಾರಾದರೂ ತಲೆಯ ಮೇಲೆ ಇಟ್ಟುಕೊಳ್ಳುತ್ತಾರೆ. ಅದರಂತೆಯೇ ಸತ್ಕೃತಿ. ಜ್ಞಾನ, ಪ್ರೇಮದಿಂದ ತುಂಬಿದ ಜೀವನವಿದ್ದರೆ, ಜನತೆ ನಿಮ್ಮನ್ನು ತಲೆಯಲ್ಲಿ ಅಂತು ನಲಿಯುತ್ತದೆ. ಬರಿಯ ಕೊಡವು ಹೇಗೆ ಅಮಂಗಲವೋ, ಹಾಗೆ ಬರಿದಾದ ಜೀವನವೂ ಅಮಂಗಲವೇ. "ಕಾರಣ ನಿಮ್ಮ ಜೀವನವನ್ನು ಮಾಂಗಲ್ಯದಿಂದ ತುಂಬಿರಿ" ಎಂದು ಸಾರಿ ಹೇಳುತ್ತಿವೆ ಈ ತುಂಬಿದ ಕಲಶಗಳು.

ದೇವರನ್ನು ನೀರಾಂಜನದಿಂದ ಆರತಿ ಮಾಡುವುದರಲ್ಲಿದ್ದ ಅರ್ಥವಾವುದು? ನಿಜವಾಗಿ ನಮ್ಮ ಜೀವನವೇ ಪ್ರಜ್ವಲಿಸಿ ದೇವರಿಗೆ ಆರತಿ ಮಾಡಬೇಕು. ಜೀವನದ ಬತ್ತಿ ಸತತವಾಗಿ ಉರಿಯುತ್ತಿರಬೇಕು. ನೀರಾಂಜನವನ್ನು ಆರತಿ ಮಾಡುವಾಗ, "ದೇವರೇ, ಈ ಜೀವನ ಬತ್ತಿಯು ಸಮಾಜಕ್ಕಾಗಿಯೇ ಸವೆಯಲಿ'' ಎಂದು ಪ್ರಾರ್ಥಿಸಬೇಕು. ಪಂಚಾರತಿ ಎಂದರೆ ಪಂಚಪ್ರಾಣಗಳ ಆರತಿ. ಈ ಪಂಚಪ್ರಾಣಗಳನ್ನು ಧ್ಯೇಯಕ್ಕಾಗಿ ಧಾರೆ ಎರೆಯಬೇಕು.

ದೇವರಿಗೆ ಊದುಬತ್ತಿಯನ್ನು ಅರ್ಪಿಸುವಾಗ, "ದೇವರೇ, ಈ ಜೀವನವನ್ನು ಉರಿಸಿ ನಿನಗೆ ಸುಗಂಧವನ್ನು ಬೀರುವೆನು'' ಎಂಬ ಭಾವವಿದೆ. ಉರಿಯದೇ ಸುಗಂಧ ಹೊರಡದು. ಚಂದನ-"ದೇಹವನ್ನು ಚಂದನದಂತೆ ಸವೆಸಿ ನಿನಗೆ ಗಂಧವನ್ನರ್ಪಿಸುವೆ'' ಎಂಬರ್ಥವಿದೆ. ಅದರಂತೆ ಪ್ರದಕ್ಷಿಣೆ. ದೇವರನ್ನು ಪುನಃ ಪುನಃ ಸುತ್ತುವರಿಯುವದರಿಂದ ಆತನ ಮೂರ್ತಿಯ ನೆನಹು ನಮ್ಮಲ್ಲಿ ಅಖಂಡವಾಗಿ ನಿಲ್ಲುತ್ತದೆ.

ನಾವು ಪ್ರದಕ್ಷಿಣೆ ಹಾಕಿದಷ್ಟು ಸಲ ಅದು ನಮ್ಮ ಮನದಲ್ಲಿ ದೃಢವಾಗುತ್ತದೆ. ಇದರಂತೆ ಪ್ರತಿಯೊಬ್ಬನೂ ತನ್ನ ಧ್ಯೇಯದ ಸುತ್ತುವರಿಯಬೇಕು. ಕೂಲಿಕಾರರ ಸೇವೆ ಮಾಡಬೇಕು, ಅನ್ನುವವನು ಹಗಲಿರುಳು ಕೂಲಿಕಾರರಲ್ಲಿ ಸುತ್ತುವರಿಯುತ್ತಾ ಇರಬೇಕು. ಅವರ ಜೀವನದಲ್ಲಿ ಬೆರೆಯಬೇಕು. ಅವರ ಕುಂದುಕೊರತೆಗಳನ್ನು ಅರಿತುಕೊಳ್ಳಬೇಕು. ಅವರ ಜೀವನದಲ್ಲಿದ್ದ ಅಡ್ಡಿಆತಂಕಗಳನ್ನು ದೂರಮಾಡಲು ಪ್ರಯತ್ನಿಸಬೇಕು. ಅವರ ಕಣ್ಣಲ್ಲಿ ಆನಂದವಿದೆಯೋ, ದುಃಖದ ಕಣ್ಣೀರು ಸುರಿಯುತ್ತದೆಯೋ, ಅವರ ಹೊಟ್ಟೆಗೆ ನೈವೇದ್ಯ ಸಿಕ್ಕಿದೆಯೋ ಇಲ್ಲವೋ ಇದನ್ನೆಲ್ಲ ನೋಡಬೇಕು. ರಾಷ್ಟ್ರೀಯ ಸಭೆ ಲಕ್ಷಾವಧಿ ಹಳ್ಳಿಗಳಲ್ಲಿದ್ದ ಕೋಟ್ಯವಧಿ ಜನರ ಸೇವೆ ಮಾಡಬಯಸಿದರೆ, ರಾಷ್ಟ್ರ ಸಭಾಭಕ್ತರು ಹಳ್ಳಿಗಳಲ್ಲಿಯೇ ವಾಸಿಸಬೇಕು. ಆ ಹಳ್ಳಿ ಶಿವಮಂದಿರವಾಗಬೇಕು. ಈ ಮಂದಿರದಲ್ಲಿ ವಾಸವಾಗಿರುವ ದೇವರ ಸ್ವರೂಪವೇನು ? ಅವನು ಇರುವದೆಲ್ಲಿ ? ಅವನು ತಿನ್ನುವದೇನು ? ಮನೆಯಲ್ಲಿ ದೀಪವಿದೆಯೋ ? ಮನದಲ್ಲಿ ಜ್ಞಾನದೀಪವಿದೆಯೋ? ಇದನ್ನೆಲ್ಲ ಅರಿಯಬೇಕು. ಜ್ಞಾನವೇ ನಿಮ್ಮ ಧ್ಯೇಯವಾಗಿದ್ದರೆ ಯಾವಾಗಲೂ ವಿದ್ವಾಂಸರ ಸಹವಾಸದಲ್ಲಿದ್ದು ಅವರ ಸೇವೆಯನ್ನು ಮಾಡಿರಿ. ಗ್ರಹಗಳೆಲ್ಲ ಸೂರ್ಯನನ್ನು ಸುತ್ತುವರಿದೇ ಪ್ರಕಾಶವನ್ನು ದೊರಕಿಸುವವಲ್ಲವೇ ? ಅಹಂಕಾರವನ್ನು ಬಿಟ್ಟು ಜ್ಞಾನಸೂರ್ಯನ ಸುತ್ತು ಪ್ರದಕ್ಷಿಣೆ ಹಾಕಲು ಮರೆಯಬೇಡಿರಿ. ಕಲೋಪಾಸನೆ ಮಾಡಬೇಕಿದ್ದರೆ ಕಲಾವಂತರನ್ನು ಶರಣುಹೋಗಿರಿ.

ಈ ರೀತಿ ಪ್ರದಕ್ಷಿಣೆ ಮಾಡುತ್ತ ನಡೆದರೆ, ಜನ್ಮಜನ್ಮಾಂತರದಲ್ಲಿ ಈ ಧ್ಯೇಯ ದೇವರ ಪೂಜೆ ಮಾಡಬೇಕೆಂದು ಎನಿಸುವದು. "ನಿನ್ನ ಮೂರ್ತಿ ಮನಸ್ಸಿನಲ್ಲಿ ಮೂಡಲಿ" ಎಂದೆನ್ನಬೇಕೆಂದು ಅನಿಸುವದು. ಈ ದೇಹವು ಹಗಲಿರುಳು ಧ್ಯೇಯ ಸೇವೆಯಲ್ಲಿ ತೊಡಗಿರಬೇಕು. ಈ ಭಾವನೆಯಿಂದ ಪ್ರದಕ್ಷಿಣೆಯಾದಮೇಲೆ ಸಾಷ್ಟಾಂಗ ನಮಸ್ಕಾರವನ್ನು ಮಾಡುವದು. ಕೊನೆಗೆ ಮಂತ್ರಪುಷ್ಪ ಇದು ಜೀವನ ಪುಷ್ಪದ ಚಿರ ಸಮರ್ಪಣೆಯ ಸಂಕೇತ.

ಸೂರ್ಯನಾರಾಯಣನನ್ನು ಕುರಿತು ಉಪನಿಷತ್ತಿನಲ್ಲಿ ಹೇಳಲಾಗಿದೆ. ಈ ಸೂರ್ಯನು ನಾರಾಯಣಸ್ವರೂಪನು. ಚೈತನ್ಯಮಯ ಪ್ರಭುವಿನ ಸ್ವರೂಪವೂ ಇವನೇ. ಇವನೇ ಅಖಿಲ ಚರಾಚರ ಸೃಷ್ಟಿಗೆ ಚಾಲನೆಯನ್ನು

ಕೊಡುತ್ತಾನೆ. ಸೂರ್ಯ ಉದಯನಾದೊಡನೇ ಹೂವು ಅರಳುತ್ತದೆ, ಪಕ್ಷಿಗಳು ಹಾಡುತ್ತವೆ, ಅಂತರಾಳದಲ್ಲಿ ಹಾರುತ್ತವೆ, ಪಶುಗಳು ಓಡಾಡ ಹತ್ತುತ್ತವೆ, ಮಾನವನ ವ್ಯವಹಾರಗಳೆಲ್ಲ ಪ್ರಾರಂಭವಾಗುತ್ತವೆ. ವಿಶ್ವಂಭರನ ವಿಶ್ವಚಾಲನೆಯ ಕಲ್ಪನೆ ಈ ಸೂರ್ಯನ ಕಾರ್ಯದಿಂದ ಕೆಲಮಟ್ಟಿಗಾದರೂ ಬರುವದು. ಸೂರ್ಯೋಪಾಸನೆಯೆಂದರೆ ವಿಶ್ವೇಶ್ವರನ ಉಪಾಸನೆ.

ಮೂರ್ತಿಪೂಜೆಯೂ ಒಂದು ಪ್ರತೀಕವೇ. ರಾಮನ ಮೂರ್ತಿಯನ್ನು ನೋಡಿದೊಡನೆ ಆತನ ಚರಿತ್ರೆ-ಇಡೀ ರಾಮಾಯಣವೇ ಕಣ್ಣೆದುರು ನಿಲ್ಲುತ್ತದೆ. ಆ ಕ್ಷಣದಲ್ಲಿ ಅವನ ಜೀವನದಲ್ಲಿಯ ಪಾವಿತ್ರ್ಯವು ಸಂಗ್ರಹ ರೂಪವಾಗಿ ಮನದಲ್ಲಿ ಮೂಡುತ್ತದೆ.

ಶಿಲಾಪ್ರತಿಮೆಗಳನ್ನು ಕಾಣಲು ಮನೆಬಿಟ್ಟು ಹೊರಗಾದರೂ ಹೋಗಬೇಕಾಗುತ್ತದೆ. ಹಾಗೂ ಶಿಲಾಪ್ರತಿಮೆಗಳನ್ನು ಮಾಡುವದು ಕಷ್ಟದ ಕೆಲಸ. ಇವೆಲ್ಲವುಗಳಿಂದಲೂ ನಾಮವೇ ಎಲ್ಲಕ್ಕೂ ಹಿರಿದಾದ ಪ್ರತೀಕವು. "ಇಂದ್ರನ ಸ್ವರೂಪ ಹೇಗಿದೆ, ಇಂದ್ರನ ಮೂರ್ತಿ ಹೇಗಿದೆ?" ಇದಕ್ಕೆ ಮೀಮಾಂಸಕರ ಉತ್ತರ ಹೀಗೇ ಇದೆ. "ಇಂ" ಮತ್ತು "ದ್ರ" ಇಂದ್ರ. ಈ ಎರಡು ಅಕ್ಷರಗಳೆಂದರೆ ಇಂದ್ರನ ಸ್ವರೂಪ. ಇದು ಅವನ ಅಕ್ಷರ ಮೂರ್ತಿ.

ಪರಮೇಶ್ವರನು ಓಂ ಕಾರ ಸ್ವರೂಪಿ ಎಂದು ನಾವು ಹೇಳುತ್ತೇವೆ. ರಾಮ, ಕೃಷ್ಣ ಮುಂತಾದ ಬಹಳ ಹೆಸರುಗಳುಳ್ಳ ರೂಪ ಏತಕ್ಕೆ ? ಈ ಎಲ್ಲ ಹೆಸರಿನ ಸಾರವೆಂದರೆ "ಓಂ;" ಈ ಇಡೀ ಶಬ್ದಸೃಷ್ಟಿಯ ಮಥನದಿಂದ "ಓಂ" ಅಕ್ಷರವು ನಿರ್ಮಿತವಾಗಿದೆ. "ಓಂ" ಅಕ್ಷರದಲ್ಲಿ ಎಲ್ಲ ಸ್ವರಗಳ, ವ್ಯಂಜನಗಳ, ವಾಙ್ಮಯದ, ವೇದಗಳ, ಸಮಾವೇಶವಾಗಿದೆ. "ಓಂ" ಇದು ಪರಮೇಶ್ವರನ ಶಬ್ದಮೂರ್ತಿ, ವಾಙ್ಮಯಮೂರ್ತಿ.

ಶಿಲಾಪ್ರತಿಮೆಯನ್ನು ರಚಿಸುವದು ಕಷ್ಟ, ಮತ್ತು ಅದು ಭಂಗುವಾದದ್ದು. ಆದರೆ ಈ ಶಬ್ದಮೂರ್ತಿಗಳು ಸುಲಭ ಮತ್ತು ಅಕ್ಷರ ಎಂದರೆ (ಅಭಂಗ). ನನ್ನ ತುಟಿಯಲ್ಲಿರುವ ರಾಮ, ಶಿವ ಎಂಬೀ ಅಕ್ಷರ ಮೂರ್ತಿಗಳನ್ನು ಯಾವ ಮುಸಲ್ಮಾನನೂ ಒಡೆಯಲಾರ.

ಆದ್ದರಿಂದಲೇ ನಾಮವು ಬಹಳ ಮಹತ್ವದ ಪ್ರತೀಕವಾಗಿದೆ. ನಾಮೋಚ್ಚಾರವಾದೊಡನೇ ಎಲ್ಲವೂ ನೆನಪಾಗುತ್ತದೆ. ಇಡೀ ಇತಿ

ಹಾಸವೇ ಸಂಗ್ರಹವಾಗಿ ಅದರಲ್ಲಿ ಸಮಾವೇಶವಾಗಿರುತ್ತದೆ. "ತಾಯಿ" ಎಂದೊಡನೆ ತಾಯಿಯ ಪ್ರೇಮದ ಅನಂತ ಸ್ವರೂಪದ ನೆನಹು ಬರುತ್ತದೆ. "ಕಂದಾ" ಎಂದೊಡನೇ ತಾಯಿಗೆ ಕಂದನ ನೂರಾರು ಸ್ಮೃತಿಗಳು ತಲೆಯಲ್ಲಿ ಮೂಡುತ್ತವೆ. ಋಷಿ ತರ್ಪಣವನ್ನು ಬಿಡುವಾಗ ನಾವು ಅವರ ಹೆಸರನ್ನು ಉಚ್ಚರಿಸುತ್ತೇವೆ. ಆ ಹೆಸರಿನಲ್ಲಿಯೇ ಪಾವಿತ್ರ್ಯವು ತುಂಬಿರುತ್ತದೆ. ಕಾಲವು ಮುಂದೆ ಹೋದಂತೆ ಇತಿಹಾಸವು ದೃಢವಾಗುತ್ತ ಕೊನೆಗೆ ಒಂದು ಹೆಸರಿನಲ್ಲಿ ರೂಪಹೊಂದುತ್ತದೆ. ವಸಿಷ್ಠಂ ತರ್ಪಯಾಮಿ, ಅತ್ರಿಂ ತರ್ಪಯಾಮಿ ಎಂದು ಆ ಪರಮ ಋಷಿಗಳ ಹೆಸರುಗೊಂಡು ತರ್ಪಣ ಕೊಡುವ ಕಾಲಕ್ಕೆ ಆ ವಸಿಷ್ಠಾದಿ ಋಷಿಗಳ ನಾಮವೆಂದರೆ ಕೇವಲ ಪಾವಿತ್ರ್ಯವು. ರಾಮ ಎಂದು ರಾಮನಾಮೋಚ್ಚಾರ ಮಾಡಿದೊಡನೆ ನಮ್ಮ ಮನಸ್ಸಿಗೆ ಒಂದು ಪವಿತ್ರ ಭಾವನೆಯ ಸಂಸ್ಕಾರವೇ ದೊರೆಯುತ್ತದೆ. ಪ್ರಿಯ ಭಾರತವರ್ಷ, ಎಂದೊಡನೆ ನಮ್ಮೀ ಮಾತೃಭೂಮಿಯ ಸಾವಿರಾರು ವರುಷಗಳ ಉಜ್ವಲ ಇತಿಹಾಸವು ಕಣ್ಣೆದುರು ನಿಂತು ಅದರಲ್ಲಿಯ ಸುಂದರ ಚಿತ್ರಗಳು ಮನದ ಪಟಲದ ಮೇಲೆ ಒಂದೊಂದಾಗಿ ಮೂಡುತ್ತವೆ. ಶಿವಛತ್ರಪತಿ, ಹರಿಹರ, ಬುಕ್ಕ, ವಿದ್ಯಾರಣ್ಯರು, ರಾಜಸಿಂಹ, ಪದ್ಮಿನಿ, ಚೈತನ್ಯ, ಅಶೋಕ ಇಂಥ ಅನೇಕ ರಾಜಕೀಯ, ಧಾರ್ಮಿಕ, ಸಾಮಾಜಿಕ, ವೀರರ ಉದಾತ್ತ ಚರಿತ್ರೆ ಚಿತ್ರಗಳ ನೆನಹಿನಿಂದ ಮನಸ್ಸಿನಲ್ಲಿ ವಿವಿಧ ಸಂಸ್ಕಾರದ ಮಹಾ ಆಂದೋಲನವೇ ಪ್ರಾರಂಭವಾಗುತ್ತದೆ. ಆದ್ದರಿಂದಲೇ ನಾಮೋಚ್ಚಾರಣೆಗೆ ಇಷ್ಟೊಂದು ಮಹತ್ವದ ಸ್ಥಾನವಿದೆ. ಈಶ್ವರನ ನಾಮೋಚ್ಚಾರಣೆಗಾಗಿ ನಾವು ಯಾವದೇ ಬೆಲೆಯನ್ನು, ಹಾಗೂ ದಕ್ಷಿಣೆ, ದ್ರವ್ಯಾದಿಗಳನ್ನೇನೂ ಕೊಡಬೇಕಾಗಿಲ್ಲ. ಅಂತೆಯೇ ಸಂತರು "ರಾಧೇ ಕೃಷ್ಣ ಬೋಲ ಮುಖಸೇ ತೇರೋ ಕ್ಯಾ ಲಗೇಂಗೆ ಮೋಲ" ರಾಧಾಕೃಷ್ಣನನ್ನು ನೆನೆ, ಅದಕ್ಕಾಗಿ ನೀನೇನೂ ಕೊಡಬೇಕಾಗಿಲ್ಲ, ಎಂದು ಹಾಡಿದ್ದಾರೆ.

ಈ ಅಕ್ಷರ ಪ್ರತೀಕದಲ್ಲಿ ಅದ್ಭುತ ಶಕ್ತಿ ಇದೆ. ಹುಣಸೀ ಹಣ್ಣು ಎಂದಕೂಡಲೇ ಬಾಯಿಯಲ್ಲಿ ನೀರು ಬರಲು ಪ್ರಾರಂಭ, ಮೆಣಸಿನಕಾಯಿ ಎಂದೊಡನೆ ಹಾ ಎಂದು ನಿಟ್ಟುಸಿರುಬಿಡುವದು. ಇಂಥ ಕ್ಷುಲ್ಲಕ ಪದಾರ್ಥಗಳ ನಾಮದಿಂದಲೇ ಇಷ್ಟು ಪರಿಣಾಮಗಳಾಗುತ್ತಿರುವಾಗ ಈ ನಾಮ ಮಹಿಮೆಯನ್ನು ಕಡಿಮೆಯೆಂದು ಲೆಕ್ಕಿಸಬೇಡಿರಿ. ನಾಮವನ್ನು ಹೀಯಾ

ಳಿಸಬೇಡಿರಿ. ಅಖಂಡ ಪ್ರಪಂಚವೇ ನಾಮರೂಪಾತ್ಮಕವಿದೆ. ಇಡೀ ಪ್ರಪಂಚವಾದರೂ ಹೆಸರಿನಲ್ಲಿಯೇ ಬೆರೆತು ಕೊನೆಗೆ ನಾಮವಷ್ಟೇ ಉಳಿಯುವದು! ಆದುದರಿಂದಲೇ ಹೆಸರು ಪಡೆಯಿರಿ, ಕೀರ್ತಿ ಗಳಿಸಿರಿ ಎಂದು ಹೇಳುವದರಲ್ಲಿಯೂ ಇದೇ ಅರ್ಥವಿದೆ.

ಇರಲಿ. ಭಾರತೀಯ ಸಂಸ್ಕೃತಿಯು ಬೆಳೆಯುವ ಸಂಸ್ಕೃತಿಯು. ಈ ಬೆಳೆವ ಸಂಸ್ಕೃತಿಯಲ್ಲಿ ಹೊಸ ಹೊಸ ಕುರುಹುಗಳು ಬರುವದು ಸಹಜ. ಹೊಸ ಹೊಸ ತತ್ವಜ್ಞಾನಗಳೊಡನೆ ಹೊಸ ಹೊಸ ಕುರುಹುಗಳು ತಲೆದೋರುತ್ತವೆ. ಸದ್ಯದಲ್ಲಿ ರಾಷ್ಟ್ರೀಯ ಸಭೆಯ ತ್ರಿವರ್ಣದ ಭಾರತೀಯ ಬಾವುಟವು— ಆ ಮೂರು ವರ್ಣಗಳಿಂದ ಎಲ್ಲ ಧರ್ಮಗಳ ಕೂಡುವಿಕೆಯನ್ನು ತೋರುತ್ತದೆ. ಅದರ ಮಧ್ಯದಲ್ಲಿ ಶೋಭಿಸುವ ಆ ರಾಟಿ ಯಾರನ್ನೂ ಹಿಂಡಿ ಹಿಪ್ಪಿಮಾಡದೇ, ಪರರನ್ನು ಆಕ್ರಮಿಸದೇ ಇರುವ ಸರಳ ಶ್ರಮ ಜೀವನವನ್ನು ಸೂಚಿಸುತ್ತಿದೆ. ಚರಕವೆಂದರೆ ಸ್ವಾವಲಂಬನದ, ನಿರ್ದೋಷ ಶ್ರಮದ ದೊಡ್ಡಿಸ್ತಿಕೆ. ಖಾದಿಯೊಂದು ನೂತನ ಪ್ರತೀಕವು! ಹಳ್ಳಿಗಳಲ್ಲಿ ಹಸಿವೆಯಿಂದ ಬಳಲುತ್ತಿರುವ ದರಿದ್ರರ ನೆನಪು ಅಂದರೇನೇ ಖಾದಿ! ಕೆಂಪು ಬಾವುಟವೆಂಬ ಇನ್ನೊಂದು ಹೊಸ ಪ್ರತೀಕವು ಸಾವಕಾಶವಾಗಿ ಮುಂದೆ ಬರಲಿದೆ! ವಿಶ್ವದಲ್ಲಿ ದುಡಿತದಿಂದ ಬಾಳುವವರ ಒಕ್ಕಟ್ಟಿನ ಚಿನ್ಹವಿದು. ಸುತ್ತಿಗೆ ಕುಡಗೋಲು ಇವು ದುಡಿತದ ದೊಡ್ಡಿಸ್ತನದ ಸಂಕೇತಗಳು.

ಎಲ್ಲ ಸಂಕೇತಗಳನ್ನು ಪರಿಶೀಲಿಸುವ ಈ ದೃಷ್ಟಿಯನ್ನು ನಾವು ಬೆಳಸಬೇಕು. ಆಳವಾಗಿ ನೋಡುವ ದೃಷ್ಟಿಯು ಬಂದೊಡನೆ ಮನಸ್ಸಿಗೆ ಒಂದು ಬಗೆಯ ಆನಂದವೆನಿಸುತ್ತದೆ. ಇಂಥ ದೃಷ್ಟಿ ಇದ್ದರೆ ಬಗೆಬಗೆಯ ಚಿನ್ಹಗಳಲ್ಲಿ, ಬಗೆಬಗೆಯ ಕೃತಿಗಳಲ್ಲಿ ಅರ್ಥವನ್ನು ಕಾಣುವೆವು. ಸಕಲ ವಸ್ತುಗಳ ಅಂತರಂಗವನ್ನು ಕಂಡು ಅದರಲ್ಲಿಯ ರಸವನ್ನು ಅನುಭವಿಸುವೆವು. ಕೇವಲ ಮೇಲ್ತೋಗಟೆಯಿಂದ ಮಾನವನು ತೃಪ್ತಿಯನ್ನು ಹೊಂದಲಾರ. ಭಾರತೀಯ ಸಂಸ್ಕೃತಿಯ ಅಂತರಂಗವನ್ನು ಅರಿಯಬೇಕಾದರೆ ಅದರ ನಿಜ ಸ್ವರೂಪದ ಸುಖವನ್ನು ಅನುಭವಿಸಬೇಕಿದ್ದರೆ, ಅದರ ಉಪಾಸಕನಾಗಬೇಕೆಂದರೆ ಆಳವಾದ ದೃಷ್ಟಿಯನ್ನು ಗಳಿಸಿರಿ. ಆಗ ಮಾತ್ರ ಈ ಸಂಸ್ಕೃತಿಯ ಅಂತರಂಗವು ಪ್ರೇಮದಿಂದ ಅರಳಿದುದು, ಪಾವಿತ್ರ್ಯದಿಂದ ಅಲಂಕೃತವಾದುದು, ಸವಿಯಿಂದ ತುಂಬಿ ಬಂದುದು, ಆಶೆಯಿಂದ ಶೋಭಿ

ತವಾದದ್ದು, ಉತ್ಸಾಹದಿಂದ ಉಕ್ಕೇರುವಂತಹದು, ಜ್ಞಾನದಿಂದ ಮೆರುಗು ಪಡೆದು, ತ್ಯಾಗದಿಂದ ಉರಿದು, ಆನಂದ ಪರಿಪೂರ್ಣವಾದದ್ದು ಎಂಬದು ಕಾಣದೇ ಇರಲಾರದು.

---

## ೨೨. ಶ್ರೀ ಕೃಷ್ಣ ಹಾಗು ಅವನ ಕೊಳಲು

ಭಾರತೀಯ ಹೃದಯದ ಒಡೆಯರು ಇಬ್ಬರು; ಅಯೋಧ್ಯಾಪತಿ ರಾಮಚಂದ್ರ, ದ್ವಾರಕಾಧೀಶ ಶ್ರೀ ಕೃಷ್ಣ ! ಭಾರತದಲ್ಲಿ ಸಾವಿರಾರು ರಾಜ ಮಹಾರಾಜರು ಆಳಿದರು, ಆದರೆ ಇವರೀರ್ವರ ಸ್ಥಾನವು ಅಚಲವಾಗಿದೆ. ಇವರೀರ್ವರ ದಿವ್ಯಸ್ಥಾನದಲ್ಲಿ ಯಾವ ಸತ್ತಾಧೀಶನೂ ಕೂಡಲಾರನು. ಭಾರತೀಯ ಸಂಸ್ಕೃತಿಯೆಂದರೆ ರಾಮ-ಕೃಷ್ಣರು.

ನಾನು ಈ ಪ್ರಕರಣದಲ್ಲಿ ಕೃಷ್ಣ ಚರಿತ್ರೆಯನ್ನು ತೀರ ಬೇರೆ ರೀತಿಯಲ್ಲಿಯೇ ಚಿತ್ರಿಸಲು ಇಚ್ಛಿಸುತ್ತೇನೆ. ಪ್ರೇಮ-ಸ್ನೇಹಗಳ ಸಮತಾವಾದವನ್ನೇ ಗೋಕುಲದಲ್ಲಿ ಸ್ಥಾಪಿಸಿದ, ಶಿಶುಪಾಲ, ಜರಾಸಂಧರಂಥ ವಜ್ರ ಮುಷ್ಟಿಯ ಸಮ್ರಾಟರನ್ನು ಮಣ್ಣುಮುಕ್ಕಿಸಿದ, ಆಪತ್ತುಗಳಿಗೀಡಾದ ದ್ರೌಪದಿಯಂಥ ಮಹಾಸತಿಯರನ್ನು ಕಾಪಾಡಿದ, ಪ್ರೀತಿಯಿಂದ ಅರ್ಜುನನ ಸಾರಥ್ಯವನ್ನು ಮಾಡಿದ, ಕೃಷ್ಣನ ವರ್ಣನೆಯನ್ನು ಇಲ್ಲಿ ನಾನು ಮಾಡುವದಿಲ್ಲ. ಕೃಷ್ಣ ಒಬ್ಬ ವ್ಯಕ್ತಿಯೆಂಬ ದೃಷ್ಟಿಯಿಂದ ನಾನು ವಿಚಾರವನ್ನೇ ಮಾಡುವದಿಲ್ಲ. ಕೃಷ್ಣ ಒಂದು ಪ್ರತೀಕವೆಂಬ ದೃಷ್ಟಿಯಿಂದಲೇ ನಾನು ವಿಚಾರ ಮಾಡುವವನಿದ್ದೇನೆ.

ಗೋಕುಲದ ಕೃಷ್ಣ ಎಂಬುದರಲ್ಲಿ ಒಂದು ಅತಿ ಆಳವಾದ ಅರ್ಥವಿದೆ. ಗೋಕುಲವೆಂದರೇನು ? ಗೋ ಎಂದರೆ ಇಂದ್ರಿಯ. ಗೋ ಎಂದರೆ ಆಕಳವೆಂದು ಇನ್ನೊಂದರ್ಥ; ಇರಲಿ. ಹಚ್ಚನೆಯ ಹುಲ್ಲು ನೋಡಿ ಆಕಳುಗಳು ಸ್ವೈರವಾಗಿ ಅದನ್ನು ಮೇಯಲು ಹೋಗುತ್ತವೆ. ಅದರಂತೆ ಇಂದ್ರಿಯಗಳೆಲ್ಲ ವಿಷಯಗಳ ಬೆನ್ನುಹತ್ತಿ ಸ್ವೈರವೃತ್ತಿಯಿಂದ ಓಡುತ್ತವೆ. ನಮ್ಮ ಜೀವನವೆಂದರೆ ಗೋಕುಲವು. ಕುಲವು ಎಂದರೆ ಸಮುದಾಯ, ಇಂದ್ರಿಯಗಳ ಸಮುದಾಯವೆಂದರೆ ಗೋಕುಲ. ಇಂಥ ಗೋಕುಲವು ನಮ್ಮೆಲ್ಲರ ಹತ್ತಿರ ಅದೆ.

ಈ ಗೋಕುಲದಲ್ಲಿ ಆನಂದದ ಅಭಾವ ಇದೆ. ಇಲ್ಲಿ ಸುಖ ಸಮಾಧಾನಗಳಿಲ್ಲ, ದಿವ್ಯ ಸಂಗೀತವಿಲ್ಲ, ಕೊಳಲಿನ ಮಧುರ ಸೊಲ್ಲು ಇಲ್ಲಿ ಕೇಳಿಸದು, ನೃತ್ಯ ಗೀತಗಳಿಲ್ಲ. ಈ ಜೀವನ ಗೋಕುಲದ ಪ್ರತಿ ಕಾರ್ಯಗಳಲ್ಲಿ ಅಶ್ರದ್ಧೆ, ಅವ್ಯವಸ್ಥೆಗಳು ತಾಂಡವವಾಡುತ್ತಲಿವೆ. ಈ ಇಂದ್ರಿಯಗಳಲ್ಲಿ ಒಂದು ಅತ್ತ ಎಳೆದರೆ ಇನ್ನೊಂದು ಇತ್ತ ಎಳೆಯುವದು, ಮಗದೊಂದು ಬೇರೆ ಕಡೆಗೆ ಎಳೆಯುವದು. ಈ ಇಂದ್ರಿಯಗಳಿಗೆ ನೂರಾರು ಕಡೆಗೆ ಒಲವು, ಅದರಂತೆ ಮನಸ್ಸಿಗೂ ನೂರಾರು ಪ್ರವೃತ್ತಿಗಳು; ಈ ಎಲ್ಲ ಪ್ರವೃತ್ತಿಗಳಲ್ಲಿ ಏಕತಾನತೆ ಇಲ್ಲ. ಅಂತಃಕರಣದಲ್ಲಿ ಗೊಂದಲ, ಈ ಗೋಕುಲದಲ್ಲಿ ಬೆಂಕಿಯ ದೊಂಬೆಗಳೇ ಎದ್ದು ಕುಣಿಯುತ್ತಿರುತ್ತವೆ. ಅಂತಃಕರಣದ ಯಮುನೆಯಲ್ಲಿ ಅಹಂಕಾರದ ಕಾಲೀಯನು ಫೂತ್ಕರಿಸುತ್ತಾನೆ; ಅಘಾಸುರ. ಡಂಭಾಸುರ, ಬಕಾಸುರರು ಈ ಗೋಕುಲವನ್ನು ಸೇರಲು ಪ್ರಯತ್ನಿಸುತ್ತಾರೆ. ಹಗಲಿರುಳು ಹೃದಯದಲ್ಲಿ ಅಪಸ್ವರದ ಗದ್ದಲವೇ ಗದ್ದಲ! ಈ ಹೃದಯ ಮಂಥನವು ನಡೆದೇ ಇದೆ. ನಾವು ಸಮುದ್ರಮಂಥನದ ಕಥೆ ಕೇಳಿದ್ದೇವೆ. ಸಮುದ್ರಮಂಥನವೆಂದರೆ ಹೃದಯ ಸಮುದ್ರದ ಮಂಥನವೇ! ಈ ಹೃದಯಸಾಗರದಲ್ಲಿ ವಾಸನಾ ವಿಕಾರಗಳ ತೆರೆಗಳು ಪ್ರತಿಕ್ಷಣಕ್ಕೆ ಏಳುತ್ತಿವೆ. ಈ ಮಂಥನದೊಳಗಿಂದ ವಿವಿಧ ವಸ್ತುಗಳ ಪ್ರಾದುರ್ಭಾವವು ನಡೆದೇ ಇದೆ. ಸಿರಿಯು ಹೊರಬಿದ್ದು ನಮ್ಮನ್ನು ಮೋಹದಲ್ಲಿ ಕೆಡವುತ್ತಾಳೆ, ಅಪ್ಸರೆ ಒಲಿಸುವಳು, ಸೆರೆ ಇದಿರಾಗುವದು. ಆ ಮೇಲೆ ಚಬಕದ ಏಟು, ಮತ್ತೆ ಪ್ರಚಂಡ ಶಂಖಧ್ವನಿ. ಪ್ರೇಮಚಂದ್ರನ ಉದಯ, ಇಲ್ಲವೆ ದ್ವೇಷದ ಹಾಲಾಹಲ ನಿರ್ಮಾಣವಾಗುತ್ತದೆ. ಸದ್ವಿಚಾರದ ಪೂಮಳೆಗರೆವ ಪಾರಿಜಾತದ ಉದ್ಭವ, ಮದದಿಂದ ಕಂಡವರನ್ನು ಕಾಲ್ಕೆಳಗೆ ತುಳಿವ ಐರಾವತವು ಹುಟ್ಟುತ್ತದೆ. ಏನೇ ಆಗಲಿ, ಅಮರತ್ವ ಅಂದರೆ ನಿಜವಾದ ಸಮಾಧಾನ, ತೃಪ್ತಿ. ಇದು ಸಿಕ್ಕುವ ವರೆಗೆ ಈ ಹೃದಯಮಂಥನವು ನಡೆಯತಕ್ಕದ್ದೇ.

ಹೃದಯದಲ್ಲಿ ಇದ್ದ ಅಶಾಂತಿಯ ಮೂಲಕ ನಾವು ಕಳವಳಗೊಳ್ಳುತ್ತೇವೆ. ದ್ವೇಷ ಮತ್ಸರಗಳಿಂದ ಸೊಕ್ಕಿದ ಈ ಜೀವನ ಗೋಕುಲದಲ್ಲಿ ಕೊನೆಗೊಮ್ಮೆ ಕೃಷ್ಣ ಜನ್ಮವು ಆಗಲೇ ಬೇಕು. ನಂದ ಯಶೋದೆಯರ ಹೊಟ್ಟೆಯಲ್ಲಿ ಶ್ರೀಕೃಷ್ಣನು ಜನ್ಮವೆತ್ತುವನು. ನಂದ ಅಂದರೆ ಆನಂದ, ಯಶೋದೆ ಅಂದರೆ ಯಶಸ್ಸನ್ನು ಕೊಡುವ ಸದ್ವೃತ್ತಿ. ಆನಂದವನ್ನು ದೊರಕಿಸಲು ಹಾತೊರೆಯುವ ಜೀವ, ಆ ಜೀವಕ್ಕೆ ಸಹಾಯವನ್ನು

ನೀಡುವ ಸತ್ಪ್ರವೃತ್ತಿ ಇವುಗಳ ಕಳಕಳಿಯಲ್ಲಿಯೇ ಕೃಷ್ಣಜನ್ಮ, ಹೃದಯ ದಲ್ಲಿ ಹುಟ್ಟುವ ಮೋಕ್ಷವೆಂದರೆ ಶ್ರೀ ಕೃಷ್ಣಜನ್ಮ.

ಕೃಷ್ಣಜನ್ಮ ಮತ್ತು ರಾಮಜನ್ಮದ ಕಾಲವನ್ನು ವಿಚಾರ ಮಾಡಿದರೆ ಅದರಲ್ಲಿ ಎಷ್ಟು ಅರ್ಥವಿದೆಯೆಂಬುವದು ಕಾಣುವದು. ರಾಮಜನನದ ವೇಳೆ ಚೈತ್ರದ ಉರಿಬಿಸಿಲಿನ ಮಧ್ಯಾಹ್ನದ ಹನ್ನೆರಡು ಘಂಟೆ. ಜೀವನಪಥ ದಲ್ಲಿ ಕಾಲಿಡಲು ಜೀವನಿಗೆ ಬಿಸಿಲ ಬೇಸಿಗೆಯಲ್ಲಿ ಕಾಲು ಸುಟ್ಟು ಅರಳು ತ್ತಿದೆ. ನೆಳಲು ಇಲ್ಲ, ವಿಶ್ರಾಂತಿಗೆ ಸ್ಥಾನವಿಲ್ಲ. ಇಂಥ ವೇಳೆಯಲ್ಲಿ ರಾಮನು ಜನ್ಮವೆತ್ತುವನು. ಜೀವನು ತಳಮಳಿಸುತ್ತಿದ್ದಾನೆ, ಹೃದಯವು ದುಃಖದಿಂದ ತುಂಬಾ ಬಳಲುತ್ತಿದೆ. ದಶೇಂದ್ರಿಯ ರೂಪಿ ರಾವಣನ ಉಪಟಳವು ಹೆಚ್ಚಾಗಿದೆ. ಸಂಸಾರದಲ್ಲೆಲ್ಲ ಉರಿಯು ಉಬ್ಬಿ ಎದ್ದು ಬಡಿ ಯುತ್ತಿದೆ. ಇಂಥ ಸಮಯದಲ್ಲಿ ಹೃದಯದ ಅಂತರಾಳದಲ್ಲಿ ಜೀವನನ್ನು ರಮಿಸುವ, ದಶೇಂದ್ರಿಯ ರೂಪಿಯಾದ ರಾವಣನನ್ನು ಸಂಹರಿಸುವ ರಾಮನು ಜನಿಸುತ್ತಾನೆ.

ಇನ್ನು ಕೃಷ್ಣನ ಜನನಕಾಲ- ರಾಮನ ಜನನವು ಮಧ್ಯಾಹ್ನದ ಹನ್ನೆರಡು ಘಂಟೆಯಲ್ಲಿ ಆದರೆ, ಕೃಷ್ಣನು ಮಧ್ಯರಾತ್ರಿಯಲ್ಲಿ ಜನಿಸಿರುವನು. ಶ್ರಾವಣಮಾಸ, ಒಂದೇ ಸವನೆ ಭೋರೆಂದು ಮಳೆ ಸುರಿಯುತ್ತ ಇದೆ. ಮೋಡಗಳಲ್ಲಿ ಗುಡುಗು ಮಿಂಚಿನ ಭಯಾನಕ ಅಬ್ಬರ, ಕಂಡು ಅಡಗುವ ಕತ್ತಲೆಗೂಡಿಸುವ ಮಿಂಚಿನ ಸುಳಿದಾಟ, ನೆರೆಯಿಂದ ತುಂಬಿ ಸೂಸಿ ಹರಿಯುವ ಯಮುನೆ- ಇಂಥ ಸಮಯದಲ್ಲಿ ಕೃಷ್ಣನು ಜನಿಸುತ್ತಾನೆ. ಯಾವ ಸಮಯದಲ್ಲಿ, ಜೀವನದ ಕೃಷ್ಣಪಕ್ಷದ ಮಧ್ಯವೋ ಅಂದು ಮಹಾ ಕಗ್ಗತ್ತಲೆ ಜೀವನವನ್ನೆಲ್ಲ ಮುತ್ತಿದೆ. ನಿರಾಶೆಯ ದಾರುಣ ಮೌನವೇ ಮೌನ, ಕಣ್ಣಿನಲ್ಲಿ ಸಂತತ ನೀರಧಾರೆ, ಜೀವನ ಮಾರ್ಗಕ್ಕೆ ಕಣ್ಣು ಕಾಣ ಲೊಲ್ಲವು. ಹೃದಯ ಯಮುನೆ ತುಂಬಿ ಹರಿಯುತ್ತಿದೆ, ದುಃಖದೈನ್ಯದ ಕಾರಾಗೃಹದ ಶೃಂಖಲೆಗಳು ಬಿಗಿಯಾಗಿವೆ.- ಇಂಥ ವೇಳೆಯಲ್ಲಿಯೇ ಕೃಷ್ಣನು ಜೀವನವನ್ನು ಸಂತಯಿಸಲು ಉದಯಿಸುವನು.

ಶ್ರೀ ಕೃಷ್ಣನು ಜೀವನವನ್ನು ಸುವ್ಯವಸ್ಥಿತಿಯಲ್ಲಿ ತರುವವನು, ರಾಮನು ರಮಿಸುವವನು. ಕೃಷ್ಣನು ಆಕರ್ಷಿಸುವವನು, ಇಡೀ ಗೋಕು ಲವೇ ಅವನ ಬೆನ್ನುಹತ್ತುತ್ತದೆ. ಕೃಷ್ಣನು ಗೋಪಾಲನಲ್ಲವೇ? ಗೋ ವೆಂದರೆ ಇಂದ್ರಿಯಗಳು, ಆತನು ಇಂದ್ರಿಯಗಳಿಗೆ ಒಡೆಯನು. ಆತನು

ಇಂದ್ರಿಯಗಳನ್ನು ಭೋಗಿಸಲು ಬಿಡುವನು. ಆದರೆ ಸ್ವೇಚ್ಛೆಯಿಂದಲ್ಲ; ಆ ಇಂದ್ರಿಯ ಗೋವು ಬೇಕಾದತ್ತ ಹರಿಯಬಾರದೆಂದೇ ಸುಂದರ ಮಧುರ ಮುರಲಿಯನ್ನು ಊದುವನು. ಆ ಮಧುರ ಗಾನದಿಂದ ಅವುಗಳಿಗೆ ಸುಖ ಸಮಾಧಾನವನ್ನು ಯಥೇಚ್ಛವಾಗಿ ಸುರಿಸುವನು. ಇಂದ್ರಿಯಗಳೆಲ್ಲವನ್ನೂ ಆಕರ್ಷಿಸಿ ಸಂಯಮನದ ಸುಂದರ ಜೀವನದಲ್ಲಿ ದಿವ್ಯ ಸಂಗೀತವನ್ನು ನಿರ್ಮಿಸುವನು.

ನಮ್ಮ ಜೀವನದಲ್ಲಿ ಅವ್ಯವಸ್ಥೆಯನ್ನು ಕಳೆದು ಸುವ್ಯವಸ್ಥೆಯನ್ನುಂಟು ಮಾಡುವವನೇ ಶ್ರೀ ಕೃಷ್ಣನು. ರವೀಂದ್ರರು ತಮ್ಮ ಗೀತಾಂಜಲಿಯಲ್ಲಿ ಹೀಗೆ ಹೇಳಿದ್ದಾರೆ. "ವೀಣೆಯ ತಂತಿಗಳನ್ನು ಜೋಡಿಸುವದರಲ್ಲಿಯೇ ದಿನವೆಲ್ಲವನ್ನು ಕಳೆದೆ. ಇನ್ನೂ ಆ ವೀಣೆ ನುಡಿಯಲೊಲ್ಲದು, ಸಂಗೀತವು ಸುರುವು ಆಗಲೊಲ್ಲದು." ಇದೇ ಸ್ಥಿತಿ ನಮ್ಮೆಲ್ಲರಲ್ಲಿಯೂ ಇದೆ. ನಮ್ಮ ಜೀವನದಲ್ಲಿ ಮೇಳವಿಲ್ಲ. ಜೀವನದ ವೀಣೆ ಸರಿಯಾಗಿ ನುಡಿಯಲೊಲ್ಲದು. ಈ ಜೀವನ ವೀಣೆಗೆ ತಂತಿಗಳು ಏಳೇ ಅಲ್ಲ; ಸಾವಿರಾರು ತಂತಿಗಳಿಂದ ಕೂಡಿದ ವೀಣೆ ಇದು. ಅನಂತ ತಂತಿಗಳಿಂದ ಕೂಡಿದ ಈ ಹೃದಯ ವೀಣೆ ಸಂಗೀತವನ್ನು ಸರಿಯಾಗಿ ನಿರ್ಮಿಸುವದು ಎಂತು?

ಸಾವಿರಾರು ಎಳೆತಗಳೆಂದರೇನೇ ಈ ತಂತಿಗಳು. ಇಂದು ಒಂದು ರೀತಿ ಅನಿಸಿದರೆ ನಾಳೆ ಮತ್ತೊಂದು ರೀತಿ ಅನಿಸುತ್ತದೆ. ಈ ಕ್ಷಣ ಹೀಗೆಯೇ ಮಾಡಬೇಕೆಂಬ ಎಣಿಕೆ, ಮರುಕ್ಷಣ ಮತ್ತೊಂದನ್ನು ಮಾಡುವ ಬಯಕೆ. ಈ ರೀತಿಯಾಗಿ ನಮ್ಮ ವಾಸನೆಗಳು ನಮ್ಮನ್ನು ತಾನವಿಲ್ಲದೇ ಕುಣಿಸುತ್ತಿವೆ. ಇಬ್ಬರು ಹೆಂಡಿರ ಕಾಟದಿಂದಲೇ ಗಂಡನು ಹಣ್ಣಾಗುತ್ತಾನೆ. ಅಂದಮೇಲೆ ಈ ಜೀವನಿಗೆ ವಾಸನಾರೂಪಿಗಳಾದ ಸಾವಿರಾರು ಚಂಚಲ ಸತಿಯರಿಂದ ಅವನ ಅವಸ್ಥೆ ಏನಾಗಬಹುದು? ಈ ಎಳೆತಗಳು ಹಗಲಿರುಳು ನಡೆದೇ ಇವೆ. ಇದರಿಂದ ಹೃದಯವು ಬಲು ಭಾರದಿಂದ ಜರ್ಝರಿತವಾಗಿ ಶಕ್ತಿ ಅಳಿದಿದೆ. ಇಂಥ ಕಾಲದಲ್ಲಿ ಜೀವನು ಮರಣವನ್ನಪ್ಪಲು ಹವಣಿಸುತ್ತಾನೆ.

ಶ್ರೀ ಕೃಷ್ಣನಿಗೆ ಹದಿನಾರು ಸಹಸ್ರ ನಾರಿಯರೆಂದು ಕೇಳಿಲ್ಲವೇ? ಹದಿನಾರು ಸಾವಿರವೇಕೆ, ಹದಿನಾರು ಕೋಟಿ ಕೂಡ ಇರಬಹುದು. ಕ್ಷಣ ಕ್ಷಣಕ್ಕೆ ಬದಲಾವಣೆಯನ್ನು ಹೊಂದುವ ಮಾನಸಿಕ ಎಳೆತಗಳೇ ಈ ನಾರಿಯರು, ಅಂದರೆ ಗೋಪಿಯರು. ಈ ಗೋಪಿಯರು ಜೀವನನ್ನು ತಮ್ಮೆಡೆಗೆ ಎಳೆಯುತ್ತಾರೆ. ಆಗ ಗೋಕುಲದಲ್ಲಿ ಜನಿಸಿದ ಶ್ರೀ ಕೃಷ್ಣನು ಅವರನ್ನೇ

ತನ್ನೆಡೆಗೆ ಎಳೆದು, ಅವರ ಮೇಲಿದ್ದ ಮೋಹಕ ವಸ್ತ್ರಗಳನ್ನೇ ಅಪಹರಿಸಿ ಮರನೇರಿ ನಲಿಯುತ್ತಾನಂತೆ, ಆಗ ಅವರು ನಾಚಿ ಆತನಿಗೆ ತಲೆ ಬಾಗಿಸುತ್ತಾರೆ.

ಇದರಂತೆ ಮನಸ್ಸಿನ ಪ್ರತಿಯೊಂದು ಒಲವು ಸುಂದರ ರೂಪವನ್ನು ಧರಿಸಿ ಜೀವನನ್ನು ಮೋಹಿಸುತ್ತದೆ. 'ಗಟೆ' ಎಂಬ ಮಹಾಕವಿಯು, 'ಫಾಸ್ಟ' ಎಂಬ ಕಾವ್ಯದಲ್ಲಿ ಓರ್ವ ವ್ಯಕ್ತಿಯ ಬಾಯಿಂದ ನುಡಿಸುತ್ತಾನೆ. "ಇದು ಪಾಪವೆಂದು ನನಗೆ ಗೊತ್ತಿತ್ತು; ಆದರೆ ಈ ಪಾಪವು ಎಂಥ ಸುಂದರ ವೇಷ ಧರಿಸಿತ್ತು ? ಹಾಗೂ ಎಷ್ಟು ಮಧುರ ಮನೋಹರವಾಗಿ ಕಾಣುತ್ತಿತ್ತು !"

ಆದರೆ ಶ್ರೀ ಕೃಷ್ಣನು ಗೋಪಿಯರ ಬಾಹ್ಯಸುಂದರ ರೂಪಕ್ಕಾಗಿ ಮರುಳಾದವನಲ್ಲ. ಅವನು ಅವರ ನಿಜಸ್ವರೂಪವನ್ನು ಪ್ರಕಟಿಸಿ, ಅವರ ಲಾಕ್ಷಣಿಕ ವಸ್ತ್ರಗಳನ್ನೆಲ್ಲ ಅಪಹರಿಸಿ, ಅವರಲ್ಲಿದ್ದ ನ್ಯೂನತೆಯನ್ನು ಕಲ ಮಲವನ್ನು ತೋರಿಸುತ್ತಾನೆ. ಆಗ ಆ ಚಂಚಲ ಪ್ರವೃತ್ತಿಗಳು ನಾಚಿ ಚಂಚಲತೆಯನ್ನು ತೊರೆದು, ಶ್ರೀ ಕೃಷ್ಣನ ಅಡಿದಾವರೆಗಳನ್ನೇ ಮರೆ ಹೊಕ್ಕು "ಶ್ರೀ ಕೃಷ್ಣಾ ! ನೀನೇ ನಮ್ಮೊಡೆಯ, ನಿನ್ನ ಹೇಳಿಕೆಯಂತೆ ನಾವು ನಡೆಯುವೆವು," ಎಂದು ಬೇಡಿ ಆತನನ್ನು ನಮಿಸುತ್ತವೆ.

ಇದುವೇ ಜೀವನದ ಕಾರ್ಯ, ಎಲ್ಲ ಇಂದ್ರಿಯಗಳ, ಮನಸ್ಸಿನ, ಎಳೆತ ಒಲವುಗಳನ್ನು ಒಂದೇ ಮಹಾನ್ ಧ್ಯೇಯದೆಡೆಗೆ ಸಾಗಿಸುವದು, ಹಾಗೂ ಜೀವನಕ್ಕೆ ನಿಜ ಸ್ಥೈರ್ಯವನ್ನು ತಂದುಕೊಡುವದು. ನದಿಯು ಸಮುದ್ರವನ್ನು ಕೂಡುವದು, ತುಂಬಿಯು ತಾವರೆಯನ್ನು ಹೊಂದುವದು, ಪತಂಗವು ಪ್ರಕಾಶವನ್ನು ಸೇರುವದು, ನವಿಲು ಮೇಘವನ್ನೇ ಕಾಣುವದು; ಅದರಂತೆ ನಾವು ಕೂಡ ನಮ್ಮ ಇಂದ್ರಿಯ ಪ್ರವೃತ್ತಿಗಳನ್ನೂ ಶಕ್ತಿ ಸರ್ವಸ್ವ ವನ್ನೂ ಒಂದೇ ಒಂದಾದ ಗುರಿಯ ಕಡೆಗೆ ಒಯ್ಯಬೇಕು.

ಶ್ರೀ ಕೃಷ್ಣನು ಇದೇ ಕಾರ್ಯವನ್ನು ಮಾಡುತ್ತಾನೆ. ಮನದ ಪ್ರವೃ ತ್ತಿಗಳನ್ನೆಲ್ಲಾ ಒಂದೆಡೆಗೆ ಎಳೆದು ಧ್ಯೇಯದತ್ತ ಸಾಗಿಸುತ್ತಾನೆ. ಇದರಿಂದ ಜೀವನದಲ್ಲಿಯ ಅಶಾಂತಿಯು ನಾಶವಾಗಿ ಹೃದಯದಲ್ಲಿ ಒಂದೇ ಒಂದಾದ ಮುರಲಿಯ ಮಧುರ ನಿನಾದವು ಕೇಳಬರುತ್ತದೆ. ಇದೇನು ಸುಲಭವಾದ ಕಾರ್ಯವಲ್ಲ. ಹೃದಯದಲ್ಲಿ ಐಕ್ಯದ ಈ ಮುರಲೀನಾದ ಕೇಳುವ ಪೂರ್ವ ದಲ್ಲಿ, ಕೃಷ್ಣನ ಕಾರ್ಯ ಬಾಹುಳ್ಯವು ಬಹಳವಾಗಿದೆ.

ಅಹಂಕಾರದ ಕಾಲೀಯನ ನಾಶವು ಮುಖ್ಯ ಕೆಲಸ. ನಮ್ಮ ಅಹಂಕಾರವು ಯಾವಾಗಲೂ ಎರಡನೆಯವರನ್ನು ತಿರಸ್ಕರಿಸುತ್ತದೆ. ಆದುದರಿಂದ ನಮ್ಮ ನೆರೆಯನ್ನು ಯಾರೂ ಬಯಸುವದಿಲ್ಲ. ನಾನೇ ದೊಡ್ಡವನು, ನಾನೇ ಪಂಡಿತನು, ಇತರರೆಲ್ಲ ಮೂರ್ಖರು ಎಂಬುವವನ ಸಮೀಪದಲ್ಲಿ ಬರಲು ಇಚ್ಛಿಸುವವರು ಯಾರು ? ಈ ಅಹಂಕಾರದಿಂದ ಎಲ್ಲರನ್ನು ನಿಂದಿಸಿ ಜಗಳ ಮಾಡುವವನ ಜೀವನವು ಮುಕ್ತವಾಗುವದಾದರೂ ಹೇಗೆ? ಮತ್ತು ಎಂದು?

ಈ ಅಹಂಕಾರ ರೂಪದ ಕಾಲಿಯನ ಹೆಡೆಯಮೇಲೆ ಶ್ರೀಕೃಷ್ಣನು ನಿಂತು ನಲಿದು ಜೀವನ ಯಮುನೆಯ ಮಡುವಿನೊಳಗಿಂದ ಹೊರದೂಡಬೇಕು. ಜೀವನ ಗೋಕುಲದಲ್ಲಿದ್ದ ದ್ವೇಷ ಮತ್ಸರಗಳೆಂಬ ದಂಭಾಸುರ, ಅಘಾಸುರ ಮುಂತಾದ ರಾಕ್ಷಸರನ್ನು ಸಂಹರಿಸಬೇಕು. ಆಮೇಲೆ ಜೀವನವು ಪರಿಶುದ್ಧವಾಗುವದು. ಆಗ ಮಾತ್ರ ಜೀವನದ ಚೇಷ್ಟೆಗಳಲ್ಲಿ ಎಲ್ಲೆಡೆಗೂ ಧ್ಯೇಯದ ಹುಚ್ಚು ಹಿಡಿಯುತ್ತದೆ. ಆಗ ಮನದಲ್ಲಿ ಇದ್ದುದು ಮಾತಿನಲ್ಲಿ, ನುಡಿಯಲ್ಲಿ ಇದ್ದುದು ನಡೆಯಲ್ಲಿ ಹೀಗಾಗಿ, ಆಚಾರ, ವಿಚಾರ, ಉಚ್ಚಾರಗಳಲ್ಲಿ ಏಕಸೂತ್ರತೆಯಾಗಿ ಹೃದಯದಲ್ಲಿ ನಡೆದ ಕೋಲಾಹಲವು ಅಳಿದು, ಹೃದಯ ವೀಣೆಯ ತಂತಿಗಳು ಸರಿಯಾಗಿ, ಆ ಹೃದಯ ವೀಣೆಯಿಂದ ದಿವ್ಯಗಾನವು ಹೊರಹೊಮ್ಮುತ್ತದೆ.

ಗೋಕುಲದಲ್ಲಿ ಶ್ರೀ ಕೃಷ್ಣನ ಮುರಲಿಯ ಮಧುರನಿನಾದವು ಕೇಳಿಸಿದ್ದು ಯಾವಾಗ ? ಹೃದಯಾಕಾಶದಲ್ಲಿ ಶರದೃತುವಿನ ಆಗಮನವಾಗಿದೆ. ವಾಸನಾ ವಿಕಾರಗಳ ಬಿರುಗಾಳಿ ನಿಂತಿದೆ. ಆಕಾಶವು ನೀಲವಾಗಿ ಶೋಭಿಸುತ್ತದೆ. ಯಮುನೆಯಲ್ಲಿದ್ದ ಹೊಲಸು ಅಳಿದು ನಿರ್ಮಲಳಾಗಿ ಹರಿಯುತ್ತಾ ಇದ್ದಾಳೆ-ಇಂಥ ಕಾಲದಲ್ಲಿ. ಇದೇ ಪ್ರಕಾರವಾಗಿ ನಮ್ಮ ಜೀವನವು ನಿರ್ಮಲವಾಗಿ ಸಾಗಬೇಕು. ಆಸಕ್ತಿಯ ಮೋಡಗಳ ಸುಳಿದಾಟ ಬೇಡ, ಅನಾಸಕ್ತವಾಗಿ ಕೇವಲ ಧ್ಯೇಯದ ಕಡೆಗೆ ಸಾಗಿದ ಕರ್ಮ ಪ್ರವಾಹವು ಇರಲಿ. ಶುದ್ಧ ಆಚಾರ ವಿಚಾರಗಳೇ ನಮ್ಮ ಜೀವನವೆಲ್ಲವನ್ನೂ ತುಂಬಿಬಿಡಲಿ.

ಶರತ್ ಋತು ಇದೆ, ಶುಕ್ಲಪಕ್ಷವೂ ಇದೆ, ಪ್ರಸನ್ನ ಚಂದ್ರೋದಯವಿದೆ; ಚಂದ್ರನು ಮನೋದೇವತೆಯಾದ್ದರಿಂದ ಮನಸ್ಸಿನ ಪೂರ್ಣ ವಿಕಾಸವು ಆಗಿದೆ, ಸದ್ಭಾವ ಕುಸುಮವು ಅರಳಿದೆ, ಸದ್ವಿಚಾರದ ಬೆಳದಿಂಗಳು ಬೆಳಗುತ್ತಿದೆ, ಅನಾಸಕ್ತ ಹೃದಯಾಕಾಶದಲ್ಲಿ ಶೀಲರೂಪಿ ಚಂದ್ರನು ತೊಳ

ಗುತ್ತಿದ್ದಾನೆ, ಪ್ರೇಮದ ಹುಣ್ಣಿಮೆಯ ದಿನ- ಇಂಥ ಸಮಯದಲ್ಲಿ ಗೋಪಿಯರೆಲ್ಲರೂ ಕೂಡುವರು. ಎಲ್ಲರ ಒಲವು ಆ ಕೃಷ್ಣನೆಡೆಗೆ ಧಾವಿಸುತ್ತಿದೆ. ಹೃದಯದಲ್ಲಿ ವ್ಯವಸ್ಥೆ ತರುವ, ಗೊಂದಲದಲ್ಲಿ ಸುಂದರತೆಯನ್ನು ನಿರ್ಮಿಸುವ ಆ ಶಾಮಸುಂದರನೆಲ್ಲಿ ಎಂಬ ತಳಮಳವು ಅವರಿಗಿದೆ. ಆ ಧ್ಯೇಯಗೋಪಾಲನ ಕೊಳಲ ಧ್ವನಿಯನ್ನು ಕೇಳಲು ಈ ಪ್ರವೃತ್ತಿಗಳೆಲ್ಲ ತವಕಿಸುತ್ತವೆ.

ಒಂದು ಬಂಗಾಲಿ ಗೀತೆಯಲ್ಲಿ ಸವಿಯಾದ ಒಂದು ಭಾವನೆಯನ್ನು ನಾನು ಕಂಡಿದ್ದೇನೆ. "ನಾನು ನನ್ನ ಹಿತ್ತಲಲ್ಲಿ ದಿನಾಲು ಮುಳ್ಳು ಹಾಸಿ ಅದರ ಮೇಲೆ ನಡೆಯುವ ಅಭ್ಯಾಸ ಮಾಡುತ್ತಿದ್ದೇನೆ. ಏಕೆ? ಆತನ ಸುಂದರ ಕೊಳಲ ಧ್ವನಿ ಕೇಳಿದೊಡನೆಯೇ ತೀವ್ರ ಗತಿಯಿಂದ ಧಾವಿಸುವಾಗ ಹಾದಿಯಲ್ಲಿಯ ಮುಳ್ಳುಗಳು ನನ್ನನ್ನು ತಡೆಯದಿರಲಿ ಎಂದು!" "ನಿತ್ಯವೂ ಹಿತ್ತಲಲ್ಲಿ ನೀರು ಸುರುವಿ ಆ ಕೆಸರಿನಲ್ಲಿ ಓಡಾಡುತ್ತಿರುವೆ. ಏತಕ್ಕಾಗಿ? ಆತನ ವೇಣುನಾದ ಧ್ವನಿಯನ್ನು ಕೇಳಿದೊಡನೆಯೇ ಓಡುತ್ತಿರುವಾಗ ಮಾರ್ಗದಲ್ಲಿಯ ಕೆಸರು ನನ್ನನ್ನು ತಡೆದೀತೆಂಬ ಭಯದಿಂದ!"

ಒಮ್ಮೆ ಧ್ಯೇಯ ನಿಶ್ಚಯವಾದ ಮೇಲೆ, ಅದರ ಮಾರ್ಗದಲ್ಲಿ ಮುಳ್ಳಿರಲಿ, ಕೆಸರಿರಲಿ, ಹಾಲಾಹಲವಿರಲಿ, ಜೀವವು ನಮ್ಮನ್ನು ಅತ್ತ ಎಳೆದೊಯ್ಯಬೇಕು, ಆತನನ್ನೇ ಸುತ್ತುವರಿಯಬೇಕು, ಕೈ ಕೈ ಹಿಡಿದು ನಲಿಯಬೇಕು, ಒಳಗೂ ಹೊರಗೂ ಒಂದಾಗಬೇಕು.

ಹೃದಯವು ಶುದ್ಧವಾದಾಗ, ಪ್ರೇಮಚಂದ್ರನು ಅರಳಿ, ಎಲ್ಲ ವಾಸನೆಗಳ ಸಂಯಮನವಾಗಿ, ಒಂದೇ ಗುರಿಯು ಕಾಣುತ್ತಿರುವಾಗ, ಆಸಕ್ತಿಯು ಅಳಿದು, ದ್ವೇಷಮತ್ಸರಗಳು ಅಸ್ತವಾಗಿ, ಅಹಂಕಾರದ ಸೊಕ್ಕು ಮುರಿದು, ದಂಭವು ಓಡಿ ಹೋದಾಗ- ಇಂಥ ಸುಸಮಯದಲ್ಲಿ ಮಾತ್ರ ಮಧುರನಿನಾದವು ಪ್ರಾರಂಭವಾಗುವದು. ಜೀವನದಲ್ಲಿ ಆನಂದ ಸಂಗೀತವು ಸುರುವಾಗುತ್ತದೆ. ಇಂಥ ದಿವ್ಯ ಸಂಗೀತದ ಸವಿಯನ್ನು ಬಣ್ಣಿಸುವರಾರು? ಅದರ ರುಚಿ ನೋಡಿದವರಾರು?

"ನನ್ನ ಹೃದಯ ತಂಬೂರಿಯು ಯಾವಾಗಲೂ ಸಿದ್ಧವೇ ಇದೆ." ಎಂದು ಮಹಾತ್ಮಾಜಿಯವರು ಅಂದರು. ಎಂಥ ಅರ್ಥಪೂರ್ಣವಾದ ಮಾತಿದು? ಪ್ರತಿಯೊಬ್ಬನ ಹೃದಯದಲ್ಲಿಯ ತಂಬೂರಿಯು ಹೀಗೆ ಹತ್ತಬಹುದು. ಜೀವನಗೋಕುಲದಲ್ಲಿ ಮುರಲಿಯ ಮಧುರ ಧ್ವನಿಯನ್ನು ಕೇಳಬಹುದು. ಆದರೆ ಯಾವ ಕಾಲಕ್ಕೆ? ವ್ಯವಸ್ಥಿತವಾಗಿ ಇಂದ್ರಿಯಗಳನ್ನೆಲ್ಲಾ

ಆಕರ್ಷಿಸಿ ಧ್ಯೇಯದೆಡೆಗೆ ಒಯ್ಯುವ ಕೃಷ್ಣನು ಜನ್ಮವೆತ್ತಿದಾಗಲ್ಲವೇ ? ಶ್ರೀ ಕೃಷ್ಣನು ನಮ್ಮೆಲ್ಲರ ಹೃದಯದಲ್ಲಿ ಇದ್ದಾನೆ. ತಗ್ಗು ದಿನ್ನೆಗಳಿಂದ ದರಿ ಕಂದರಗಳಿಂದ ಕೂಡಿದ ಗುಡ್ಡದ ಓರೆಯಲ್ಲಿ ಒಂದಾದರೂ ಶಿವಾಲಯವು ಇರುವಂತೆ ನಮ್ಮ ಈ ಮುರುಕ ಜೀವನದಲ್ಲಿಯೂ ಒಂದು ಶಿವಾಲಯವಿದೆ. ನಮ್ಮೆಲ್ಲರ ಹೃದಯ ಗರ್ಭಗುಡಿಯಲ್ಲಿ ಈ ಶಂಭು, ಈ ಮೃತ್ಯುಂಜಯನು, ಸದಾಶಿವನು ಇದ್ದಾನೆ. ಇವನು ದಿನಾಲು ನಮಗೆ ಕಾಣಲಾರ. ಆದರೆ ಅವನು ಇರುವನೆಂಬ ಮಾತಿಗೆ ಸಂದೇಹವಿಲ್ಲ. 'ಎಮಿಲ್' ಎಂಬ ಓರ್ವ ಪಾಶ್ಚಿಮಾತ್ಯ ವಿಚಾರವಂತನು ಒಂದೆಡೆ ಹೀಗೆ ನುಡಿದಿದ್ದಾನೆ. "Deep within this ironical and disappointed being of mine, there is a child hidden, sad simple creature who believes in the ideal, in love, in holiness and all heavenly superstitions." ಇದರ ಭಾವಾರ್ಥವು ಹೀಗೆ ಇದೆ. ಈ ನನ್ನ ಪರಸ್ಪರ ವಿರುದ್ಧ, ನಿರಾಶೆ ಸಂದೇಹಗಳಿಂದ ಯುಕ್ತವಾದ ಜೀವನದ ಗರ್ಭಗುಡಿಯಲ್ಲಿ ಸಣ್ಣದಾದ ಒಂದು ಮಗು ಇದೆ. ಧ್ಯೇಯದಲ್ಲಿ, ಪ್ರೇಮ, ಪಾವಿತ್ರ್ಯ, ಮಾಂಗಲ್ಯಗಳಲ್ಲಿ, ಎಲ್ಲ ದೈವೀ ಒಲವುಗಳಲ್ಲಿ ಈ ಬಾಲಕನ ಶ್ರದ್ಧೆ, ನಂಬುಗೆ ಇದೆ. ಈ ಮಗುವು ನನ್ನ ಕಣ್ಣಿಗೆ ತೋರುವದಿಲ್ಲ. ಆದರೂ ಅದೆ ಎಂಬದರಲ್ಲಿ ಸಂದೇಹವಿಲ್ಲ. ಅದು ಇನ್ನೂ ಚಿಕ್ಕದು ಅದೆ. ಸಾದಾ ಮತ್ತು ಖಿನ್ನ ಅಂತಃಕರಣದ್ದು ಇದೆ. ಆದರೆ ಅದೆ ಎಂಬದರಲ್ಲಿ ಸಂದೇಹವಿಲ್ಲ.

ಈ ಬಾಲಕನೆಂದರೆ ಬಾಲಕೃಷ್ಣನು. ಈ ಬಾಲಕೃಷ್ಣನು ಬೆಳೆಯುತ್ತಾನೆ. ಅವನು ಖಿನ್ನನಾಗಿಯೇ ಉಳಿಯದೆ ಒಲವುಳ್ಳವನಾಗುತ್ತಾನೆ. ಜೀವನ ಗೋಕುಲದಲ್ಲಿ ದಿವ್ಯ ಸಂಗೀತವನ್ನು ನಿರ್ಮಿಸಲು ಸಾಹಸ ಪಡುತ್ತಾನೆ. ಈ ಬಾಲಕೃಷ್ಣನನ್ನು ಪೋಷಿಸುವದೇ ನಮ್ಮ ಆದ್ಯ ಕರ್ತವ್ಯ. ನಿಮಗೆ ಜೀವನದಲ್ಲಿ ಸಂಗೀತ ಬೇಕಿದ್ದರೆ ಈ ವೇಣುಧರನನ್ನು ಉಪೇಕ್ಷಿಸಬೇಡಿ.

ಹೃದಯದಲ್ಲಿ ಈ ಕೊಳಲ ನಾದವು ಒಮ್ಮೊಮ್ಮೆ ಕೇಳಬರುತ್ತಿದೆ. ಆದರೆ ಅದು ಯಾವಾಗಲೂ ಕೇಳಬರಬೇಕು. ಇತರ ನಾದಗಳು ನಿಲ್ಲದೇ ಈ ವೇಣುನಾದವು ಕೇಳಲಾರದು. ವಿಕಾರಗಳ ಬೇತಾಳರಾಗವು ನಿಲ್ಲದೇ ಧ್ಯೇಯ ಗೀತೆಯು ಕೇಳುವದೆಂತು ? ಮೇಲಿದ್ದ ಕಲ್ಲು ಬಂಡೆಯನ್ನು ತೆಗೆ

ಯದೇ ಒಳಗೆ ಅಡಗಿದ್ದ ನಿರ್ಮಲ ಝರಿಯು ತೋರುವದೆಂತು? ಅದ ರಂತೆ ಅಹಂಕಾರ, ಆಸಕ್ತಿ, ರಾಗ, ತ್ವೇಷಗಳ ಮಹಾ ಶಿಲೆಯನ್ನು ಒಡೆ ಯದೇ ಹೃದಯದಲ್ಲಿದ್ದ ಭಾವಗಂಗೆಯ ನಿರ್ಝರ ಗೀತೆಯು ಕೇಳಬರುವ ದೆಂತು?

ಹರಿಜನರ ಸಲುವಾಗಿ ಮಹಾತ್ಮರು ಉಪವಾಸ ವ್ರತವನ್ನು ಧರಿಸಿ ದಾಗ್ಗೆ ತಮ್ಮ ಆಶ್ರಮದ ಬಾಲಗೋಪಾಲರಿಗೆ ಒಂದು ಪತ್ರ ಬರೆದು ಅಂದಿದ್ದರು. "ನಾಲ್ವತ್ತು ವರ್ಷಗಳ ಅಖಂಡ ಸೇವೆಯಿಂದ ನನ್ನ ಹೃದಯ ದಲ್ಲಿ ನಾನು ಸ್ವಲ್ಪಮಟ್ಟಿಗೆ ವ್ಯವಸ್ಥೆ ನಿರ್ಮಿಸಿದ್ದೇನೆ. ಸಂಯಮ ತಪಸ್ಸು ಗಳಿಂದ ಜೀವನದಲ್ಲಿದ್ದ ಅಪಸ್ವರವನ್ನು ದೂರಮಾಡಿದ್ದೇನೆ. ಆದ್ದರಿಂದಲೇ ನನಗೆ ಒಳಗಿನ ಮಂಜುಳ ಧ್ವನಿಯು ಕೇಳಿಸುತ್ತಿದೆ."

ಸೇವೆ ಸಂಯಮಗಳಿಂದಲೇ ಸಂಗೀತವನ್ನು ನಿರ್ಮಿಸಬೇಕು. ಕೃಷ್ಣನು ಸಂಯಮದ ಮೂರ್ತಿ. ಕೃಷ್ಣನೆಂದರೆ ಆಕರ್ಷಿಸಿಕೊಳ್ಳುವವನು. ನರನ ಕುದುರೆಗಳನ್ನು ನಡೆಸುವಾತನು. ಇಂದ್ರಿಯ ರೂಪವಾದ ಕುದುರೆ ಗಳನ್ನು ಅತ್ತಿತ್ತ ಹೋಗಗೊಡದೆ ತಡೆಯುವವನು. ಸಂಯಮವೇ ಸಂಗೀತ. ಸಂಗೀತವೆಂದರೆ ಮೇಳ, ಅಳತೆ. ಅಳತೆಯೆಂದರೆ ಚೆಲುವಿಕೆ. ಜೀವನದಲ್ಲಿ ಎಲ್ಲ ಮಾತುಗಳ ಅಳತೆಯನ್ನು ಸಾಧಿಸುವದೆಂದರೇನೇ ಸಂಗೀತ ನಿರ್ಮಾಣ, ಇದೇ ಯೋಗವು.

ಇದಕ್ಕಾಗಿಯೇ ಹಗಲಿರುಳು ಹೆಣಗಬೇಕು, ದುಡಿಯಬೇಕು. ಈ ಅತಿಮಧುರ ವೇಣುನಾದವನ್ನು ಲಾಲಿಸಬೇಕೆಂಬ ಆಕಾಂಕ್ಷೆ ಇದ್ದರೆ, ಅವಿ ಶ್ರಾಂತ ಪ್ರಯತ್ನ ಬೇಕು. ಜಾಗ್ರತೆ ಇರಬೇಕು. ಹಗಲಿರುಳು ಮನಸ್ಸಿನಲ್ಲಿ, ಜನರಲ್ಲಿ ಹೋರಾಟ ನಡೆಯುವದು. ಒಮ್ಮೊಮ್ಮೆ ನಾವು ಬೀಳಲುಬಹುದು, ಮತ್ತೆ ಏಳುವೆವು. ಈ ಸಂತತವಾದ ಹೋರಾಟ ಹೆಣಗಾಟಗಳೇ ಮಾನ ವನ ಭಾಗ್ಯಗಳು. ಪಶುಜೀವನದಲ್ಲಿ ಈ ಹೋರಾಟವಿಲ್ಲ. ಇಂದಿಗಿಂತ ನಾಳೆ ಮುಂದುವರಿಯುವೆವು, ಹೆಚ್ಚೆಚ್ಚು ಪವಿತ್ರವಾಗುವೆವು ಎಂಬೀ ಭಾವನೆಯು ಪಶುಗಳಲ್ಲಿಲ್ಲ. ಜೀವನದಲ್ಲಿ ಈ ಹೋರಾಟವಿಲ್ಲದವನು ಪಶುವಿರಬೇಕು, ಇಲ್ಲವೇ ಮುಕ್ತನಿರಬೇಕು.

ಗುರಿ ಸಾಧಿಸುವವರೆಗೆ ಹೋರಾಟವೇ ನಮ್ಮ ಧ್ಯೇಯ. ನಾವೆಲ್ಲರೂ ಹೋರಾಡುವ ಬಾಲಕರು. "ಇನ್‌ಕಿಲಾಬ ಝಿಂದಾಬಾದ" ಇದರ ಅರ್ಥವು ಕ್ರಾಂತಿಯು ಚಿರಾಯುವಾಗಲಿ, ಈ ಹೋರಾಟ ಚಿರಾಯುವಾಗಲಿ,

ಹೋರಾಟದಿಂದಲೇ ನಾವು ಒಂದು ದಿನ ಪರಮೋಚ್ಚ ಪದವಿಯನ್ನು ಮುಟ್ಟುವೆವು. ಮುರಲಿಯ ಮಧುರ ಧ್ವನಿಯನ್ನು ಲಾಲಿಸುವದಕ್ಕಾಗಿಯೇ ಈ ಹೆಣಗಾಟ. ಇಂಥ ಸುದಿನವು ನೂರು ಜನ್ಮಗಳಾದ ಬಳಿಕ ಬಂದರೂ ತೀವ್ರ ಬಂದಿತೆಂದೇ ತಿಳಿಯಬೇಕು.

ವಿಖ್ಯಾತ ಲೇಖಕ ಅನಾತೋಲೆ ಫ್ರಾನ್ಸ ಇವರು ಒಂದೆಡೆ ಅಂದದ್ದೇ ನಂದರೆ "ನಿನ್ನಲ್ಲಿದ್ದ ಯಾವ ಕೊರತೆಯನ್ನು ದೂರಮಾಡಲೆಂದು ದೇವರು ನನ್ನನ್ನು ಕೇಳಿದರೆ, ದೇವಾ ನನ್ನಲ್ಲಿದ್ದ ಎಲ್ಲವನ್ನೂ ದೂರ ಮಾಡಿದರೂ ಸರಿ; ಆದರೆ ನನ್ನಲ್ಲಿದ್ದ ಈ ಹೆಣಗುವ ವೃತ್ತಿ ಮತ್ತು ದುಃಖ ಇವೆರಡನ್ನು ಮಾತ್ರ ದೂರ ಮಾಡಬೇಡ, ಎಂದು ಅವನನ್ನು ಬೇಡುವೆನು."

"ಕೃಷ್ಣಾ ನನಗೆ ವಿಪತ್ತಿಯನ್ನೇ ಕೊಡು" ಎಂದು ಕುಂತಿ ದೇವ ನನ್ನು ಬೇಡಿದಳು. ಏತಕ್ಕಾಗಿ ? ವಿಪತ್‌ಪರಂಪರೆಗಳಿಂದ ದಾಟಲು ಹೆಣ ಗಾಡುವ ಈ ಚೇತನವು, ಪೂರ್ಣತೆಯನ್ನು ದೊರಕಿಸುವದಕ್ಕೋಸ್ಕರ, ಅದನ್ನು ಹೊಂದುವದಕ್ಕೋಸ್ಕರ. ಅವನ್ನೇ ನೆನೆಯುವ ಕಳಕಳಿಯು ಹೆಚ್ಚುತ್ತ ಹೋಗುತ್ತದೆ. ಈ ಕಳಕಳಿಯು ಯಾವನಲ್ಲಿ ಇದೆಯೋ ಅವನೇ ಧನ್ಯನು. ಇಂದಿಲ್ಲ ನಾಳೆಯಾದರೂ ಅಂಥವನ ಜೀವನ ಗೋಕುಲದಲ್ಲಿ ಶ್ರೀಕೃಷ್ಣನ ಮಧುರ ಕೊಳಲ ನಿನಾದವು ಕೇಳಬಹುದು.

ಶ್ರೀ ಕೃಷ್ಣನು ಮೊದಲು ಗೋಕುಲದಲ್ಲಿ ತನ್ನ ಇನಿದಾದ ಕೊಳಲ ಧ್ವನಿಯಿಂದ ಆನಂದವನ್ನೇ ಬೀರಿದನು. ಆಮೇಲೆ ಆ ಮಧುರ ಸಂಗೀತವು ವಿಶ್ವವನ್ನೇ ವ್ಯಾಪಿಸುವಂತೆ ಯತ್ನ ಮಾಡಿದನು. ಮೊದಲು ಗೋಕುಲದ ಲ್ಲಿಯ ಉತ್ಪಾತಗಳನ್ನೆಲ್ಲ ತಡೆದು, ಕಾಲೀಯನನ್ನು ತುಳಿದು ಓಡಿಸಿ, ಅಘಾಸುರನನ್ನು ಸಂಹರಿಸಿ ಆಮೇಲೆ ಆ ಜನಜೀವನದಲ್ಲಿ ನೆಲಸಿದ ಅಹಂ ಕಾರ, ದಂಭ, ದ್ವೇಷ, ಮತ್ಸರಗಳನ್ನು ನಾಶಗೊಳಿಸಿ ಗೋಕುಲದಿಂದ ಹೊರಬಿದ್ದು ತನ್ನ ಜೀವನ ಸಂಗೀತವನ್ನು, ಆ ಮಧುರ ವೇಣುಗಾನವನ್ನು ವಿಶ್ವವೇ ಲಾಲಿಸುವಂತೆ ಮಾಡಿದನು.

ಮನುಷ್ಯನು ಮೊದಲು ತನ್ನ ಅಂತಃಕರಣದಲ್ಲಿ ಸ್ವರಾಜ್ಯವನ್ನು ಸ್ಥಾಪಿಸಬೇಕು. ತನ್ನ ಒಡೆಯ ತಾನಾದ ಮೇಲೆ ಮಾತ್ರ ಅವನು ಜಗತ್ತಿಗೆ ಆನಂದವನ್ನು ಬೀರಬಲ್ಲನು. ಆನಂದವಿಲ್ಲದವನು ತಾನೇ ಎರಡನೆಯವ ರನ್ನು ಆನಂದಗೊಳಿಸುವದೆಂತು ? ತನ್ನಲ್ಲಿಯೇ ಶಾಂತಿ ಇಲ್ಲದವನು ಪರ ರನ್ನು ಸಂತಯಿಸಬಲ್ಲನೇ ? ತನ್ನ ಜೀವನದಲ್ಲಿ ಸುಸ್ವರ ಸಂಗೀತವನ್ನು

ಅರಿಯದವನು ಇತರರ ಜೀವನದ ಅಪಸ್ವರವನ್ನು ಸರಿಪಡಿಸಬಲ್ಲನೇ? ತನ್ನನ್ನೇ ಗೆಲ್ಲದವನು ಇತರರನ್ನು ಗೆಲ್ಲಲಾರ. ಬಿದ್ದವನು ಎರಡನೆಯವರನ್ನು ಎತ್ತಲಾರ. ತಾನೇ ಬದ್ಧನಾಗಿದ್ದವನು ಪರರನ್ನು ಬಂಧನದಿಂದ ಮುಕ್ತಮಾಡುವದು ಸಾಧ್ಯವೇ? ಸ್ವತಃ ಕುಗ್ಗಿದವನು ಪರರನ್ನು ಹಿಗ್ಗಿಸುವದು ಹೇಗೆ? ಸ್ಫೂರ್ತಿಹೀನನು ಚೇತನವನ್ನು ಎರೆಯುಬಲ್ಲನೇ? ನಿರುತ್ಸಾಹಿಯು ಉತ್ಸಾಹವನ್ನು ತುಂಬಲಾರ. ಆದುದರಿಂದ ಮೊದಲು ನಮ್ಮ ನಮ್ಮ ಜೀವನ ಗೋಕುಲದಲ್ಲಿ ಸುಖ, ಹಿಗ್ಗು, ಸಮಾಧಾನಗಳನ್ನು ನಿರ್ಮಿಸಬೇಕು. ಆಮೇಲೆ ನಮ್ಮ ಸುತ್ತಲೂ ಸುಖ, ಆನಂದಗಳನ್ನು ಪಸರಿಸಬಲ್ಲೆವು.

ಆದರೆ ಇಂಥ ದಿನವು ಜೀವನದಲ್ಲಿ ಬರಬಹುದೇ? ಬರುವದು, ನಿಶ್ಚಯವಾಗಿ ಬಂದೇಬರುವದು. ಅಲ್ಲಿಯ ವರೆಗೆ ಮಾತ್ರ ನಿಮ್ಮ ಜೀವನ ಯಮುನೆ ಅಶಾಂತಳಾಗಿ ಹರಿಯುವಳು. ಕೆಲವು ಕಾಲ ಈ ಯಮುನೆಯಲ್ಲಿ ಕ್ರೋಧ, ಮತ್ಸರದ ತೆರೆಗಳು ಏಳುವವು. ಕೆಲವು ಕಾಲ ಸ್ನೇಹ ಪ್ರೇಮದ ಪ್ರಚಂಡ ಅಲೆಗಳೂ ಏಳುವವು. ಈ ಜೀವನ ಯಮುನೆಯಲ್ಲಿಯ ತೆರೆಗಳ ತಾಕಲಾಟವು ಏತಕ್ಕಾಗಿ? ಆ ಪರಮ ಧ್ಯೇಯವನ್ನು ಮುಟ್ಟುವದಕ್ಕಾಗಿ. ಶ್ರೀ ಕೃಷ್ಣನ ಅಡಿದಾವರೆಗಳ ಸ್ಪರ್ಶಕ್ಕಾಗಿಯೇ ಈ ಅಲ್ಲೋಲಕಲ್ಲೋಲ ಇದೆ. ಆತನ ಚರಣ ಸ್ಪರ್ಶವಾದ ದಿನವೇ ಈ ಹೃದಯ ಯಮುನೆ ಶಾಂತಳಾಗುವಳು. ಆ ಧ್ಯೇಯ ಭಗವಾನನ ಅಡಿದಾವರೆಗಳ ಮೇಲೆ ಬೀಳುವದಕ್ಕಾಗಿಯೇ ಈ ಯಮುನೆ ತಪಿಸುತ್ತಿರುವಳು. ಶಾಂತವಾಗುವದಕ್ಕಾಗಿಯೇ ಈ ಬಿರುಗಾಳಿಯಿದೆ. ಶಾಂತವಾಗಬೇಕೆಂದೇ ಜೀವನದ ಹೋರಾಟ. ಪ್ರಭುವಿನ ಚರಣ ಸ್ಪರ್ಶಕ್ಕಾಗಿಯೇ ಜೀವನದ ಲವಲವಿಕೆ. ಬರುವದು! ಆ ಶರದ್‌ಋತು ಬರುವದು! ಪ್ರಸನ್ನ ಸುಗಂಧವು ಹರಡುವದು! ಅಲ್ಹಾದಕರ ಹುಣ್ಣಿಮೆಯು ಅರಳುವದು! ಗೋಕುಲದಲ್ಲಿಯ ದಂಭ, ಅಹಂಕಾರ, ಅವ್ಯವಸ್ಥೆಗಳನ್ನೆಲ್ಲ ಹೋಗಲಾಡಿಸಿ, ಸಂತೋಷವನ್ನು ನಿರ್ಮಿಸಿ, ಪ್ರೇಮಸಾಮ್ರಾಜ್ಯವನ್ನು ಸ್ಥಾಪಿಸುವ ಶ್ಯಾಮಸುಂದರನ ಕೊಳಲಿನ ಅಮೃತ ಮಧುರ ನಿನಾದವು ಆ ಸುದಿನದಲ್ಲಿ ನಸ್ನೀ ಹೃದಯ ಗೋಕುಲದಲ್ಲಿ ಕೇಳಬರುವದು! ಹುಚ್ಚು ಹಿಡಿಸುವಂಥ ಶ್ಯಾಮಸುಂದರನ ಪ್ರೇಮಸಾಮ್ರಾಜ್ಯದ ಆ ಕೊಳಲು ನಿರಂತರವೂ ನುಡಿಯುತ್ತಲೇ ಇರಲಿ!

"ಹೇ ಶ್ಯಾಮಸುಂದರಾ ಬಾ, ಇದೋ ಎನ್ನೀ ಹೃದಯಗೋಕುಲ

ದಲ್ಲಿ ದಿವ್ಯ ಸಿಂಹಾಸನವನ್ನೇರಿ ಸದಾ ಹೃದಯಂಗಮವಾದ ನಿನ್ನೀ ವೇಣು ವನ್ನು ನುಡಿಸುತ್ತಲೇ ಇರು. ಅಂದರೇನೆ ಎನ್ನ ಇಂದ್ರಿಯ ಧೇನುಗಳು ಅತ್ತಿತ್ತ ಹೋಗಲಾರವು. ಅತುಲವಾದ ಸುಖದ ಬೆಳೆ ಬೆಳೆದಿದೆ ಇಲ್ಲಿ. ನಿನ್ನ ಅಡಿದಾವರೆಯ ರೇಣುವನ್ನು ಶಿರದಲ್ಲಿ ಧರಿಸುವೆನು. ನನ್ನ ಮಾನಸದ ಒಲವೆಂಬ ಪ್ರೇಮಮಯ ಗೋವುಗಳಿಗೆ ಸದಾ ನಿನ್ನ ರೂಪವನ್ನೇ ನೋಡ ಬೇಕೆಂಬ ಹುಚ್ಚು. ನಿನ್ನ ಹೊರತು ಅವುಗಳಿಗೆ ಮತ್ತೊಂದು ಬೇಡ !

ಶ್ರೀ ಕೃಷ್ಣಾ ನಿನ್ನ ಸುಮಧುರ ಕೊಳಲು ಬಾರಿಸು ಬಾ !

---

## ೨೩. ಸಾವಿನ ಸವಿ

ಸಾವನ್ನು ಕುರಿತು, ಭಾರತೀಯ ಸಂಸ್ಕೃತಿಯಲ್ಲಿ ಅತ್ತಿತ್ತ ಹರಹಿದ ವಿಚಾರಗಳು ಭವ್ಯವಾದವುಗಳೂ, ಸವಿಯಾಗಿಯೂ ಇವೆ! ಮರಣದ ಭೀಷಣತೆ ಭಾರತೀಯ ಸಂಸ್ಕೃತಿಯಲ್ಲಿಲ್ಲ! ಮೃತ್ಯುವು ಜೀವನ ವೃಕ್ಷದ ಸವಿಯಾದ ಹಣ್ಣು.

ಸಾವೂ ಈಶ್ವರನ ಒಂದು ರೂಪವೇ. ಜೀವನ ಮರಣಗಳೆರಡೂ ಪರಮಮಂಗಲ ಭಾವಗಳು. ನಿಜವಾಗಿ ಉಳಿಯುವಿಕೆಯ, ಅಳುವಿಕೆಯ ರೂಪವು ಒಂದೇ ಆಗಿವೆ. ನಿಶೆಯಲ್ಲಿಯೇ ನಸುಕು, ನಸುಕಿನಲ್ಲಿಯೇ ನಿಶೆಯು ನಿರ್ಮಾಣವಾಗುತ್ತಿದೆ. ಜೀವನ ಮರಣದ ಹಣ್ಣು, ಮರಣ ಜೀವನದ ಹಣ್ಣು.

ಸಾವು ಎಂದರೆ ಧರಿಸಿದ ಉಡುಪನ್ನು ಕಳಚಿದಂತೆ ಎಂದು ಗೀತೆ ಯಲ್ಲಿ ಹೇಳಿದೆ. ಜೀವನದ ಕಾರ್ಯವನ್ನು ಮಾಡುತ್ತ ಮಾಡುತ್ತ ದೇಹ ವೆಂಬ ಉಡುಪು ಜೀರ್ಣವಾಯಿತು, ಭಗ್ನವಾಯಿತು. ಆಗ ಮೂರು ಲೋಕದ ಜನನಿ ಹೊಸ ಉಡುಪನ್ನು ಧರಿಸಲು ಕರೆಯುತ್ತಾಳೆ. ಈ ಅವಳ ಕರೆಯೇ ಮರಣ. ನಮ್ಮನ್ನು ತನ್ನ ಮನೆಗೆ ಎತ್ತಿಕೊಂಡು ಒಯ್ದು ಹೊಸ ಉಡಿಗೆಯನ್ನು ಉಡಿಸಿ ಜಗತ್ತಿನ ಅಂಗಳದಲ್ಲಿ ನಮ್ಮನ್ನು ಆಡಲು ಬಿಟ್ಟು ದೂರ ಹೋಗಿ ನಿಂತು ನೋಡುತ್ತಾಳೆ. ಒಮ್ಮೊಮ್ಮೆ ಹುಟ್ಟಿದೊಡನೆಯೇ ಒಯ್ದು ಬಿಡುತ್ತಾಳೆ, ಈ ತಾಯಿ. ಕೆಲವರು ಬಾಲ್ಯದಲ್ಲಿ, ಕೆಲವರು ತಾರುಣ್ಯ

ದಲ್ಲಿ ಸಾಯುತ್ತಾರೆ. ಕಾರಣವಿಷ್ಟೆ, ತಾಯಿ ಇವರಿಗೆ ಉಡುಪನ್ನು ಉಡಿಸಿ, ಕಳಿಸುತ್ತಾಳೆ. ಇವರಿನ್ನೂ ಈ ಜಗತ್ತನ್ನು ಮುಟ್ಟುವದರೊಳಗೆ ದೂರದಿಂದ ನೋಡಿ ಇವರಿಗೆ ಈ ಉಡುಪು ಶೋಭಿಸುವದಿಲ್ಲ ಎಂದು ಅವಳಿಗೆ ಅನಿಸುತ್ತದೆ. ಆದ್ದರಿಂದ ಆ ಮಗುವನ್ನು ತಿರುಗಿ ತನ್ನೆಡೆಗೆ ಒಯ್ದು ಮತ್ತೆ ಹೊಸ ಉಡಿಗೆ ತೊಡಿಸಿ ಬಿಡುತ್ತಾಳೆ. ತಾಯಿಯ ಉತ್ಸಾಹಕ್ಕೆ ಮಿತಿಯೇ ಇಲ್ಲ.

ನನ್ನ ತಾಯಿ ಜಿಪುಣಳೂ ಅಲ್ಲ, ತಿರುಕಳೂ ಅಲ್ಲ. ಅವಳ ಭಾಂಡಾರವು ಅನಂತ ವಸ್ತ್ರಗಳಿಂದ ತುಂಬಿದೆ. ತಾಯಿಯ ಭಾಂಡಾರವು ವಸ್ತ್ರದಿಂದ ತುಂಬಿದೆಯೆಂದು ಅವಳಿತ್ತ ಉಡುಪನ್ನು ಮನಬಂದಂತೆ ಎಳೆದು ಕೆಡಿಸಿ ಹರಿಯುವಂತಿಲ್ಲ. ಅದನ್ನು ಜಾಗ್ರತೆಯಿಂದ ಉಪಯೋಗಿಸಬೇಕು. ಅದನ್ನು ನಿರ್ಮಲವಾಗಿಯೂ ಶುಚಿಯಾಗಿಯೂ ಇಡಬೇಕು ಅದು ಪವಿತ್ರವಿರಬೇಕು. ಅದು ಸೇವೆಯನ್ನು ಸಲ್ಲಿಸುತ್ತ ಸವೆದು ಜೀರ್ಣವಾಗಬೇಕು.

ಕಾಯವು ಮಣ್ಣಿನ ಪಾತ್ರೆಯಂತೆ. ಅದನ್ನು ಸೂಚಿಸುವದಕ್ಕಾಗಿ ಶವದಹನ ಕಾಲಕ್ಕೆ ಮಣ್ಣಿನ ಮಡಿಕೆಯನ್ನು ಒಡೆಯುತ್ತಾರೆ. ಮಣ್ಣಿನ ಮಡಿಕೆ ಇದು, ಒಡೆದಿದೆ, ಇದಕ್ಕಾಗಿ ಅಳುವ ಕಾರಣವಿಲ್ಲ. ಸೇವೆಗಾಗಿ ಈ ಮಡಿಕೆ ನಮಗೆ ದೊರೆತಿತ್ತು. ಮಹಾ ಧ್ಯೇಯ ವೃಕ್ಷಗಳಿಗೆ ನೀರೆರೆಯುವದಕ್ಕಾಗಿಯೇ ಅದು ನಮಗೆ ದೊರೆತುದಲ್ಲವೇ? ಕೆಲವರ ಪಾತ್ರೆ ದೊಡ್ಡದು, ಹಲವರ ಪಾತ್ರೆ ಸಣ್ಣದು. ಹಿರಿದಾದ ಕುಂಬಾರನು ಈ ತೆರದ ವಿಧವಿಧದ ಪಾತ್ರೆಗಳನ್ನು ರಚಿಸಿ ಇವುಗಳಿಂದ ವಿಶ್ವದ ತೋಟವನ್ನು ರಚಿಸಬಯಸುತ್ತಿದ್ದಾನೆ. ಒಂದು ಮಡಿಕೆ ಒಡೆದರೇನಾಯಿತು? ಆತ ಮತ್ತೊಂದನ್ನು ರಚಿಸಿ ಅದರಿಂದ ನೀರೆರೆಸುತ್ತಾನೆ. ಹೀಗೆಯೇ ನಡೆದಿದೆ ಈ ಪ್ರಪಂಚ.

"ಮನುಷ್ಯನೆಂದರೇನು? ಈ ನರದೇಹವೆಂದರೇನು? ಇದೊಂದು ಮಣ್ಣಿನ ಮುದ್ದೆ. ಇದರಲ್ಲಿ ಚಿತ್ಕಳೆ ಇದೆ, ಜೀವವಿದೆ. ಈ ಜೀವದಿಂದಲೇ ಈ ಮಣ್ಣುಮುದ್ದೆಗೆ ಬೆಲೆ." ಹೀಗೆ ವ್ಹಿಕ್ಟರ ಹ್ಯೂಗೋ ಎಂಬವನು ಅಂದಿದ್ದಾನೆ. ಒಂದು ಮಣ್ಣಿನ ಮುದ್ದೆಯನ್ನು ಬದಲಿಸಿ, ವಿಶ್ವಂಭರನು ಇನ್ನೊಂದನ್ನು ಏರ್ಪಡಿಸುವನು. ಅದರಲ್ಲಿ ಚಿತ್ಕಳೆಯನ್ನು ತುಂಬಿ ಜಗತ್ತಿನಲ್ಲಿ ಮತ್ತೆ ಕಳುಹಿಸುವನು. ಚಿಕ್ಕಮಕ್ಕಳು ಒಂದು ಪಟವು ಹರಿದರೆ ಮತ್ತೊಂದು ಹೊಸ ಪಟವನ್ನು ತಯಾರಿಸಿ ಹಾರಿಸುವಂತೆ ಎಲ್ಲಿಯೋ ಕಾಣದ ಒಂದು ತಾಣದಲ್ಲಿ ಕುಳಿತು ಜೀವರೂಪಗಳಾದ ಈ ಅನಂತ ಪಟಗಳನ್ನು ಹಾರಿಸುತ್ತಿದ್ದಾನೆ. ಸರಿಯಾಗಿ ಕೆಳಗೆ, ಮೇಲಕ್ಕೆ ಎಳೆಯುತ್ತಾನೆ. ಒಂದು ಹರಿಯಿ

ತೆಂದರೆ ಮತ್ತೆ ಹೊಸದೊಂದು ಆಕಾರದ, ಹೊಸ ಬಣ್ಣದ ಪಟವನ್ನು ಹಾರಿಸುತ್ತಾನೆ. ತೆರತೆರನಾದ ಬಣ್ಣಗಳ, ನಾನಾ ಆಕಾರದ, ಅನೇಕ ಧರ್ಮದ, ವೃತ್ತಿಯ, ಕೋಟ್ಯವಧಿ ಜೀವಪಟಗಳನ್ನು ನಿತ್ಯ ನಿತ್ಯವೂ ಹಾರಿಸುತ್ತಿದ್ದಾನೆ. ಹಾರುವಾಗ್ಗೆ ಹರಿಯುತ್ತವೆ, ಮತ್ತೆ ಹೊಸವು ಬರುತ್ತವೆ, ನಡೆದೇ ಇದೆ ಈ ಪ್ರಚಂಡ ಕ್ರೀಡೆ; ಈ ವಿರಾಟ ಆಟ. ಸಾವು ಒಂದು ಮಹಾಯಾತ್ರೆ, ಮಹಾಪ್ರಸ್ಥಾನ, ಮಹಾ ನಿದ್ರೆ. ದಿನದ ಹೋರಾಟ ಮುಗಿದೊಡನೆ ನಾವು ಮಲಗುತ್ತೇವೆ. ಈ ನಿದ್ದೆ ಅಲ್ಪ ಕಾಲ ಬಾಳುವ ಸಾವು. ಇದೇ ರೀತಿ ಇಡೀ ಜೀವನವೆಲ್ಲ ಹೆಣಗಾಡಿ ದಣಿದು ಆ ನಿದ್ರೆಯನ್ನು ಹೊಂದುವೆವು. ನಿತ್ಯದ ನಿದ್ರೆ ಏಳೆಂಟು ತಾಸಿನದು, ಈ ನಿದ್ರೆ ದೀರ್ಘಕಾಲದ್ದು. ಇದೇ ಅಂತರವು ಇವೆರಡು ನಿದ್ದೆಗಳಲ್ಲಿ.

ಸಾವು ಎಂದರೆ ತಾಯಿಯ ಪಕ್ಕದಲ್ಲಿ ಸೇರಿ ಮಲಗುವದು ! ದಿನವೆಲ್ಲ ಬಾಲಕನು ಆಡುವನು, ಬೀಳುವನು, ಏಳುವನು, ದಣಿಯುವನು. ರಾತ್ರಿಯಾದೊಡನೆ ತಾಯಿ ಆ ಮಗುವನ್ನು ಮೆಲ್ಲನೆ ಎತ್ತಿಕೊಂಡು ಬರುವಳು. ಅದರ ಆಟಿಕೆಗಳು ಅತ್ತಿತ್ತ ಬಿದ್ದಿರುವವು. ಆ ಮಗುವನ್ನು ತನ್ನ ಪಕ್ಕದಲ್ಲಿ ಮಲಗಿಸುವಳು. ತಾಯಿಯ ಮಗ್ಗುಲಲ್ಲಿ ಮಲಗಿದ ಆ ಮಗುವು ಬೆಳಗಿನಲ್ಲಿ ಮತ್ತಿಷ್ಟು ಉತ್ಸಾಹ ಭರಿತವಾಗಿ ಎದ್ದು ಮತ್ತೆ ಆಟಿಗೆಗಳೊಡನೆ ಆಡತೊಡಗುವದು. ಜೀವವೂ ಇದೇ ರೀತಿಯಾಗಿ ಅದೆ. ಜಗತ್ತಿನಲ್ಲಿ ದುಡಿದು ದಣಿದ ಜೀವವನ್ನು ಜಗನ್ಮಾತೆ ಎತ್ತಿಕೊಂಡು ಹೋಗುವಳು. ಮಗುವಿನ ಮನಸ್ಸಿಲ್ಲದಿದ್ದರೂ ಅದರ ಹಿತಕ್ಕಾಗಿ ತಾಯಿಯು ಬಲುಮೆಯಿಂದ ಅದನ್ನೆತ್ತಿ ಕೈತಟ್ಟಿ ಮಲಗಿಸುವಂತೆ ಜೀವವನ್ನು ಮನಸ್ಸಿನ ವಿರುದ್ಧವಾಗಿಯೂ ಕರೆದೊಯ್ಯುವಳು. ಆಗ ಆ ಜೀವವು ತನ್ನ ಗೆಳೆಯರನ್ನು, ಸಂಗಡಿಗರನ್ನು, ಪ್ರಪಂಚದಲ್ಲಿದ್ದ ಎಲ್ಲ ವಸ್ತುಗಳನ್ನು ಒಳ್ಳೇ ಆಸೆಯಿಂದ ನೋಡುತ್ತಿರುತ್ತದೆ. ಈ ಜೀವ ಬಾಲನ ಹಿತವನ್ನು ಅದಕ್ಕಿಂತ ತಾಯಿಯೇ ಚೆನ್ನಾಗಿ ಅರಿತಿರುವಳಲ್ಲವೇ? ಆ ಅಳುವ ಮಗುವನ್ನು ತಾಯಿ ತನ್ನ ಪಕ್ಕದಲ್ಲಿಟ್ಟು ಮಲಗಿಸುತ್ತಾಳೆ. ಜೀವ ರಸವನ್ನು ಕುಡಿಸುತ್ತಾಳೆ. ಮತ್ತೆ ಜಗತ್ತಿನ ರಂಗದಲ್ಲಿ ಆಡಲು ಬಿಡುತ್ತಾಳೆ.

ಸಾವು ಎಂದರೆ ತವರೂರಿಗೆ ಹೋಗಿಬಂದಂತೆ. ಅತ್ತೆಯ ಮನೆಗೆ ಬಂದ ಮಗಳು, ಎರಡು ದಿನ ತಾಯಿಯ ಮನೆಗೆ ಬಂದು ಅಲ್ಲಿ ತಾಯಿಯ ಪ್ರೇಮಾಮೃತ ಪಾನದಿಂದ, ಉತ್ಸಾಹ, ಆನಂದ, ಬಿಚ್ಚುಮನಸ್ಸಿನಿಂದ

ಮತ್ತೆ ಅತ್ತೆಯ ಮನೆಗೆ ತಿರುಗುವಳು. ಇದೇ ಪ್ರಕಾರ ಆ ಜಗನ್ಮಾತೆಯ ಮನೆಗೆ ಹೋಗಿ ಬರುವದೆಂದರೇನೇ ಮೃತ್ಯು. ಚಿಕ್ಕವನಿದ್ದಾಗ ಶಾಲೆಗೆ ಹೋದ ಮಗುವು ಮಧ್ಯದಲ್ಲಿಯೇ ತಿರುಗಿ ಮನೆಗೆ ಧಾವಿಸುತ್ತದೆ. ಹಸಿವೆ, ನೀರಡಿಕೆ ಇಲ್ಲವೇ ಜಾಡ್ಯ ಇಂಥದೊಂದು ಕಾರಣದಿಂದ ಮನೆಗೆ ಬರುವದು. ಆದರೆ ನಿಜವಾಗಿ ಆ ಮಗು ತಾಯಿಯ ಮುಖಚಂದ್ರನನ್ನು ನೋಡುವ ಹಸಿವೆಯ ಮೂಲಕ ಬಂದಿರುತ್ತದೆ. ತಾಯಿಯ ಪ್ರೇಮದ ಹಸಿವೂ ಅದಕ್ಕೆ ಇರುತ್ತದೆ. ಆಗ ತಾಯಿ ಪ್ರೇಮದಿಂದ ಮಗುವನ್ನು ಚಪ್ಪರಿಸಿ ಕಲ್ಲುಸಕ್ಕರೆ ಕೊಡುವಳು. ಮಗು ಮತ್ತೆ ಆನಂದದಿಂದ ನಲಿಯುತ್ತ ಸಾಲೆಗೆ ಹೋಗುವದು ಮತ್ತು ತನ್ನ ಪಾಠವನ್ನು ಕಲಿಯುವದು. ಇದರಂತೆ ಈ ಜಗತ್ತಿನ ಶಾಲೆಯಲ್ಲಿ ಬೇಸರಗೊಂಡು ದಣಿದು ಜೀವ—ಬಾಲಕರು ಜಗನ್ಮಾತೆಯ ಮುಖಚಂದ್ರನನ್ನು ನೋಡಲು ಹಾತೊರೆಯುತ್ತಾರೆ. ತುಂಬ ಪ್ರೇಮರಸ ಪಾನಮಾಡಿ ಮತ್ತೆ ಸಂಸಾರದ ಮಹಾ ವಿದ್ಯಾಲಯದಲ್ಲಿ ಕಲಿಯಲು ಪ್ರಾರಂಭಿಸುವರು.

ಮರಣವೆಂದರೆ ದಣುವಿನ ಪರಿಹಾರ. ಅನಂತದಲ್ಲಿ ಸ್ನಾನ. ಬೇಸರಗೊಂಡ ಜನರು ಊರ ಹೊರಗಿನ ಹೊಂಡದಲ್ಲಿಯೋ, ಕೆರೆಯಲ್ಲಿಯೋ, ನದಿಯಲ್ಲಿಯೋ ಈಸಲು ಹೋಗುವರು. ಸಮುದ್ರದಲ್ಲಿ ಈಸುವರು, ಹೊಳೆಯಲ್ಲಿ ಬಿದ್ದು ಏಳುವರು; ಇದರಿಂದ ದಣಿವು ಆರುವುದು. ಜೀವನದಲ್ಲಿ ಮುಳುಗಿ ಎದ್ದರೇನೇ ಜೀವನವು ದೊರೆಯುವದು. ಮರಣವೆಂದರೇನು? ಪ್ರಪಂಚದಲ್ಲಿ ದಣಿದ ಜೀವಿಗಳು ಅನಂತವಾದ ಈ ಜೀವನ ಸಮುದ್ರದಲ್ಲಿ ಮುಳುಗಿ ಏಳುವದು. ಅಲ್ಲಿ ಮುಳುಗಲು ಹೋಗುವದೆಂದರೇನೇ ಮರಣ. ಇದೊಂದು ಬಿಡುವು. ಆ ಜೀವನ ಸಾಗರದಲ್ಲಿ ಮುಳುಗಿ ಜೀವನ ರಸದಿಂದ ಎರೆದುಕೊಂಡು ನೂತನ ಉತ್ಸಾಹದಿಂದ ಜಗತ್ತಿನ ಕಾರ್ಯರಂಗದಲ್ಲಿ ಪುನಃ ಸೇರುವದು.

ಎತ್ತರವಾದ ಶಿಖರದ ಮೇಲಿರುವ ಶಿವಾಲಯಕ್ಕೆ ಹೋಗಲು ಮೆಟ್ಟಲುಗಳಿರುತ್ತವೆ. ಅದರಂತೆ ಪೂರ್ಣತ್ವದ ಶಿಖರವನ್ನು ಮುಟ್ಟಲು ಹುಟ್ಟು ಸಾವಿನ ಹೆಜ್ಜೆ ಹಾಕುತ್ತ ಜೀವನ ನಡೆದಿದೆ. ಸಾವೂ ಮುಂದಣ ಹೆಜ್ಜೆ. ಮರಣವೆಂದರೆ ಪ್ರಗತಿಯು ಮುಂದುವರಿದಂತೆ. ದೇವರ ಸನ್ನಿಧಾನವನ್ನು ಸೇರಿಸಲು ನಮ್ಮನ್ನೊಯ್ಯುವ ಮೆಟ್ಟಲುಗಳಿಗೆ ನಾವು ನಮಸ್ಕರಿಸುತ್ತೇವೆ. ಆ ಮೆಟ್ಟಲು ನಮಗೆ ಪವಿತ್ರವಾದವುಗಳು, ಅವು ನಮ್ಮ ಧ್ಯೇಯ

ಸಾಧನಗಳು. ಮರಣವು ಇಂಥದೊಂದು ಮೆಟ್ಟಲು. ಆದ್ದರಿಂದ ಅದು ಮಂಗಲವೂ ಪವಿತ್ರವೂ ಆಗಿದೆ. ಅದು ನಮ್ಮನ್ನು ಕರೆದೊಯ್ದು ಒಳಗಿನ ಧ್ಯೇಯದೆಡೆಗೆ ಮುಟ್ಟಿಸುತ್ತದೆ. ಮರಣಕ್ಕೆ ಪ್ರಣಾಮವಿರಲಿ.

ಮರಣವು ಒಂದು ರೀತಿಯ ವಿಸ್ಮರಣವು. ಜಗತ್ತಿನಲ್ಲಿ ನೆನಪಿಗೆ ಇದ್ದಷ್ಟು ಮಹತ್ವವು ಮರವಿಗೂ ಇದೆ. ಹುಟ್ಟಿದಾರಭ್ಯ ನಾವು ಆಡಿದ ಮಾತು, ಮಾಡಿದ ಕೃತಿ, ಕೇಳಿದ ಧ್ವನಿ, ಕಂಡ ವಸ್ತು, ತೋಚಿದ ವಿಚಾರ ಇವುಗಳನ್ನೆಲ್ಲ ನೆನಪಿನಲ್ಲಿ ಇಡಬೇಕೆಂದರೆ, ಅದೆಂಥ ಅಸಹ್ಯವಾದ ಭಾರ ವಾದೀತು? ಆ ಪ್ರಚಂಡ ಪರ್ವತವು ನಮ್ಮನ್ನು ಹತ್ತಿಕ್ಕಿ ನುಚ್ಚುಮಾಡು ವದು. ಜೀವನವು ಬೇಡಾಗುವದು.

ವ್ಯಾಪಾರಿಯು ಸಾವಿರಾರು ವ್ಯವಹಾರಗಳನ್ನು ಮಾಡುವನು. ಆದರೆ ಕೊನೆಗೆ ಆಗತಕ್ಕ ಇಂತಿಷ್ಟು ಲಾಭ ಅಥವಾ ಇಂತಿಷ್ಟು ಹಾನಿ ಎಂಬ ಮಾತನ್ನಷ್ಟೇ ಸುಲಭವಾಗಿ ನೆನಪಿನಲ್ಲಿಡುತ್ತಾನೆ. ಅದರಂತೆಯೇ ಈ ಜೀವ ನದ ಮಾತಾದರೂ. ಜೀವನ ವ್ಯವಹಾರದಲ್ಲಿಯ ಲಾಭಹಾನಿಯನ್ನು ಪೂರ್ಣವಾಗಿ ತಿಳಿದುಕೊಳ್ಳುವ ಕ್ಷಣವೇ ಮರಣ ಸಮಯ. ಅರವತ್ತು, ಎಪ್ಪತ್ತು ವರುಷಗಳ ವರೆಗೆ ಈ ಪ್ರಪಂಚದ ಅಂಗಡಿಯ ವ್ಯವಹಾರ ನಡೆ ದಿದೆ. ಈ ಅಂಗಡಿಯ ಲಾಭಹಾನಿಯನ್ನು ನೋಡುವ ಸಮಯವೇನೇ ಮರಣ. ಈ ಅನುಭವದಿಂದ ಕಲಿತು ಬಲ್ಲವರಾಗಿ ಮತ್ತೆ ಈ ಅಂಗಡಿ ಆರಂಭಿಸುತ್ತೇವೆ. ತಾಯಿಯ ಅಪ್ಪಣೆ ಪಡೆದು ಮತ್ತೆ ಅಂಗಡಿಯ ವ್ಯವ ಹಾರದ ಪ್ರಾರಂಭ. ಈ ನಮ್ಮ ನಲುಮೆಯ ತಾಯಿಯು ಎಂದಿಗೂ ನಮ್ಮನ್ನು ಪ್ರತಿಬಂಧಿಸುವದಿಲ್ಲ.

ಮರಣವು ಅಗತ್ಯವಾದ ವಸ್ತು. ಈಗಿದ್ದ ನಾಮರೂಪದಿಂದ ಅಳಿದು ಹೋಗುವದು ಎಷ್ಟೋ ಸಲ ಅತ್ಯಗತ್ಯವೂ ಇಷ್ಟವೂ ಇರುತ್ತದೆ. ಒರ್ವ ಮನುಷ್ಯನು ಮೊದಲು ತಿಳಿಯದೇ ದುರ್ನಡತೆಯಿಂದಿದ್ದು ಅದರಲ್ಲಿ ಹೇಯ ಬುದ್ಧಿಯಿಂದ ಪಶ್ಚಾತ್ತಾಪಪಟ್ಟು ಮುಂದೆ ಒಳ್ಳೇ ನಡತೆಯನ್ನು ಅನುಸರಿ ಸಿದರೂ ಜನರು ಅದನ್ನು ಒಪ್ಪರು. ಆತನ ಕಲಂಕಿತ ಭೂತಕಾಲವನ್ನೇ ಎತ್ತಿ ಆಡುವರು. "ಓಹೋ! ಇವನೇ, ಬಲ್ಲೆ. ಸೂಳೆ ಮುಪ್ಪಾಗಿ ಜೋಗತಿ ಯಾದಳಂತೆ! ಈ ಮಹಾಶಯನು ಇದೊಂದು ಹೊಸ ಸೋಗು ತೆಗೆದಿ ದ್ದಾನೆ.'' ಎಂಬ ಬಿರುನುಡಿಯನ್ನು ಜನ ಬಿಡುವದಿಲ್ಲ. ಇವುಗಳನ್ನು ಕೇಳಿ ಕೇಳಿ ನೊಂದ ಅವನ ಹೃದಯ ಮತ್ತಿಷ್ಟು ತಾಪಹೊಂದುತ್ತದೆ. ಹಿಂದಿನ

ಕೆಡಕನ್ನು ಮರೆಯಬೇಕೆಂದು ಪ್ರಯತ್ನಿಸಿದರೂ ಜನರು ಅದನ್ನು ಮರೆಯದೆ ಹೀಯಾಳಿಸುವ ನುಡಿ ಕೇಳಿ ಈ ಜಗತ್ತಿನಿಂದ ಹೊರಗೆ ಹೋಗಲೇಬೇಕು ಎಂದೆನಿಸುತ್ತದೆ. ಆಗ ಈ ಜಗತ್ತಿನಿಂದ ಸರಿದು ತೆರೆಯಲ್ಲಿಂದ ಹೊಸ ರೂಪ, ಹೊಸ ನಾಮದಿಂದ ಪುನಃ ಈ ಜಗತ್ತಿನಲ್ಲಿ ಬಾಳಿ ಬೆಳೆಯುವದರಲ್ಲಿ ಸ್ವಾರಸ್ಯವಿಲ್ಲವೇ ?

ಮರಣವಿಲ್ಲದಿದ್ದರೆ ಈ ವಿಶ್ವದ ದಾರುಣ ಸ್ಥಿತಿಯನ್ನು ಬಣ್ಣಿಸುವವರಾರು? ಮರಣವೇ ಸಂಸಾರವನ್ನು ರಮಣೀಯವಾಗಿ ಮಾಡುತ್ತದೆ! ಸಾವು ಇದೆಯೆಂದೇ ಜಗತ್ತಿನಲ್ಲಿ ಪ್ರೇಮವಿದೆ. ಅದಿಲ್ಲದೆ ನಾವೆಲ್ಲರೂ ಅಮರರಾಗಿದ್ದರೆ ? ಕ್ಷಣ ವಿಚಾರ ಮಾಡಿರಿ ! ಪರಸ್ಪರ ಸಂಬಂಧ ಉಳಿಯುತ್ತಿತ್ತೇ ? ಅತ್ತೊಂದು ಇತ್ತೊಂದು ಬಿದ್ದ ಕಲ್ಲು ಬಂಡೆಯಂತೆ ಸಿಡಿದೇ ಇರುತ್ತಿದ್ದಿಲ್ಲವೇ ? ಎಲ್ಲರೂ ಒಂದಿಲ್ಲೊಂದು ದಿನ ಸಾವನ್ನು ಅಪ್ಪಲೇ ಬೇಕಾಗಿದ್ದದ್ದರಿಂದಲೇ ಮನುಷ್ಯನು ಪ್ರೇಮದಿಂದ ನಡೆದುಕೊಳ್ಳುತ್ತಾನೆ. ಇದಕ್ಕಾಗಿ ಇಂಗ್ಲೀಷಿನಲ್ಲಿಯ ಒಂದು ಸಣ್ಣ ಕವಿತೆಯ ಅರ್ಥವನ್ನು ಇಲ್ಲಿ ಹೇಳಬೇಕೆಂದೆನಿಸಿದೆ. ಒಂದು ಮಗು ತನ್ನ ಅಣ್ಣನನ್ನು ಕಳೆದುಕೊಂಡಿದೆ. ಕೈ ಹಿಡಿದು ನಡೆಯುವ ಸಂಗಾತಿಯನ್ನು ಕಾಣದ ದುಃಖದಿಂದ ಉದ್ಗಾರ ತೆಗೆಯುತ್ತಲಿದೆ. “ಅಣ್ಣಾ ನೀನೆಲ್ಲಿರುವಿ ? ನಾನೊಬ್ಬನೇ ಇಲ್ಲಿ ಅದೆಂತು ಆಡಲಿ ? ಈ ಹೊಳೆಯ ದಂಡೆಯಲ್ಲಿ ನಾನೊಬ್ಬನೇ ಓಡಾಡಲ್ಯಾ ? ಹಾರುತ್ತಿರುವ ಈ ಪಾತರಗಿತ್ತಿಗಳನ್ನು ಬೆನ್ನುಹತ್ತಿ ನಾನೊಬ್ಬನೇ ಹೇಗೆ ನಲಿದಾಡಲಿ ? ಅಣ್ಣಾ ! ಅಣ್ಣನೆಲ್ಲಿರಬಹುದು ? ಆತನು ಜೀವಂತನಿದ್ದಾಗ್ಗೆ ಆತನನ್ನು ಈ ಹೃದಯದಿಂದ ಪ್ರೀತಿಸಿದ್ದರೆ ಎಷ್ಟು ಚನ್ನಾಗಿತ್ತು? ಆದರೆ.... ....ಈಗ........ಏನು ?”

ಮರಣವು ಉಪಕಾರಿಯೂ ಅದೆ. ಜೀವಂತನಿರುವಾಗ ಆಗಲಾಗದಂಥ ಕೆಲಸಗಳು, ಮರಣದಿಂದ ಸಹಜ ಸಾಧ್ಯವಾಗುತ್ತಿವೆ. ಸಂಭಾಜಿಯ ಜೀವನ ಮರಾಟರಲ್ಲಿ ಒಡಕನ್ನು ತಂದೊಡ್ಡಿತ್ತು. ಆದೇ ಆತನ ಮರಣವು ಐಕ್ಯವನ್ನುಂಟುಮಾಡಿತು. ಅವನ ಮರಣವು ಅಮೃತವಾಗಿ ಪರಿಣಮಿಸಿತು. ಏಸುವಿನ (ಕ್ರೈಸ್ತನ) ಜೀವನದಲ್ಲಿ ಆಗದಿದ್ದುದೆಲ್ಲವೂ, ಆತನ ಆ ಕ್ರಾಸ್‌ದ ಮೇಲಾದ ಸಾವಿನಿಂದ ಸಹಜವಾಗಿ ಸಾಧಿಸಿತಲ್ಲವೇ ? ಈ ಮರಣದಲ್ಲಿ ಅನಂತ ಜೀವನವೂ ಅಡಕವಾಗಿದೆ.

ಮರಣವು ಕಾಳಕತ್ತಲೆಯೆಂದು ಅನಿಸಿಕೆ ನಮಗೆ. ಆದರೆ ಮರಣವು

ಅನಂತ ಪ್ರಕಾಶದ ಅಮರ ಬೆಳಕು. ಮರಣವೇ ನಿರ್ವಾಣ, ಅಂದರೆ ಅನಂತ ಜೀವನವನ್ನು ಪ್ರಜ್ವಲಿಸುವದು. ಭಗವಾನ್ ಬುದ್ಧರು ಹೀಗೆ ಹೇಳಿದ್ದಾರೆ. "ಆತ್ಮನಿರ್ವಾಣವನ್ನು ಹೊಂದಿದರೇನೇ ನೀವು ಜಗತ್ತನ್ನು ಪ್ರೀತಿಸಬಲ್ಲಿರಿ. ನಿಮ್ಮನ್ನು ನೀವು ಮರೆಯಬೇಕು. ವೈಯಕ್ತಿಕ ಸ್ವಾರ್ಥ, ಆಶೆ ಆಕಾಂಕ್ಷೆಗಳನ್ನೆಲ್ಲ ಮರೆತರೇನೇ ಈ ಅಮರ ಜೀವನವು ಸಿಕ್ಕುವದು." ಈ ಕಾಯದ, ಮನಸ್ಸಿನ, ಇಂದ್ರಿಯಗಳ ವಾಸನೆಗಳನ್ನೆಲ್ಲ ಮರೆತು ಬಿಡುವದೆಂದರೇನೆ ಮರಣ. ಈ ಮರಣವನ್ನು ದೇಹದಲ್ಲಿ ಜೀವ ಇದ್ದಾಗಲೂ ಅನುಭವಿಸಲು ಬರುವದು. ತೆಂಗಿನಲ್ಲಿಯ ಗಿಟಕು ಚಿಪ್ಪಿನಿಂದ ಬೇರೆ ಇದ್ದು ಬುಡ್ ಬುಡ್ ಸಪ್ಪಳಮಾಡುವಂತೆ ಜೀವನು ದೇಹದಲ್ಲಿ ಇದ್ದೂ ಸಂಪರ್ಕವಿಲ್ಲದಂತೆ ಇರುವದೆ ಮರಣ. ಆದ್ದರಿಂದಲೇ ತುಕಾರಾಮ ಮಹಾರಾಜರವರು ಅಂದಿದ್ದಾರೆ, "ನನ್ನ ಸಾವನ್ನು ನಾನೇ ಕಂಡೆ, ಅದರ ಅನುಪಮ ಸುಖವನ್ನು ಸವಿದೆ'' ಎಂದು. ಇಂಥ ಮರಣವನ್ನು ಅನುಭವಿಸಿದವರಿಗೆ ಪುನಃ ಸಾವಿಲ್ಲ. ಜೀವಂತನಿರುವಾಗಲೇ ಸಾಯಲು ಕಲಿತವನೇ ಚಿರಂಜೀವಿ.

ಜರ್ಮನ್ ದೇಶದ ದಂತಕಥೆಗಳಲ್ಲಿ ಒಂದು ದಾರುಣವಾದ ಕಥೆ ಇದೆ. ಒಬ್ಬ ರಾಕ್ಷಸನನ್ನು ಓರ್ವ ದೇವತೆಯು "ನೀನೆಂದೂ ಸಾಯದಿರು'' ಎಂದು ಶಪಿಸುತ್ತಾಳೆ. ನಮ್ಮ ದೇಶದ ಕಥೆಗಳಲ್ಲಿಯ ರಾಕ್ಷಸರೇನೋ ಇಂಥ ಶಾಪವನ್ನು ಸ್ವಾಗತಿಸುತ್ತಿದ್ದರು. ಎಂದಿಗೂ ಸಾಯದ ಸ್ಥಿತಿಗಿಂತ ಹೆಚ್ಚಿನ ಭಾಗ್ಯವಾವುದು ಅನ್ನುತ್ತಿದ್ದರು. ಇರಲಿ. ಆ ಶಾಪ ಕೇಳಿದ ಜರ್ಮನ್ ರಾಕ್ಷಸನು ಅತೀವ ಮನಸ್ತಾಪಕ್ಕೆ ಗುರಿಯಾಗುತ್ತಾನೆ. ಜೀವನಕ್ಕಾಗಿ ಬೇಸರಿಯುತ್ತಾನೆ. ಒಂದೊಂದಾಗಿ ಆತನ ಜೀವನದಲ್ಲಿ ಮಾಡಿದ ಕೃತಿಗಳು ಅವನೆದುರು ಬಂದು ಅಣಕಿಸುತ್ತವೆ. ಅವುಗಳನ್ನೂ ನಿತ್ಯಜೀವನವನ್ನೂ, ಅದನ್ನು ಗೈದ ಈ ದೇಹವನ್ನೂ ಮರೆಯಲು ಆದೆಷ್ಟೋ ಪ್ರಯತ್ನಿಸುತ್ತಾನೆ. ಈ ಜೀವಕ್ಕೆ ಅಂಟಿಕೊಂಡ ಕಾಯವೆಂಬ ಈ ಮಣ್ಣು ಮುದ್ದೆಯನ್ನು ಕಳಚಬೇಕೆಂದು ಆತನ ಆತ್ಮವು ಆತುರ ಪಡುತ್ತಿದೆ. ಆದರೆ ಅವನಿಗೆ ಮರಣವು ಬರುವದಿಲ್ಲ. ಸಾಯಲೆಂದು ಉನ್ನತವಾದ ಪರ್ವತದ ಮೇಲಿಂದ ಹಾರಿದನು. ಆದರೂ ಚಂಡಿನಂತೆ ಮೇಲಕ್ಕೆ ಪುಟಿದು ಬಂದನು. ಆತನನ್ನು ಅಗ್ನಿ ಸುಡಲೊಲ್ಲದು, ನೀರು ಮುಳುಗಿಸಲೊಲ್ಲದು, ವಿಷವು ಕೊಲ್ಲಲಾರದು. ಉರುಲು ಮಾಲೆಯಾಯಿತು. ವಿಷವು ಅಮೃತವಾಯಿತು. ಹೀಗಾಗಿ ಈ ದೇಹದ ಮೇಲೆ ರೊಚ್ಚಿಗೇಳು

ತ್ತಾನೆ. ಹೃದಯದಲ್ಲಿ ಅಖಂಡ ಕೋಲಾಹಲದ ದೊಂಬಿ ಎದ್ದಿದೆ. ಆದರೇನು? ಅದನ್ನು ಸಂತೈಸಲು ಮರಣಮೇಘಗಳು ಮಳೆಗರೆಯ ಲೊಲ್ಲವು. ಆದುದರಿಂದ ಆ ರಾಕ್ಷಸನ ಕರುಣಾಮಯ ದೀನ ಪರಿಸ್ಥಿತಿಯು ಕೊನೆಗಾಣುವಂತಿಲ್ಲ. ಸಾವಿನ ಸೌಭಾಗ್ಯ ಅವನಿಗೆ ದೊರೆಯುವಂತಿಲ್ಲ.

ಎಂಥ ಅಸಹ್ಯವಾದ ದಾರುಣಪರಿಸ್ಥಿತಿಯಿದು! ಸಾವನ್ನು ಹುಟ್ಟಿಸಿದ ಪರಮಾತ್ಮನ ಆಭಾರಗಳನ್ನು ಎಷ್ಟು ಮನ್ನಿಸಿದರೂ ಕಡಿಮೆಯೇ. ಮರಣ ವೆಂದರೆ ಜೀವ-ಈಶ್ವರರ ಕಿವಿಮಾತು. ಸಾವು ಎಂದರೆ ಜೀವದಲ್ಲಿ ತೇಲಾ ಡುವ ಕೆಸರು ತಳವನ್ನು ಕಾಣುವದು. ಸಾವು ಅಂದರೇನೇ ಪುನರ್ಜನ್ಮ.

ಅಮಾವಾಸ್ಯೆಯಲ್ಲಿ ನಾವು ಕೇವಲ ಕತ್ತಲೆಯನ್ನೇ ಕಾಣುತ್ತೇವೆ. ಅಂದು ಚಂದ್ರನು ಇಲ್ಲವೆಂದು ನಮ್ಮ ಅನಿಸಿಕೆ. ಆದರೆ ಕಡಲಿಗೆ ಎಲ್ಲಕ್ಕೂ ಹೆಚ್ಚಿನ ಭರ್ತಿ ಅಮಾವಾಸ್ಯೆಯ ದಿನವೇ. ಅಮಾವಾಸ್ಯೆಯು ಒಂದು ದೊಡ್ಡ ಪರ್ವಣಿಯು. ಅಂದು ಚಂದ್ರ ಸೂರ್ಯರ ಭೆಟ್ಟಿ. ಚಂದ್ರನು ಸೂರ್ಯನೊಡನೆ ಬೆರೆಯುತ್ತಾನೆ. ಅದರಂತೆ ಸಾವೆಂದರೆ ಜೀವನದ ಅಮಾವಾಸ್ಯೆ. ಜೀವವು ಈಶ್ವರನೊಡನೆ ಬೆರೆಯುತ್ತದೆ. ಅಂದು ಜೀವ ಪರಮಾತ್ಮರ ಮಿಲನವಾಗುತ್ತದೆ. ಎಲ್ಲಕ್ಕೂ ದೊಡ್ಡ ಭರ್ತಿಯು ಸಾಗರಕ್ಕೆ ಅಮಾವಾಸ್ಯೆಯ ದಿನ ಅಲ್ಲವೇ? ಅದರಂತೆ ಮರಣವೆಂದರೆ ಅನಂತ ಜೀವನದಲ್ಲಿ ಕೂಡಿಹೋಗುವದು. ಸಾವಿನ ಅಮಾವಾಸ್ಯೆಯು ಜೀವನದ ದೊಡ್ಡ ಹುಣ್ಣಿಮೆಯು.

ಸಾಯುವ ಕಾಲಕ್ಕೆ ದೇಶಬಂಧು ಚಿತ್ತರಂಜನದಾಸರು ಒಂದು ಸುಂದರ ಕವನವನ್ನು ರಚಿಸಿರುತ್ತಾರೆ. ಆದರಲ್ಲಿ ಅವರು ಹೀಗೆ ಅಂದಿದ್ದಾರೆ. "ಪ್ರಭೋ, ನನ್ನ ಜ್ಞಾನಾಭಿಮಾನದ ಭಾರವನ್ನು ತಲೆಯ ಮೇಲಿಂದ ಇಳಿಸು. ಈ ಭಾರವನ್ನು ಹೊತ್ತು ಹೊತ್ತು ಈ ಕಾಯವು ಜರ್ಜರಿತ ವಾಗಿದೆ. ನನ್ನಲ್ಲಿ ಏನೂ ಹುರುಳಿಲ್ಲ. ಉಸುರಾಡಿಸಲು ಸಹ ಸಾಮರ್ಥ್ಯ ವಿಲ್ಲ. ತೇಕುತ್ತಿದ್ದೇನೆ. ನೋಡಿದತ್ತ ಕತ್ತಲೆಯೇ ಕತ್ತಲೆ. ಇಳಿಸು ಪ್ರಭೋ, ಈ ಭಾರವನ್ನು ಶೀವ್ರ ಇಳಿಸು."

"ನವಿಲುಗರಿಯ ಮುಕುಟ ಧರಿಸಿದ, ಕೈಯಲ್ಲಿ ಕೊಳಲು ಹಿಡಿದ ರಾಧಾರಮಣ ಶ್ಯಾಮಸುಂದರ ಗೋಪಾಲನೇ ನಿನ್ನನ್ನು ಕಾಣಲು ನನ್ನ ಪಂಚಪ್ರಾಣಗಳು ಹಾತೊರೆಯುತ್ತಿವೆ.

ಎನಗೆ ವೇದ ಬೇಡ, ವೇದಾಂತ ಬೇಡ, ಅದೆಲ್ಲ ಮರೆತುಹೋಗಲಿ.

ಸ್ವಾಮಿ, ನಿನ್ನ ಅನಂತ ರಾಜ್ಯವನ್ನು ನಾನು ಕಾಣುತ್ತಿದ್ದೇನೆ. ಪ್ರಭು! ನಿನ್ನ ಕುಂಜ ದ್ವಾರದಲ್ಲಿ ಬಂದು ನಿಂತಿದ್ದೇನೆ. ನನಗೆ ಪ್ರಿಯವಾದ ನಿನ್ನೀ ಬಾಗಿಲಲ್ಲಿ ಬಂದುನಿಂತ ನನ್ನನ್ನು ನೋಡು, ನಂದಲಾರಂಭಿಸಿದ ದೀಪ ವನ್ನು ಮತ್ತೆ ಪ್ರಜಲಿಸಲು ನಿನ್ನ ಸನ್ನಿಧಿಗೆ ಬಂದಿದ್ದೇನೆ.''

ಸಾವು ಎಂದರೆ ಎಣ್ಣೆ ತೀರಲು ಸಮೀಪಿಸಿದ ದೀಪವನ್ನು ಮತ್ತೆ ಎಣ್ಣೆ ತುಂಬಿ ತರುವದು. ನಂದಾದೀಪವನ್ನು ಮತ್ತೆ ಬೆಳಗಿಸುವದು. ಬೆಳಕು ತರಲು ಹೋಗುವದೇ ಸಾವು. ಇದೆಂಥ ಸಹೃದಯ ಕಲ್ಪನೆ! ಇರುವಿಕೆಯ ಬೇಸರವಿಲ್ಲ, ಸೇವೆ ಸಲ್ಲಿಸುವ ಬೇಸರವಿಲ್ಲ. ಮತ್ತೆ ಮತ್ತೆ ಜನ್ಮವನ್ನು ಕೊಡು'' ಇದು ಸಂತರ ಬೇಡಿಕೆ. ಈ ಅನಂತ ಜಗತ್ತಿನಲ್ಲಿ ಆ ಪರಮಾತ್ಮನನ್ನು ಸೇವಿಸುವ ಕುರಿತು ಮತ್ತೆ ಮತ್ತೆ ಆಡಲು ಬರುವರು ಇವರು. ಮಹಾಧೈರ್ಯ ಶೌರ್ಯದ ಆಟಗಾರರು ಇವರು.

ಭಾರತೀಯ ಸಂಸ್ಕೃತಿಯಲ್ಲಿ ಮರಣವು ಒಂದು ಅಮರವಾದ ಆಶಾ ವಾದವಾಗಿ ನಿಂತಿದೆ. ನಮ್ಮ ಸಂಸ್ಕೃತಿಯಷ್ಟು ಆಶಾವಾದಿಯಾದ ಸಂಸ್ಕೃತಿ ಬೇರೊಂದಿಲ್ಲ. ಮರಣದ ನಂತರ ಮತ್ತೆ ಆಡಲು ಬರುವಿ. ರಾತ್ರಿ ಮಲಗಿ ಬೆಳಗಿನಲ್ಲಿ ಎದ್ದೊಡನೆ ಮಗುವು ಮತ್ತೆ ಆಟಗೆಯ ವಸ್ತುಗಳನ್ನು ಒಂದೆಡೆ ಕೂಡಿಸಿ, ಆಟವನ್ನು ಆರಂಭಿಸುವಂತೆ ಜೀವವು ಮರಣದ ನಂತರ ಮತ್ತೆ ಜಗತ್ತಿನಲ್ಲಿ ಒಂದು ವ್ಯವಹಾರವನ್ನು ಆರಂಭಿಸುತ್ತದೆ. ಅರ್ಧ ನೆಯ್ದ ವಸ್ತ್ರ ವನ್ನು ಮರುದಿನ ನೇಕಾರನು ಮತ್ತೆ ನೇಯಲು ಆರಂಭಿಸುವಂತೆ ನಾವಾ ದರೂ ಮಾಡತೊಡಗುತ್ತೇವೆ. ಪುನರ್ಜನ್ಮದಲ್ಲಿ ಮೊದಲಿನ ಮಾತಿನ ನೆನಪು ಸಾವಕಾಶ ಆಗುತ್ತ ಮೊದಲಿನ ಜ್ಞಾನ ಅನುಭವದ ಸಂಸ್ಕಾರ ಮತ್ತೆ ತಲೆ ದೋರುತ್ತವೆ. ಅನೇಕ ಚಿಲ್ಲರೆ ಮಾತುಗಳನ್ನು ಮರೆತಿದ್ದರೂ ಜ್ಞಾನಾನು ಭವದ ಸಂಸ್ಕಾರ ಸಾರವು ನಮ್ಮನ್ನು ಜನ್ಮಜನ್ಮಕ್ಕೂ ಅಗಲದೇ ನಮ್ಮ ಹತ್ತಿರವೇ ಇರುತ್ತದೆ. ಆ ಹಿಂದಿನ ಜನ್ಮದ ಸಂಸ್ಕಾರಸಾರದೊಡನೆ ಮತ್ತೆ ಹೊಸ ಜನ್ಮವನ್ನು ಆರಂಭಿಸುತ್ತೇವೆ.

ಯಾವದೂ ವ್ಯರ್ಥವಾಗಲಾರದು, ಆಶೆಯಿಂದ ಕಾರ್ಯಮಾಡು, ಅಂದರೆ ಕ್ರಮೇಣ ನೀನು ಪೂರ್ಣತ್ವವನ್ನು ಪಡೆಯುವಿ, ಇದರಲ್ಲಿ ಸಂದೇಹ ವಿಲ್ಲ, ಎಂದು ನಮ್ಮ ಭಾರತೀಯ ಸಂಸ್ಕೃತಿಯು ಹೇಳುತ್ತಿದೆ. ಧೈರ್ಯವಿದ್ದ ವನೇ ಬಾಳುವನು. ಮರಣವೆಂದರೆ ಮತ್ತೆ ಹೊಸ ಹುಮ್ಮಸಿನಿಂದ ಧ್ಯೇಯ ಸಾಧನೆಯ ಸಿದ್ಧತೆ.

ಮರಣವು ಒತ್ತಾಯದ ಅನಾಸಕ್ತಿಯನ್ನು ಕಲಿಸುವದು. "ತೇನತ್ಯಕ್ತೇನ ಭುಂಜೀಥಾಃ" ಎಂದು ಉಪನಿಷತ್ತುಗಳು ಸಾರುತ್ತವೆ. "ಮೊದಲು ನೆರೆಯ ಜನರಲ್ಲಿಯ ಕೊರತೆಯನ್ನು ತುಂಬಿ, ಉಳಿದುದನ್ನು ನಿನಗಾಗಿ ಉಪಯೋಗಿಸು." ಈ ದಿವ್ಯ ಸಂದೇಶವನ್ನು ನಾವು ಮರೆಯುತ್ತೇವೆ. ಮೊದಲು ಮನೆ ತುಂಬುತ್ತೇವೆ, ಸಾಲದೇ ಬ್ಯಾಂಕುಗಳಲ್ಲಿ ಧನವನ್ನು ಇಡುತ್ತೇವೆ. ಮಗ್ಗುಲಲ್ಲಿದ್ದ ದೀನ ದುಃಖಿತರ ದುಃಖುಗಳನ್ನು ಕಣ್ಣೆತ್ತಿ ನೋಡುವದಿಲ್ಲ. ಈ ಸಂಚಯದ ಕೆಸರೊಳಗಿಂದ ನಮ್ಮನ್ನು ಬಿಡಿಸಲು, ನಮ್ಮ ಜೀವನದ ಉದ್ಧಾರ ಮಾಡಲು ಸಾವು ಬರುತ್ತದೆ. ಮರಣವೆಂದರೆ ತಾಯಿಯ ಮಂಗಲ ಕರಗಳು. ಮೈತುಂಬ ಹತ್ತಿದ ಆಸಕ್ತಿಯ ರಾಡಿಯನ್ನು ತೊಳೆದು ಸ್ವಚ್ಛ ಮಾಡುವ ಕೈಯೆಂದರೇನೇ ಮರಣ.

"ದೇವರೆ, ಈ ಕಾಯ, ಈ ಮನಸ್ಸು ಧೂಳಿಯಿಂದ ಮುಸುಕಿದೆ. ನಿನ್ನ ಅಮೃತಕರದಿಂದ ಅವುಗಳನ್ನು ತೊಳೆದು ಸ್ವಚ್ಛ ಮಾಡು. ನಿನ್ನ ಕಾಲಡಿಯಲ್ಲಿ ನನ್ನನ್ನು ಮಲಗಿಸು ದೇವಾ!" ಇದುವೇ ಜೀವನದ ಆತುರದ ಕಳಕಳಿಯ ನುಡಿ. ಜಗತ್ತಿನಲ್ಲಿ ಆವ ಶಕ್ತಿಗೂ ಈ ಹುಡಿಯನ್ನು ತೊಳೆಯುವ ಸಾಮರ್ಥ್ಯವಿಲ್ಲ. ನೂರಾರು ಗುಡಿಗಳನ್ನು ಕೆಡವಿ ಮೂರ್ತಿಗಳನ್ನು ಒಡೆದು, ಅಗಣಿತ ದ್ರವ್ಯ ರಾಶಿಯ ಕೆಸರಿನಲ್ಲಿ ಗಝನೀ ಮಹಮ್ಮದನು ಸಿಕ್ಕಿದ್ದನು. ಆ ಕೆಸರಿನಲ್ಲಿ ಅತ್ತಿತ್ತ ಜಿಗಿದಾಡುತ್ತಿದ್ದನು. ಅತನ ಈ ಅಧಃಪತನವನ್ನು ದೇವರು ನೋಡಲಾರದವನಾಗಿ ಆತನನ್ನು ಒಯ್ಯಲು ಬಂದನು. ಆಗ ಅವನು ಅಳಲಾರಂಭಿಸಿದನು. ಆಸಕ್ತಿಮಯ ಪ್ರಸಾರವನ್ನು ಬಿಡಲು ಅವನ ಮನಸ್ಸು ಒಪ್ಪಲಿಲ್ಲ. ಆದರೇನು ದೇವನು ಒಯ್ದೇ ಬಿಟ್ಟನು. ಮರಣದ ಸಾಬೂನಿನಿಂದ ಅವನನ್ನು ತೊಳೆದನು. ಈ ಜೀವನ ಮಾಲಿನ್ಯವನ್ನು ಕಳೆಯಲು ಮರಣವೆಂಬ ಅಮೃತವನ್ನು ಕರದಲ್ಲಿ ಹಿಡಿದ ಆ ಜಗನ್ಮಾತೆಯ ವಿನಾ ಮತ್ತಾರಿಗೂ ಸಾಧ್ಯವಿಲ್ಲ.

ಮರಣವು ನಮ್ಮನ್ನು ಕ್ಷಣಕ್ಷಣಕ್ಕೆ ಎಚ್ಚರಿಸುತ್ತಿದೆ. ಈ ಜಗತ್ತಿನಲ್ಲಿ ಇದ್ದುದನ್ನೆಲ್ಲ ಬಿಟ್ಟು ಬರಲೇಬೇಕಾಗುವದೆಂಬದನ್ನು ಸೂಚಿಸುತ್ತಿದೆ. ಜೀವನು ಉತ್ಕೃಷ್ಟ ಕುತನೀ ಗಾದೆಯಿಂದ ಧಾಬಳಿಯ ಮೇಲೆ ಭೂಶಯ್ಯೆಗೆ ಬರುವನು. ದೇವರ ದ್ವಾರದಲ್ಲಿ ನಮ್ರವಾಗಿಯೇ ಹೋಗಬೇಕು. ದಾಸರು ಹೇಳುವಂತೆ "ಸೂಜಿಯ ದ್ವಾರದಲ್ಲಿ ಆನೆಯು ಕೂಡ ಹಾಯಬಹುದು." ಆದರೆ ಜಗತ್ತನ್ನು ಕಾಡಿ, ಬಳಲಿಸಿ, ಸುಲಿದು ಕುಬೇರನಾದ ಧನಮದ

ವುಳ್ಳ ಮಾನವನು, ದೇವರ ಬಾಗಿಲನ್ನು ದಾಟಲಾರ. ಇಂಥವರ ಮೋಟರ ಕಾರುಗಳು ನರಕದಲ್ಲಿ ಸಂಚರಿಸಬಹುದು! ಆದರೆ ಸ್ವರ್ಗದ ಇಕ್ಕಟ್ಟಾದ ದಾರಿಯಲ್ಲಿ ಪರರಿಗಾಗಿ, ಪರರ ಸೇವೆಗಾಗಿ, ದೇಹವನ್ನು ಸವೆಸಿದವರ ದೇಹ ಮಾತ್ರ ಸಹಜ ಹೋಗಬಲ್ಲದು.

ಅದು ಕಾರಣವೇ ಅಂತ್ಯಕಾಲಕ್ಕಾದರೂ ಗಾದಿಯ ಮೇಲಿಂದ ಕೆಳಕ್ಕೆ ಎಳೆಯಿರೆಂದು ಭಾರತೀಯ ಸಂಸ್ಕೃತಿಯು ಹೇಳುತ್ತಿದೆ. ನಾವು ಬಾಹ್ಯ ಜಗತ್ತಿನಲ್ಲಿ ಸೂಟುಬೂಟುಗಳಿಂದ ಮೆರೆಯುಬಹುದು. ಆದರೆ ಮನೆಗೆ ಬಂದೊಡನೆ ಸಂಜೆಯ ಮುಂದೆ ತುಳಸೀ ಕಟ್ಟೆಯಲ್ಲಿ ಕುಳಿತ ತಾಯಿಯ ಸಮೀಪಕ್ಕೆ ಹೋಗುವಾಗ ಈ ಅಬ್ಬರವು ನಡೆಯಲಾರದು. ತಾಯಿಯ ಮಂಗಲಕರಗಳು ನಮ್ಮ ಬೆನ್ನ ಮೇಲೆ ಆಡಬೇಕಾದರೆ ಸೂಟು ಬೂಟುಗಳ ಅಬ್ಬರವನ್ನು ಬಿಟ್ಟು ಅವಳ ಹತ್ತರ ಹೋಗಬೇಕಲ್ಲವೇ? ಅದರಂತೆ ಈ ಜಗತ್ತಿನಲ್ಲಿ ಮೆರೆದ ಮೇಲೆ, ಜೀವನದ ಸಾಯಂಕಾಲದಲ್ಲಿ ಜಗನ್ಮಾತೆಯ ಹತ್ತರ ಹೋಗುವಾಗ ಈ ಆಡಂಬರವನ್ನೆಲ್ಲಾ ಬಿಟ್ಟು ನಮ್ರನಾಗಿ ಹೋಗ ಬೇಕಾಗುವದು. ಭಕ್ತಿ, ಪ್ರೇಮದ ವೈಭವವನ್ನು ಮಾತ್ರ ಸಂಗಡ ಒಯ್ಯ ಬಹುದು.

ಆದರೆ ಕೆಲವು ಸಾರೆ ಮನುಷ್ಯನು ನಗ್ನನಾಗಿ ತಾಯಿಯ ಸಮೀಪ ದಲ್ಲಿ ಅವಳ ಭೆಟ್ಟಿಯಾಗಬೇಕಾದರೆ ನಾಚುತ್ತಾನೆ. ಗಾಂಧಾರಿಯ ಕೃಪಾ ದೃಷ್ಟಿ ತನ್ನ ಕಾಯದ ಮೇಲೆ ಬಿದ್ದು ತಾನು ಅಮರನಾಗಬೇಕೆಂಬ ಇಚ್ಛೆ ದುರ್ಯೋಧನನಲ್ಲಿದ್ದರೂ ಸಹ ನಾಚಿಕೆಯಿಂದ ಹೂವಿನ ಚಡ್ಡಿಯನ್ನು ಧರಿಸಿ ಅವಳ ಸಮೀಪದಲ್ಲಿ ಹೋದನಂತೆ. ಅದು ಕಾರಣ ಆತನ ದೇಹದಲ್ಲಿ ತೊಡೆಗಳನ್ನು ಬಿಟ್ಟು ಉಳಿದೆಲ್ಲವೂ ವಜ್ರದೇಹವಾಯಿತು. ಆದುದರಿಂದಲೇ ಭೀಮನು ಅವನ ತೊಡೆಯನ್ನು ಸೀಳಿ ಕೊಂದನಲ್ಲವೇ? ತಾಯಿಯ ಹತ್ತರ ಕೂಸಾಗಿಯೇ ಹೋಗಬೇಕು. ಹುಟ್ಟುವದು ಭೂಮಿಯ ಮೇಲೆ. ಅದರಂತೆ ಸಾಯುವದು ಭೂಮಿಯ ಮೇಲೆಯೇ. ಅಂತೆಯೇ ಹುಟ್ಟಿದಾ ಗಲೂ ಆ ಜಗನ್ಮಾತೆಯ ಕೂಸು, ಸಾಯುವಾಗಲೂ ಅವಳ ಕೂಸೇ. ಹುಟ್ಟಿದಾಗ ಜಗನ್ಮಾತೆಯಿಂದ ಅಗಲಿದುದಕ್ಕಾಗಿ ಅತ್ತಿರಿ, ಸಾಯುವಾಗ ಆ ತಾಯಿಯ ಸನ್ನಿಧಿಗೆ ಹೋಗುತ್ತೇನೆಂದು ಹಿಗ್ಗಿರಿ. ಹುಟ್ಟಿದಾಗ ನಾವು ಅಳುತ್ತೇವೆ. ಆದರೆ ತಾಯಿ-ತಂದೆ ಬಂಧು-ಬಳಗದವರು ಹಿಗ್ಗುತ್ತಾರೆ. ಸಾಯುವಾಗ ನಾವು ನಗುತ್ತ ಸಾಯಬೇಕು, ಉಳಿದವರು ನಮ್ಮ ಸವಿ

ನೆನಪನ್ನು ನೆನಿಸಿ ಅಳಲಿ.

ನಮ್ಮ ಬಾಳುವೆಯ ಪರೀಕ್ಷೆಯೆಂದರೆ ಮರಣ. ನಿಮ್ಮ ಮರಣದಿಂದ ನಿಮ್ಮ ಜೀವನದ ಬೆಲೆ ಕಟ್ಟುವವು. ಸಾಯುವಾಗ್ಗೆ ಅಳುವವನ ಬಾಳು ದೀನ ಸ್ಥಿತಿಯದು. ನಗುನಗುತ್ತ ಸಾಯುವವನ ಬಾಳು ಕೃತಾರ್ಥವಾದುದೆಂದು ತಿಳಿಯುವರು. ದೊಡ್ಡ ದೊಡ್ಡ ವ್ಯಕ್ತಿಗಳ ಮರಣವು ಒಂದು ದಿವ್ಯ ದರ್ಶನವು. ಅವರ ದರ್ಶನವು ಅನಂತದರ್ಶನವು. ಅವರ ಮರಣದ ಸಮಯದಲ್ಲಿ ಅವರಲ್ಲಿ ಎಷ್ಟು ಶಾಂತಿ, ಎಷ್ಟು ಸಮಾಧಾನ !

ಸಾಕ್ರೆಟಿಸನು ಅಂತ್ಯಕಾಲಕ್ಕೆ ಅಮೃತತತ್ವವನ್ನು ಅನುಭವಿಸುತ್ತಿದ್ದನು. "ಹೆಚ್ಚು ಬೆಳಕು, ಹೆಚ್ಚು ಬೆಳಕು" ಅನ್ನುತ್ತ ಗಟಿಯು ಅಸು ಬಿಟ್ಟನು. "ರಾಮ, ಕೃಷ್ಣ, ಹರಿ'' ಎಂದು ಭಜನೆ ಮಾಡುತ್ತಲೇ ತುಕಾರಾಮ ಮಹಾರಾಜರು ತೆರಳಿದರು. "ನನ್ನ ದಾಸಬೋಧವು ಇದೆ, ಹೀಗೇಕೆ ಅಳುತ್ತಿರುವಿರಿ?'' ಎಂದು ರಾಮದಾಸರು ಅಂದು ತೆರಳಿದರು. "ಯದಾಯದಾ ಹಿ ಧರ್ಮಸ್ಯ ಗ್ಲಾನಿಃ'' ಈ ಶ್ಲೋಕ ಉಚ್ಚರಿಸುತ್ತಲೇ ಲೋಕಮಾನ್ಯರು ದೇಹವನ್ನು ತ್ಯಜಿಸಿದರು. ಗಾಯತ್ರೀ ಮಂತ್ರವನ್ನು ಉಚ್ಚರಿಸುತ್ತ ಮೋತೀಲಾಲರ ಆತ್ಮಹಂಸವು ಹಾರಿಹೋಯಿತು. "ಬಂದೆ ಇದೋ ಬಂದೆ, ನಿನ್ನ ಪ್ರಿಯತಮ ಬಾಗಿಲಲ್ಲಿ ದೀಪ ಬೆಳಗಿಸಲು ಬಂದೆ'' ಎಂದು ದೇಶಬಂಧು ದಾಸರು ಉಸುರಿದರು. "ಈ ಜಗತ್ತಿನ ಚಮತ್ಕೃತಿಯನ್ನು ನೋಡಿದೆ ಇನ್ನು ಆ ಜಗತ್ತಿನ ಚಮತ್ಕೃತಿಯನ್ನಷ್ಟು ಕಾಣುವಾ'' ಎಂದು ಉಸುರಿದರು ಗೋಪಾಲ ಕೃಷ್ಣ ಗೋಖಲೆಯವರು.

"ಅಗೋ ನೋಡಿರಿ. ಭಾರತದ ಉಷಃಕಾಲ ಬರುತ್ತಲಿದೆ ! ಈ ಬೆಳಕು ನೋಡಿ ನಾನು ನಿಜಧಾಮಕ್ಕೆ ಪ್ರಯಾಣ ಬೆಳಸುವೆನು'' ಎಂದು ಭಗಿನೀ ನಿವೇದಿತಾದೇವಿಯರಂದರು. ಶಿಶಿರಕುಮಾರ ಘೋಷರು ಚೈತನ್ಯ ಚರಿತಾಮೃತದ ಕೊನೆಯ ಭಾಗದ ಮುದ್ರಣವನ್ನು ನೋಡಿ "ಮುಗಿಯಿತು ನನ್ನ ಕಾರ್ಯ, ಸೀತಾಯಿ ಗೌರ ನನ್ನನ್ನು ಕರೆದುಕೋ'' ಎಂದರು. ಮಗನಲಾಲ ಗಾಂಧಿಯವರು "ದೇವಾ, ಮಂಗಲಮಂದಿರದ ನಿನ್ನ ಹೆಬ್ಬಾಗಿಲನ್ನು ತೆರೆ, ದಿವ್ಯ ಪ್ರೇಮಾಮೃತ ತೃಷ್ಣೆಯಿಂದ ಈ ಬಾಲಕನು ಬಂದಿರುವನು. ನಿನ್ನ ಬಾಗಿಲಲ್ಲಿ ಬಂದಿರುವ ಈ ಮಗುವಿನ ಮೇಲೆ ಪ್ರೇಮದ ಮಳೆಗರೆ. ಪ್ರಪಂಚದಲ್ಲಿ ಹೆಣಗಿ, ಹೋರಾಡಿ, ದಣಿದುಬಂದ ಈ ಮಗುವನ್ನು ನಿನ್ನ ಪಕ್ಕದಲ್ಲಿ ಮಲಗಿಸು, ನಿನ್ನ ಪ್ರೇಮ ನುಡಿಯಿಂದ ಸಂತಯಿಸು. ತೆರೆ,

ತೆರೆ, ನಿನ್ನ ಮಂಗಲ ಮಂದಿರವನ್ನು ತೆರೆ'' ಎಂಬ ಸಂಗೀತವನ್ನು ಅನ್ನು ತ್ತಲೇ ಪ್ರಾಣಬಿಟ್ಟರು ! ಜಗತ್ತಿನಲ್ಲಿ ಇಂಥ ಮಹಾ ಪ್ರಸ್ಥಾನಗಳು ಹೇರಳ ವಾಗಿವೆ. ಮರಣವೆಂದರೆ ಶಾಂತಿ, ನವಜೀವನದ ಆರಂಭ, ಆನಂದದ ದರ್ಶನ, ಒಂದು ಪರ್ವಣಿ, ಜೀವ-ಈಶ್ವರರ ಮಿಲನದ ಸಂಗೀತ. ಮರಣ ವೆಂದರೆ ನಲ್ಲನ ಮನೆ ಸೇರುವದು.

"ಇಂದು ನಲ್ಲನ ಮನೆಗೆ ಹೋಗುವದದೆ, ಶೃಂಗಾರದ ಉಡುಪು ಧರಿಸು, ಮಣ್ಣಿನ ಹೊದಿಕೆಯನ್ನು ಮೈಮೇಲೆ ಧರಿಸು, ಮಣ್ಣಿನಹಾಸಿಗೆ ಯಲ್ಲಿ ನಲ್ಲನ ಜೊತೆ ಮಲಗುವದಿದೆ. ಎರೆದು ಹೆಳಲುಹಾಕಿಕೊ, ಒಮ್ಮೆ ಈ ಮನೆ ಸೇರಿದನಂತರ ತಿರುಗುವಂತಿಲ್ಲ. ತೀವ್ರ ಸಿದ್ಧಳಾಗು.'' ಇದೊಂದು ಸುಂದರವಾದ ಹಿಂದೀ ಕವನದ ಭಾವಾರ್ಥವಿದೆ. ಇದೆಂಥ ಸುಂದರ ಭಾವನೆ. ಮರಣವೆಂದರೆ ಜಗತ್ತಿನ ವಿಯೋಗ, ಆದರೆ ಜಗದೀಶ್ವರನೊಡನೆ ಯೋಗ. ಜಗದ ಬಿಡುವಿಕೆ, ಆದರೆ ದೇವರೊಡನೆ ಕೂಡುವಿಕೆ. ಮನುಷ್ಯನು ಮೃತನಾದಮೇಲೆ ನಾವು ಹೊಸ ವಸ್ತ್ರ ಉಡಿಸುತ್ತೇವೆ, ಅಲಂಕರಿಸುತ್ತೇವೆ. ಮರಣವೆಂದರೆ ಜೀವ-ಶಿವರ ಮದುವೆ. ಅದು ಕಾರಣವೇ ಶೃಂಗಾರವಲ್ಲವೆ ?

ಮರಣದಲ್ಲಿಯ ಭಯಾನಕ ತೀಕ್ಷ್ಣತೆಯನ್ನು ಭಾರತೀಯ ಸಂಸ್ಕೃತಿಯು ತೆಗೆದೊಗೆದಿದೆ. ಜೀವನಕ್ಕಿಂತ ಮರಣವೇ ಅಂದವಾಗಿಯೂ ಮಧುರವಾಗಿಯೂ ಕಾಣುವಂತೆ ಮಾಡಿದೆ. 'ಪ್ರಾಣೋ ಮೃತ್ಯುಃ' ಎಂಬ ಸಿದ್ಧಾಂತವನ್ನು ಸ್ಥಾಪಿಸಿದೆ. ಪ್ರಾಣವೇ ಮರಣ. ಮರಣವೆಂದರೆ ಆಟ. ಮೋಜು, ಚಿರಲಗ್ನ.

ಯಾವ ಸಂಸ್ಕೃತಿ ಸಾವನ್ನು ಜೀವನವನ್ನಾಗಿ ಮಾಡಿದೆಯೋ ಆ ಸಂಸ್ಕೃತಿಯ ಉಪಾಸಕರಿಗೆ ಇಂದು ಸಾವು ನೋವಾಗಿದೆ. ಸಾವಿನ ಅಂಜಿಕೆ ತುಂಬಾ ಬಂದಿದೆ. ಸಾವು ಎಂಬ ಶಬ್ದವೂ ಅಸಹ್ಯವಾಗಿದೆ. ಜನ ದೇಹವನ್ನೇ ಪ್ರೀತಿಸಿ ಜೀವಗಳ್ಳರಾಗಿದ್ದಾರೆ. ಹಿರಿದಾದ ಧ್ಯೇಯಕ್ಕಾಗಿ ಕಾಯದ ಮಡಕೆಗಳನ್ನು ನಗೆಮೊಗದಿಂದ ಒಡೆಯಲು ಸಿದ್ಧರಾದವರೇ ಈ ಸಂಸ್ಕೃತಿಯ ನಿಜವಾದ ಉಪಾಸಕರು. ದೇಹದ ರಕ್ಷಕರು ಭಾರತೀಯ ಸಂಸ್ಕೃತಿಯ ಉಪಾಸಕರಲ್ಲ. ಭಾರತದಲ್ಲಿ ಇದ್ದ ದೈನ್ಯ, ದಾಸ್ಯವನ್ನು, ವಿಷಮಯ ವೈಷಮ್ಯವನ್ನು, ಅಜ್ಞಾನ ಕತ್ತಲೆಯನ್ನು ದೂರ ಮಾಡಲು, ಬಲಿದಾನ ಮಾಡಲು ಲಕ್ಷಾವಧಿ ತರುಣತರುಣಿಯರು ಸಿದ್ಧರಾದರೆ ಮಾತ್ರ ಈ ಭಾರತೀಯ ಸಂಸ್ಕೃತಿಯ ದಿವ್ಯ ಪರಿಮಲವು ದಿಗಂತದಲ್ಲಿ ಹಬ್ಬುವದು. ಆಗ ಭಾರತವು ನವತೇಜದಿಂದ ಮಿಂಚುವದು.

# ಉಪಸಂಹಾರ

## ಕೊನೆಯ ಮಾತು

ಭಾರತೀಯ ಸಂಸ್ಕೃತಿಯೆಂಬ ವಿಷಯವನ್ನು ಕುರಿತು ನಾಲ್ಕು ಮಾತುಗಳನ್ನು ನಾನು ಮಂಡಿಸಿದ್ದೇನೆ. ಭಾರತೀಯ ಸಂಸ್ಕೃತಿಯನ್ನು ನಾನು ಹೇರಳವಾಗಿ ಪ್ರೀತಿಸುತ್ತೇನೆ. ಜ್ಞಾನದ ಆಧಾರದಿಂದ ಈ ವಿಷಯ ವನ್ನು ಕುರಿತು ಬರೆಯುವ ಅಧಿಕಾರ ನನಗೆ ಇಲ್ಲ. ಆದರೆ ಪ್ರೇಮದ ಅಧಿಕಾರ ಮಾತ್ರ ನನಗೆ ಇದೆ. ಈ ಭಾರತೀಯ ಸಂಸ್ಕೃತಿಯನ್ನು ಪ್ರೀತಿಸು ವವರಲ್ಲಿ ನಾನು ಯಾರಿಗೂ ಹಿಂದೆ ಬೀಳಲಿಕ್ಕಿಲ್ಲ. ಈ ಪ್ರೇಮವೇ ನನಗೆ ಈ ನಾಲ್ಕು ಮಾತು ಹೇಳಲು ಪ್ರೇರೇಪಿಸಿದೆ. ನಾನು ಇಲ್ಲಿ ಆಡಿದ್ದೆಲ್ಲ ಭಕ್ತಿಯಿಂದಲೇ.

ಭಾರತೀಯ ಸಂಸ್ಕೃತಿಯು ದೋಷರಹಿತವಾಗಬೇಕು. ಬೆಳೆಯು ತ್ತಿರಬೇಕು, ತೇಜಸ್ವಿಯಾಗಿ ಅರಳುತ್ತಿರಬೇಕು ಎಂಬ ಉತ್ಕಟತೆ ಎನ್ನಲ್ಲಿ ಇದೆ. ಈ ಸಂಸ್ಕೃತಿಯು ಜ್ಞಾನಮಯವಿದೆ, ಕರ್ಮಮಯವೂ ಇದೆ, ಸಂಗ್ರಾಹಕವೂ ಇದೆ. ಇದು ಎಲ್ಲರನ್ನೂ ತನ್ನಹತ್ತರ ಬರಮಾಡಿಕೊಂಡು, ಹೊಸ ಹೊಸ ಪ್ರಯೋಗವನ್ನು ಮಾಡುವದು. ಸಂತತ ಉದ್ಯೋಗವನ್ನು ಮಾಡುವದು. ಭಾರತೀಯ ಸಂಸ್ಕೃತಿ ಎಂದರೆ ಎಲ್ಲ ಅಂಗ ಉಪಾಂಗಗಳ ವಿಕಾಸ, ಎಲ್ಲರ ವಿಕಾಸ. ಭಾರತೀಯ ಸಂಸ್ಕೃತಿಯು ಸ್ಪೃಶ್ಯ, ಅಸ್ಪೃಶ್ಯ, ಹಿಂದು, ಮುಸಲ್ಮಾನ ಭೇದಗಳನ್ನು ಅರಿಯುವದಿಲ್ಲ. ನಲುಮೆ ನಂಬುಗೆ ಯಿಂದ ಎಲ್ಲರನ್ನು ಅಪ್ಪಿಕೊಂಡು, ಜ್ಞಾನಭಕ್ತಿಮಯವಾದ ಕರ್ಮದ ಆಧಾರದಿಂದ ಮಂಗಲ ಸಾಗರದ ಕಡೆಗೆ, ನಿಜವಾದ ಮೋಕ್ಷ ಸಿಂಧುವಿನ ಕಡೆಗೆ ಭರದಿಂದ ಸಾಗುವ ಸಂಸ್ಕೃತಿಯಿದು.

ಭಾರತೀಯ ಸಂಸ್ಕೃತಿ-ಉಪಾಸಕರ ಯಾತ್ರೆ ಅನಾದಿ ಕಾಲದಿಂದ ನಡೆದಿದೆ. ವ್ಯಾಸ, ವಾಲ್ಮೀಕಿ, ಬುದ್ಧ, ಮಹಾವೀರ, ಶಂಕರ, ರಾಮಾನುಜ, ಜ್ಞಾನೇಶ್ವರ, ತುಕಾರಾಮ, ಕಬೀರ, ನಾನಕ, ಬಸವ, ಪುರಂದರದಾಸ, ಕನಕದಾಸ ಮೊದಲಾದ ಸಂತರು ಶರಣರು ಈ ಯಾತ್ರೆ ನಡೆಸಿದ್ದಾರೆ. ಇಂದಾದರೂ ಮಹಾತ್ಮಾ ಗಾಂಧಿ, ತ್ಯಾಗಮೂರ್ತಿ ಜವಾಹರಲಾಲ, ಮಹರ್ಷಿ ಅರವಿಂದ ಮೊದಲಾದ ವಿಭೂತಿಗಳು ಈ ದಿವ್ಯ

ಯಾತ್ರೆಯನ್ನು ಮುಂದರಿಸುತ್ತ ಇದ್ದಾರೆ. ಹಿರಿಯರು, ಕಿರಿಯರು, ನಾವೆಲ್ಲರೂ ಈ ಯಾತ್ರೆಯಲ್ಲಿ ಕೂಡಿಕೊಳ್ಳೋಣ. "ಬನ್ನಿ, ಬನ್ನಿ ಎಲ್ಲರೂ ಬನ್ನಿ" ಎಂದು ಈ ಭಾರತೀಯ ಸಂಸ್ಕೃತಿಯು ಈ ಸತ್ಪುತ್ರರು ನಮ್ಮೆಲ್ಲರನ್ನು ಕರೆಯುತ್ತಾರೆ. ಯಾವನ ಹೃದಯವನ್ನು ಈ ಕರೆಯು ಮುಟ್ಟುವದೋ ಅವನೇ ಧನ್ಯನು!

---

# ಪರಿಶಿಷ್ಟ

(೧) **ಕಾಲದ ಕಲ್ಪನೆ**—ಒಂದು ದೃಷ್ಟಿಯಿಂದ ಭಾರತೀಯ ಸಂಸ್ಕೃತಿಯು ದಿಕ್ಕು ಕಾಲಗಳ ಆಚೆಗೆ ಇರುವದನ್ನು ಉಪಾಸನೆ ಮಾಡುವ ಸಂಸ್ಕೃತಿಯು. ಅದರೆದುರು ಅನಂತ ಕಾಲವು ಇದೆ. ಬ್ರಹ್ಮದೇವನ ಕಾಲ ಗಣನೆಯ ಪದ್ಧತಿಯು ಗೀತೆಯಲ್ಲಿ ಹೇಳಲ್ಪಟ್ಟಿದೆ. ಈ ಕಲ್ಪನೆಯಲ್ಲಿ ಸ್ವಾರಸ್ಯವಿದೆ. ಮನುಷ್ಯನ ದೃಷ್ಟಿ ಎಷ್ಟು ವಿಶಾಲವೋ ಅಷ್ಟೇ ಅವನ ಕಾಲದ ಕಲ್ಪನೆಯೂ ವಿಶಾಲವಿರುತ್ತದೆ. "ಆರು ತಿಂಗಳಲ್ಲಿ ಸ್ವರಾಜ್ಯ ದೊರಕಿಸಿ ಕೊಡುತ್ತೇನೆ"ಂದು ಮಹಾತ್ಮರು ನುಡಿದರು. ಇವು ಮಹಾತ್ಮಾಜಿಯವರ ಆರು ತಿಂಗಳು ಎಂಬ ಮಾತು ನೆನಪಿನಲ್ಲಿಡಬೇಕು. ಐವತ್ತು ವರುಷದಲ್ಲಿ ಸ್ವರಾಜ್ಯ ದೊರೆತರೆ, ಅದು ಆರು ತಿಂಗಳಲ್ಲಿ ಸಿಕ್ಕಂತೆಯೇ. ರಾಷ್ಟ್ರದ ಜೀವನದಲ್ಲಿ ನೂರು ವರ್ಷಗಳೆಂದರೆ ಕ್ಷಣಗಳಂತೆ, ಹಾಗೂ ವಿಶ್ವದ ಇತಿಹಾಸದಲ್ಲಿ ಯುಗಗಳೆಂದರೆ ಕ್ಷಣಗಳಿದ್ದಂತೆ.

ಮಹಾಪುರುಷರು ಈ ದೃಷ್ಟಿಯಿಂದ ನೋಡುತ್ತಿರುವದರಿಂದ ಅವರು ನಿರಾಶರಾಗುವದಿಲ್ಲ. ಆದರೆ ಗತಿಸಿದ ಕಾಲಕ್ಕೆ ಮಹತ್ವವಿಲ್ಲೆಂದು ಇದರಿಂದ ತಿಳಿಯಕೂಡದು. ಈ ಕ್ಷಣವೇ ಕಾರ್ಯ ಮಾಡಬೇಕೆಂಬ ನಿಶ್ಚಯವು ಬೇಕು. ಈ ನಿಶ್ಚಯ ಪ್ರಯತ್ನಗಳೊಡನೆ ಕಾಲವೂ ಅನಂತವಿದೆಯೆಂಬ ಕಲ್ಪನೆಯು ಇರಬೇಕು. ಈ ಜಗತ್ತಿನಲ್ಲಿ ಯಾವದೂ ವ್ಯರ್ಥವಾಗುವಂತಿಲ್ಲ. ಪ್ರಯತ್ನವಾದ, ಆಶಾವಾದಗಳ ಸಮನ್ವಯವನ್ನೇ ನಮ್ಮ ಭಾರತೀಯ ಸಂಸ್ಕೃತಿಯು ಮಾಡುತ್ತಿದೆ.

(೨) **ಶ್ರಾದ್ಧ**— ಪೌರ್ವಾತ್ಯರಲ್ಲಿ ಹಿರಿಯರನ್ನು, ಪೂರ್ವಜರನ್ನು ಕುರಿತು ಅತ್ಯಂತ ಆದರವಿದೆ. ಚೀನ, ಜಪಾನ ದೇಶಗಳಲ್ಲಿ ವೃದ್ಧ

ಪೂಜೆಯು ಧರ್ಮವೇ ಆಗಿದೆ. ಭಾರತೀಯ ಸಂಸ್ಕೃತಿಯು ವೃದ್ಧರನ್ನು ಪೂಜಿಸಲು ಕಲಿಸುತ್ತಿದೆ. ಹಳ್ಳಿಗಳಲ್ಲಿ ಇದನ್ನು ವಿಶೇಷವಾಗಿ ಕಾಣಬಹುದು. ಮುದುಕರು ಬಂದೊಡನೆ "ಬರ್ರಿ ಅಜ್ಜಾ" ಎಂದು ವಿನಯದಿಂದ ಕಂಬಳಿಯ ಹಾಸುಗೆಯಲ್ಲಿ ಅವರನ್ನು ಕೂಡ್ರಿಸುತ್ತಾರೆ. ಮನೆಯಲ್ಲಿ ಹಿರಿಯರಿಗೆ ಮಾನ. ಪ್ರತಿಯೊಂದು ಸಮಾರಂಭದಲ್ಲಿ ಮೊದಲು ಹಿರಿಯರಿಗೆ ನಮಸ್ಕಾರ. ಅವರನ್ನು ಆದರದಿಂದ ಕೂಡ್ರಿಸಿ ಅವರ ಪಾದಗಳನ್ನು ಒತ್ತಿ ಅವರಿಂದ ಆಶೀರ್ವಾದವನ್ನು ಕೋರುವದು ಮತ್ತು ಅವರ ಆಜ್ಞೆಯನ್ನು ಕೇಳುವದು.

ವೃದ್ಧ ಪೂಜೆಯೇ ಜ್ಞಾನಪೂಜೆ. ಜ್ಞಾನವೆಂದರೆ ಅನುಭವ, ಅನುಭವವೆಂದರೆ ಜ್ಞಾನ. ಆ ವೃದ್ಧರ ನರೆಗೂದಲಲ್ಲಿ ಅನುಭವದ ಶುದ್ಧ ಜ್ಞಾನವಿರುತ್ತದೆ. ಅವರ ಬಾಗಿದ ಬೆನ್ನಲ್ಲಿ ಆ ಅನುಭವದ ಗಂಟು ಇರುತ್ತದೆ. ಆ ಸುಕ್ಕುಗಟ್ಟಿದ ಅವರ ಮೈಯಲ್ಲಿ ಅನೇಕ ವರ್ಷದ ಇತಿಹಾಸ ಬರೆದಿರುತ್ತದೆ. ಮೊದಲಿನ ಪರಂಪರೆಯು ವೃದ್ಧರಿಗೆ ಗೊತ್ತು. ಆ ಪರಂಪರೆಯ ದೀಪವನ್ನು ಬೆಳಗಿಸಿ ಅದನ್ನು ತರುಣರ ಕೈಯಲ್ಲಿ ಕೊಟ್ಟಿರುತ್ತಾರೆ.

ಭಾರತೀಯ ಸಂಸ್ಕೃತಿಯಲ್ಲಿ ಶ್ರಾದ್ಧ ದಿನವಿದೆ. ಶ್ರಾದ್ಧವೆಂದರೆ ಪೂರ್ವಜರಲ್ಲಿದ್ದ ಆದರವನ್ನು ತೋರುವದು. ಮಹಾತ್ಮರ ಶ್ರಾದ್ಧವನ್ನು ಎಲ್ಲರೂ ಮಾಡತಕ್ಕದ್ದು. ಹಾಗೆಂದೊಡನೆ ಶ್ರೀ ರಾಮ, ಶ್ರೀ ಕೃಷ್ಣರ ಶ್ರಾದ್ಧವನ್ನು ಆಚರಿಸಲಾಗದು. ಏಕೆ? ಅವರ ಜಯಂತಿಯನ್ನು ಆಚರಿಸುತ್ತೇವೆ. ಅವತಾರಗಳೆಂದು ನಾವು ಮನ್ನಿಸುವ ವ್ಯಕ್ತಿಗಳ ಜಯಂತಿಯನ್ನು ಆಚರಿಸಬೇಕು. ಯಾಕಂದರೆ ಅವರ ಜನನವೇ ಮಂಗಲಕ್ಕಾಗಿ ಇದೆಯಲ್ಲವೇ? ಅವರು ಜನಿಸಿದೊಡನೆ ದಿಕ್ಕು ಪ್ರಸನ್ನವಾಗುತ್ತವೆ, ಮಧುರ ಮಾರುತನು ಬೀಸುತ್ತಾನೆ. ಎಲ್ಲಕ್ಕೂ ಮಂಗಲವೇ ಮಂಗಲ. ಇತರರ ವಿಷಯದಲ್ಲಿ ಹೀಗಾಗುವದಿಲ್ಲ. ಅವರ ವಿಷಯದಲ್ಲಿ ಅವರ ಬೆಲೆ ಅವರ ಮರಣದ ನಂತರವೇ ತಿಳಿಯುತ್ತದೆ. ಅವರವರ ಜೀವನವನ್ನು ಅರಿತೇ ಅವರವರ ಬೆಲೆ ಕಟ್ಟುವದು. ಶ್ರೀ ಶಿವಾಜಿ, ಶ್ರೀ ಜ್ಞಾನೇಶ್ವರ, ಶ್ರೀ ಪುರಂದರದಾಸ ಮೊದಲಾದವರ ಪುಣ್ಯ ತಿಥಿಗಳನ್ನು ನಾವು ಆಚರಿಸುತ್ತೇವೆ. ಹುಟ್ಟಿದಾಗ ಅವರ ಹಿರಿಮೆ ಜನರಿಗೆ ಗೊತ್ತಿರಲಿಲ್ಲ. ಅದು ಮುಂದೆ ತಿಳಿಯಿತು. ಶ್ರೀ ಶಿವಛತ್ರಪತಿ ಅವತಾರಿಯೆಂದು ಕೆಲಕಾಲದ ಮೇಲೆ ಜನರು ಮನಗಂಡು ಈಗ ಅವರ ಜಯಂತಿಯನ್ನು ಆಚರಿಸುತ್ತಾರೆ.

ದೊಡ್ಡ ವ್ಯಕ್ತಿ, ಸಾಧುಪುರುಷರು, ಯಾವದೊಂದು ಜಾತಿಯ ಅಥವಾ ಪಂಥದ ಸೊತ್ತಲ್ಲ. ಅವರು ಮಾನವರೆಲ್ಲರ ಸೊತ್ತು. ಆದ್ದರಿಂದಲೇ ಅವರ ಪುಣ್ಯತಿಥಿಗಾಗಿ ಎಲ್ಲರೂ ಬರತಕ್ಕದ್ದು. ಕೆಲವರ ಮಹತ್ವ ಅವರ ಮನೆಮಟ್ಟಿಗೆ, ಪ್ರಾಂತದ ಮಟ್ಟಿಗೆ, ದೇಶದ ಮಟ್ಟಿಗೆ, ಈ ಇಡೀ ವಿಶ್ವದ ಮಟ್ಟಿಗೆ ಇರುತ್ತದೆ. ಅವರವರ ಉತ್ಸವಗಳು ಅವರವರ ಮಹತ್ವಕ್ಕೆ ಸರಿಯಾಗಿ ನಡೆಯುತ್ತಿವೆ. ನಮ್ಮ ನಮ್ಮ ತಂದೆತಾಯಿಗಳು ನಮಗೆ ದೊಡ್ಡವರೇ, ನಮ್ಮ ಪೂರ್ವಜರು ನಮಗೆ ಪೂಜ್ಯರು. ಅವರು ಜಗತ್ತಿಗೆ ಗೊತ್ತಿರದಿದ್ದರೂ, ಅವರ ಮಹತ್ವದ ಅರಿವು ನಮಗಿದೆ. ಅವರನ್ನು ನೆನಿಸುವದು ನಮ್ಮ ಕರ್ತವ್ಯ. ಕೃತಜ್ಞತೆಯಂಥ ಮಧುರ ವಸ್ತುವು ಇನ್ನೊಂದಿಲ್ಲ.

ಭಾರತೀಯ ಸಂಸ್ಕೃತಿಯು ದಿನಾಲು ಪಿತೃತರ್ಪಣ, ಋಷಿತರ್ಪಣವನ್ನು ಬಿಡಲು ಹೇಳುತ್ತಿದೆ. ಅದುವೆ ಋಷಿಗಳ ಹಾಗೂ ಪೂರ್ವಜರ ಸ್ಮರಣೆ. ಜ್ಞಾನವನ್ನು ದಯಪಾಲಿಸಿದವರ ಮತ್ತು ದೇಹವನ್ನು ಕೊಟ್ಟವರ ಪವಿತ್ರ ನೆನಹು. ಎಲ್ಲರ ಹೆಸರನ್ನು ನೆನಿಸುವದು ಕಷ್ಟಕರವು. ಅದುಕಾರಣ ಕೆಲವೊಂದು ಹೆಸರುಗಳನ್ನು ನೆನೆದು ತರ್ಪಣ ಮಾಡುವದಿದೆ. ಈ ಹೆಸರೇ ಜ್ಞಾತ, ಅಜ್ಞಾತ, ಋಷಿಗಳ ಮತ್ತು ಪಿತರುಗಳ ಪ್ರತಿನಿಧಿ ರೂಪವಾಗಿರುತ್ತವೆ.

ಶ್ರಾದ್ಧವೆಂದರೆ ಶ್ರದ್ಧೆಯಿಂದ ಮಾಡಿದ ಹಿರಿಯರ ನೆನಹು. ತಾಯಿ ತಂದೆಗಳು ತೀರಿಕೊಂಡ ದಿನವೇ ಅವರ ನೆನಪನ್ನು ಮಾಡಿಕೊಳ್ಳುವದು. ನಾವು ಮೂರು ಪೀಳಿಗೆಗಳನ್ನು ಅಲ್ಲಿ ನೆನೆಯುವೆವು. ಅಂದು ಮನೆ ಮನಗಳೆರಡನ್ನೂ ಸಾರಿಸಿ ಸ್ವಚ್ಛವಾಗಿಡುತ್ತೇವೆ. ಗಂಭೀರ ವಾತಾವರಣವು ಮನೆತುಂಬ ಹರಹಿರುತ್ತದೆ. ಪಿಂಡಕ್ಕೆ ನಮಸ್ಕರಿಸಲು ಆಪ್ತರೆಲ್ಲರೂ ಬರಬೇಕು. ಶ್ರಾದ್ಧವು ಮೂರು ಪೀಳಿಗೆಗಳ ನೆನಪು. ಆದರೆ ಭಾದ್ರಪದ ಅಮಾವಾಸ್ಯೆ ದಿನವನ್ನು ಸರ್ವ ಪಿತರುಗಳ ನೆನಪಿಗಾಗಿ ಮೀಸಲಾಗಿ ಇರಿಸಲಾಗಿದೆ. ಅಂದು ಎಲ್ಲ ಪಿತರುಗಳನ್ನು ನೆನೆಯಬೇಕು.

ಶ್ರಾದ್ಧವೆಂದರೆ ಕೃತಜ್ಞತೆ, ನಿತ್ಯ ನಮ್ಮ ವ್ಯವಹಾರದಲ್ಲಿ ಮಗ್ನರಾಗಿರುತ್ತೇವೆ. ಆದರೆ ವರ್ಷದಲ್ಲಿ ಒಂದು ದಿನವಾದರೂ ಅವರ (ತಂದೆ ತಾಯಿಗಳ)ನೆನಪು ಆಗಲೇಬೇಕು. ಭಾರತೀಯ ಸಂಸ್ಕೃತಿಯು ಶ್ರಾದ್ಧಕ್ಕೆ ಬಹಳ ಮಹತ್ವ ಕೊಟ್ಟದೆ. ಯಾರಾದರೂ ನೀರು ಬಿಡಲೇಬೇಕು. ಇಲ್ಲದಿದ್ದರೆ ಸತ್ತನಂತರ ಸದ್ಗತಿಯಿಲ್ಲವೆಂಬ ಕಲ್ಪನೆ ಇದೆ. “ನರಕಾತ್ ತ್ರಾಯತೇ

ಇತಿ ಪುತ್ರಃ''—ನರಕದಿಂದ ಉದ್ಧರಿಸುವವನೇ ಮಗನು—ಎಂದು ಪುತ್ರ ಶಬ್ದದ ವ್ಯುತ್ಪತ್ತಿ ಇದೆ. ಮಕ್ಕಳಿಲ್ಲದ ಮನೆ ಅಮಂಗಲವೆಂದು ತಿಳಿಯುತ್ತಾರೆ. ಮಕ್ಕಳೇ ಮನೆಗೆ ಶೋಭೆ.

ಇದರ ಅರ್ಥವೆಂದರೆ ಪರಂಪರೆಯು ನಡೆಯಬೇಕು. ನಮ್ಮ ವಂಶವನ್ನು ಮುಂದೆ ನಡೆಸುವವರು ಇರಬೇಕು. ಅದು ನಾಶವಾಗದೇ ಅಖಂಡವಾಗಿ ಮುಂದೆ ನಡೆಯಬೇಕು. ಇದುವೇ ಅಮರವಾಗುವ ರೀತಿ. ಮಕ್ಕಳಿದ್ದರೆ ಪಿತರುಗಳಿಗೆ ಅಮರತ್ವ, ಸ್ವರ್ಗ. ಮಕ್ಕಳ ರೂಪದಿಂದ ಅಮರರಾಗುತ್ತಾರೆ ಅವರು. ಪೂರ್ವಜರೆಲ್ಲರ ಪುಂಜೀಭೂತ ಸ್ವರೂಪವು ಮುಂಬರುವ ವಂಶತಂತುಗಳಲ್ಲಿ ಇರುತ್ತದೆ. ಆದ್ದರಿಂದಲೇ ಅವರು ಅಮರರಾಗುತ್ತಾರೆ.

ಶ್ರಾದ್ಧ ಕಲ್ಪನೆಯು ಎಲ್ಲ ದೇಶಗಳಲ್ಲಿ ಇದೆ. ಪುಣ್ಯತಿಥಿಯ ದಿವಸ ಗೋರಿಗಳ ಮೇಲೆ ಪೂಮಾಲೆಗಳನ್ನು ಇಡುತ್ತಾರೆ.

ಆ ಶ್ರಾದ್ಧ ದಿನವನ್ನು ಆಚರಿಸುವದರಲ್ಲಿ ಎರಡು ಮುಖ್ಯ ಉದ್ದೇಶಗಳಿವೆ. ಒಂದು ಕೃತಜ್ಞತೆಯಿಂದ ಪೂರ್ವಜರನ್ನು ನೆನೆಯುವದು, ಎರಡನೆಯದು ನಮಗಾದರೂ ಒಂದು ದಿನ ಸಾವು ತಪ್ಪಿದ್ದಲ್ಲವೆಂದು ತಿಳಿಯುವದು. ಆದ್ದರಿಂದ ಶ್ರಾದ್ಧದ ದಿನ ದಾನಮಾಡಬೇಕು. ಜೀವನದಲ್ಲಿ ಸರ್ವಸ್ವವನ್ನೇ ಬಿಟ್ಟು ಹೊರಡುವದಿದೆ. ಅಂದಮೇಲೆ ಇಂಥ ಪವಿತ್ರ ದಿನದಲ್ಲಿ ಸ್ವಲ್ಪವನ್ನಾದರೂ ತ್ಯಜಿಸಬೇಕಲ್ಲವೇ ? ಇಂದು ನಮ್ರತೆಯನ್ನೂ ಅನಾಸಕ್ತಿಯನ್ನೂ ತ್ಯಾಗವನ್ನೂ ಕಲಿಯುವ ದಿವಸ. ಈ ದಿನವು "ನೀನಾದರೂ ಒಂದು ದಿನ ಪೂರ್ವಜರಂತೆ ತೆರಳಲೇಬೇಕಾಗುವದು. ಕಾರಣ ಕರ್ತವ್ಯವನ್ನು ಮರೆಯದಿರು'' ಎಂದು ಮಾನವನನ್ನು ಎಚ್ಚರಿಸುತ್ತದೆ.

ಶ್ರಾದ್ಧದಿನ ಬ್ರಾಹ್ಮಣರನ್ನು ಊಟಕ್ಕೆ ಕರೆಯುವದಿದೆ. ಕಾಲದಂತೆ ಇದರಲ್ಲಿ ಕೆಲವು ಬದಲಾವಣೆಗಳು ಆಗಬಹುದು. ಅವು ಆಗಬೇಕು ಮತ್ತು ಆಗುವವು. ಈಗ. ಯಾರಾದರೂ ಊಟಕ್ಕೆ ಹಾಕಲಿಲ್ಲವೆಂದು ತಿಳಿದರೂ ಅದು ಅಧರ್ಮವಾಗಲಿಕ್ಕಿಲ್ಲ. ಮತ್ತಾವ ರೂಪದಿಂದಾದರೂ ದಾನಮಾಡಬಹುದು. ಖಾದೀ ವಸ್ತ್ರವನ್ನು ಕೊಂಡು ಬಡವರಿಗೆ ದಾನಮಾಡಬಹುದು. ಸಾರ್ವಜನಿಕ ಸಂಸ್ಥೆಗಳಿಗೆ ಕಾಣಿಕೆ ಸಲ್ಲಿಸಬಹುದು. ಏನೇ ಮಾಡಿದರೂ ನಾವು ಪೂರ್ವಜರ ನೆನಪನ್ನು, ಅಂದರೆ ಈ ಶ್ರಾದ್ಧವನ್ನು ಶ್ರದ್ಧೆ ಭಕ್ತಿಗಳಿಂದ ಆಚರಿಸಲೇಬೇಕು. ಮತ್ತು ನಮ್ಮ ಮರಣವೂ ನಿಶ್ಚಯವೆಂಬ ಸ್ಮರಣೆಯೂ ಅಗತ್ಯ. ಇವು ನಮ್ಮ ಮನದಲ್ಲಿ ದೃಢವಾಗಿ ಉಳಿಯಬೇ

ಕೆಂದೇ ಆಂದು ದಾನ ತ್ಯಾಗಗಳ ಅಗತ್ಯ. ಹೀಗಿದೆ ಶ್ರಾದ್ಧದ ನೆನಪು ಮತ್ತು ಅದರ ನಿಮಿತ್ತದಿಂದ ತ್ಯಾಗ.

(೩) **ಏಕಾಂತ ಏಕಾಗ್ರತೆ**– ಭಾರತೀಯ ಸಂಸ್ಕೃತಿಯಲ್ಲಿ ಏಕಾಂತಕ್ಕೆ ಒಂದು ಮಹತ್ವದ ಸ್ಥಾನವು ಇದೆ. ಪ್ರಪಂಚದ ಜಾಲದೊಳಗಿಂದ ಮನಸ್ಸು ಸ್ವಲ್ಪವಾದರೂ ಅಲಿಪ್ತವಾಗಿರಬೇಕು. ಮನಸ್ಸನ್ನು ಶಾಂತಗೊಳಿಸಬೇಕು. ಒಂದು ಕ್ಷಣ ಮನಸ್ಸಿನ ಸುಖ ದುಃಖಗಳ ಭಾರವನ್ನು ಕೆಳಗಿಳಿಸಿ ಮನಸ್ಸನ್ನು ಮುಕ್ತಮಾಡಬೇಕು. ಇದುವೇ ಏಕಾಂತ.

ಸಾಯಂಕಾಲಕ್ಕೆ ನದಿಯ ದಂಡೆಯಲ್ಲಿ ಒಬ್ಬನೇ ಕುಳಿತುಕೋ. ದಿನ್ನೆಯಮೇಲೆ ಕುಳಿತು ಉಕ್ಕುತ್ತಿರುವ ಸಾಗರವನ್ನು ನೋಡು. ರಮಣೀಯ ಉದ್ಯಾನವನ್ನು ನೋಡು. ಪ್ರಪಂಚದಲ್ಲಿ ಚಿಂತೆ ದುಃಖಗಳನ್ನು ಒಂದು ಕ್ಷಣವಾದರೂ ಮರೆ. ನಮ್ಮೆಲ್ಲರಿಗೂ ಈ ಸಂಸಾರದಲ್ಲಿ ಇರಬೇಕೆಂಬ ದುರಾಸೆ ಇಷ್ಟು ತೀವ್ರವಿದೆಯಲ್ಲ, ನಾವು ಒಬ್ಬರೇ ಅಡ್ಡಾಡಲು ಹೋಗಲಾರೆವು. ಮತ್ತೆ ನಾಲ್ಕು ಜನರೊಡನೆ ಜೊತೆಯಾಗಿ ಹೋಗುವೆವು ಮತ್ತೆ ಅದೇ ಸಂಸಾರ. ಅದೇ ಹರಟೆ, ಕೋರ್ಟು, ಕಚೇರಿ, ಹೊಗಳಿಕೆ, ತೆಗಳಿಕೆಗಳೇ. ನಮ್ಮ ಮನಸ್ಸು ಎಂದಿಗೂ ತಿಪ್ಪೆಯೇ ಆಗಿದೆ. ಪ್ರಪಂಚದಲ್ಲಿಯ ಹೊಲಸೆಲ್ಲವೂ ನಮ್ಮ ಮನದಲ್ಲಿ ತುಂಬಿದೆ. ಮನಸ್ಸು ಚಾವಡಿ, ಸಾರ್ವಜನಿಕ ಬೀದಿಯಾಗಿದೆ. ಇಡೀ ಪ್ರಪಂಚದ ಚರ್ಚೆ ನಡೆದಿರುವದು ಇಲ್ಲಿ. ನಿಸರ್ಗಪ್ರೇಮಿಯಾದ ಥೋರೋ ಎಂಬ ಕವಿಯು ಹೀಗೆ ಅಂದಿರುವನು, "our mind is like a bar room." ನಮ್ಮ ಮನಸ್ಸು ವಕೀಲರ ಕೋಣೆ ಇದ್ದಂತೆ ಇದೆ. ಜಗತ್ತಿನ ಎಲ್ಲ ವ್ಯವಹಾರಗಳ ಚರ್ಚೆ ನಡೆದಿರುತ್ತದೆ ಅಲ್ಲಿ. ಅವರಂತೆಯೇ ನಮ್ಮ ಮನಸ್ಸು ಇದೆ.

ಏಕಾಂತವೆಂದರೆ ವಿಶ್ರಾಂತಿ. ಆ ಸಮಯದಲ್ಲಿ ನಮ್ಮ ಆಳವಾದ ಸ್ವರೂಪದೊಡನೆ ನಾವು ಒಂದಾಗಬೇಕು. ಒಳಒಳಗೆ ನೋಡಬೇಕು. ಆಕಾಶದಲ್ಲಿ ಬಿರುಗಾಳಿ ಬೀಸುವದು, ಮೋಡಗಳನ್ನು ಕಲೆಹಾಕುವದು, ಹುಡಿಯ ರಾಶಿಯೇ ಏಳುವದು, ಹಕ್ಕಿಗಳ ಹಾರಾಟ ಕಾಣುವದು ಆದರೆ ಇವೆಲ್ಲವುಗಳ ಹಿನ್ನೆಲೆಯಲ್ಲಿ ನೀಲ ನಿರ್ಮಲ ಆಕಾಶವು ಶೋಭಿಸುತ್ತಿದೆ. ಆ ಆಕಾಶಕ್ಕೆ ಇವೆಲ್ಲವುಗಳ ಸ್ಪರ್ಶವೇ ಇಲ್ಲ. ನಮ್ಮ ಹೃದಯಾಕಾಶ ಯಾವರೂ ಇದರಂತೆ ಇರಬೇಕು. ಅದು ಬರಿದಾಗಿ ಸ್ವಚ್ಛವಾಗಲೆಂದೇ ಏಕಾಂತದ ಆಶ್ರಯ.

ಆದರೆ ಈ ಮನಸ್ಸಿಗೆ ಆತ್ಮದ ಅರಿವು ಇರುವದಿಲ್ಲ. ತನ್ನ ಜೀವನದಲ್ಲಿ ಅದಕ್ಕೆ ಆನಂದವಿರುವದಿಲ್ಲ. ಆ ಆನಂದದ ಝರಿಯು ತನ್ನಲ್ಲಿಯೇ ಇದೆ ಎಂಬ ಮಾತಿನ ಅರಿವು ಅದಕ್ಕಿರುವದಿಲ್ಲ. ಆ ಮನದ ಆನಂದವು ಪರರ ವಶವಲ್ಲ. ಒಂದು ದಿನ ವರ್ತಮಾನಪತ್ರವನ್ನು ಓದದಿದ್ದರೆ ಏನೋ ಕೊರತೆ ಅನಿಸುವದು. ಪತ್ರ ಬರದಿದ್ದರೆ ಮನಸ್ಸಿಗೆ ವ್ಯಥೆಯಾಗುವದು. ಬಹಳ ಪತ್ರಗಳು ಬಂದರೆ ನಾನು ಎಷ್ಟು ದೊಡ್ಡವನೆಂಬ ಭಾವನೆ ಬರುತ್ತದೆ! ಜಗತ್ತಿನೊಡನೆ ಎಷ್ಟು ಅದೆ ನಮ್ಮ ಸಂಬಂಧ ಎಂಬ ಹೆಮ್ಮೆ.

ಆದರೆ ಇಂಥ ವ್ಯಕ್ತಿಗಳು ಎಷ್ಟು ದೊಡ್ಡವರಿದ್ದರೂ ದರಿದ್ರರೇ ಸರಿ. ಯಾಕಂದರೆ ಅವರಿಗೆ ಅವರ ಆತ್ಮನಿಂದ ಪತ್ರ ಒಂದಾದರೂ ಇಲ್ಲ. ಆತ್ಮನ ಕರೆ ಒಮ್ಮೆಯಾದರೂ ಕರೆದಿರುವದಿಲ್ಲ. ಆ ಆತ್ಮನಿಂದ ಕರೆ ಬಂದವರೇ ಧನ್ಯರು! ಈ ಜೀವನದಲ್ಲಿ ಯಾವಾಗಲೂ ಆತ್ಮನ ಉಪೇಕ್ಷೆಯೇ. ಸೆರೆ-ಮನೆಗಳಲ್ಲಿ ಗೋಡೆಗಳ ಭದ್ರತೆಯ ಕಡೆಗೆ ಲಕ್ಷ್ಯ ಬಹಳ. ಒಳಗಿದ್ದ ಸೆರೆಯಾಳಿಗೆ ಏನಾದರೂ ಸರಿಯೇ! ಅದರಂತೆ ದೇಹದಲ್ಲಿ ಸೆರೆಯಾದ ಪವಿತ್ರ ಆತ್ಮನನ್ನು ಮರೆತು ದೇಹದ ವಿಷಯದಲ್ಲಿ ಆಸ್ಥೆ, ಅಲಂಕಾರ, ಜಾಗರೂಕತೆ. ಒಳಗೆ ಸೆರೆಯಾಳು ಸಾಯುತ್ತಿರುತ್ತಾನೆ. ಹೋಗು, ಸೆರೆಯಾಳನ್ನು ಒಮ್ಮೆಯಾದರೂ ಒಳಹೊಕ್ಕು ಸಂದರ್ಶಿಸು.

ಏಕಾಂತದ ಅಭ್ಯಾಸವಿದ್ದವನಿಗೆ, ಏಕಾಗ್ರತೆಯು ತೀವ್ರ ಸಾಧಿಸುವದು. ಏಕಾಗ್ರತೆಯು ಅಗತ್ಯವಾಗಿ ನಮಗೆ ಬೇಕೇಬೇಕು. ಕಠಿಣ ಸಮಸ್ಯೆಯನ್ನು ಬಿಡಿಸುವಾಗ ಮನಸ್ಸು ಏಕಾಗ್ರವಾಗಲೇ ಬೇಕು. ಈ ಸಮಸ್ಯೆಗಳು ಸಾಂಸಾರಿಕವಿರಲಿ, ಪಾರಮಾರ್ಥಿಕವಿರಲಿ ಅವುಗಳನ್ನು ಬಿಡಿಸಬೇಕಾದಲ್ಲಿ ಮನಸ್ಸು ಬುದ್ಧಿ ಏಕಾಗ್ರವಾಗಬೇಕು. ಇಲ್ಲದಿದ್ದಲ್ಲಿ ಗೊಂದಲವೇ ಗೊಂದಲ. ಮಹಾತ್ಮಾಜಿಯವರಂಥ ಮಹಾತ್ಮರು ತಡವಿಲ್ಲದೆ ಏಕಾಗ್ರಚಿತ್ತರಾಗುತ್ತಾರೆ; ಕ್ಷಣದಲ್ಲಿ ಎಲ್ಲ ಪರಿಸ್ಥಿತಿಯನ್ನು ಅರಿತು ಕೊಳ್ಳುತ್ತಾರೆ.

ಏಕಾಂತದಿಂದ ನಮಗೆ ಸಾಮರ್ಥ್ಯ ಬರುತ್ತದೆ. ಆಶೆ, ಉತ್ಸಾಹಗಳು ಮತ್ತೆ ತುಂಬುವವು. ದೇವರನ್ನು ಕಂಡು ಹೊಸ ಹುಮ್ಮಸ್ಸನ್ನು ದೊರಕಿಸಿದಂತೆ ಆಗುತ್ತದೆ. ಏಕಾಂತವೆಂದರೆ ಒಂದು ದೃಷ್ಟಿಯಿಂದ ಮರಣವೇ. ಮರಣದ ನಂತರ ಪುನರ್ಜನ್ಮವನ್ನು ಹೊಂದಿದಂತೆ, ಏಕಾಂತದೊಳಗಿಂದ ಹೊಸ ಜೀವಕಳೆಯನ್ನು ಹೊತ್ತು ಹೊರಬರುತ್ತೇವೆ. ಹೃದಯ, ಬುದ್ಧಿಗಳ

ಕಸವನ್ನು ಕಳೆದು ಹೊರಹೊರಡುವೆವಲ್ಲವೇ? ನಮ್ಮೆಲ್ಲರ ಮನೆಗಳಲ್ಲಿ ದೇವರದೊಂದು ಪ್ರತ್ಯೇಕ ಮನೆ ಇರುತ್ತದೆ. ಅದು ಏಕಾಂತಕ್ಕಾಗಿ ಮಾಡಿದ ಸ್ಥಳ. ಅದನ್ನು ಸೇರಿ ಈ ಜಗತ್ತನ್ನೇ ಮರೆಯುವದು. ಆಗ ದೇವರೆದುರು ಒಳಗಿದ್ದುದೆಲ್ಲವನ್ನೂ ತೋಡಿಕೊಂಡರೆ ಮನಸ್ಸು ಹಗುರಾಗುತ್ತದೆ; ಶಾಂತಿ ಲಭಿಸುತ್ತಿದೆ.

ದೇವರ ಸನ್ನಿಧಿಯಲ್ಲಿ ಒಂದು ಕ್ಷಣವಿದ್ದರೆ ಮಾನವನು ದಾನವರಿಗೆಲ್ಲ ಮಾರಿಯಾಗುತ್ತಾನೆ. ಅವನಲ್ಲಿ ಅಪಾರ ಚೈತನ್ಯ ಉಂಟಾಗಿ ದುರ್ದಮ್ಯ ಆಶಾವಾದವು ಅವನಲ್ಲಿ ನೆಲೆಗೊಂಡು, ಸಿದ್ಧಿಯ ಸಾಮರ್ಥ್ಯವನ್ನು ಹೊಂದುತ್ತಾನೆ. ಏಕಾಂತವೆಂದರೆ ಸಂಜೀವನಿಯ ಸಾಗರವನ್ನು ಹೊಂದುವ ಸ್ಥಳ, ನಾವು ದುಃಖವನ್ನು ದಾಟಿ ನಗುವನ್ನು ಸಂಪಾದಿಸುವದಕ್ಕಾಗಿ ಏಕಾಂತ. ಸಂಕೋಚದ ವಿಕಾಸಕ್ಕಾಗಿ, ಉತ್ಥಾಣಕ್ಕಾಗಿ ಏಕಾಂತ ಅವಶ್ಯ. ಕರ್ಮದಲ್ಲಿ ತೀವ್ರತೆಯನ್ನು ತಂದು ಕರ್ಮ ಸನ್ಯಾಸದ ಆನಂದ ಅನುಭವವನ್ನು ಪಡೆಯುವದೇ ಏಕಾಂತ. ಸಾಮರ್ಥ್ಯದ ಸಾಕ್ಷಾತ್ಕಾರವೇ ಏಕಾಂತ.

ಏಕಾಂತವೆಂದರೆ ಜನಸಂಗತಿ ಬೇಡವೆಂದಲ್ಲ. ಜಗತ್ತಿನ ತಿರಸ್ಕಾರವೂ ಅಲ್ಲ. ಧೂಳಿ ಧೂಸರವಾದ ಈ ಜೀವನವನ್ನು ತೊಳೆದು ನಿರ್ಮಲವನ್ನಾಗಿ ಮಾಡುವ ಸ್ಥಳವೇ ಏಕಾಂತ; ಹೊಲಸು ಬಟ್ಟೆಗಳನ್ನು ಒಂದೆಡೆಗೆ ಒಗೆಯಲು ಹೋಗುವಂತೆ ಮಲಿನ ಜೀವನವನ್ನು ನಿರ್ಮಲಿನ ಮಾಡಿ ಮತ್ತೆ ಬಾಹ್ಯರಂಗದಲ್ಲಿ ನಿಲ್ಲಿಸುವದೇ ಏಕಾಂತ. ಈ ಮಾನವ ಜನಾಂಗವನ್ನು ಹೆಚ್ಚೆಚ್ಚು ಉತ್ಕಟ ಶ್ರದ್ಧೆ, ಸಾಮರ್ಥ್ಯ, ಆಶೆಗಳಿಂದ ಸೇವೆಗೈಯಲು ಅನುವಾಗಲೆಂದೇ ಈ ಏಕಾಂತ ಗರುಡಿಯನ್ನು ಸೇರಬೇಕು. ಏಕಾಂತದಲ್ಲಿ ಎಲ್ಲಕ್ಕೂ ಹಿರಿದಾದ ಏಕಾಂತವು ಮರಣ. ಇಂತಹ ಗರುಡಿಯಲ್ಲಿ ಸಾಧಕನಿಗೆ ಅಂಜಿಕೆಯೇ ಇಲ್ಲ.

**ಓಂ ಶಾಂತಿಃ ಶಾಂತಿಃ ಶಾಂತಿಃ**